

ನಾಲತವಾಡದ ಶಿವಶರಣರು ಶ್ರೀ ವೀರಯ್ಯನವರು

ಸೊಲ್ಲಾಪುರ.

## ಅರ್ಪಣ ಪತ್ರಿಕೆ.

**ವಚನಶಾಸ್ತ್ರಾಭ್ಯಾಸಕ್ಕೋಸ್ಕರ** ಅತ್ಯುಪಯುಕ್ತವಾಗಿರುವ ಗ್ರಂಥಗಳಲ್ಲಿ ಮಹತ್ತರವಾದ **ಈ ಶೂನ್ಯಸಂಪಾದನೆ** ಎಂಬ ಗ್ರಂಥವು ಯಾವ **ನಾಲತವಾಡದ ಶ್ರೀ ವೀರಯ್ಯನವರು ಶಿವಶರಣರು** ತಮ್ಮ ಉದಾತ್ತ ನಡೆನುಡಿಯಿಂದ **ಸೊನ್ನಲಿಗೆಯಲ್ಲಿ** ಅಂತ್ಯಂತ ಪೂಜ್ಯರೆನಿಸಿಕೊಂಡು ಬಹುಕಾಲವಾಸಿಸಿದರೋ, ಯಾರು ಶ್ರೇಷ್ಠತರವಾದ ಆಚಾರ ವಿಚಾರಗಳಲ್ಲಿ ಸದಾ ಆನಂದದಿಂದ ಕಾಲಕಳೆದು ಅವುಗಳಂತೆ ನಡೆದು ಜಗತ್ತಿಗೆ ತೋರಿ ಮೆರೆದರೋ, ಯಾರು ತಮ್ಮ ನಿರಪೇಕ್ಷಬುದ್ಧಿ ಕಟ್ಟಾಚರಣೆಗಳಿಂದ ಸಮಸ್ತರಲ್ಲಿ ದೃಢವಾದ ಭಕ್ತಿ ಭಾವವನ್ನು ಬೀರಿದರೋ, ಅಂಥ ಆ ಮಹಾನುಭಾವರಿಗೆ ಅತ್ಯಂತ ಭಕ್ತಿಪೂರ್ವಕವಾಗಿ ಅರ್ಪಿಸಲ್ಪಟ್ಟಿದೆ.

**ಸಂಪಾದಕ**

ಶಿವಾನುಭವ ಗ್ರಂಥಮಾಲಾ ನಂ॥ ೨೨

# ಶೂನ್ಯ ಸಂಪಾದನೆ.




ಸಂಪಾದಕರು.

ರಾ॥ ಸಾ॥ ಫ. ಗು. ಹಳಕಟ್ಟಿ.

(ಬಿ. ಏ ಎಲ್‌. ಎಲ್‌. ಬಿ. ವಕೀಲ)

ವಿಜಾಪುರ.





ಬೆಲೆ ೪| ರೂಪಾಯಿ.

೧೯೩೦

# ಅನುಕ್ರಮಣಿಕೆ.

# ಪ್ರಸ್ತಾವನೆ.

ವಿಜಯನಗರದಲ್ಲಿ ಮೊದಲನೇ ದೇವರಾಯನು ಆಳಿದ ಕಾಲ ಅಂದರೆ ೧೫ನೇ ಶತಮಾನದ ಮಧ್ಯಭಾಗವು ಕರ್ನಾಟಕ ವಾಙ್ಮಯದ ಇತಿಹಾಸದಲ್ಲಿ ಬಹು ಮಹತ್ವದ ಕಾಲವಾಗಿದೆ. ದೇವರಾಯನು ಸ್ವತಃ ಗ್ರಂಥಕಾರನಿದ್ದದ್ದಲ್ಲದೆ ಕವಿಗಳಿಗೂ, ವಿದ್ವಾಂಸರಿಗೂ, ಸಾಧು-ಸತ್ಪುರುಷರಿಗೂ ಬಹಳ ಆಶ್ರಯ ಕೊಡುತ್ತಿದ್ದನು. ಇವನ ಕಾಲಕ್ಕೆಯೇ ಚಾಮರಸ, ಲಕ್ಕಣ್ಣ ದಂಡೇಶ, ತೋಂಟದಾರ್ಯ ಮೊದಲಾದ ವೀರಶೈವ ಕವಿಗಳೂ, ತತ್ವವೇತ್ತಿಗಳೂ ಪ್ರಸಿದ್ಧಿಗೆ ಬಂದರು. ಇದೇ ಕಾಲಕ್ಕೆಯೇ ಈ ಶೂನ್ಯಸಂಪಾದನೆಯ ಗ್ರಂಥವನ್ನು ವಿರಚಿಸಿದ ಗೂಳೂರ ಸಿದ್ಧವೀರಣಾಚಾರ್ಯನು ಆಗಿಹೋದನು. ಈತನು ಈ ಗ್ರಂಥದಲ್ಲಿ ತೋಂಟದ ಸಿದ್ಧಲಿಂಗೇಶ್ವರನ ಶಿಷ್ಯನಾದ ಬೋಳ ಬಸವೇಶ್ವರನಿದ್ದು ಈತನಿಂದ ತಾನು "ಬೋಧೆವಿಡಿದಾತ" ನೆಂದು ಹೇಳಿಕೊಂಡಿದ್ದಾನೆ.

ವಚನಶಾಸ್ತ್ರವು ಅತ್ಯಂತ ಉತ್ಕರ್ಷತೆಯನ್ನು ಹೊಂದಿದ್ದು ಬಸವೇಶ್ವರ ಮೊದಲಾದ ಶಿವಶರಣರು ಕರ್ನಾಟಕದಲ್ಲಿ ವೀರಶೈವ ಧರ್ಮ ಪ್ರಸಾರ ಮಾಡಿದ ಕಾಲಕ್ಕೆಯೇ ಇರುತ್ತದೆ. ಆಗ ಅಸಂಖ್ಯ ಶಿವಶರಣರು ಕರ್ನಾಟಕದ ಎಲ್ಲ ಭಾಗಗಳಲ್ಲಿ ಉದ್ಭವಿಸಿ ಧರ್ಮಬೋಧೆಯನ್ನು ಮಾಡಿದರು. ಅವರು ಹೀಗೆ ರಚಿಸಿದ ವಚನಗಳು ೧೮೦ ಕೋಟಿ ಇರುತ್ತವೆಂಬ ಐತಿಹ್ಯವಿದೆ. ಅಂದರೆ ಈ ವಾಙ್ಮಯವು ಬಹು ವಿಸ್ತಾರವಾದದ್ದಿತ್ತೆಂಬ ಭಾವವೇ ಇದರಲ್ಲಿ ಗೂಢವಾಗಿದೆ. ಆದರೆ ಈ ಕಾಲದ ತರುವಾಯ ಕರ್ನಾಟದ ದುರ್ದೈವದಿಂದ ಅದಕ್ಕೆ ಬಹು ವಿಪ್ಲವ ಸಮಯಗಳು ಪ್ರಾಪ್ತವಾದವು. ಉತ್ತರದಿಂದ ಮುಸಲ್ಮಾನರ ಭಯಂಕರ ದಾಳಿಗಳು ದಕ್ಷಿಣ ದೇಶದಲ್ಲಿ ಬರತೊಡಗಿದವು. ಅವುಗಳ ಮುಂದೆ ದೇವಗಿರಿ ಯಾದವರ ರಾಜ್ಯವು ಹಾಳಾಯಿತು. ಓರಂಗಲ್ಲದ ವಿಸ್ತಾರವಾದ ಪ್ರದೇಶವು ಸೂರೆಹೋಯಿತು. ಆನೆಗುಂದಿಯ ರಾಜರು ಸಮರಾಂಗಣದಲ್ಲಿ ಮಡಿದು ಅವರ ರಾಜ್ಯವು ಮುಸಲ್ಮಾನರ ಕೈಸೇರಿತು. ಮತ್ತು ಕಡೆಗೆ ಕಲಬುರ್ಗಿಯಲ್ಲಿ ಬಾಮಣೀ ಬಾದಶಹರ ರಾಜ್ಯವು ಸ್ಥಾಪಿಸಲ್ಪಟ್ಟು ಮುಸಲ್ಮಾನರು ಕರ್ನಾಟಕದಲ್ಲಿ ಸ್ಥಿರವಾಗಿ ತಳಊರಿ ನಿಂತರು. ಆ ಮೇಲೆ

ಈ ಬಾಮಣೀ ಬಾದಶಹರಿಗೂ, ವಿಜಯನಗರದ ನರಪತಿಗಳಿಗೂ ಘೋರ ಯುದ್ಧಗಳು ಎರಡು ಶತಮಾನಗಳ ವರೆಗೆ ಒಂದೇ ಸಮನೇ ನಡೆದಿದ್ದು ಇತಿಹಾಸ ಪ್ರಸಿದ್ಧವೇ ಅದೆ. ಈ ಎಲ್ಲ ಬಗೆಯ ಹೊಡೆದಾಟ ರಕ್ತಪಾತಗಳು ಯಾವ ಪ್ರಾಂತದಲ್ಲಿ ಬಸವೇಶ್ವರಾದಿ ಮಹಾನುಭಾವರು ಉತ್ಪನ್ನರಾಗಿ ಧರ್ಮಪ್ರಸಾರವನ್ನೂ, ವಾಙ್ಮಯದ ಅಭಿವೃದ್ಧಿಯನ್ನೂ ಮಾಡಿದರೋ, ಅಂಥ ಕರ್ನಾಟಕದ ಉತ್ತರಸೀಮೆಯಲ್ಲಿಯೇ ಸಂಭವಿಸಿದವು. ಅಂದಬಳಿಕ ಇಂಥ ಪರಿಸ್ಥಿತಿಯಲ್ಲಿ ವಾಙ್ಮಯವು ಬೆಳೆಯುವದು ಹೇಗೆ? ಗ್ರಂಥಗಳು ಸುರಕ್ಷಿತವಾಗಿ ಇರುವ ಬಗೆ ಹೇಗೆ? ಆದ್ದರಿಂದ ಈ ಸಮಯದಲ್ಲಿ ಬಸವೇಶ್ವರಾದಿಗಳು ನಿರ್ಮಿಸಿದ ವಾಙ್ಮಯಕ್ಕೆ ಬಹು ದೊಡ್ಡ ದಕ್ಕೆಯು ತಗಲಿತೆಂಬದು ನಿರ್ವಿವಾದವು.

ಹೀಗೆ ವೀರಶೈವ ಧಾರ್ಮಿಕ ವಾಙ್ಮಯಕ್ಕೆ ಪ್ರಾಪ್ತವಾದ ಭಯಂಕರ ವಿಪತ್ತನ್ನು ದೂರಮಾಡುವ ಸುಯೋಗವು ಮುಂದೆ ಸ್ವಲ್ಪ ಕಾಲದಲ್ಲಿಯೇ ಬಂದಿತು. ಈ ಬಗೆಯ ಪ್ರಯತ್ನಗಳಿಗೆ ವಿಜಯನಗರದ ಅರಸನಾದ ೧ನೇ ದೇವರಾಜನು ಬಹಳ ಸಹಾಯಕನಾದನು. ಆಗ ತೋಂಟದಾರ್ಯ, ಜಕ್ಕಣಾರ್ಯ ಮೊದಲಾದ ಗ್ರಂಥಕಾರರೂ ೧೦೧ ವಿರಕ್ತರೂ ಉದ್ಭವಿಸಿ ವೀರಶೈವ ವಾಙ್ಮಯಕ್ಕೆ ಹೊಸ ಪ್ರಕಾಶವನ್ನು ಒದಗಿಸಿಕೊಟ್ಟರು. ಅವರು ಹಿಂದಿನ ಕಠಿಣ ಕಾಲದಲ್ಲಿ ಅಸ್ತವ್ಯಸ್ತವಾಗಿ ಬಿದ್ದು ಹೋಗಿದ್ದ ವಚನಶಾಸ್ತ್ರ, ಷಟ್ಸ್ಥಲದ ಧರ್ಮವಿಚಾರಗಳನ್ನು ದೇಶವಲ್ಲೆಲ್ಲ ಪ್ರಚುರಗೊಳಿಸಿದರು. ತೋಂಟದಾರ್ಯ, ಬೋಳಬಸವೇಶ್ವರ, ಘನಲಿಂಗ ಇವರೆಲ್ಲರೂ ಬಹು ಪ್ರೌಢವಾದ ವಚನಗ್ರಂಥಗಳನ್ನು ರಚಿಸಿದರು. ಜಕ್ಕಣಾರ್ಯ ಮೊದಲಾದ ವಿದ್ವಜ್ಜನರು ಅಲ್ಲಲ್ಲಿ ತುಂಡುತುಂಡಾಗಿ ಬಿದ್ದು ಹೋಗಿದ್ದ ಶಿವಶರಣರ ಜಾಜ್ವಲ್ಯವಾದ ವಚನಗಳನ್ನು ಸಂಗ್ರಹಿಸಿದರು. ಮತ್ತು ಅವುಗಳಿಗೆ ಟೀಕೆಗಳನ್ನು ಬರೆದರು. ಈ ಮೇರೆಗೆ ಈ ಕಾಲದಲ್ಲಿ ವಚನಶಾಸ್ತ್ರದ ವಿಶಾಲ ಮತ್ತು ಉಜ್ವಲ ತತ್ವಗಳು ದೇಶದಲ್ಲೆಲ್ಲ ಹರಡಲು ಕಾರಣವಾಯಿತು. ಈ ಮಹಾತ್ಮರೆಲ್ಲರು ಮಾಡಿದ ಕಾರ್ಯಗಳಲ್ಲಿ ಗೂಳೂರ ಸಿದ್ಧವೀರಣಾಚಾರ್ಯನು ಈ ಶೂನ್ಯಸಂಪಾದನೆಯನ್ನು ರಚಿಸಿದ್ದು ಸುಂದರವಾದ ವೀರಶೈವ ಧರ್ಮಮಂದಿರಕ್ಕೆ ಒಂದು ಪ್ರಕಾಶಮಾನವಾದ ಕಲಶವನ್ನು ಇಟ್ಟಂತೆ ಆಗಿರುತ್ತದೆ. ಈ ಗ್ರಂಥವು ವೀರಶೈವ ವಚನವಾಙ್ಮಯದಲ್ಲಿ ಬಹಳ ಉನ್ನತಸ್ಥಾನವನ್ನು ಹೊಂದಿರುತ್ತದೆ.

ಶೂನ್ಯಸಂಪಾದನೆ ಎಂದರೆ ವೀರಶೈವ ಧರ್ಮತತ್ವಗಳನ್ನು ಬೋಧಿಸುವ ಒಂದು ಸುಂದರವಾದ ಗ್ರಂಥವು. ಅನೇಕರು ವೀರಶೈವ ಮತತತ್ವಗಳನ್ನು ಸಾದ್ಯಂತವಾಗಿ ಅರುಹಿ ಕೊಡುವಂಥ ಗ್ರಂಥವಾವುದೆಂದು ಆಗಿಂದಾಗ್ಗೆ ಕೇಳುವದುಂಟು. ಇಂಥವರಿಗೆ ಈ ಶೂನ್ಯಸಂಪಾದನೆಯ ಗ್ರಂಥವು ಬಹು ಉಪಯುಕ್ತವಾಗಿರುತ್ತದೆ. ವೀರಶೈವ ಮತತತ್ವಗಳನ್ನು ತಿಳಿದುಕೊಳ್ಳಲು ಈ ಗ್ರಂಥವು ಒಂದು ಅಗಾಧವಾದ ಕಣಿಯೇ ಎಂದು ಹೇಳಬಹುದು. ವಾಚಕರು ಇದರಲ್ಲಿಯ ಬೇಕಾದ ಒಂದು ಪುಟವನ್ನು ತೆರೆದುನೋಡಬಹುದು. ಆ ಪುಟದಲ್ಲಿಯ ವಿಷಯಗಳನ್ನು ಅವರು ನಿರೀಕ್ಷಕ ದೃಷ್ಟಿಯಿಂದ ನಿರೀಕ್ಷಿಸಿದರೆ, ತಿಳಿವಳಿಕೆಯನ್ನು ದಂಗುಬಡಿಸುವಂಥ ಗಹನವಿಚಾರಗಳು ಅವುಗಳಲ್ಲಿ ತುಂಬಿ ತುಳಕುತ್ತವೆಂಬುದು ಕೂಡಲೆ ತಿಳಿದುಬರುವದು. ಈ ವಿಚಾರಗಳಲ್ಲಿ ವಾಚಕರು ಬೇಕಾದಷ್ಟು ಓಲಾಡಬಹುದು, ಓಲಾಡಿ ಆನಂದಿಸಬಹುದು. ಇಷ್ಟು ಮಹತ್ವದ ಗ್ರಂಥವು ಈ ಶೂನ್ಯಸಂಪಾದನೆಯಾಗಿದೆ.

ಗೂಳೂರು ಸಿದ್ಧವೀರಣಾಚಾರ್ಯನು ಈ ಶೂನ್ಯಸಂಪಾದನೆಯನ್ನು ರಚಿಸಿದ ಪದ್ಧತಿಯು ಹೊಸಮಾದರಿಯದಾಗಿರುತ್ತದೆ. ಈ ಪದ್ಧತಿಯನ್ನು ಅವನ ಹಿಂದೆ ಯಾರೂ ಅನುಸರಿಸಿದಂತೆ ತೋರಿಬರುವದಿಲ್ಲ. ಅವನ ಪದ್ಧತಿ ಎಂದರೆ ಹಿಂದಿನ ಕಾಲದ ಬಸವಾದಿ ಶಿವಶರಣರ ಪ್ರಬಲವಾದ ರಹಸ್ಯಾರ್ಥವುಳ್ಳ ವಚನಗಳನ್ನೇ ಆಯ್ದುಕೊಂಡು ಅವುಗಳನ್ನು ವಾದಾತ್ಮಕವಾಗಿ ಉದಹರಿಸಿ ಧರ್ಮತತ್ವಗಳನ್ನು ನಿರೂಪಿಸುವದು ಇರುತ್ತದೆ. ಅವನು ಹೀಗೆ ಪುರಾತನರ ಉಕ್ತಿಗಳನ್ನು ಆರಿಸಿ ಅವುಗಳ ಮೂಲಕ ಧರ್ಮತತ್ವಗಳನ್ನು ನಿರೂಪಿಸಿದ್ದು ಒಂದು ಮಹತ್ತರವಾದ ಕಾರ್ಯವೆಂತಲೇ ನಾವು ಹೇಳಬೇಕು. ಇದರಿಂದ ಪೂರ್ವದ ಶಿವಶರಣರ ವಚನವಾಙ್ಮಯದ ನಿಜಸ್ವರೂಪವನ್ನು ತಿಳಿಯಲಿಕ್ಕೆ ಸಾಧ್ಯವಾಗಿದೆ. ಇದಲ್ಲದೆ ಗ್ರಂಥಕಾರನು ಈ ವಾಗ್ವಾದ ಪದ್ಧತಿಯನ್ನು ಸ್ವೀಕರಿಸಿರುವದರಿಂದ ಚರ್ಚಾತ್ಮಕ ವಿಷಯಗಳ ಗುಣದೋಷಗಳನ್ನು ತಿಳಿದುಕೊಳ್ಳಲಿಕ್ಕೆ ಬಹು ಸಹಾಯಕಾರಿಯಾಗಿದೆ. ಈ ಪದ್ಧತಿಯಿಂದ ವಿವೇಚಿಸುವ ವಿಷಯಗಳ ಬಗ್ಗೆ ಸಂಶಯಗಳು ಉಳಿಯದಂತೆ ಆಗುತ್ತದೆ. ಉದಾಹರಣಾರ್ಥವಾಗಿ ಸಿದ್ಧರಾಮೇಶ್ವರನ ಸಂಪಾದನೆಯಲ್ಲಿ ಇಷ್ಟಲಿಂಗವೇಕೆ ಬೇಕೆಂಬುದು, ಘಟ್ಟಿವಾಳಯ್ಯನ ಸಂಪಾದನೆಯಲ್ಲಿ ಇಷ್ಟಲಿಂಗದ ಅವಶ್ಯಕತೆ ಎಷ್ಟೆಂಬುದು, ನುಲಿಯ

ಚಂದಯ್ಯನ ಸಂಪಾದನೆಯಲ್ಲಿ ಲಿಂಗಜಂಗಮರ ಸಂಬಂಧವೇನೆಂಬುದು ಹೀಗೆ ಅನೇಕಾನೇಕ ಷಟ್ಸ್ಥಲ ವಿಷಯುಗಳು ಈ ಗ್ರಂಥದಲ್ಲಿಯ ೨೧ ಸಂಪಾದನೆಗಳಲ್ಲೆಲ್ಲವೂ ಬಂದಿರುತ್ತವೆ. ಮತ್ತು ಈ ವಿಷಯುಗಳೆಲ್ಲವು ಸಂಪೂರ್ಣವಾಗಿ ಇವುಗಳಲ್ಲಿ ಚರ್ಚಿಸಲ್ಪಟ್ಟು ಕಟ್ಟಕಡೆಗೆ ಒಂದು ನಿಶ್ಚಿತ ಸಿದ್ಧಾಂತವು ಹೊರಡಿಸಲ್ಪಟ್ಟಿರುತ್ತದೆ. ಹೀಗೆ ಇದೊಂದು ಹೊಸ ಮಾದರಿಯ ಗ್ರಂಥವಾಗಿದೆ.

ಗ್ರಂಥದ ಈರೀತಿಯನ್ನು ನಾವು ಗ್ರೀಸ ದೇಶದಲ್ಲಿ ಆಗಿಹೋದ ಸಾಕ್ರೆಟೀಸ, ಪ್ಲೇಟೋ ಇವರ ವಿವೇಚನಾ ಪದ್ಧತಿಗೆ ಹೋಲಿಸಬಹುದು. ಅವರ ಪದ್ಧತಿಯಾದರೂ ಹೀಗೆಯೇ ಇದೆ. ಅಂದರೆ ವಾದವಿವಾದಾತ್ಮಕವಾಗಿದೆ. "ಪ್ಲೇಟೋನ ಸಂಭಾಷಣೆಗಳು" ಎಂಬ ಪ್ರಸಿದ್ಧ ಗ್ರಂಥವಿದ್ದು ಅದನ್ನು ನೋಡಿದರೆ ಅದಕ್ಕೂ ಈ ಶೂನ್ಯಸಂಪಾದನೆಗೂ ಬಹು ಸಾಮ್ಯತೆಯು ಕಂಡು ಬರುವದು. ಪ್ಲೇಟೋನು ಕೆಲವೊಂದು ವಿಷಯವನ್ನು ತೆಗೆದುಕೊಂಡು ಅದನ್ನು ಪ್ರಶ್ನೋತ್ತರ ಮೂಲಕ ವಿವೇಚಿಸಿ ಅಸತ್ಯವಾದುದನ್ನು ದೂರಮಾಡಿ ನಿಜತ್ವವನ್ನು ಸಿದ್ಧಾಂತಗೊಳಿಸುವಂತೆ ಗೂಳೂರ ಸಿದ್ಧವೀರಣಾಚಾರ್ಯನು ವೀರಶೈವ ಮತತತ್ವಗಳನ್ನು ಇದರಲ್ಲಿ ನಿಷ್ಕರ್ಷೆ ಪಡಿಸಿರುವನು. ಇವನನ್ನು ನಾವು "ಕರ್ನಾಟಕದ ಪ್ಲೇಟೋ" ಎಂದು ಕರೆಯಬಹುದು.

ಗೂಳೂರ ಸಿದ್ಧವೀರಣಾಚಾರ್ಯನು ಮಾಡಿದ ಈ ಮಹತ್ತರ ಕಾರ್ಯವನ್ನು ವೀರಶೈವ ಸಮಾಜವು ಮನ್ನಿಸಿ ಅವನ ಈ ಕೃತಿಗೆ ಯಾವಾಗಲೂ ಮಹತ್ವವನ್ನು ಕೊಡುತ್ತ ಬಂದಿರುವದು. ವೀರಶೈವೋಪದೇಶ ಕಾಲದಲ್ಲಿ ಅನೇಕ ವಿಧಾನಗಳು ಜರಗುತ್ತವಷ್ಟೇ. ಆ ಕಾಲಕ್ಕೆ ಉಪದೇಶವನ್ನು ದಯಪಾಲಿಸುವ ಗುರುವು ತನ್ನ ಶಿಷ್ಯನಿಗೆ ತನ್ನ ಬೋಧಾಕಾಲದಲ್ಲಿ ಮತತತ್ವ ಬೋಧಕವಾದ ಕೆಲ ಗ್ರಂಥಗಳನ್ನು ಅಭ್ಯಾಸಿಸಲು ಸೂಚಿಸುವದುಂಟು. ಅವುಗಳಲ್ಲಿ ಈ ಶೂನ್ಯಸಂಪಾದನೆಯು ಒಂದಾಗಿರುತ್ತದೆ. ಇದರ ಮೇಲಿಂದ ಈ ಗ್ರಂಥದ ಮಹತ್ವವು ಎಷ್ಟಿರುತ್ತದೆಂಬುದು ವಾಚಕರಿಗೆ ತಿಳಿಯದೆ ಇರಲಾರದು.

ಈಗ ಪ್ರಸಿದ್ಧವಾದ ಈ ಗ್ರಂಥವು ಎರಡು ಹಸ್ತಲಿಖಿತ ಗ್ರಂಥಗಳ ಸಹಾಯದಿಂದ ಅಚ್ಚು ಹಾಕಲ್ಪಟ್ಟಿದೆ. ಒಂದು ಗ್ರಂಥವು ಸಾಂಗಲಿ ಸಂಸ್ಥಾನದಲ್ಲಿಯ ರಬಕವಿ ಗ್ರಾಮದ್ದು ಇದ್ದು, ಎರಡನೆಯದು ಮೈಸೂರ

ಸಂಸ್ಥಾನದಲ್ಲಿಯ ಕೋಲಾರ ಜಿಲ್ಹಾ ಮೃಗಮಲೆಯ ಶ್ರೀ. ಬಸವರಾಜ ಮರಿದೇವರಲ್ಲಿ ದೊರೆತದ್ದು. ಇವುಗಳಲ್ಲಿ ಮೊದಲನೆಯದು ಕೋರಿ ಕಾಗದದ ಮೇಲೆ ಬರೆದದ್ದು ಇದ್ದು, ಎರಡನೆಯದು ತಾಡವಾಲಿ ಗ್ರಂಥ ವಾಗಿರುತ್ತದೆ. ಇವೆರಡೂ ಗ್ರಂಥಗಳು ಸಾಧಾರಣವಾಗಿ ಶುದ್ಧವಿದ್ದು, ಈಗಿನ ಗ್ರಂಥವನ್ನು ಅಚ್ಚುಹಾಕಲಿಕ್ಕೆ ಬಹಳ ಉಪಯುಕ್ತವಾದವು. ಈ ಗ್ರಂಥಗಳನ್ನು ಕಳಿಸಿಕೊಟ್ಟದ್ದಕ್ಕೆ ಅವವುಗಳ ಮಾಲಕರಿಗೆ ನಾನು ಬಹಳ ಋಣಿಯಾಗಿದ್ದೇನೆ.

ಶೂನ್ಯಸಂಪಾದನೆಯಂಥ ದೊಡ್ಡ ಗ್ರಂಥವನ್ನು ಅಚ್ಚುಹಾಕುವ ಕೆಲಸವು ಬಹು ಖರ್ಚಿನದೆಂದು ನಾವು ಬೇರೆ ಹೇಳುವ ಅವಶ್ಯವಿಲ್ಲ. ಇಷ್ಟೆಲ್ಲ ಖರ್ಚನ್ನು ಕೇವಲ ತಮ್ಮ ಲಾಭಕ್ಕಾಗಿ ಗ್ರಂಥಕರ್ತರು ಮಾಡುತ್ತಾರೆಂದು ಯಾರಾ ದರೂ ತಿಳಿದರೆ ಅದು ತಪ್ಪು ತಿಳವಳಿಕೆಯು. ಒಂದು ವೇಳೆ ಇಂಥ ಗ್ರಂಥ ಗಳು ಪ್ರಕಟವಾದ ಕೂಡಲೆ ಖರ್ಚಾಗಿ ಬಿಟ್ಟರೆ, ಹೀಗನ್ನುವದು ಕೆಲಮಟ್ಟಿಗೆ ನಿಜವೆನಿಸಿಕೊಳ್ಳಬಹುದು. ಆದರೆ ಇಂಥ ಹಳೇ ಧಾರ್ಮಿಕ ಗ್ರಂಥಗಳನ್ನು ಈಗಿನ ಹೊಸ ಯುಗದಲ್ಲಿ ಜನರು ತೆಗೆದುಕೊಳ್ಳುವದು ಬಹು ಕಡಿಮೆ. ಅಚ್ಚಾದ ಇಂಥ ಗ್ರಂಥಗಳ ಪ್ರತಿಗಳು ಹತ್ತರಲ್ಲಿ ಒಂದಾದರೂ ಖರ್ಚಾಗದೆ ಉಳಿದ ಪ್ರತಿಗಳು ಹುಳತಿನ್ನುತ್ತ ವರ್ಷಾನ ವರ್ಷ ಹಾಗೆಯೇ ಬೀಳುತ್ತಿರು ವದು ನಮ್ಮ ಅನುಭವಕ್ಕೆ ಬಂದಮಾತು. ಆದ್ದರಿಂದ ಈ ಬಗೆಯ ಗ್ರಂಥ ಗಳು ಪ್ರಸಿದ್ಧವಾಗಬೇಕಾದರೆ ಲಕ್ಷಾವಧಿ ರೂಪಾಯಿಗಳು ದೊಡ್ಡ ಫಂಡುಗಳು ಬೇಕು. ಇಲ್ಲದಿದ್ದರೆ ಪ್ರಸಿದ್ಧಿಕರ್ತರು ಲಕ್ಷಾಧೀಶರಾಗಿರಬೇಕು. ಇಲ್ಲವೆ ಯಾರೊಬ್ಬ ಸ್ವಾಭಿಮಾನ, ಧರ್ಮಾಭಿಮಾನವುಳ್ಳ ಉದಾರ ಗ್ರಹಸ್ಥರ ಆಶ್ರ ಯವು ಬೇಕು. ಇವುಗಳಲ್ಲಿ ಮೊದಲಿನ ಎರಡು ಸಂಗತಿಗಳು ವೀರಶೈವ ಸಮಾಜದಲ್ಲಿ ಅಭಾವವಾಗಿವೆ. ಆದರೆ ಮೂರನೇ ಮಾರ್ಗದಿಂದ ನಮಗೆ ಈ ಶೂನ್ಯಸಂಪಾದನೆಯ ಗ್ರಂಥವನ್ನು ಪ್ರಸಿದ್ಧಿಸಲಿಕ್ಕೆ ಬಹು ಸಹಾಯ ವಾಯಿತು. ಈ ಗ್ರಂಥದ ಅಚ್ಚಿನ ಖರ್ಚಿಗೋಸ್ಕರ ರಾ॥ ರಾ॥ ವೀರಭದ್ರಪ್ಪ ಬಸಪ್ಪ ಹಾಲಭಾವಿ ಬಿ. ಏ. ಎಲ್ ಎಲ್. ಬಿ. ಫರ್ಸ್ಟಕ್ಲಾಸ ಸಬ್ ಜಜ್ಜ ಧಾರವಾಡ ಇವರು ೫೦೦ ರೂ ಗಳನ್ನು ಕೊಟ್ಟು ನನಗೆ ಬಹಳ ಪ್ರೋತ್ಸಾಹಿಸಿದರು. ಇವರ ಸಹಾಯದ ಮಹತ್ವವು ನನಗೆ ಇಂತಿಷ್ಟೇ ಎಂದು ಹೇಳಲು ಸಾಧ್ಯವಿಲ್ಲ. ಈ ಮಹನೀಯರು ನನ್ನ ಗ್ರಂಥಪ್ರಕಟಣಾ

ಕಾರ್ಯದಲ್ಲಿ ಅತ್ಯಂತ ಸಹಾನುಭೂತಿಯುಳ್ಳವರಾಗಿ ಯಾವಾಗಲೂ ಬಹಳ ಸಹಾಯಮಾಡುತ್ತ ಬಂದಿದ್ದಾರೆ. ಇವರಿಗೆ ನಾನು ಅತ್ಯಂತ ಋಣಿಯಾಗಿದ್ದೇನೆ. ಇವರ ಅನುಕರಣವನ್ನು ನಮ್ಮ ಸಮಾಜದ ಇತರ ಧನಿಕರು ಮಾಡಿದ್ದಾದರೆ ವೀರಶೈವ ಗ್ರಂಥಗಳು ತೀವ್ರ ಪ್ರಕಾಶಕ್ಕೆ ಬಂದು ಎಷ್ಟು ಲೋಕೋತ್ತರ ಕಲ್ಯಾಣವಾದೀತೆಂಬುದನ್ನು ಹೇಳುವದು ಅವಶ್ಯವಿಲ್ಲ.

ಈ ಶೂನ್ಯಸಂಪಾದನೆಯ ಗ್ರಂಥವು ರಾ॥ ರಾ॥ ಹಾಲಭಾವಿಯವರ ಸೂಚನೆಯ ಮೇರೆಗೆ ಮಹಾಶಿವಾನುಭಾವಿಗಳಾದ ಶಿವಶರಣರ ಮಾರ್ಗವನ್ನು ಕೈಕೊಂಡು ಅದರಂತೆ ನಿತ್ಯ ಆಚರಿಸಿ ಸೊಲ್ಲಾಪುರದಲ್ಲಿ ವಾಸಿಸಿ ಅಲ್ಲಿಯೇ ಕೆಲವು ವರ್ಷಗಳ ಹಿಂದೆ ಶಿವೈಕ್ಯರಾಗಿ ಹೋದ ನಾಲವತವಾಡದ ಶಿ. ಮೂ. ವೀರಯ್ಯನವರು ಶಿವಶರಣ ಇವರಿಗೆ ಸಮರ್ಪಿಸಲ್ಪಟ್ಟಿದೆ. ಹೀಗೆ ಮಾಡಿದ್ದು ಯೋಗ್ಯವೆಂದು ವಾಚಕರು ಅನುಮತಿಸದೆ ಇರಲಾರರು.

**ವಿಜಾಪುರ.** **ಫ. ಗು. ಹಳಕಟ್ಟಿ.**

೨೪-೯-೩೦ ಸಂಪಾದಕ.



# ಶೂನ್ಯ ಸಂಪಾದನೆ.



ಶ್ರೀ ವಿಮಲಮುಕ್ತಿದಾಯಕ ಪಾವನಮಯ ಪರಮಚರಿತ ಷಟ್ಸ್ಥಲನಾಯಕ। ಭೂಪಿನುತ ಸಚ್ಚಿದಾತ್ಮಕ ಭಾವಜಹರ ಸಲಹು ಸಿದ್ಧಲಿಂಗ ದೇಶಿಕ ॥೧॥

ಅನಿಮಿಷ ಕುಂಭನಭೇದನ ಪ್ರೇಮದಿ ಪದ ನಾಲ್ಕು ಶರಣಜನಕೀವುತ್ತನಿ। ರಾಮಯನೆನಿಪನನೊಲ್ದು ಮೋದದಿಂ ನುತಿಪೆ ಬೋಳಬಸವಾಚಾರ್ಯನಾ ॥೨॥

ವರ ಬೋಳಬಸವ ದೇಶಿಕ ಸುರುತರ ಕೃಪೆಯಿಂತು ಅಲ್ಲಮಪ್ರಭುರಾಯನಾ। ಪರಮಾನುಭಾವ ಬೋಧೆಯು ನೊರೆದೆನು ಗೂಳೂರಸಿದ್ಧವೀರಾಚಾರ್ಯ ॥೩॥

ಶ್ರೀಮತ್ಪರಾಪರಶಿವ ನಿತ್ಯನಿರ್ಮಲ ನಿರಘ ನೀರಸೂಯ್ಯ ಅನಿರ್ವಾಚ್ಯ ಪರಂಜ್ಯೋತಿ ಸ್ವರೂಪ ಷಟ್ಸ್ಥಲಜ್ಞಾನ ಪ್ರಭಾಪುಂಜ ರಂಜಿತ ಸಕಲಭಕ್ತ ಹೃತ್ಕಮಲಕರ್ಣಿಕಾ ವಾಸ ಶರಣಜನ ಮುಕ್ತಿಪ್ರದಾಯಕ ಅಖಿಲಜಗದಾರಾಧ್ಯರಪ್ಪ ತೋಂಟದ ಸಿದ್ಧಲಿಂಗೇಶ್ವರನ ಕೃಪಾಪ್ರಸನ್ನ ಪುತ್ರರಾದ ಬೋಳಬಸವೇಶ್ವರ ದೇವರು ಮುಖ್ಯವಾದ ವಸುಧೆಯ ಷಟ್ಸ್ಥಲಜ್ಞಾನಿಗಳಾದ ದಿವ್ಯಾನುಭಾವಿಗಳಾದ ಬೋಧೆವಿಡಿದು ಗೂಳೂರಸಿದ್ಧ ವೀರೇಶ್ವರನೆಂಬ ಮಹಾನುಭಾವಿಯು ನಿತ್ಯನಿರ್ಮಲ ನಿರಂಜನನೆನಿಪ ಅಲ್ಲಮಪ್ರಭುದೇವರು ಸಮಸ್ತ ಮಹಾ ಗಣಂಗಳಿಗೆ ದಿವ್ಯಜ್ಞಾನ ಪ್ರಸನ್ನಮಂ ಬೋಧಿಸಿದಕ್ರಮವಂ। ಅಖಿಳ ಪುರಾತನರ ವಚನಂಗಳಿಂದೆ ಸಂಗ್ರಹಿಸಿದೆವು. ಶಿವಗಣಂಗಳಿಗೆ ಶರಣಾರ್ಥಿ.

ಪ್ರಥಮದಲ್ಲಿ ಅಖಂಡಾದ್ವಯ, ಅನುಪಮ, ನಿರವಯ, ನಿರಂಜನ, ಸರ್ವ ಶೂನ್ಯವನೊಳಕೊಂಡ, ಸಚ್ಚಿದಾನಂದ ನಿತ್ಯ ಪರಿಪೂರ್ಣವಪ್ಪ ನಿಃಕಲಲಿಂಗವು ಧ್ಯಾನಪೂಜೆಗಳಿಲ್ಲದೆ, ನಿರವಯದಲ್ಲಿ ಬಯಲಿಗನಾಗಿ, ಇರ

ಬಾರದೆಂದು, ತನ್ನ ಸ್ವೇಚ್ಛಾ ಲೀಲಾವಿಲಾಸದ ನೆನಹಿಂದ ತನ್ನ ಚಿತ್ರಛಾಸಾಮರ್ಥ್ಯಶಕ್ತಿಯ ಮುಂದುಗೊಂಡು, ಅನಂತಕೋಟಿ ಬ್ರಹ್ಮಾಂಡಂಗಳನು ಅನಂತಕೋಟಿ ಆತ್ಮರುಗಳನು ತನ್ನಲ್ಲಿಯೆ ಪುಟ್ಟಿಸಿ, ಆತ್ಮರುಗಳಿಗೆ ಪಂಚವಿಂಶತಿ ತತ್ವಂಗಳ ಸಂಬಂಧಿಸಿದಲ್ಲಿ ಆ ಆತ್ಮರುಗಳು ದೇಹೋಹಂ ಎಂದು ಜಾತಿವರ್ಣಾಶ್ರಮ ಕುಲಗೋತ್ರ ನಾಮ ಸೀಮೆ, ಸುಖದುಃಖ, ಬಂಧಮೋಕ್ಷಕ್ಕೊಳಗಾಗಿ ತಮ್ಮ ನಿಜಸ್ವರೂಪವ ಮರೆದ ಆತ್ಮರುಗಳ ಕಾಲಕಾಮರಿಗೆ ವಶವಮಾಡಿ, ಅವರ ಸುಖದುಃಖ, ಬಂಧಮೋಕ್ಷಂಗಳ ಮೊಟ್ಟದೆ ಯಂತ್ರವಾಹಕನಾಗಿ, ಆಡಿಸುತ್ತಿರ್ದನಾ ಪರಶಿವಲಿಂಗವು. ಅಂತಹ ಆತ್ಮರುಗಳೊಳಗೆ ಜನ್ಮದ ಕಡೆಗಂಡು ಶಿವಸಂಸ್ಕಾರ ಒದಗಿ, ದೇಹಭಾವಕ್ಕೆ ಹೇಸಿ, ಸಂಸಾರನಿರೋಚನವುಂಮಾಡಿ, ಗುರೋಪಾವಸ್ಥೆಯಂ ಮಾಡುತ್ತಿರಲು, ಆ ಪರಶಿವಲಿಂಗವು ಗುರುವಾಗಿ ಬಂದು, ತ್ರಿವಿಧ ದೀಕ್ಷೆಯಿಂದೆ ಮಲತ್ರಯಂಗಳ ಕಳೆದು, ದೀಕ್ಷೆಯಿಂ ರಕ್ಷಿಸಿದ, ಲಿಂಗಸ್ವರೂಪವಾಗಿ ಬಂದು ಕರಸ್ಥಲದಲ್ಲಿ ಪೂಜೆಗೊಂಡು ರಕ್ಷಿಸಿದ, ಜಂಗಮಸ್ವರೂಪವಾಗಿ ಬಂದು, ಅಂತರಂಗ ಬಹಿರಂಗದಲ್ಲಿ ಭರಿತನಾಗಿ ಬೋಧಿಸಿ ಶಿಕ್ಷಿಸಿ, ರಕ್ಷಿಸಿದ ಪ್ರಸಾದವ ಕರುಣಿಸಿ ತನ್ನೊಳಗೆ ಕೂಡಿಕೊಳುತಿಪ್ಪನು. ಆ ನಿಷ್ಕಲಪರಶಿವಲಿಂಗವು ಆ ನಿಷ್ಕಲಪರಶಿವನ ಸಚ್ಚಿದಾನಂದ ಸ್ವರೂಪವೆನಿಸಿದ, ಬಸವಣ್ಣ, ಚನ್ನಬಸವಣ್ಣ, ಪ್ರಭುದೇವರೇ ಗುರು ಲಿಂಗ ಜಂಗಮ ಸ್ವರೂಪವಾಗಿ ಸಕಲ ಜಗತ್ಪಾವನ ನಿಮಿತ್ತವಾಗಿ, ಮರ್ತ್ಯಕ್ಕೆ ಅವತರಿಸಿದರು. ಇಂತೀ ಗುರು ಲಿಂಗ ಜಂಗಮ ಮೂರು ಆ ನಿಷ್ಕಲಪರಶಿವಲಿಂಗ ತಾನೆ ಆ ಪರಶಿವಲಿಂಗವು ಜಗದ್ಧಿತಾರ್ಥವಾಗಿ, ಮೂರಾಗಿ ಅವತರಿಸಿದರೆ, ಇದೇನುಕಾರಣ ಮರ್ತ್ಯಕ್ಕೆ ಬಂದರೆಂದು ಸಂಕಲ್ಪಿಸಿ ಶಾಪದಿಂದ ಬಂದರೆಂದು ಆವನಾನೊಬ್ಬ ನುಡಿವುತಿದ್ದಾನು ಅವನು ಇಪ್ಪತ್ತೆಂಟುಕೋಟಿ ನರಕದಲ್ಲಿ ರವಿ, ಶಶಿವುಳ್ಳನ್ನಬರ ನರಕವನನುಭವಿಸುತ್ತಿರ್ಪನು. ಅಂತಲ್ಲದೆ ಜಗಹಿತಾರ್ಥವಾಗಿ ನಾಲ್ಕು ಯುಗಂಗಳಲ್ಲಿ ಅವತರಿಸಿದರೆಂಬುದಕ್ಕೆ ಪ್ರಭುದೇವರ, ಚನ್ನಬಸವೇಶ್ವರ ದೇವರ, ಸ್ವಯ ವಚನವೆ ಸಾಕ್ಷಿ. ಅದೆಂತೆಂದೊಡೆ,

॥ವಚನ॥ ಕೃತಾಯುಗದಲ್ಲಿ ಜಗಹಿತಾರ್ಥವಾಗಿ ಬಂದು ದೇವಾಂಗನೆಂಬ ಗಣೇಶ್ವರನಾಗಿ ಆರಾಧಿಸುವಲ್ಲಿ ಭಕ್ತಿಕಾರಣ ಸ್ಥೂಲಕಾಯನೆಂಬ ಜಂಗಮವಾಗಿ ಬಂದು ಲಿಂಗಾರ್ಚನೆಯಮಾಡಿ, ಹೋದನು. ತ್ರೇತಾ

ಯುಗದಲ್ಲಿ ಜಗಹಿತಾರ್ಥವಾಗಿ ಬಂದು ಘಂಟಾಕರ್ಣನೆಂಬ ಗಣೇಶ್ವರ ನಾಗಿ ಬಂದು ಆರಾಧಿಸುವಲ್ಲಿ, ಭಕ್ತಿಕಾರಣ ಶೂನ್ಯಕಾಯನೆಂಬ ಜಂಗ ಮವಾಗಿ ಬಂದು ಲಿಂಗಾರ್ಚನೆಯ ಮಾಡಿ ಹೋದನು. ದ್ವಾಪರದಲ್ಲಿ ಜಗ ಹಿತಾರ್ಥವಾಗಿ ವೃಷಭನೆಂಬ ಗಣೇಶ್ವರನಾಗಿಬಂದು ಆರಾಧಿಸುವಲ್ಲಿ, ಭಕ್ತಿ ಕಾರಣ ಅನುಮಿಷನೆಂಬ ಜಂಗಮವಾಗಿ ಬಂದು, ಲಿಂಗಾರ್ಚನೆಯ ಮಾಡಿ ಹೋದನು. ಕಲಿಯುಗದಲ್ಲಿ ಜಗಹಿತಾರ್ಥವಾಗಿ, ಬಸವನೆಂಬ ಗಣೇಶ್ವ ರನಾಗಿಬಂದು, ಗುರು, ಲಿಂಗ, ಜಂಗಮ, ಪಾದೋದಕ, ಪ್ರಸಾದದ ಹಾದಿಯನೆಲ್ಲರಿಗೆ ತೋರಿ ಆರಾಧಿಸುವಲ್ಲಿ, ಭಕ್ತಿಕಾರಣ ಪ್ರಭುವೆಂಬ ಜಂಗಮವಾಗಿ ಲಿಂಗಾರ್ಚನೆಯಮಾಡಬಂದ. ಇಂತೀ ಪರಶಿವಲಿಂಗವು ಲೀಲಾವಿನೋದಕ್ಕೆ ದೇವ ಭಕ್ತನೆಂಬ ಉಭಯನಾಮವ ಧರಿಸಿ, ಕ್ರಿಯಾಂ ಗದಿಂ ಬಂದುದನರಿಯದೆ, ಶಾಪದಿಂದ ಬಂದರೆಂದು ಸಂಕಲ್ಪಿಸಿ ನುಡಿವ ರಿಗೆ,ನಾಯಕನರಕ ತಪ್ಪದು ಕೂಡಲಚನ್ನ ಸಂಗಮದೇವಾ.

ಇನ್ನು ಪ್ರಭುದೇವರ ಗದ್ಯ॥ ಶ್ರೀಮತ್ಪರಮ ಪರಮಾನಂದ, ಪರಂ ಜ್ಯೋತಿ ಪರಮೇಶ್ವರ ಅಗಮ್ಯ ಅಗೋಚರ ಅಪ್ರಮೇಯ ಅನಾಮಯ ಅನೌಪಮ್ಯ ಅಪ್ರತರ್ಕ್ಯ, ಮಹಾಜ್ಞಾನ ಪ್ರಭಾಮಯ, ಯಮ, ನಿಯಮ ಆಸನ ಪ್ರಾಣಾಯಾಮ,, ಪ್ರತ್ಯಾಹಾರ, ಧ್ಯಾನ, ಧಾರಣ, ಸಮಾಧ್ಯ ಷ್ಟಾಂಗಯೋಗೀಶ್ವರ ದೇಹೇಂದ್ರಿಯ ಮನಃ ಪ್ರಾಣಾಹಂಕಾರಾದಿ ಗುಣ ಧರ್ಮ ಕರ್ಮ ನಿರ್ಲೇಪನ ಸಕಲ ಭುವನಾಂತರಂಗ, ನಿತ್ಯನಿರ್ಮಲಸ್ವ ರೂಪ, ಶಿವಶರಣ ಹೃತ್ಕಮಲಕರ್ಣಿಕಾವಾಸ, ಮತ್ತ ಮಧುಕರಾಯ್ದು ಮಾನ ಇಷ್ಟಲಿಂಗ ಪ್ರಾಣಲಿಂಗ ತೃಪ್ತಿಲಿಂಗಾಂಕಂಗಲೇಪ, ಗುರುಲಿಂಗ ಜಂಗಮ ಪ್ರಸಾದ ಪಾದೋದಕಾದಿ ಪಂಚಾಚಾರ ಪ್ರತಿಷ್ಠಾಪನಾಚಾರ್ಯ, ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣೈಕ್ಯಾದಿ ಷಟ್ಸ್ಥಲ ಚಕ್ರವರ್ತಿ, ಬಸವ ಚನ್ನಬಸವರಾಜ ಪ್ರಾಣನಾಯಕ, ಪರಮ ಶ್ರೀ ವೀರ ಶೈವಾಚಾರ ಶಿರೋರತ್ನ, ಶ್ರೀ ವೀರಶೈವಾಚಾರ ಪ್ರಮಥನಾಯಕ, ಶ್ರೀ ವೀರಶೈವಾಚಾರ ದೀಕ್ಷಾಚಾರ್ಯ, ಮರ್ತ್ಯಲೋಕ ಪಾವನಕಾರಣಾವತಾರ ಅನುಮಿಷ ಶ್ರೀ ಚರಣಾಂಭೋಜಕರ್ಣಿಕಾವಾಸ, ಗುಹೇಶ್ವರನಾಮಾಮೃತ ಸ್ವೀಕಾರಸಂತುಷ್ಟ, ಶ್ರೀಮತ್ಸಕಲ ಜಗದಾಚಾರ್ಯರುಮಪ್ಪ ಅಲ್ಲಮಪ್ರ ಭುದೇವರು ಚನ್ನಬಸವರಾಜದೇವರು ಮುಖ್ಯವಾದ, ಅಸಂಖ್ಯಾತಮ ಹಾಗಣಂಗಳೊಡನೆ ಮಹಾನುಭಾವ ಪ್ರಸಂಗಮಂಮಾಡಿದ ಶೂನ್ಯಸಂ

ಪಾದನೆಯೊಳ್ ಸಮ್ಯೋಷ್ಠಿ ಕಥಾಪ್ರಸಂಗವನು ಮುಕ್ತಕವಾಗಿರ್ದ ಶಿವಾದ್ವೈತವಚನಂಗಳನು, ಉತ್ತರ ಪ್ರತ್ಯುತ್ತರಸಂಬಂಧವಾಗಿ ಸೇರಿಸಿ ಶಿವಗಣ ಪ್ರಸಾದಿ ಮಹಾದೇವಯ್ಯಗಳು ಮರ್ತ್ಯಲೋಕದ ಮಹಾ ಗಣಂಗಳಿಗೆ ಆ ಮಹಾನುಭಾವ ಪ್ರಸಂಗಮಂ ಸಮರ್ಪಿಸಿದಲ್ಲಿ ಸಿದ್ಧರಾಮೇಶ್ವರ ದೇವರಿಗೆ ಉಪದೇಶಕ್ರಮವಿಲ್ಲದಿರ್ದೊಡೆ, ಗುಮ್ಮಳಾಪುರದ ಸಿದ್ಧಲಿಂಗದೇವರು ಸಮಸ್ತ ಪುರಾತನರ ವಚನಸನ್ಮತದಿಂ ಸಂಗ್ರಹಿಸಲು, ಆ ಕ್ರಮವಿಡಿದು ಈ ಶೂನ್ಯಸಂಪಾದನೆಯ ಸೇರಿಸಿ ಶಿವಗಣಂಗಳಿಗೆ ಸಮರ್ಪಿಸಿದೆನು.

## ಪಿಂಡಸ್ಥಲ.

ಪ್ರಥಮದಲ್ಲಿ ಪ್ರಭುದೇವರು ನಿರೂಪಿಸಿದ ಪಿಂಡಸ್ಥಲದ ವಚನ॥ ಕಲ್ಲೊಳಗಣ ಪಾವಕನಂತೆ, ಉದಕದೊಳಗಣ ಪ್ರತಿಬಿಂಬದಂತೆ, ಬೀಜದೊಳಗಣ ವೃಕ್ಷದಂತೆ, ಶಬ್ದದೊಳಗಣ ನಿಃಶಬ್ದದಂತೆ, ಗುಹೇಶ್ವರ ನಿಮ್ಮ ಶರಣ ಸಂಬಂಧ ॥೧॥

ಕಲ್ಲೊಳಗಣ ಕಿಚ್ಚು ಉರಿಯ ಬಲ್ಲುದೆ? ಬೀಜದೊಳಗಣ ವೃಕ್ಷ ಉಲಿಯಬಲ್ಲುದೆ? ತೋರಲಿಲ್ಲಾಗಿ ಬೀರಲಿಲ್ಲಾರಿಗೆಯು, ಗುಹೇಶ್ವರ ನಿಂದ ನಿಲವನನುಭವ ಸುಖಿ ಬಲ್ಲ ॥೨॥

## ಪಿಂಡ ಜ್ಞಾನಸ್ಥಲ.

ಇಂತು ಪಿಂಡದಲ್ಲಿ ಶಿವತತ್ವವನಡಗಿಸಿಕೊಂಡಿರ್ದ ಆತ್ಮನ ಅಂತರಂಗದೊಳಗಣ ಶಿವತತ್ವವೇ ಜ್ಞಾನಾಂಕುರ ಸ್ವರೂಪವಾಗಿ, ಆ ಸುಜ್ಞಾನ ದೃಷ್ಟಿಯಿಂ ತಿಳಿದು ನೋಡಿ, ನಾನೀ ಮಾಂಸ ಪಿಂಡದುತ್ಪತ್ತ್ಯ ಸ್ಥಿತಿಲಯದವನಲ್ಲ. ಈ ಬ್ರಹ್ಮಾಂಡಾದಿ ಸಮಸ್ತ ಪ್ರಪಂಚುಗಳು ತೋರದ ಮುನ್ನ ಆದಿ ಚಿತ್ ಶಕ್ತಿಯಿಂದುದಯಿಸಿದೆನೆಂದು, ಆತ್ಮನು ತನ್ನ ತಾನೇ ವಿವೇಕಿಸುತ್ತಿರ್ದನೆಂದು, ಪ್ರಭುದೇವರು ನಿರೂಪಿಸುತ್ತಿರ್ದರದೆಂತೆಂದೊಡೆ,

॥ವಚನ॥ ಆಧಿ ಆಧಾರ ವಿಲ್ಲದಂದು, ಹಮ್ಮು ಬಿಮ್ಮುಗಳಿಲ್ಲದಂದು. ಸುರಾಳ ನಿರಾಳವಿಲ್ಲದಂದು, ಶೂನ್ಯ ನಿಃಶೂನ್ಯವಿಲ್ಲದಂದು, ಸಚರಾಚರವೆಲ್ಲ ರಚನೆಗೆ ಬಾರದಂದು, ಗುಹೇಶ್ವರನ ಶರಣನುದಯಿಸಿದನಂದು. ॥೩॥

ನಾವ, ಬಿಂದು ಕಳೆಗಳಿಲ್ಲದಂದು, ನಿರ್ಭಯನೆಂಬ ಗಣೇಶ್ವರನು ಉತ್ಪತ್ತಿ ಸ್ಥಿತಿಲಯಂಗಳಿಲ್ಲದಂದು, ಅಕ್ಷಯನೆಂಬ ಗಣೇಶ್ವರನು ಓದುವೇದಂಗಳಿಲ್ಲದಂದು, ಓಂಕಾರನೆಂಬ ಗಣೇಶ್ವರನು ಯುಗಜುಗಂಗಳಿಲ್ಲದಂದು, ಊರ್ಧ್ವಮುಖನೆಂಬ ಗಣೇಶ್ವರನು ಗುಹೇಶ್ವರನೆಂಬ ಲಿಂಗವಿಲ್ಲದಂದು, ನಿರ್ಮಾಯನೆಂಬ ಗಣೇಶ್ವರನು ॥೪॥

ಇಂತು ನಿಃಕಲ ಪರಶಿವಲಿಂಗವೆ ತನ್ನ ಲೀಲಾವಿನೋದದಿಂದೆ, ಅನಂತಕೋಟಿ ಬ್ರಹ್ಮಾಂಡಂಗಳನು ತನ್ನಲ್ಲಿಯೆ ಹುಟ್ಟಿಸಿ, ವಿಲಾಸಿಸುತ್ತಿರ್ದ ಪರಶಿವಲಿಂಗದ ಸಕಲ ನಿಃಕಲಕ್ಕೆ ಕಾರಣವೆ ಪ್ರಭುದೇವರು. ಆ ಪ್ರಭುದೇವರು ಭಕ್ತಿಕಾರಣ ನಾಲ್ಕು ಯುಗಂಗಳಲ್ಲಿ ಅವತರಿಸಿದಲ್ಲಿ ನಿರ್ಮಾಯನಿರಂಜನ ಮಾಯಾಕೋಳಾಹಳನೆಂಬುದೆ ಸತ್ಯ. ಹೀಗಲ್ಲದೆ ಮಾಯಾಶಕ್ತನು ಮಾಯಾವಶಗತನೆಂದು ನುಡಿವವರಿಗೆ ಗುರು ಲಿಂಗ ಜಂಗಮ ದ್ರೋಹ ತಪ್ಪದು. ಮಾಯಾ ಕೋಳಾಹಾಳನೆಂಬುದಕ್ಕೆ ಹಡಪದಪ್ಪಣ್ಣಗಳ ವಚನವೇ ಸಾಕ್ಷಿ. ಅದೆಂತೆಂದೊಡೆ,

॥ವಚನ॥ ಬ್ರಹ್ಮ ವಿಷ್ಣುಗಳ ಮಾಯೆ ತೊತ್ತಳಿದುಳಿದಂದು, ದೇವ ದಾನವ ಮಾನವರ ಮಾಯೆ ಅಗಿದಗಿದು ತಿಂಬುದು, ರುದ್ರಗಣ ಪ್ರಮಥಗಣಂಗಳೆಂಬವರ ಮಾಯೆ ಮರುಳ್ಮಾಡಿ ಕಾಡುವಂದು, ನೊಸಲಕಣ್ಣ ಪಂಚಮುಖ ದಶಭುಜದವರಿಗೆ ಮಾಯೆ ಅರ್ಧಾಂಗಿಯಾದಂದು, ಅಷ್ಟ ಶತ ಸಹಸ್ರ ಋಷಿಗಳ ಮಾಯೆ ತಪೋಮದದಲ್ಲಿ ಕೆಡಹುವಂದು, ನಾನು ಮಾಯಾಕೋಳಾಹಳನಾಗಿರ್ದೆನು ಕಾಣಾ ಗುಹೇಶ್ವರ. ॥೫॥

ಇಂತು ಪ್ರಭುದೇವರು ಮರ್ತ್ಯಲೋಕದಲ್ಲಿ ನಾಲ್ಕು ಯುಗಂಗಳಲ್ಲಿಯೂ ಅನಾದಿಗಣೇಶ್ವರತ್ವಮಂ ತಾಳಿ ನಾನು ಮಾಯಾ ಕೋಳಾಹಳನಾಗಿ ಬಂದೆನೆಂದು ನಿರೂಪಿಸಿದ ವಚನ. ॥

ಕೃತಯುಗದಲ್ಲಿ ನಾನು ಭಕ್ತಿಕಾರಣ ಸ್ಥೂಲಕಾಯನೆಂಬ ಗಣೇಶ್ವರನಾಗಿರ್ದೆನಯ್ಯ! ತ್ರೇತಾಯುಗದಲ್ಲಿ ನಾನು ಭಕ್ತಿಕಾರಣ ಶೂನ್ಯಕಾಯನೆಂಬ ಗಣೇಶ್ವರನಾಗಿರ್ದೆನಯ್ಯ! ದ್ವಾಪರದಲ್ಲಿ ನಾನು ಭಕ್ತಿಕಾರಣ ಅನುಮಿಷನೆಂಬ ಗಣೇಶ್ವರನಾಗಿರ್ದೆನಯ್ಯ! ಕಲಿಯುಗದಲ್ಲಿ ನಾನು ಭಕ್ತಿಕಾರಣ ಅಲ್ಲಮಪ್ರಭುದೇವರೆಂಬ ಗಣೇಶ್ವರನಾಗಿರ್ದೆ ಕಾಣಾ ಗುಹೇಶ್ವರಾ ೬॥

# ಸಂಸಾರ ಹ್ಯೇಯಸ್ಥಲ.

ಇಂತು ಅನಾದಿ ಗಣೇಶ್ವರತ್ವಮಂ ನಿರೂಪಿಸಿದ ಪ್ರಭುದೇವರು ಆದಿ ಚಿಚ್ಛಕ್ತಿಯಿಂದುದಯಿಸಿದೆನೆಂದರಿದಾತ್ಮನು ತನ್ನಿಂದನ್ಯವಾದ ಸಂಸಾರ ಭ್ರಾಂತಿಯಾಂ ನಿವೃತ್ತಿ ಮಾಡುತ್ತಿರ್ದನೆಂದು ನಿರೂಪಿಸಲು ಸಂಸಾರ ಹ್ಯೇಯ ಸ್ಥಲವಾದುದು.

॥ವಚನ॥ ಕಾಯದ ಮೊದಲಿಂಗೆ ಬೀಜ ಮಾವುದೆಂದರಿಯದೀ ಲೋಕವೆಲ್ಲ. ಇಂದ್ರಿಯಂಗಳು ಬೀಜವಲ್ಲ. ಆ ಕಳಾಭೇದವಲ್ಲ. ಸ್ವಪ್ನ ಬಂದೆರಗಿತ್ತಲ್ಲ. ಇದಾವಂಗೆ ತಿಳಿಯಬಾರದಾಗಿ, ಶುದ್ಧ ಸುಯಿಧಾನವಲ್ಲಿ ಕಾಣಾ ಗುಹೇಶ್ವರಾ ॥೭॥

ಹಳ್ಳದೊಳಗೆ ಉಳ್ಳಿ ಬರುತ್ತಿರಲು, ನೊರೆ ತೆರೆಗಳು ತಾಗದಿಪ್ಪವೆ? ಸಂಸಾರ ಸಾಗರದೊಳಗೆ ಮುಳುಗಾಡುತ್ತಿರ್ಪ ಪ್ರಾಣಿಗಳಿಗೆ ಸುಖ ದುಃಖಂಗಳು ,ತಾಗದಿಪ್ಪವೆ? ಇದು ಕಾರಣ ಮೂರ್ತಿಯಾದುದಕ್ಕೆ ಪ್ರಳಯ ತಪ್ಪದು ಕಾಣಾ ಗುಹೇಶ್ವರಾ ॥೮॥

ಆಯಿತ್ತೆ ಉದಯಮಾನ, ಹೋಯಿತ್ತೆ ಅಸ್ತಮಾನ, ಅಳಿದವ ನಿರಲಾದ ನಿರ್ಮಿತಂಗಳಿಲ್ಲ ಕತ್ತಲೆ ಕವಿಯಿತ್ತು. ಮೂರು ಲೋಕದೊಳಗೆ ಇದರಚ್ಚುಗವೇನು ಹೇಳಾ ಗುಹೇಶ್ವರಾ? ॥೯॥

ಸಂಸಾರವೆಂಬ ಹೆಣ ಬಿದ್ದರೆ ತಿನಬಂದ ನಾಯ ಜಗಳವ ನೋಡಾ! ನಾಯ ಜಗಳವ ನೋಡಿ ಹೆಣ ನಗುತ್ತಿದೆ. ಗುಹೇಶ್ವರ ಲಿಂಗವಲ್ಲಿಲ್ಲ ಕಾಣಿರಯ್ಯ ॥೧೦॥

ನೀರ ಬೊಂಬೆಯ ಬೋಹದ ತೊಟ್ಟ ಅಗ್ನಿ ಬಣ್ಣದ ಹೊದಿಕೆಯ ಹೊದ್ದು ಗಾಳಿಯ ಗತಿಯಲ್ಲಿ ಸುಳಿದಾಡುವ ಪ್ರಾಣಿಗಳು ದೇವರನೆತ್ತ ಬಲ್ಲರು ಹೇಳಾ ಗುಹೇಶ್ವರಾ? ॥೧೧॥

ನೆಲದ ಬೊಂಬೆಯ ಮಾಡಿ, ಜಲದ ಬಣ್ಣವನುಡಿಸಿ, ಹಲವು ಪರಿಯ ಕ್ರಮದಲ್ಲಿ ಉಲಿವ ಗೆಜ್ಜೆಯಕಟ್ಟಿ, ವಾಯುವನಲನ ಸಂಚಕ್ಕೆ ಅರಳೆಲೆಯ ಶೃಂಗಾರವ ಮಾಡಿ, ಆಡಿಸುವ ಯಂತ್ರವಾಹಕನಾರೊ ಬಯಲಕಂಭಕ್ಕೆ ತಂದು ಸ್ವಯವಾಗಿ, ಪರದ ನೆಲೆಗೊಳಿಸಿದರೆ, ಸ್ವಯದ ಪ್ವಯವಾಯಿತ್ತು ಕಾಣಾ ಗುಹೇಶ್ವರಾ ॥೧೨॥

ಮಾನವ ತೋರಿಹ ಆಕಳಿಗೆ ಕೊಳಗದ ತೋರಿಹ ಕೆಚ್ಚಲು, ತಾಳ ಮರಮುದ್ದಿ ಹನೆರಡುಕೋಡು, ಅವನರಸ ಹೋಗಿ ಆರುದಿನ, ಅದು ಕೆಟ್ಟು ಮೂರುದಿನ, ಅಘಟಿತಘಟಿತ ಅರಸುವ ಬಾರಯ್ಯ ಗುಹೇಶ್ವರಾ. ॥೧೩॥

ಅಡವಿಯೊಳಗೆ ಕಳ್ಳರು ಕಡವರದ ಸ್ವಾಮಿಯನು ಹುಡುಕಿ ಅರಸುತ್ತೈದಾರೆ. ಸೊಡರು ನಂದಿ ಕಾಣದೆ, ಅನ್ನಪಾನದ ಹಿರಿಯರು ಎಲ್ಲರು ಅದರ ಪಾನವನುಂಡು ಸುರಾಪಾನವ ಬೇಡುತ್ತೈದಾರೆ. ಅರಿದ ಹಾರುವನೊಬ್ಬ ಅರಿವ ತಲೆಯ ಹಿಡಿದುಕೊಂಡು, ಅಧ್ಯಾತ್ಮವಿಕಾರದ ನೆತ್ತರ ಕುಡಿದನು ಗುಹೇಶ್ವರಾ ॥೧೪॥

ಜಂಬೂ ದ್ವೀಪ ವ್ಯವಹಾರಿ ಕಂಡ ಬಂಡದ ತುಂಬಿ ಕುಂಭಿನಿಯು ಪರದ ಮೇಲೆ ಪಸಾರವನಿಕ್ಕಿದ ಉಷ್ಣ ತೃಷ್ಣೆ ಘನವಾಗಿ, ಕಡಲೇಳು ಕುಡಿದು ನೀರಡಿಸಿ ಬೊರಲುಗೊಂಡು ಬೆರಗಾದ ಶಿಶು ತಾಯ ಹೆಣನ ಹೊತ್ತುಕೊಂಡು ಹೆಸರು ಹೇಳುತ್ತೈದಾನೆ. ಗುಹೇಶ್ವರನ ನಿಲವ ವಸುಧೆಯಾಕೃತಿ ನುಂಗಿತ್ತು ॥೧೫॥

ಗಗನದ ಮೇಲೊಂದು ಅಭಿನವ ಗಿಳಿ ಹುಟ್ಟಿ ಸ್ವಯ ಸಂಭ್ರಮದಲ್ಲಿ ಮನೆಯ ಮಾಡಿತ್ತು. ಒಂದು ಗಿಳಿ ಇಪ್ಪತ್ತೈದು ಗಿಳಿಯಾಯಿತ್ತು. ಬ್ರಹ್ಮನಾ ಗಿಳಿಗೆ ಹಂಜರವಾದ. ವಿಷ್ಣುವಾ ಗಿಳಿಗೆ ಕೊರೆಗೂಳಾದ. ರುದ್ರನಾ ಗಿಳಿಗೆ ತಾ ಕೋಲನಾದ. ಇಂತೀ ಮೂವರ ಮುಂದಣ ಕಂದನ ನುಂಗಿದ ದೃಷ್ಟ ನಾಮ ನಷ್ಟವಾಯಿತ್ತು ಕಾಣಾ ಗುಹೇಶ್ವರಾ ॥೧೬॥

## ಮಾಯಾ ವಿಲಾಸ ವಿಡಂಬನ ಸ್ಥಲ.

ಇಂತೀ ಆತ್ಮನು ತನಗೆ ಇದಿರಿಟ್ಟು ತೋರುವ ಮಾಯೆಗೆ ತಾನನ್ಯವಾಗಿ, ಆ ಮಾಯಾವಿಲಾಸಮಂ ನಿವೃತ್ತಿ ಮಾಡುತ್ತಿರ್ದನೆಂದು ಪ್ರಭುದೇವರು ನಿರೂಪಿಸಲು, ಮಾಯಾವಿಲಾಸ ವಿಡಂಬನ ಸ್ಥಲವಾದುದು.

॥ವಚನ॥ ರಕ್ಕಸಿಗಿಬ್ಬರು ಮಕ್ಕಳು ತೊಟ್ಟಿಲ ಮೇಲೈವರು, ರಕ್ಕಸಿ ಬಾಣತಿಯಾದಡೆ ಮಕ್ಕಳಿಗಿನ್ನೆಂತೊ? ತೊಟ್ಟಿಲ ತೂಗುವೆ. ಜೋಗುಳವಾಡುವೆ. ರಕ್ಕಸಿ ಬಾಣತಿಯ ತೊಟ್ಟಿಲ ನುಂಗಿತ್ತು. ಇದೇನು ಹೇಳಾ ಗುಹೇಶ್ವರಾ ॥೧೭॥

ಆಡಂಬರದೊಳಗಾಡಂಬರವಿದೇನೋ? ಹಾರಿತ್ತು ಬ್ರಹ್ಮನೋಲಗ. ಕೆದರಿತ್ತಿದೇನಯ್ಯ! ಸಾರು ಸಾರೆನುತ್ತ ವಿಷ್ಣು ಅಜನ ನುಂಗಿ ರುದ್ರ. ಯೋನಿಯೊಳಗಡಗಿತ್ತಿದೇನೊ? ಬೇರಿಲ್ಲದ ಮರ ನೀರಿಲ್ಲದ ನೆಳಲಲ್ಲಿ ತೋರಿದ ಪ್ರತಿಬಿಂಬವನೇನೆಂಬೆ ಗುಹೇಶ್ವರಾ? ॥೧೮॥

ಕೋಣನ ಕೊಂಬಿನ ತುದಿಯಲ್ಲಿ, ಏಳನೂರೆಪ್ಪತ್ತು ಸಿಂದೆಯ ಬಾವಿ, ಬಾವಿಯೊಳಗೊಂದು ಬಗರಿಗೆ, ಬಗರಿಗೆಯೊಳಗೊಬ್ಬ ಸೂಳೆ ನೋಡಯ್ಯ. ಸೂಳೆಯ ಕೊರಳಲ್ಲಿ ಏಳನೂರೆಪ್ಪತ್ತು ಆನೆ ಏರಿತ್ತ ಕಂಡೆ ಗುಹೇಶ್ವರಾ ॥೧೯॥

ಪಂಚಾಶತಕೋಟಿ ವಿಸ್ತೀರ್ಣ ಭೂಮಂಡಲವನೊಂದು ತಲೆ ಇಲ್ಲದ ಮುಂಡ ಬಂದು ನುಂಗಿತ್ತ ಕಂಡೆ. ತಲೆ ಇಲ್ಲದೆ ನಾನು ಕಂಡು ಬೆರಗಾದೆನು. ನವಖಂಡಮಂಡಲ ಭಿನ್ನವಾದಂದು ಆ ತಲೆಯ ಕಂಡವರುಂಟೆ ಗುಹೇಶ್ವರಾ? ॥೨೦॥

ಊರಮಧ್ಯದ ಕಣ್ಣ ಕಾಡಿನೊಳಗೆ ಐದು ಹೆಣ ಬಿದ್ದೈದಾವೆ. ಬಂದು ಬಂದು ಆಳುವರ ಬಳಗ ಘನವಾದ ಕಾರಣ ಹೆಣನು ಬಯ್ಬು ಕಾಡು ನಂದದು, ಸೂಡು ಉರಿಯಿತ್ತು ಗುಹೇಶ್ವರಾ ॥೨೧॥

ಕೆಂಡದ ಗಿರಿಯ ಮೇಲೊಂದು ಅರಗಿನ ಕಂಭವಿದ್ದುದ ಕಂಡೆ. ಅರಗಿನ ಕಂಭದ ಮೇಲೊಂದು ಹಂಸೆ ಇದ್ದುದ ಕಂಡೆ. ಕಂಭ ಬೆಂದು ಹಂಸೆ ಹಾರಿತ್ತು ಗುಹೇಶ್ವರಾ ॥೨೨॥

ಭೂತ ಭೂತವಕೂಡಿ, ಅದ್ಭುತವಾಯಿತ್ತು. ಕಿಚ್ಚುಕಿಚ್ಚು ಕೂಡಿತ್ತು. ನೀರುನೀರು ಕೂಡಿತ್ತು. ಉರಿ ಪವನದೊಳಗಿದ್ದು ವಾಯುವಿಮ್ಮಡಿಸಿತ್ತು ಗುಹೇಶ್ವರಾ ॥೨೩॥

ಅಂಗದ ಕೊನೆಯ ಮೇಲಣ ಕೋಡಗ ಕೊಂಬಿಂಗೆ ಹಾರಿತ್ತಯ್ಯ! ಒಂದು ಜೋದ್ಯನ ನೋಡಾ. ಕೈಯ್ಯ ನೀಡಲು ಮೈಯ್ಯನೆಲ್ಲವ ನುಂಗಿತ್ತು. ಒಯ್ಯನೆ ಕರೆದರೆ ಮುಂದು ಬಂದು ನಿಂದಿತ್ತು. ಮುಯ್ಯಾಂತರೆ ಬಯಲಾಯಿತ್ತು ಗುಹೇಶ್ವರಾ. ॥೨೪॥

ಒರಿವಪ್ಪ ಜಲಧಿಯ ಮಡುವಿನೊಳಗೆ ಕರಿಯ ಕಬ್ಬಿಲ ಜಾಲವ ಬೀಸಿದ ನೋಡಯ್ಯ! ಅರಿಯುವ ತಲೆ ಐದು, ಕರಿಯ ತಲೆ ಐದು

ಮುಂಪೈದಾವೆ ನೋಡಯ್ಯ. ಕರಿಯ ಕಬ್ಬಿಲ ಜಾಲವ ಹೊತ್ತುಕೊಂಡು ಹೋದರೆ ನೇತ್ರದಲೋಕುಳಿಯನಾಡಿತ್ತ ಕಂಡೆ ಗುಹೇಶ್ವರಾ. ॥೨೫॥

ಭೂಮಿಯ ಕಠಿಣವನು, ಆಕಾಶದ ಮೃದುವನು, ತಿಳಿವ ಗಮನ ವಲ್ಲಿಯೇ ನಿಂದಿತ್ತು. ಉದಕದೊಳಗೆ ಹುಟ್ಟಿದ ತೃಷೆ ಉದಕವ ನರಸಿತ್ತಲ್ಲಾ! ಒಳಗೆ ಸತ್ತು ಹೊರಗೆ ಆಡುತ್ತದೆ. ಗುಹೇಶ್ವರನಲ್ಲಿಯೆ ನಿಂದನು. ॥೨೬॥

ಹುಲಿಯ ತಲೆ ಹುಲ್ಲೆ, ಹುಲ್ಲೆಯ ತಲೆ ಹುಲಿ, ಎರಡರ ನಡು ಒಂದಾಯಿತ್ತು. ಹುಲಿಯಲ್ಲ. ಹುಲ್ಲೆಯಲ್ಲ. ಕೆಲದಲೊಂದು ಬಂದು ಮೆಲುಕಾಡುತ್ತ ಇದ್ದಿತ್ತು. ತಲೆ ಇಲ್ಲದ ಮುಂಡ ತರಗೆಲೆಯ ಮೆದ್ದಡೆ, ಎಲೆ ಮರೆಯಾಯಿತ್ತು ಗುಹೇಶ್ವರಾ. ॥೨೭॥

ಅರಗಿನ ಪುತ್ಥಳಿಯನುರಿ ಕೊಂಡರೆ, ಉದಕ ಬಾಯಾರಿತ್ತದೇಸೊ? ಆಗಿ ಎಂಬ ಬಾವಿ ಎನಗೀಯಿಂಬೊ ಬಾವಿಯನಗಿದಾತ ಸತ್ತ ಬಾವಿ ಬತ್ತಿತ್ತು. ಇದುಕಾರಣ ಮೂರು ಲೋಕವೆಲ್ಲವು ಬರಿದೆ ಸೂರೆ ಹೋಯಿತ್ತು ಗುಹೇಶ್ವರಾ. ॥೨೮॥



# ಗುರು ಕರುಣ.

## (ಪ್ರಥಮೋಪದೇಶ)

ಇಂತು ಮಾಯಾ ವಿಲಾಸ ನಿವೃತ್ತಿಯಂ ಮಾಡಿ, ಸಕಲ ಪ್ರಪಂಚು ವ್ಯಾಪ್ತಿಗಳೆಲ್ಲವನು ಮರೆದ ಆತ್ಮಂಗೆ ಗುರುಕರುಣದಿಂದಲ್ಲದೆ ಮುಕ್ತಿಯಾಗದೆಂಬುದನು ತೋರುವಂತೆ, ಪ್ರಭುದೇವರು ತಮ್ಮ ಮೂಲಜ್ಞಾನ ದೃಷ್ಟಿಯಿಂ ಅನುಮಿಷದೇವರು ತಮಗೆ ಗುರುವೆಂದರಿದು ಬಪ್ಪಲ್ಲಿ ಗೊಗ್ಗೈಯ್ಯನೆಂಬ ಮಹಾ ಶರಣನು ಒಂದು ತೋಟದಲ್ಲಿ ಕೃಷಿಯಂ ಮಾಡುತ್ತಿರಲಲ್ಲಿ ಸಾರ್ದು, ಅದಂ ವಿಡಂಬಿಸಿ, ನಾನೊಂದು ತೋಂಟವ ಮಾಡಿದೆನೆಂದು ಪರಮಾರ್ಥ ಸೂಚಕನಾಗಿ ನಿರೂಪಿಸಿದ ಪ್ರಸ್ತಾವದ ವಚನ॥

ತನುವ ತೋಟವ ಮಾಡಿ, ಮನವ ಗುದ್ದಲೆಯ ಮಾಡಿ, ಅಗಿದು ಕಳೆದೆನಯ್ಯ. ಭ್ರಾಂತಿನ ಬೇರ ಒಡೆದು ಸಂಸಾರದ ಹೆಂಟೆಯ ಬಗಿದು ಬಿತ್ತಿದೆನಯ್ಯ ಬ್ರಹ್ಮ ಬೀಜವ. ಅಖಂಡ ಮಂಡಲವೆಂಬ ಬಾವಿ, ಪವನವೆ ರಾಟಾಳ, ಸುಷುಮ್ನದಿಂದುದುಕವ ತಿದ್ದಿ ಬಸವಗಳೈವರು ಹಸಗೆಡಿಸಿಹವೆಂದು, ಸಮತೆ ಸೈರಣೆಯೆಂಬ ಬೇಲಿಯ ನಿಕ್ಕಿ ಆವಾಗಳು ಈ ತೋಂಟದಲ್ಲಿ ಜಾಗರವಿದ್ದು ಸಸಿಯ ಸಲಹಿದೆನು ಕಾಣಾ ಗುಹೇಶ್ವರಾ. ॥೨೯॥

ಇಂತು ಪ್ರಭುದೇವರು ಗೊಗ್ಗೈಯ್ಯನ ಸಂಬೋಧಿಸಿ ತಿಳುಪಿ ತಾವು ನವಮಾಸತೀವಿದ ಗರ್ಭಿಣಿಯಂತೆ ಶಿವತತ್ವ ವಿದ್ಯೆಯೊಳಗೆ ಸಂಪೂರ್ಣವಾಗಿ ಎಡೆಗೊಂಡು, ಗುರು ಹಸ್ತ ಬಂದು ಸೋಂಕದ ಮುನ್ನವೆ ಶಿಖಿ ಕರ್ಪುರದಂತಾದಪುದೆಂಬ ಭಾವವಿದಿರಿಂಗೆ ಸೂಚಿಸುತ್ತಮಿರೆ ಗುರುವಿಂದ ಮುನ್ನವೆ ಶಿಷ್ಯನು. ಗುರುವೆಂಬ ಶಿವಾದ್ವೈತ ವಾಕ್ಯ ಸತ್ಯವಾದಂತೆ ಅಂತರಂಗದೊಳು ಗುರುಭಾವ ತಲೆದೋರುತ್ತಿರ್ಪ ಅಲ್ಲಮಪ್ರಭುದೇವರು ತಮ್ಮ ಮೂಲ ಜ್ಞಾನದಿಂದ ಅನುಮಿಷ ದೇವರ ಸಮಾಧಿಯಂ ಕಂಡು ಒಳಪ್ಪೊಕ್ಕುನೋಳ್ಪಾಗಳು ಒಂದು ದೀಪ್ತಿ ಬೆಳಗುತ್ತಿರೆ ಕಂಡು, ಸ್ವಸ್ಥ ಪದ್ಮಾಸನದಲ್ಲಿ ಕುಳ್ಳಿರ್ದು ಕರಸ್ಥಲದೊಳು ಅಮೃತ ಲಿಂಗಮಂ ಪಿಡಿದು, ಆ ಲಿಂಗದೊಳು ಆಲಿಂಗನವಾಗಿ, ಕರಣಂಗಳೆಲ್ಲ ನಿಃಕರಣವನೈದಿ, ಭಾವನಿರ್ಭಾವದೋಳ್ನಿಂದು ನೋಟ ನಟ್ಟು ದೃಷ್ಟಿ ನೈಷ್ಠಿಸಿ ಯುವೆಹಳಚದೆ ಅರಿವು ಕರಿಗೊಂಡು ತಾನೆಂಬುದು ತರಹರವಾಗಿ, ನೀನೆಂಬುದು ನಿಷ್ಪತ್ತಿಯಾಗಿ, ಉಭಯ ಸಂದು ಅಡಗಿ ಸ್ವಯವಾಗಿ, ಮನೋಲಯಸ್ಥಾನದೊಳು ಸರ್ವ ಚೈತನ್ಯವು

ಸ್ಸೈದಿ, ತನು ಪರಮ ಕಾಷ್ಠಿಯೊಳು ಪರವಶವಾಗಿ, ಊರ್ಧ್ವಶೂನ್ಯ, ಮಧ್ಯಶೂನ್ಯ, ನಿರಾಮಯಂ ಸರ್ವ ಶೂನ್ಯ ಮನಾಭಾಸಂ ಸಮಾಧಿ ತಸ್ಯ ಲಕ್ಷಣಂ॥ ಎಂಬ ಸಿದ್ಧಾಂತ ವಾಕ್ಯಾರ್ಥಮಂ, ತನ್ನೊಳು ಪೂರಿತ ವಾಗಿ ನಿಜ ಸಮಾಧಿಯೊಳು ಮೂರ್ತಿಗೊಂಡಿರ್ಪ ಆ ಸದ್ಗುರುವಂ ಕಂಡ ಪ್ರಸ್ತಾವದ ವಚನ॥

ಪುಣ್ಯವುಳ್ಳ ಕಾಲಕ್ಕೆ ಪಾಷಾಣ ಪರುಷವಪ್ಪುದು ತಪ್ಪದು ನೋಡಯ್ಯ! ಮಣ್ಣು ಹೊನ್ನಪ್ಪುದು. ಮುನ್ನ ಮುನ್ನವೆ ಅಚ್ಚೊತ್ತಿದ ಭಾಗ್ಯ ವೆನ್ನ ಕಣ್ಣ ಮುಂದೆ ಕಾಣಬಂದಿತ್ತು ನೋಡಾ! ಮಣ್ಣಮರೆಯ ದೇಗುಲ ದೊಳಗೊಂದು ಮಾಣಿಕ್ಯವ ಕಂಡ ಬಳಿಕ, ಇನ್ನು ಮುನ್ನಿನಂತಪ್ಪುದೆ ಗುಹೇಶ್ವರಾ? ॥೩೦॥

ಅರಸುವಬಳ್ಳಿ ಕಾಲ ಸುತ್ತಿತ್ತೆಂಬಂತೆ, ಬಯಸುವ ಬಯಕೆ ಕೈಸಾ ರುವಂತೆ, ಬಡವ ನಿಧಾನವನೆಡಹಿ ಕಂಡಂತೆ, ನಾನರಸುತ್ತಲೊರಸುತ್ತ ಬಂದು ಭಾವಕ್ಕಗವ್ಯನ ಕಂಡೆನಯ್ಯ! ಎನ್ನ ಅರಿವಿನ ಹರಿವ ಕಂಡೆ ನಯ್ಯ! ಎನ್ನ ಒಳಹೊರಗೆ ಸರ್ವಾಂಗ ಪರಮ ಪ್ರಕಾಶದೊಳು ಬೆಳಗುವ ಜ್ಯೋತಿಯ ಕಂಡೆ, ನೋಡಾ! ಕುರುಹಳಿದ ಕರಸ್ಥಲದ ನಿಬ್ಬೆರಗಿನ ನೋಟದ ಎನ್ನ ಪರಮ ಗುರುವ ಕಂಡು, ಬದುಕಿದೆನು ಕಾಣಾ ಗುಹೇಶ್ವರಾ॥೩೧॥

ಇಂತು ಅನುಮಿಷ ದೇವರ ಕಂಡು ಈತನೇ ಗುರು ನಾನೇ ಶಿಷ್ಯ ನೆಂದು ಈ ಶ್ರೀ ಗುರುವಿನ ಚರಣವಿಡಿದು, ಅತೀತವಾದ ಪರವಸ್ತುವನ ರಿದಪೆನೆಂದು ನಿಶ್ಚೈಸಿದ ಪ್ರಸ್ತಾವದ ವಚನ॥

ಕಂಡುದ ಹಿಡಿಯಲೊಲ್ಲದೆ, ಕಾಣದುದ ಹಿಡಿದೆನೆಂದು ಸಿಕ್ಕದೆಂಬ ಬಳಲಿಕೆಯ ನೋಡಾ! ಕಂಡುದನೆ ಕಂಡು ಗುರುಪಾದವ ಹಿಡಿವಲ್ಲಿ ಕಾಣದುದ ಕಾಣಬಹುದು ಗುಹೇಶ್ವರಾ ॥೩೨॥

ಆ ಶ್ರೀ ಗುರುಮೂರ್ತಿಯಂ ನೋಡಿ, ಕೊಂಡಾಡಿದ ಪ್ರಸ್ತಾವದ ವಚನ॥

ಕಾಯದಲಾದ ಮೂರ್ತಿಯಲ್ಲ. ಜೀವದಲಾದ ಮೂರ್ತಿಯಲ್ಲಾ! ಪ್ರಾಣದಲಾದ ಮೂರ್ತಿಯಲ್ಲ. ಪುಣ್ಯದಲಾದ ಮೂರ್ತಿಯಲ್ಲ. ಮುಕ್ತಿ ಯಲಾದ ಮೂರ್ತಿಯಲ್ಲ. ಯುಗದಲಾದ ಮೂರ್ತಿಯಲ್ಲ. ಜಗದಲಾದ ಮೂರ್ತಿಯಲ್ಲ. ಶಿವನಲಾದ ಮೂರ್ತಿಯಲ್ಲ. ಶಕ್ತಿಯಲಾದ ಮೂರ್ತಿಯಲ್ಲ.

ಇದೆಂತಹ ಮೂರ್ತಿಯೆಂದು ಉಪಮಿಸುವೆ? ಕಾಣಬಾರದ ಕಾಯ, ನೋಡಬಾರದ ತೇಜ, ಉಪಮಿಸಬಾರದ ನಿಲವು. ಕಾರಣ ವಿಡಿದು ಕಣ್ಗೆ ಗೋಚರವಾದ ಸುಖವನೇನೆಂದು ಹೇಳುವೆ ಗುಹೇಶ್ವರಾ?॥೩೩॥

ಸ್ಫಟಿಕದ ಘಟದಂತೆ, ಒಳಹೊರಗಿಲ್ಲ ನೋಡಾ! ವಿಗಡ ಚರಿತ್ರಕ್ಕೆ ಬೆರಗಾದೆನು. ನೋಡುವರೆ ಕಾಣಬರುತ್ತಿದೆ. ಮುಟ್ಟುವರೆ ಕೈಗೆ ಸಿಲುಕದು. ಹೊದ್ದುವರೆ ಸಮೀಪ, ಹತ್ತೆ ಸೇರುವರೆ ಅತ್ತತ್ತ ತೋರುತ್ತದೆ. ಆಕಾರವನು ನಿರಾಕಾರ ನುಂಗಿ, ಬಯಲ ಸಮಾಧಿಯಲ್ಲಿ ಸಿಲುಕಿತ್ತು ನೋಡಾ! ಪರುಶನದಿಂದಮೃತಾಹಾರವಾಯಿತ್ತು. ಬೆರಸಿದಡಿನ್ನೆಂತೊ ಗುಹೇಶ್ವರಾ॥೩೪॥

ಇಂತು ಪ್ರಭುದೇವರು ಅನುಮಿಷ ದೇವರ ಮೂರ್ತಿಯಂ ಕೊಂಡಾಡಿ, ಈ ಶ್ರೀ ಗುರುವಿನ ಕೈಯಲಿ ಉಪದೇಶವ ಪಡೆದಿಹೆನೆಂದರೆ ಈ ಮಹಾತ್ಮನು ತಾನಿದಿರೆಂಬುದನರಿಯನು. ನಿಃಶಬ್ದ ವೇಧಿಸಿ ಮುಗ್ಧನಾಗಿರ್ದಹನಾಗಿ ಇದಿರಿಟ್ಟು ಉಪದೇಶವ ಮಾಡುವನಲ್ಲ. ಎನಗೆ ನಾನೇ ಗುರು ಉಪದೇಶವ ಪಡೆಯಬೇಕೆಂದು ನಿಶ್ಚೈಸಿದ ಪ್ರಸ್ತಾವದ ವಚನ॥

ನಡೆ ನುಡಿ ಇಲ್ಲದ ಗುರುವ ಕಂಡು, ಉಪದೇಶವ ಪಡೆಯಲೆಂದು ಹೋದರೆ, ಒಡನೆ ನುಡಿಯ ನುಡಿಸಿದರೆ ಕೇಳಾ! ಕಡೆ ಮೊದಲ ಕಾರ್ಯವೆಂತಪ್ಪುದೊ ಅಯ್ಯ? ಮೂಗ ಮೂಗರ ಪ್ರಸಂಗದಂತೆ ಇದೆ. ಎನ್ನೊಳಗೆ ಅರುವಿನ ಪರಿಮಳ. ಹೊರಗೆ ನೋಡಿದರೆ ಮುಗ್ಧವಾಯಿತ್ತು. ಇದೆಂತು ಉಪಮಿಸುವೆ? ಆನೆಯ ಮದ ಬೆಡಗ ಇಮ ತನ್ನಿಂದ ತಾನೆ ಇಪ್ಪುದಲ್ಲದೆ, ಭಿನ್ನದಲುಂಟೆ ಗುಹೇಶ್ವರಾ?॥೩೫॥

ಗುರುವನು ತನ್ನನು ವಿಭಾಗಿಸಿ ನೋಡಿ ನಿಶ್ಚೈಸಿದ ಪ್ರಸ್ತಾವದ ವಚನ॥

ಒಂದೆಂಬೆನೆ? ಎರಡಾಗಿದೆ. ಎರಡೆಂಬೆನೆ? ಒಂದಾಗಿದೆ. ಒಂದೆರಡೆಂಬ ಸಂದೇಹವಿದೇನೊ? ಅಗಲಲಿಲ್ಲದ ಕೂಟಕ್ಕೆ ಜಿಜ್ಞೆ ಬೆರಗಾದ ಉಪದೇಶ ಗುರುಶಿಷ್ಯರೆಂಬ ಭಾವಕ್ಕೆ ಭೇದ ಉಂಟೆ ಗುಹೇಶ್ವರಾ? ॥೩೬॥

ಮತ್ತಾ ಗುರುವಿನ ಸನ್ನಿಧಿಯಲ್ಲಿ ಜ್ಞಾನಲಿಂಗೋಪದೇಶ ಕ್ರಮವ ಬಿನ್ನಪಂಗೈವ ಪ್ರಸ್ತಾವದ ವಚನ॥

ಕಾಣಬಾರದ ಗುರುವು ಕಂಗೆ ಗೋಚರವಾದರೆ ಹೇಳಲಿಲ್ಲದ ಬಿನ್ನಪ, ಮುಟ್ಟಲಿಲ್ಲದ ಹಸ್ತ ಮಸ್ತಕ ಸಂಯೋಗ. ಹೂಸಲಿಲ್ಲದ ವಿಭೂತಿಯ ಪಟ್ಟ, ಕೇಳಲಿಲ್ಲದ ಕರ್ಣ ಮಂತ್ರ, ತುಂಬಿ ತುಳುಕದ ಕಲಶಾಭಿಷೇಕ, ಆಗಮ

ವಿಲ್ಲದ ದೀಕ್ಷೆ, ಪೂಜೆಗೆ ಬಾರದ ಲಿಂಗ, ಸಂಗವಿಲ್ಲದ ಸಂಬಂಧ ಸ್ವಯಮಪ್ಪ ಅನುಗ್ರಹವ ಅನುಗೊಂಬಂತೆ ಮಾಡಾ ಗುಹೇಶ್ವರಾ ॥೩೭॥

ನೀನೆನಗೆ ಗುರುವಪ್ಪೊಡೆ, ನಾ ನಿನಗೆ ಶಿಷ್ಯನಪ್ಪೊಡೆ, ಎನ್ನ ಕಾಯದ ಕರ್ಮವ ತೊಡೆದು, ಎನ್ನ ಕರಣಾದಿ ಗುಣಂಗಳ ಕಳೆದು, ನೀನೆನ್ನ ಕಾಯದಲ್ಲಿ ಅಡಗಿ, ನೀನೆನ್ನ ಪ್ರಾಣದಲ್ಲಿ ಅಡಗಿ, ನೀನೆನ್ನ ಭಾವದಲ್ಲಿ ಅಡಗಿ, ನೀನೆನ್ನ ಕರಸ್ಥಲಕ್ಕೆ ಬಂದು ಕಾರುಣ್ಯವ ಮಾಡು ಗುಹೇಶ್ವರಾ ॥೩೮॥

ಆದಿಯಿಂದತ್ತತ್ತಲೆನಗೆ ನೀನು ಗುರುವಯ್ಯ! ಅನಾದಿಯಿಂದತ್ತತ್ತಲೆನಗೆ ನೀನು ಗುರುವಯ್ಯ! ಎರಡು ನಾಮ ಹುಟ್ಟದ ಮುನ್ನ ನಿಮಗೆ ನಾನು ಶಿಷ್ಯನಯ್ಯ! ಎನ್ನ ಭಾವ ಕಾಯದೊಳಗೆ ಭ್ರಮೆಯ ಕಳೆದು, ಎನ್ನ ಕಾಯದೊಳಗೆ ಮರಹ ಕಳೆದು, ಎನ್ನೊಳಗೆ ತಿಳಿವಿನ ಬಗೆಯ ತೋರುತ್ತ ಹೊರಗೆ ನುಡಿಯುವಂತಿರ್ದಡೆ ಬಿಡೆನು ನಾನು ನೋಡಾ ನಿಮ್ಮ ಶ್ರೀ ಚರಣವ. ಮಾಡಿದಡಂತು ಮಹಾ ಪ್ರಸಾದವೆಂದು ಕೈಕೊಂಬೆನು. ಮಾಡದಿರ್ದೊಡೆ ನೀವೆ ನಾನಾಗಿ ಮಹಾಪ್ರಸಾದವೆಂದು ಕೈಕೊಂಬೆನು. ಇಂತು ಆವ ತೆರದಿಂದಾದರು ಎನ್ನೊಡಲ ನಿಮ್ಮಲ್ಲಿ ಸವೆದು ಪಡೆವೆ ನಿಮ್ಮ ಕರುಣವ ಗುಹೇಶ್ವರ ನಿಮ್ಮ ಇರವಿನ ಪರಿಯಿಂತುಟು ನೋಡಾ ॥೩೯॥

ಮತ್ತಾ ಗುರುವಿನಲ್ಲಿ ಪ್ರಭುದೇವರು ಅಭಿನ್ನಕ್ರಿಯೆ ನಿಶ್ಚೈಸಿದ ಪ್ರಸ್ತಾವದ ವಚನ॥

ಜ್ಯೋತಿಯೊಳಗಿರ್ಪ ಕರ್ಪುರಕ್ಕೆ ಅಪ್ಪುವಿನೊಳಗಡಗಿಪ್ಪ ಉಪ್ಪಿಂಗೆ, ಶ್ರೀ ಗುರುವಿನೊಳಗಿಪ್ಪ ಶಿಷ್ಯಂಗೆ ಬೇರೆ ಬೇರೆ ಕ್ರಿಯಾವರ್ತನೆಯುಂಟೆ ಗುಹೇಶ್ವರಾ? ॥೪೦॥

ಗುರು ಶಿಷ್ಯ ಭಾವದಲ್ಲಿ ಅಭೇದ್ಯವೆಂದರಿದ ಪ್ರಭುದೇವರು ತಮ್ಮಂತರಂಗದ ಬೋಧಾಮೂರ್ತಿಯನು ಆ ಶ್ರೀ ಗುರುವೆಂದರಿದು ನಿಶ್ಚೈಸಿ, ಅನುಮಿಷ ದೇವರ ಶ್ರೀ ಪಾದಕ್ಕೆ ಶರಣೆಂದು ಆ ಕರಸ್ಥಲದ ಲಿಂಗವ ತಾನೆ ಅವಗ್ರಹಿಸಿ ಕೊಳಲು, ಆ ಶ್ರೀ ಗುರುಮೂರ್ತಿ ನಿರ್ವಯಲನೈದಲು ಅಸ್ಥಿಚರ್ಮಂಗಳು ಸಂಚ ತಪ್ಪಿ ನೆಲಕ್ಕೆ ಉದುರಲು, ಮನ ಸಂಚಲತ್ವವನೈದಿ ಅನುತಾಪಂ ಬಟ್ಟ ಪ್ರಸ್ತಾವದ ವಚನ॥

ಆಣವಮಲ ಮಾಯಾಮಲ ಕಾರ್ಮಿಕಮಲವೆಂಬ ಮಲತ್ರಯಂಗಳ ಕಳೆದುಳಿದು, ನಿರ್ಮಲನಾದ ಶಿಷ್ಯನು ಕಾಯಜೀವದ ಭ್ರಾಂತುಸೂತಕ

ಹಿಂಗಿ ನಿಃಶಂಕನಾದ ಗುರು, ಈ ಉಭಯ ಭಾವದೊಳಗೆ ಆವುದು ಮುಂದು ಆವುದು ಹಿಂದೆಂದರಿಯಬಾರದು. ಕರಸ್ಥಲಕ್ಕೆ ಕಾರುಣ್ಯವ ಮಾಡಿದರೆ, ಮನಸ್ಥಲಕ್ಕೆ ಹಂಗಿಲ್ಲ. ಮನಸ್ಥಲದಲ್ಲಿ ಸೆರೆಗೊಡ್ಡಿ ಬೇಡಿದರೆ ಕರಸ್ಥಲದ ಲಿಂಗ ಕೈಸಾರಿತ್ತು. ಗುರುಸ್ಥಲದ ನಿಲವು ಪರಸ್ಥಲದಲ್ಲಡಗಿದರೆ ಭಾವ ಬಳಲಿತ್ತೆದೇನೊ ಗುಹೇಶ್ವರಾ ॥೪೧॥

ನಿರ್ಣಯವನರಿಯದ ಮನವೇದುಗುಡವನಾಹಾರವಗೊಂಡೆಯಲ್ಲ ! ಮಾಯಾಸೂತ್ರವಿದೇನೊ! ಕಂಗಳೊಳಗಣ ಕತ್ತಲೆ ತಿಳಿಯದಲ್ಲ! ಬೆಳಗಿನೊಳಗಣ ಶೃಂಗಾರ ಬಳಲುತ್ತಿದೇನೋ ಗುಹೇಶ್ವರಾ ॥೪೨॥

ಇಂತು ಅನುಮಿಷ ದೇವರು ನಿಜವನೈದಲು ಅನುತಾಪಿಸುತ್ತಿರ್ದ ಪ್ರಭುದೇವರು ತನ್ನ ತಾ ಸಂತೈಸಿಕೊಂಡು ತಿಳಿದು ನೋಡಿ ಆ ಗುರುವಿನ ಚೈತನ್ಯ ಲಿಂಗದಲ್ಲಿ ಅಡಗಿತ್ತು. ಆಲಿಂಗವೆನ್ನ ಕರಸ್ಥಲಕ್ಕೆ ಬಂದಿತ್ತು. ಅದು ಕಾರಣ ಶ್ರೀ ಗುರುವೆನ್ನ ಕರಸ್ಥಲದಲ್ಲಿ ಮನಸ್ಥಲದಲ್ಲಿ ಸಂಪೂರ್ಣವಾಗಿ ನೆಲೆಗೊಂಡನಲ್ಲದೆ, ಅನ್ಯಭಾವ ವಿಷಯದಿಂದ ಅಳಿದುದಿಲ್ಲವೆಂದು, ಮನವ ನಿಶ್ಚೈಸಿಕೊಂಡ ಪ್ರಸ್ತಾವದ ವಚನ॥

ಆಹಾ ಮನವೇ, ಮರೆದೆಯಲ್ಲ. ನಿನ್ನ ಪೂರ್ವಪರದ ಘನ ಮನದೊಳಗಡಗಿ ಆ ಮನ ಲಿಂಗದೊಳಗಡಗಿ, ಆ ಲಿಂಗವೆನ್ನ ಕರಸ್ಥಲಕ್ಕೆ ಬಂದ ಬಳಿಕ ಅಳಿಯಿತ್ತು, ಆಗಲಿತ್ತು ಎಂಬ ಭಾವ ಭ್ರಾಂತು ಇದೇನೊ? ಜನನವಿಲ್ಲದ ಘನಕ್ಕೆ ಮರಣವುಂಟೆ? ತೆರಹಿಲ್ಲದ ನಿಜವು ತನ್ನಲ್ಲಿ ತಾನೆ ವೇದ್ಯವಾಗಿಪ್ಪುದಲ್ಲದೆ ಇದಿರಿಟ್ಟು ತೋರದೆಂಬ ಅಜ್ಞಾನವಿದೇನೊ? ಜನನವಿಲ್ಲದ ನೀನಾನೆಂಬುದು ಮಾದು ತಾನೆಯಾಗಿ ಸಾಧ್ಯವಾಯಿತ್ತು. ಇವನೇನೆಂಬೆ ಗುಹೇಶ್ವರಾ? ॥೪೩॥

ಕಾಣದುದ ನರಸುವರಲ್ಲದೆ ಕಂಡುದ ನರಸುವರೆ? ಘನಕ್ಕೆ ಘನವಾದ ವಸ್ತು ತಾನೆ ಗುರುವಾದ, ತಾನೆ ಲಿಂಗವಾದ, ತಾನೆ ಜಂಗಮವಾದ, ತಾನೆ ಪ್ರಸಾದವಾದ, ತಾನೆ ಮಂತ್ರವಾದ, ತಾನೆ ಯಂತ್ರವಾದ, ತಾನೆ ಸಕಲ ವಿದ್ಯಾಸ್ವರೂಪನಾದ. ಇಂತಿವನೊಳಕೊಂಡು, ಎನ್ನ ಕರಸ್ಥಲಕ್ಕೆ ಬಂದು ಇನ್ನು ನಿರ್ವಿಕಾರ ಕಾಣಾ ಗುಹೇಶ್ವರಾ ॥೪೪॥

ಇಂತು ಅನುತಾಪ ಸಂತಾಪಂಗಳ ಎರಡನು ಮರೆದು, ಶ್ರೀ ಗುರು ನಿತ್ಯನೆಂದರಿದ ಪ್ರಭುದೇವರು ಆ ಶ್ರೀ ಗುರುವಿನ ಪ್ರಾಣಲಿಂಗ ಸಂಬಂಧಿಗಳಿಂದು ಸ್ತುತಿಸುವ ಪ್ರಸ್ತಾವದ ವಚನ॥

ಪ್ರಾಣಲಿಂಗವೆಂಬ ಶಬ್ದಕ್ಕೆ ನಾಚಿತ್ತು ನಾಚಿತ್ತು ಮನ. ಪ್ರಾಣ ಹೋವರೆ ಕಾಯ ಬಿದ್ದರೆ ಲಿಂಗ ಒಂದೆಸೆಯಾದರೆ ನಾಚಿತ್ತು ನಾಚಿತ್ತು ಮನ. ಪ್ರಾಣ ಲಿಂಗ ಸಂಬಂಧಿ ಗುಹೇಶ್ವರ ನಿಮ್ಮ ಶರಣ ಅನುಮಿಷನೆಂಬುದ ನಾನು ಇಂದರಿದೆನು ॥೪೫॥

ಇಂತು ಪ್ರಭುದೇವರು ಅಂತಪ್ಪ ಶ್ರೀಗುರುಮೂರ್ತಿಯನೆ ತಮ್ಮ ಹೃದಯಕಮಲ ಮಧ್ಯದಲ್ಲಿ ಪ್ರಾಣಲಿಂಗವೆಂದರಿದು ಕಂಡು ಮನಃಪುಷ್ಪದಿಂ ಪೂಜಿಸಿ ಪರಮ ಹರುಷಿತನಾದ ಪ್ರಸ್ತಾವದ ವಚನ॥

ಕಸ್ತುರಿಯ ಮೃಗ ಬಂದು ಸುಳಿಯಿತ್ತಯ್ಯ. ಸಕಲವಿಸ್ತಾರದ ರೂಪು ಬಂದು ಮುಂದೆ ನಿಂದಿತ್ತಯ್ಯ. ಆವ ಗ್ರಹ ಬಂದು ಸೋಂಕಿತ್ತೆಂದರಿಯೆನು. ಹೃದಯಕಮಲ ಮಧ್ಯದಲ್ಲಿ ಶ್ರೀಗುರುವನರಿದುಕಂಡು ಪೂಜಿಸಿ ಗುರುವಿಖ್ಯಾತನೆಂಬುದನರಿದೆ ನೋಡಾ! ಗುಹೇಶ್ವರಲಿಂಗದಲ್ಲಿ ಹಿಂದಣ ಹುಟ್ಟು ಅರತು ಹೋದುದ ಕಂಡೆನು ॥೪೬॥

ಇಂತು ಶ್ರೀಗುರುಪೂಜೆಯಮಾಡಿ, ಆ ಗುರುವಿನಲ್ಲಿ ಪರವಶನಾದ ಪ್ರಸ್ತಾವದ ವಚನ॥

ಎನ್ನಮನದ ಕೊನೆಯ ಮೇಲೆ ಅಂಗವಿಲ್ಲದರೂಪನಕಂಡು, ನಾನುಬೆರಗಾದೆ. ಅಂತರಂಗದ ಆತ್ಮನೊಳಗೆ ಅನುಮಿಷ ನಿಜೈಕ್ಯ ಗುಹೇಶ್ವರನಲ್ಲಯ್ಯನಕಂಡು, ಬೆರಗಾದೆನು ॥೪೭॥

ಆ ಶ್ರೀಗುರುವಿನಲ್ಲಿ ತನ್ನಲ್ಲಿ ಏಕೋಭಾವವನೈದಿದ ಪ್ರಸ್ತಾವದ ವಚನ॥

ಗುರುವಿನ ಪರಿ ವಿಪರೀತವಾಯಿತ್ತಯ್ಯ! ಭ್ರಮರಕೀಟನ್ಯಾಯದಂತಾಯಿತ್ತು. ಗುರು ತನ್ನ ನೆನೆವನ್ನ ಬರ ಎನ್ನನಾ ಗುರುವ ಮಾಡಿದನು. ಇನ್ನು ಶಿಷ್ಯನಾಗಿ ಶ್ರೀಗುರುವ ಪೂಜಿಸುವರಾರುಹೇಳಾ ಗುಹೇಶ್ವರಾ? ॥೪೮॥

ಗುರುಶಿಷ್ಯ ಸಂಬಂಧವನರಸಲೆಂದು ಹೋದರೆ, ತಾನೇ ಗುರುವಾದ, ತಾನೇ ಶಿಷ್ಯನಾದ, ತಾನೇ ಲಿಂಗವಾದ. ಗುಹೇಶ್ವರ ನಿಮ್ಮ ಶರಣನ ಕೈಯಲ್ಲಿ ಲಿಂಗವ ಕೊಟ್ಟರೆ ಭಾವ ಬತ್ತಲೆಯಾಯಿತ್ತು ನೋಡಾ ॥೪೯॥

ಇಂತು ಗುರುವಿನಲ್ಲಿ ತನ್ನಲ್ಲಿ ಸಮರಸಭಾವವನೈದಿ ಪ್ರಭುದೇವರು ತಮ್ಮ ಕರಸ್ಥಲದ ಲಿಂಗವ ನೋಡಿ, ಆ ಲಿಂಗಭಾವ ಆಲಿಂಗನವಾಗಿ ದೃಷ್ಟಿ

ನಟ್ಟ ಮನಮುಟ್ಟಿ ಹಾರೈಸಿ ತನಗೆ ತಾನಾಶ್ಚರ್ಯರ್ಂ ಬಡುತ್ತಿರ್ದ ಪ್ರಸ್ತಾವದ ವಚನ ॥

ಬಟ್ಟೆಯ ಬಡಿವ ಕಳ್ಳಂಗೆ ಬೇಹು ಸಂದು ಕಳವು ದೊರಕಿದಂತಾಯಿತ್ತು. ಕುರುಡನೆಡಹುತ್ತ ತಡಹಿ ಹಿಡಿದು ಕಂಡಂತಾಯಿತ್ತು. ನಿರ್ಧನಿಕ ಧನದ ಬಯಕೆಯಲ್ಲಿ ನಡೆವುತ್ತ ಎಡಹಿದ ಕಲ್ಲು ಪರುಷವಾದಂತಾಯಿತ್ತು. ಅರಸುವಂಗೆ ಅರಿಕೆ ತಾನಾದಂತಾಯಿತ್ತು. ಎಲೆ ಗುಹೇಶ್ವರ ನೀನೆನಗೆ ದೊರಕುವದೆಂಬುದು ನಾ ಮುನ್ನ ಮಾಡಿದ ಸುಕೃತದ ಫಲವನೇನ ಬಣ್ಣಿಪೆ ಹೇಳಾ ಗುಹೇಶ್ವರಾ? ॥೫೦॥

ಮುನ್ನಿನ ಪರಿಯಂತುಟಲ್ಲ. ಆದಡಿಂತಹುದೆ? ಆಗದೊಡಿಂತಾಯಿತ್ತು. ಪಲ ಉಪದೇಶದ ಬಯಕೆ ತಾರ್ಕಣ್ಯಗಂಡಂತೆ ಗುಹೇಶ್ವರಲಿಂಗವು ತನುವ ತನ್ನತ್ತಲೊಯಿದಾ ॥೫೧॥

ಎತ್ತಣ ಮಾಮರ ಎತ್ತಣ ಕೋಗಿಲೆ, ಎತ್ತಣಿಂದೆತ್ತ ಸಂಬಂಧವಯ್ಯ? ಬೆಟ್ಟದ ನೆಲ್ಲಿಯ ಕಾಯಿ ಸಮುದ್ರದೊಳಗಣ ಉಪ್ಪು ಎತ್ತಣಿಂದೆತ್ತ ಸಂಬಂಧವಯ್ಯ? ಗುಹೇಶ್ವರ ಲಿಂಗಕ್ಕು ಎನಗು ಎತ್ತಣಿಂದೆತ್ತ ಸಂಬಂಧವಯ್ಯ?

ಆ ಲಿಂಗದ ಮಹಾತ್ಮೆಯ ನೋಡಿ ಶಬ್ದ ಮುಗ್ಧವಾದ ಪ್ರಸ್ತಾವದ ವಚನ॥

ಕಾಣಬಾರದ ಲಿಂಗವೆನ್ನ ಕರಸ್ಥಲಕ್ಕೆ ಬಂದರೆ ಹೇಳಲಮ್ಮೆ, ಕೇಳಲಮ್ಮೆ. ಎನಗಿದು ಸೋಜಿಗ. ಗುಹೇಶ್ವರನೆಂಬ ಲಿಂಗ ನಿರಾಕಾರ ಬಯಲು. ಸಾಕಾರವಾಗಿ ಎನ್ನ ಕರಸ್ಥಲಕ್ಕೆ ಬಂದರೆ ಹೇಳಲಮ್ಮೆ ಕೇಳಲಮ್ಮೆ. ॥೫೩॥

ಆ ಲಿಂಗದಲ್ಲಿ ಪರವಶನಾಗಿರ್ದ ಪ್ರಸ್ತಾವದ ವಚನ॥

ತನು ತರಹರಂಬೋಗಿ ಮನವು ನಿಮ್ಮಲ್ಲಿ ಸಿಲುಕಿತಯ್ಯ! ಸೋಟವೆ ಪ್ರಾಣವಾಗಿ ಆಪ್ಯಾಯನ ನಿಮ್ಮಲ್ಲಿ ಅರತುದಯ್ಯ! ಸಿಲುಕಿತ್ತು ಶೂನ್ಯದೊಳಗೆ ಗುಹೇಶ್ವರ ನಿರಾಳಾ. ॥೫೪॥

ನಿಮ್ಮ ನೋಡುವ ಸುಖವುಳ್ಳನ್ನಕ್ಕರ ಬೆರಿಸಲೆಲ್ಲಿಯುದಯ್ಯ? ನಿಮ್ಮ ಬೆರಿಸುವ ತವಕವುಳ್ಳನ್ನಕ್ಕ ನೋಟ ಹಿಂಗದು. ನೋಡಿ ಕೂಡಿ ನೈವೆರಗಾದ ಸುಖವನೇನೆಂದುಪಮಿಸುವೆನಯ್ಯ ಗುಹೇಶ್ವರಾ! ॥೫೫॥

ಇಂತು ಗುರುಕರುಣದಿಂದೊದಗಿದ ಇಷ್ಟಲಿಂಗದಲ್ಲಿ ವಿಶ್ವಾಸ ಬಲಿದಲ್ಲಿ ಆಯತ ಲಿಂಗ, ಆ ಇಷ್ಟಲಿಂಗದ ಭಾವ ಮನೋ ವೇದ್ಯವಾದಲ್ಲಿ ಸ್ವಾಯತಲಿಂಗ, ಇಷ್ಟಲಿಂಗದ ಭಾವ ಮನೋವೇದ್ಯ ಸುಖವು ಭಿನ್ನವಾಗಿ ತೋರದೆ, ಅನುಪಮ ಪರಿಣಾಮ ಪರಿಪೂರಿತವಾದಲ್ಲಿ ಸನ್ನಿಹಿತ ಲಿಂಗ, ಇಂತು ಇಷ್ಟ ಪ್ರಾಣ ಭಾವ ಲಿಂಗಂಗಳು ತನುತ್ರಯಂಗಳಲ್ಲಿ ಆಯತ ಸ್ವಾಯತ ಸನ್ನಿಹಿತಂಗಳಾಗಲು, ಆ ಶರಣನ ಷಡಂಗದಲ್ಲಿ ಷಡ್ವಿಧ ಲಿಂಗ ಸಂಬಂಧವಾದುದೆ ಷಟ್ ಸ್ಥಲಂಗಳೆಂದು, ಪ್ರಭು ದೇವರು ನಿರೂಪಿಸಿದರದೆಂತೆಂದೊಡೆ, ಭಕ್ತಿಸ್ಥಲದ ವಚನ॥

ಪ್ರಣತಿಯು ಇದೆ, ಬತ್ತಿಯು ಇದೆ, ಜ್ಯೋತಿಯು ಬೆಳಗುವರೆ ತೈಲವಿಲ್ಲದೆ ಎಂತಪ್ಪುದಯ್ಯ. ಗುರುವು ಆಯಿದಾನೆ. ಲಿಂಗವು ಆಯಿದಾನೆ. ಶಿಷ್ಯಂಗೆ ಜ್ಞಾನೋದಯವಾಗದನ್ನಕ್ಕ, ಭಕ್ತಿ ಎಂತಳವಡವುದಯ್ಯ. ಸೋಹಂ ಪೆಂಬುದ ಕೇಳಿ ದಾಸೋಹವ ಮಾಡದಿರ್ದಡೆ, ಅತಿಗಳೆದೆ ನಾನು ಗುಹೇಶ್ವರಾ॥೫೬॥ ಅನ್ಯ ರಜವ ಬೆರಿಸದೆ, ತನ್ನ ರಜವ ಭಾವಿಸದೆ, ರವಿಯ ಬೆಳಸಬಳಸದೆ, ಲಿಂಗದ ಬೆಳಸ ತಂದು ಜಂಗಮದಲ್ಲಿ ಸವಿಸುತ್ತಿಪ್ಪನು. ಆ ಭಕ್ತನಲ್ಲಿ ಗುಹೇಶ್ವರನಿಪ್ಪನು॥೫೭॥ ಮುಂದು ಜಾವದಲೆದ್ದು ಲಿಂಗದಂಶ್ರಿಯ ಮುಟ್ಟಿ, ಸುಪ್ರಭಾತದಲೆದ್ದು ಶಿವಭಕ್ತರ ಮುಖವ ನೋಡುವುದು ಹುಟ್ಟಿದುದಕ್ಕೆ ಸಫಲ ನೋಡಯ್ಯ. ಸತ್ಯ ವಚನವಿಂತೆಂದುದು. ಇದಿಲ್ಲದವರನೊಲ್ಲೆ ಗುಹೇಶ್ವರಾ॥೫೮॥

ಇಂತು ವಿಶ್ವಾಸ ಪ್ರಾಣವಾಗಿಪ್ಪ ಭಕ್ತನ ಆ ವಿಶ್ವಾಸದೊಳಗಣ ಏಕೋನಿಷ್ಠೆ ಎಂತಿದ್ದುದೆಂದೊಡೆ, ಮುಂದೆ ಮಹೇಶ್ವರ ಸ್ಥಲವಾದುದು.

ಕೊಟ್ಟ ಕುದುರೆಯನೇರಲರಿಯದೆ, ಮತ್ತೊಂದ ಕುದುರೆಯ ಬಯಸುವವರು, ವೀರರೂ ಅಲ್ಲ, ಧೀರರೂ ಅಲ್ಲ. ಇದು ಕಾರಣ ಮೂರು ಲೋಕವೆಲ್ಲ ಹಲ್ಲಣವ ಹೊತ್ತುಕೊಂಡುಬಳಲುತ್ತ ಇದ್ದಾರೆ ಗುಹೇಶ್ವರಾ॥

ಭಕ್ತಭಕ್ತರೆಂಬರು ಪೃಥ್ವಿಯ ಪೂರ್ವಾಶ್ರಯವ ಕಳೆಯದನ್ನಕ್ಕರ, ಅಪ್ಪುವಿನ ಪೂರ್ವಾಶ್ರಯವ ಕಳೆಯದನ್ನಕ್ಕರ, ತೇಜದ ಪೂರ್ವಾಶ್ರಯವ ಕಳೆಯದನ್ನಕ್ಕರ, ವಾಯುವಿನ ಪೂರ್ವಾಶ್ರಯವ ಕಳೆಯದನ್ನಕ್ಕರ, ಆಕಾಶದ ಪೂರ್ವಾಶ್ರಯವ ಕಳೆಯದನ್ನಕ್ಕರ, ಸೋಮಸೂರ್ಯರ ಪೂರ್ವಾಶ್ರಯವ ಕಳೆಯದನ್ನಕ್ಕರ, ಆತ್ಮನ ಪೂರ್ವಾಶ್ರಯವ ಕಳೆಯದನ್ನಕ್ಕರ, ಭಕ್ತ

ರೆಂದು ಲಿಂಗವ ಪೂಜಿಸುವವರ ಕಂಡು ಬೆರಗಾದೆನು ಗುಹೇಶ್ವರಾ॥೬೦॥ ಹರಿದು ಹತ್ತಿ ಮುಟ್ಟಿ ಹಿಡಿದಿಹೆನೆಂದು ಜಾರಿ ಉರುಳಿ ಬಿದ್ದರು ಅನಂತರು. ಹಿಡಿದಿಹೆನೆಂಬವರೆಲ್ಲರು ಹೆಣನುಂಡು ಹೋದರು. ನಾ ಹಿಡಿದು ಬಂದಿವಡೆ ಬಂದಿಯಾಯಿತ್ತು ಗುಹೇಶ್ವರಾ॥೬೧॥ ಅಷ್ಟವಿಧಾರ್ಚನೆ ಷೋಡಶೋಪಚಾರಂಗಳ ಹಂಗು ಹರಿ ಇಲ್ಲದೆ ಮಾಡುವೆ. ನಾ ಮಾಡುವ ಕ್ರಿಗಳೆಲ್ಲವು ನೀನೆಯಾದ ಕಾರಣ ಗುಹೇಶ್ವರ ನಿಮ್ಮಲ್ಲಿ ತದ್ಗತವಾದೆನು॥೬೨॥

ಇಂತು ವಿಶ್ವಾಸದಿಂದ ಭಕ್ತನಾಗಿ ಆ ವಿಶ್ವಾಸದೊಳಗಣ ನಿಷ್ಠೆಯಿಂ ಮಹೇಶ್ವರನಾಗಿ, ಆ ನಿಷ್ಠೆಯೊಳಗೆ ಅತ್ತಿತ್ತ ಓಸರಿಸದೆ ಸಾವಧಾನಿಯಾಗಿರ್ದ ಭೇದವೆಂತಿದ್ದಿರ್ದುದೆಂದೊಡೆ, ಮುಂದೆ ಪ್ರಸಾದಿಸ್ಥಲವಾದುದೂ॥

ತ್ರಿವಿಧದ ನಿತ್ಯ ತ್ರಿವಿಧದ ಅನಿತ್ಯವನಾರು ಬಲ್ಲರಯ್ಯ? ತ್ರಿವಿಧಕ್ಕೆ ತ್ರಿವಿಧವನಿತ್ತು ತ್ರಿವಿಧ ಪ್ರಸಾದವ ಕೊಳಬಲ್ಲರೆ ಆತನೆ ತ್ರಿವಿಧನಾಥನೆಂಬೆನು. ಆತನೆ ವೀರನೆಂಬೆನು. ಆತನೆ ಧೀರನೆಂಬೆನು. ಗುಹೇಶ್ವರ ಲಿಂಗ ಪ್ರಸಾದಿ ಎಂಬೆನು॥೬೩॥ ಅರ್ಪಿತ ಅನರ್ಪಿತವನಾರು ಬಲ್ಲರಯ್ಯ! ಅರ್ಪಿಸಿಕೊಂಬುದು ಅನರ್ಪಿತ, ಅರ್ಪಿಸದೆ ಕೊಂಬುದು ಅರ್ಪಿತ. ಅರ್ಪಿಸಿ ಅರ್ಪಿಸದೆ ಕೊಳಬಲ್ಲರೆ ಗುಹೇಶ್ವರ ನಿಮ್ಮ ಪ್ರಸಾದಿ॥೬೪॥ ತನುವತಾಗದಮುನ್ನ ಮನವ ತಾಗದ ಮುನ್ನ ಅಪ್ಯಾಯನ ಬಂದು ಎಡೆಗೊಳ್ಳದ ಮುನ್ನ, ಅರ್ಪಿತವ ಮಾಡಬೇಕು. ಗುರುವಿನ ಕಯ್ಯ ಲೆಳಿತಟವಾಗದ ಮುನ್ನ ಅರ್ಪಿತವ ಮಾಡಬೇಕು. ಎಡದಕಯ್ಯಲ್ಲಿ ಕಿಚ್ಚು ಬಲದ ಕೈಯಲ್ಲಿ ಹುಲ್ಲು. ಉರಿಯುಹತ್ತಿತ್ತು ಗುಹೇಶ್ವರ ನಿಮ್ಮ ಪ್ರಸಾದಿಯಾ॥೬೫॥

ಇಂತು ವಿಶ್ವಾಸದಿಂ ಭಕ್ತನಾಗಿ, ಆ ವಿಶ್ವಾಸದೊಳಗಣ ನೈಷ್ಠೆಯಿಂದ ಮಹೇಶ್ವರನಾಗಿ, ಆ ನಿಷ್ಠೆಯೊಳಗಣ ಸಾವಧಾನದಿಂ ಪ್ರಸಾದಿಯಾಗಿ, ಆ ಸಾವಧಾನದೊಳಗಣ ಸ್ವಾನುಭಾವ ವಿವೇಕದಿಂ ಪ್ರಾಣಲಿಂಗಿಯಾಗಿ, ಲಿಂಗಪ್ರಾಣಿಯಾಗಿರ್ದ ವರ್ತನವೆಂತಿರ್ದಿತೆಂದೊಡೆ, ಮುಂದೆ ಪ್ರಾಣಲಿಂಗಿಸ್ಥಲವಾದುದು.

॥ವಚನ॥ ಉದಕಮೂರ್ತಿಯಾಗಿ ಉದಯವಾಯಿತ್ತು. ಪಿಂಡಿಗೆಯಲ್ಲಿ ಮೂಲ ಸ್ಥಾನ ಸ್ಥಾಪ್ಯವಾಯಿತ್ತು. ಸ್ವದೇಹ ಶಿವಪುರದಲ್ಲಿ ವಾಯು ಪೂಜಾರಿಯಾಗಿ, ಪರಿಮಳ ದಿಂಡೆಯ ಕಟ್ಟಿ, ಪೂಜಿಸುತ್ತಿದ್ದಿತ್ತು. ನವದ್ವಾರಶಿವಾಲಯದ ಆದಿ ಮಧ್ಯಸ್ಥಾನದಲ್ಲಿ ಗುಹೇಶ್ವರನೆಂಬ ಲಿಂಗವಲ್ಲಿಯೆ

ನಿಂದಿತ್ತು ॥೬೬॥ ಕಂಗಳ ಬೆಳಗ ಕಲ್ಪಿಸಬಾರದು. ಕರ್ಣದ ನಾದ ವರ್ಣಿಸಬಾರದು. ಜಿಹ್ವೆಯ ರುಚಿಗೆ ಪ್ರತಿ ಇಲ್ಲವೆಂದಿತ್ತು. ಮತಿಗೆ ಮಹಾ ಘನವಪ್ಪ ಸುಕ್ಷುಮ್ನ ನಾಳದ ಸುಯಿಧಾನವ ಪ್ರಮಾಣಿಸಬಾರದು. ಅಣುರೇಣು ತೃಣ ಕಾಷ್ಠದೊಳಗೆ ಸೂಕ್ಷ್ಮನ ಕ್ಷಯ ನಿಂದ ನಿರಾಳ ಗುಹೇಶ್ವರಾ ॥೬೭॥ ಕಂಗಳಾಲಿಯ ಕರಿಯ ನಾಳದಲ್ಲಿ ಈರೇಳು ಭುವನವಡಗಿದವು. ನಾಟ ನಾಟಕ ನಟಿಸಿತ್ತು. ಆಡುವ ಸೂತ್ರದ ಪರಿಯನೋಡಾ! ಗುಹೇಶ್ವರ ನಿರಾಳ ಚೈತನ್ಯನು ॥೬೮॥

ಇಂತು ವಿಶ್ವಾಸದಿಂ ಭಕ್ತನಾಗಿ ಆ ವಿಶ್ವಾಸದೊಳಗಣ ನಿಷ್ಠೆ ಮಹೇಶ್ವರನಾಗಿ, ಆ ನಿಷ್ಠೆಯೊಳಗಣ ನಿರಂತರ ಸಾವಧಾನಾರ್ಪಿತದಿಂ ಪ್ರಸಾದಿಯಾಗಿ, ಆ ಪ್ರಸಾದವಧಾನಾರ್ಪಿತದೊಳಗಣ ಸ್ವಾನುಭಾವ ವಿವೇಕದಿಂ ಪ್ರಾಣಲಿಂಗಿಯಾಗಿ, ಆ ಸ್ವಾನುಭಾವ ವಿವೇಕದೊಳಗಣ ಅರಿವಿನಿಂ ಶರಣನಾದ ಭೇದವೆಂತಿರ್ದುದೆಂದೊಡೆ, ಮುಂದೆ ಶರಣಸ್ಥಲವಾದುದು.

॥ವಚನ॥ ನೆನಹು ಸತ್ತಿತ್ತು. ಭ್ರಾಂತು ಬೆಂದಿತ್ತು. ಅರಿವು ಮರೆಯಿತ್ತು. ಕುರುಹು ಗೆಟ್ಟಿತ್ತು. ಅಲ್ಲಿ ಗತಿಯನರಸಲುಂಟೆ? ಮತಿಯನರಸಲುಂಟೆ? ಅಂಗವೆಲ್ಲ ನಷ್ಟವಾಗಿ, ಲಿಂಗದಲ್ಲಿ ಲೀಯ್ಯವಾಗಿ ಕಂಗಳಂಗಪ ಕಳೆಯ ಬೆಳಗಿನ ಭಂಗ ಹಿಂಗಿತ್ತು ಗುಹೇಶ್ವರಾ ॥೬೯॥ ಉಪಾಧಿಕನ ಮನವು ಉಪಾಧಿ ರಹಿತನ ಮನವು ನಿಂದಲ್ಲಿಯೇ ನಿವಾತವಾಯಿತ್ತು. ಆನಂದದಭಾವವು ಬಿಂದು ತಾನಳಿದು ನಿಂದಲ್ಲಿಯೇ ನಿವಾಸವಾಯಿತ್ತು. ಲಿಂಗದ ಬೆಳಗು ಪ್ರಜ್ವಲಿಸುವದ ಕಂಡೆನು ಗುಹೇಶ್ವರಾ ॥೭೦॥ ತಲೆಯ ಮೇಲೆ ಇದ್ದಿತ್ತು. ತಲೆಯ ತಲೆ ಆ ತಲೆಯ ನುಂಗಿತ್ತು. ಸತ್ತು ಹಾಲಸವಿಯ ಬಲ್ಲರೆ, ಎರಡರ ಕೀಲ ಬಲ್ಲರೆ ಹೇಳಿರಿ. ಶಿಸುವು ಕಂಡ ಕನಸಿನ ತೃಪ್ತಿಯ ನಿಮ್ಮಲ್ಲಿಯೇ ಕಂಡೆನು ಗುಹೇಶ್ವರಾ ॥೭೧॥ ಇಂತು ವಿಶ್ವಾಸದಿಂ ಭಕ್ತನಾಗಿ, ಆ ವಿಶ್ವಾಸದೊಳಗಣ ನೈಷ್ಠೆಯಿಂ ಮಹೇಶ್ವರನಾಗಿ, ಆ ನಿಷ್ಠೆಯೊಳಗಣ ಸಾವಧಾನದಿಂ ಪ್ರಸಾದಿಯಾಗಿ, ಆ ಸಾವಧಾನ ದೊಳಗಣ ಸ್ವಾನುಭಾವದಿಂ ಪ್ರಾಣಲಿಂಗಿಯಾಗಿ, ಆ ಸ್ವಾನುಭಾವದೊಳಗಣ ಅರಿವಿನಿಂ ಶರಣನಾಗಿ, ಆ ಅರಿವು ನಿಜದಲ್ಲಿ ಸಮರಸಭಾವವನೈದಿದ ನಿರ್ಭಾವ ಪದದೊಳು ನಿಂದ ಭೇದವೆಂತಿರ್ದುದೆಂದೊಡೆ, ಮುಂದೆ ಐಕ್ಯಸ್ಥಲವಾದುದು.

॥ವಚನ॥ ಭಾವಕ್ಕೆ ಇಂಬಿಲ್ಲ. ಶಬ್ದ ವಿನಾಸಲು ನೋಡಾ! ನುಡಿಗೆಡೆ ಇಲ್ಲ. ಎಡೆಗೆ ಕಡೆಯಿಲ್ಲ ಗುಹೇಶ್ವರನೆಂಬ ಶಬ್ದ ವೇಧಿಸಲೊಡನೆ ॥೭೨॥

ನಿರ್ವಿಕಲ್ಪಿತವೆಂಬ ನಿಜದೊಳಗೈಕ್ಯ! ನಿರಹಂಭಾವದಲ್ಲಿ ನಾನಿದ್ದೆನು. ನೋಡಿಹೆನೆಂದೊಡೆ ನೋಡಲಿಲ್ಲ. ಕೇಳಿಹೆನೆಂದೊಡೆ ಕೇಳಲಿಲ್ಲ. ಘನ ನಿರಂಜನದ ಬೆಳಗು ಇಂಬಾದುದನೇನೆಂಬೆ ಗುಹೇಶ್ವರಾ?॥೭೩॥ ನಿಜವನರಿದ ನಿಶ್ಚಿಂತನೇ, ಮರಣವ ಗೆಲಿದ ಮಹಂತನೇ, ಘನವನೊಳಕೊಂಡ ಮಹಿಮನೇ, ಪರವನೊಳಕೊಂಡ ಪರಿಣಾಮಿಯೇ, ಬಯಲಲ್ಲಾದ ಭರಿತನೇ, ಗುಹೇಶ್ವರಲಿಂಗ ನಿರಾಳವನೊಳಕೊಂಡ ಸಹಜನೇ ॥೭೪॥

ಇಂತು ಷಟ್‌ಸ್ಥಲವು ಷಡಂಗದಲ್ಲಿ ಸಮರಸವನೈದಿ ಸರ್ವಾಚಾರ ಸಂಪತ್ತು ನಿಷ್ಪತ್ತಿಯಾಗಿ, ಮಹಾಜ್ಞಾನವೇ ತಾನಾಗಿ, ನಿಂದ ನಿಜಪದ ಸ್ಥಲವಾಗಿ, ಅಲ್ಲಿ ಅಗಮ್ಯವೇ ಗಮನವಾಗಿ, ಪರವೆಂಬುದೇ ನಾಮವಾಗಿ ನಿರಾಶೆ ಭರಿತವೆಂಬ ಜಂಗಮಸ್ಥಲವನಳವಡಿಸಿ, ನಿಃಶಬ್ದವೆಂಬ ವಚನಾನುಭಾವವಂ ತನ್ನನಾಶ್ರಯಿಸಿದ ಮಹಾನುಭಾವಿಗಳಿಗೆ ನಿರೂಪಿಸಲೆಳಸಿ ಕಾಯವೆಂಬ ಕಂಥೆಯ ಧರಿಸಿ ನಿಂದಲ್ಲಿ ನೆಳಲಿಲ್ಲದೆ, ಸುಳಿದರೆ ಹೆಜ್ಜೆ ಇಲ್ಲದೆ, ಸುಳಿವ ಅಲ್ಲಮಪ್ರಭುರಾಯನ ಜಂಗಮಸ್ಥಲದ ನಿಲುಕಡೆ ಎಂತಿರ್ದುದೆಂದೊಡೆ, ಆ ಪ್ರಸ್ತಾವದ ವಚನ॥

ಪರಮ ಪರತತ್ವ ಪರಮಾರ್ಥಪರಾ ಪರಮಾಣ್ವನಕ್ಕ ಗೋಚರ, ಶಬ್ದಗಂಭೀರ ಉಪಮಾತೀತ, ಉನ್ನತ ಪರಶಿವಜ್ಞಾನ ಜ್ಯೋತಿ ಸುಜ್ಞಾನ ಪ್ರಭೆಯ ಬೆಳಗಿನೊಳಗೆ ಸುಳಿದಾಡುವ ಮಹಾ ಮಹಿಮಂಗೆ ಶಿವಜ್ಞಾನವೆ ಶೃಂಗಾರ, ಮಹಾ ಬೆಳಗೆ ವಿಭೂತಿ, ಪಂಚಬ್ರಹ್ಮವೇ ದರುಶನ, ಗಗನಸ್ಥಾನವೇ ಕಂಥೆ, ಆಕಾಶವೇ ಟೊಪ್ಪರ, ಅಜಾಂಡ ಬ್ರಹ್ಮಾಂಡವೆ ಕರ್ಣಕುಂಡಲ, ಆದಿ ಆಧಾರವೆ ಕಕ್ಷಪಾಳ, ಅನಾಹತವೆ ಒಡ್ಯಾಣ, ಅದ್ವೈತವೆ ಯೋಗವಟ್ಟಿಗೆ, ಅಗಮ್ಯವೆ ಯೋಗವಾವುಗೆ, ಅಚಲಿತವೆ ಖರ್ಪರ, ಅಪ್ರಮಾಣವೆ ಲಾಕುಳ ಅವಿಚಾರವೆ ಸುಳಿಹು, ಅಕಲ್ಪಿತವೆ ಭಿಕ್ಷ, ಕೊಂಡುದೆ ಗಮನ, ನಿಂದುದೆ ನಿವಾಸ, ನಿಶ್ಚಿಂತವೆಂಬ ಆಶ್ರಮದೊಳಗೆ ನಿರಾಕುಳವೆಂಬ ಸಿಂಹಾಸನವನಿಕ್ಕಿ, ಗಗನ ಗಂಭೀರದ ಬಾವಿಯೊಳಗೆ ಅಗೋಚರದ ಅಗ್ಗವಣಿಯ ತಂದು, ಮಹಾಘನ ಪ್ರಾಣಲಿಂಗಕ್ಕೆ ಮಂಗಳ ಬೆಳಗಿನಲ್ಲಿ ಮಜ್ಜನಕ್ಕೆರವು, ಬಿಂದ್ವಾಕಾಶವೆ ಗಂಧ, ಮಹದಾಕಾಶವೆ ಅಕ್ಷತೆ. ಪರಾಪರವೆ ಪತ್ರೆ ಪುಷ್ಪ, ನಿರ್ಮಳವೆ ಲಿಂಗಾರ್ಚನೆ, ಮಹಾ ಪ್ರಕಾಶವೆ ಪೂಜೆ, ನಿತ್ಯ ನಿರಂಜನವೆ ಧೂಪಾರತಿ, ಸಕಲ ಭುವನಾದಿ ಭುವನಂಗಳೆಲ್ಲ ಸುಯಿಧಾನ ಆಚಾ

ರವೆ ಅರ್ಪಿತ, ಮಹಾ ತತ್ವವೆ ಶಿತಾಳ, ಅಖಂಡಿತವೆ ಅಡಕೆ, ಏಕೋಭಾವವೆ ಎಲೆ, ಶುದ್ಧ ಶಿವಾಚಾರವೆ ಸುಣ್ಣ, ವಿವೇಕ ವಿಚಾರದಿಂ ತಾಂಬೂಲಮಂ ಸ್ವೀಕರಿಸಿ, ಮಹಾ ಲಿಂಗದ ಪರಿಣಾಮವೆ ಪ್ರಸಾದ, ಸಮ್ಯ ಜ್ಞಾನವೆ ಸಂತೋಷ, ಸಹಜ ನಿರಾಭಾರಿಗಳ ಮೇಳದಿಂ ನಿಸ್ಸೀಮ ನಿಭ್ರಾಂತಿನ ಸುಸಂಗದಲ್ಲಿ ನಿರಾಶೆ ಪಥವೆ ಅನುಕೂಲ ನಿಃಶಬ್ದವೆ ಅನುಭಾವ, ಅನುಪಮದ ನಿಃಶೂನ್ಯವೆ ವಿಶ್ರಾಮ, ನಿರಾಕಾರವೇ ಗಮನ, ನಿರಂತರ ಪಾತಾಳ ಊರ್ಧ್ವ ಪವನ, ತ್ರಿಭುವನ ಗಿರಿಯೆಂಬಪರ್ವತವನೇರಿ, ಕಾಯವೆಂಬ ಕದಳಿಯು ಹೊಕ್ಕು, ಸುಳಿದಾಡುವ ಮಹಾ ಮಹಿಮಂಗೆ ಇಹಲೋಕವೇನು, ಪರಲೋಕವೇನು? ಅಲ್ಲಿಂದತ್ತಗಮ್ಯ ನಿರಾಳ ಪರಮ ಜ್ಞಾನ ಸಿದ್ಧಿ ಮಹಾ ಲಿಂಗದ ಬೆಳಗು ಗುಹೇಶ್ವರಾ ನಿಮ್ಮ ನಿಜವನರಿತ ಮಹಾ ಮಹಿಮಂಗೆ ನಮೋ ನಮೋ ಎಂಬೆನು. ॥೭೫॥

ಇಂತಪ್ಪ ಜಂಗಮಸ್ಥಲವ ನಿಂಬುಗೊಂಡು, ಸಕಲ ಪುರಾತನ ಗಣಂಗಳಂ ಕೃತಾರ್ಥರಂ ಮಾಡಲೋಸುಗ ಸುಳಿದಾಡುತಿರ್ದ ಪ್ರಸ್ಥಾವದ ವಚನ॥

ಕಾಲಿಲ್ಲದ ಗಮನ, ಕೈಯಿಲ್ಲದ ಸೊಂಕ , ಬಾಯಿಲ್ಲದ ರುಚಿ, ಭಾವವೆ ಖರ್ಪರವಾಗಿ, ಪರಮ ದೇಹಿ ಎಂಮ ಬೇಡುವ ಪರಮನ ತೋರಾ ಗುಹೇಶ್ವರಾ॥೭೬॥ ಕಣ್ಣ ಕಟ್ಟಿಗೆಯಾಗಿ, ಕೈಯ ಕಪ್ಪರವಾಗಿ, ಕಿವಿಯೆ ಸಕಲ ಪುರಾತನರ ಕಾರುಣ್ಯವೆನುತ್ತೆ, ಮನದ ಭಿಕ್ಷವನುಂಡು, ತನು ಪರಿಣಾಮವನೈದಿಹ ಘನ ಮಹಿಮರ ತೋರಾ ಗುಹೇಶ್ವರಾ॥೭೭॥ ಕಂಡುದೆಲ್ಲ ಪಾವನ. ಕೇಳಿತ್ತೆಲ್ಲ ಪರಮಬೋಧೆ. ಮುಟ್ಟಿತ್ತೆಲ್ಲವು ಪರುಷದ ಸೋಂಕು. ಒಡನೆ ಕೂಡಿದವರೆಲ್ಲರು ಸದ್ಯೋನ್ಮುಕ್ತರು. ಸುಳಿದ ಸುಳುಹೆಲ್ಲ ಜಗತ್ಪಾವನ. ಮೆಟ್ಟಿದ ಧರೆ ಎಲ್ಲವು ಅವಿಮುಕ್ತಿ ಕ್ಷೇತ್ರ. ಸೋಂಕಿದ ಜಲವೆಲ್ಲವು ಪುಣ್ಯತೀರ್ಥಂಗಳು. ಶರಣೆಂದುಭಕ್ತಿಯ ಮಾಡಿದವರೆಲ್ಲರು ಸಾಯುಜ್ಯರು ಗುಹೇಶ್ವರ ನಿಮ್ಮ ಸುಳುಹಿನ ಸೊಗಸ ಉಪಮಿಸಬಾರದು.॥೭೮।

ಇತಿ ಶ್ರೀಮತ್ಸಕಲ ಗಣ ಪುರಾತನರೊಳ್ ಪ್ರಭುದೇವರು ಮಹಾನುಭಾವ ಸಂಗೋಷ್ಠಿಯಂ ಮಾಡಿದ ಶೂನ್ಯಸಂಪಾದನೆಯೊಳ್ ಪ್ರಥಮೋಪದೇಶ ಸಮಾಪ್ತ.



# ಮುಕ್ತಾಯಕ್ಕಗಳ ಸಂಪಾದನೆ.

## (ದ್ವಿತೀಯೋಪದೇಶ.)

ಕಾಯ ಗುಣ ದೂರನಲ್ಲಮರಾಯನು ಮುಕ್ತಾಯಿ ಗೊಲಿಪಿಸಿಂ ನಿಜ ಪದವನು ಪಾಯದೊಳಿತ್ತುದ ಪೇಳ್ವೆ ನಿರಾಯಾಸದಿಂ ಶರಣ ಜನರ ಕಿವಿಗಿನಿದೆನಿಸಲ್॥

ಅದೆಂತೆಂದೊಡೆ॥ ಆ ಪ್ರಭುದೇವರು ಮರ್ತ್ಯ ಲೋಕವನೆಯ್ದಿ ಪಾವನವ ಮಾಡುತ್ತ ಸತ್ಯ ಸದಾಚಾರವಂತರಪ್ಪ ಶಿವಲಿಂಗೈಕ್ಯರಂ ತನ್ನಂತೆ ಮಾಡುತ್ತ ಶ್ರೀ ವೀರಶೈವಾಚಾರದ ಘನಮಂ ಕರತಳಾಮಳಕವಾಗಿ, ಸಮಸ್ತರೊಳು ತೊಳಗಿ ಬೆಳಗಿ ತೋರುತ್ತೆ ಶಿವಾದ್ವೈತ ತತ್ವ ಭೇದಂಗಳನು ಶಿವಸುಖಿಗಳೊಳು ಕೃಪೆಯಿಂ ನಿರೂಪಿಸುತ್ತೆ ಸ್ವಾನುಭಾವಗಮ್ಯರೊಳು ಸಮ್ಮೇಳನಂಗೈವುತ್ತೆ ಸಮ್ಯಕ್‌ಶರಣರೊಳು ಸಮರಸಮಂ ಕೈಗೊಡುತ್ತಾ ಪರಸ್ಥಲದ ಲಿಂಗಮಂ ಕರಸ್ಥಲದೊಳು ಸ್ಥೈತಿಟ್ಟು ಪಿರಿದೀ ನೋಟವೆ ಪ್ರಾಣವಾಗಿ, ಭಾವವೇ ನಿಬ್ಬೆರಗಿನ ನಿಲವಾಗಿ ಜ್ಞಾನವೇ ಸರ್ವಾಂಗಲಿಂಗವಾಗಿ ಮನವೇ ಕರಸ್ಥಲದೊಳು ಲಯವಾಗಿ, ಆ ಕಾಯವೇ ಕಾಯವಾಗಿ, ಬಲದಹಸ್ತದೊಳು ಪೀಣಾದಂಡಮಂ ಪಿಡಿದು, ಪರಮಾನಂದ ರಸ ಒಸರಲು ಪಾಡುವ ಸ್ವರವೆ ನಾದ, ಬ್ರಹ್ಮ ತರಹರವಾಗಿ, ದಿವ್ಯ ವಚನಾಮೃತಂಗಳಂ ಪಾಡುತ್ತಂ ಲೋಕದ ಲಜ್ಜಾಭಿಮಾನಂಗಳನರಿಯದೆ ದಿಗಂಬರವೇಷದಿಂ ಇತರೇತರಂಗಳಂ ಮರೆದು, ತನ್ನೊಳು ತನ್ನ ನಿಜದ ನಿಲವ ನೋಡುತ್ತ ಇಂತನಂತದೇಶಂಗಳೊಳು ಸುಳಿದು ದೇಶಾಂತರಮಂ ನಟಿಸಿ ತೋರುತ್ತೆ ಬರುತ್ತಿರಲತ್ತ ಕೈಲಾಸದಲ್ಲಿ ಸಮಸ್ತ ಪ್ರಮಥ ಗಣಂಗಳೊಳಗೋರ್ವ ಗಣಾಧೀಶ್ವರನು ಜಗಹಿತಾರ್ಥವಾಗಿ, ಮರ್ತ್ಯಕ್ಕೆ ಅವತರಿಸಿ ಅಜಗಂಣನೆಂಬಭಿನಾಮದಿಂ ಗುಪ್ತ ಭಕ್ತಿಯಿಂದಿರ್ದು ತಮ್ಮ ನಿರವಯ ಪದದೊಳು ನಿಜವನೈದಲು, ಅಲ್ಲಿ ಮುಕ್ತಾಯಕ್ಕಗಳು ಅಜಗಣ್ಣನಗಲ್ದ ವಿಯೋಗಾವಸ್ಥೆಯಿಂ ಪ್ರಲಾಪಿಸುತ್ತಿರಲು, ಆ ಪ್ರಲಾಪಮಂ ಪ್ರಭುದೇವರು ಕಂಡು ಈಕೆ ಮಹಾಜ್ಞಾನಿಯೆಂದರಿದು, ನಿಂದುನೋಡುತ್ತಿರ್ಪ ಪ್ರಸ್ಥಾವದೊಳು ಮುಕ್ತಾಯಕ್ಕಗಳು ಪ್ರಲಾಪಿಸುತ್ತಿರ್ದ ಪ್ರಸ್ಥಾವದ ವಚನ॥

ಅರಿವನಣಲೊಳಗಿಕ್ಕಿ ಅಗಿವುತಿದೆ ಮರ್ತ್ಯಲೋಕವೆಲ್ಲವು. ಅರಿವು ಉಳಿಯಲರಿಯದೆ ಕೆಟ್ಟಿತ್ತು ಲೋಕವೆಲ್ಲವು. ನಾನೆಂತು ಬದುಕುವೆನಣ್ಣಾ

ಕತ್ತಲೆ ಬೆಳಗ ಕಾಂಬ ಸಂದೇಹಿ ನಾನೊಬ್ಬಳು. ಎನ್ನ ಕಣ್ಣ ಕಟ್ಟಿ ಕನ್ನಡಿಯ ತೋರಿತ್ತು ಅಜಗಣ್ಣ ನಿನ್ನ ಯೋಗಾ ॥೧॥ ಅಂಧಕನ ಕೈಯ್ಯ ಅಂಧಕ ಹಿಡಿದಂತಿರಬೇಕು. ಮೂಗನ ಕೈಯ್ಯಲ್ಲಿ ಕಾವ್ಯವ ಕೇಳಿದಂತಿರಬೇಕು. ದರ್ಪಣದೊಳಗೆ ಪ್ರತಿಬಿಂಬದಂತೆ ಹಿಡಿವರಿಗಳವಲ್ಲದಿರಬೇಕು. ಅಣ್ಣ ಕೂರ್ಮನ ಶಿಶುವಿನ ಸ್ನೇಹದಂತಿರಲೊಲ್ಲದೆ, ಆರೂಢ ಗೆಟ್ಟಿಯೊ ಅಜಗಣ್ಣಾ ॥೨॥ ರವಿಯೊಳಗಡಗಿದ ಪ್ರತಿಬಿಂಬದಂತೆ ಹಿಡಿವರಿಗಳವಲ್ಲದಿರಬೇಕು. ಅಣ್ಣ ನಿಮ್ಮೊಳಗಡಗಿದ ಭೇದವ ಭಿನ್ನವ ಮಾಡುವರೆ? ಅಣ್ಣ ನಿಮ್ಮ ನುಡಿಗಳೆಲ್ಲವು ಪ್ರತಿಬಿಂಬಗಳಾದವೆ? ಕೊಡನೊಳಗಣ ಜ್ಯೋತಿಯ ಅಡಗಿಸಲರಿಯದೆ ಮಿಗೆವರಿದಂತಾದೆಯೋ ಅಜಗಣ್ಣಾ? ॥೩॥ ಸ್ಫಟಿಕ ಪ್ರಜ್ವಲದಿಂ ಜ್ಯೋತಿ ಘಟದೊಳಗೆ ತೋರುತ್ತಿದೆ. ದಿಟಪುಟವನತಿಗಳೆದು, ಸಟೆಯ ಬಯಸುವರೆ, ಅಂತರಂಗದ ಸುದ್ದಿಯ ಬಹಿರಂಗಕ್ಕೆ ತಂದು, ಸಂತೈಸಲರಿಯದೆ ಮರುಳಾದಿರಣ್ಣ. ಜಂತ್ರದಕೀಲು ಕೂಟದ ಸಂಚದಭೇದವು ತಪ್ಪಿ ಮಂತ್ರ ಭಿನ್ನವಾಗಿ ನುಡಿವರೆ ಅಣ್ಣಾ? ॥೪॥

ಇಂತು ತನ್ನ ಅರಿವಿನಮುಂದೆ, ಇದಿರಿಟ್ಟು ತೋರುವ ಪರವಸ್ತುವಿನಲ್ಲಿ ವಿಕಳಾವಸ್ಥೆಯನೈದಿ ನೆರೆವ ಭರದಿಂದಿರ್ಪ ಮುಕ್ತಾಯಕ್ಕಗಳನು ಪ್ರಭುದೇವರು ನುಡಿಸಿದ ಪ್ರಸ್ಥಾವದ ವಚನ.

ಅಂಗೈಯೊಳಗೊಂದು ಅರಳ್ದ ತಲೆಯ ಹಿಡಿದುಕೊಂಡು, ಕಂಗಳ ಮುತ್ತು ಪವಣಿಸುವಾಕೆ ನೀನಾರುಹೇಳಾ. ಸಂದ ಸಂಪಿಗೆಯರಳ್ಗೆ ತುಂಬಿ ಬಂದುಂಬ ಭೇದವನರಿಯದೆ ಹಂಬಲಿಸುವ ಪರಿತಾಪವೇನುಹೇಳಾ? ಒಂದೆಂಜೆನೆ? ಎರಡಾಗಿದೆ. ಎರಡೆಂಜೆನೆ? ಒಂದಾಗಿದೆ. ಅರಿವಿನೊಳಗಣ ನ ರಹಿದೇನು ಹೇಳಾ? ದುಃಖವಿಲ್ಲದುದಕ್ಕೆ ಅಕ್ಕೆ ಇಲ್ಲದನುತಾಪ ನಮ್ಮ ಗುಹೇಶ್ವರಲಿಂಗದಲ್ಲಿ ತೋರುತ್ತಿದೆ. ನೀನಾರು ಹೇಳಾ ಎಲೆ ಅವ್ವಾ? ॥೫॥

ಈ ಹೀಗೆಂದು ಪ್ರಭುದೇವರು ಬೆಸಗೊಳಲು ಮುಕ್ತಾಯಕ್ಕಗಳು ತನ ಕುರುಹ ಹೇಳಿದ ಪ್ರಸ್ಥಾವದ ವಚನ.

ಆರೆಂದು ಕುರುಹ ಬೆಸಗೊಳಲು ಏನೆಂದು ಹೇಳುವೆನಯ್ಯ! ಕಾಯದೊಳಗೆ ಮಾಯವಿಲ್ಲ. ಭಾವದೊಳಗೆ ಭ್ರಮೆ ಇಲ್ಲ. ಕರೆದು ಬೆಸಗೊಂಬರೆ ಕುರುಹಿಲ್ಲ. ಒಬ್ಬರಿಗು ಹುಟ್ಟದೆ, ಅಯೋನಿಯೊಳ್ ಬಂದು ದುರ್ಬುದ್ಧಿ

ಯಾವದನೆನೆನೆಂಬೆನಣ್ಣಾ? ತಲೆಯೊಳು ತಲೆಗೆಟ್ಟು ಬೆಳಗುವ ಜ್ಯೋತಿ ಎನ್ನ ಅಜಗಣ್ಣ ತಂದೆಯು. ಬಿನ್ನ ಬೇಯದಾಗ ನೀನಾರಯ್ಯಾ?॥೬॥

ಈ ಹೀಗೆಂದು ಮುಕ್ತಾಯಕ್ಕಗಳು ತಮ್ಮ ಕುರುಹ ಹೇಳಲು ಆ ಪ್ರಭುದೇವರು ಕೇಳಿ ಹರುಷಿತರಾದ ಪ್ರಸ್ಥಾವದ ವಚನ॥

ಕಾಣಬಾರದ ಕಂಡೆ, ಕೇಳಬಾರದ ಕೇಳಿದೆ, ಮುಟ್ಟಬಾರದುದ ಮುಟ್ಟಿದೆ, ಅಸಾಧ್ಯವ ಸಾಧಿಸಿದೆ, ತಲೆಗೆಟ್ಟುದ ತಲೆವಿಡಿದೆ, ನೆಲೆಗೆಟ್ಟುದ ನಿರ್ಧರಿಸಿದೆ, ಗುಹೇಶ್ವರ ನಿಮ್ಮ ಶರಣ ಅಜಗಣ್ಣಂಗೆ ಶರಣೆಂದು ಬದುಕಿದೆನು ॥೭॥

ಈ ಹೀಗೆಂದು ಪ್ರಭುದೇವರು ಅಜಗಣ್ಣ ದೇವರ ನಿಜವನರಿದು. ಶರಣು ಮಾಡಿದರೆ ಇವರ ಕುರುಹ ತಿಳಿಯಬೇಕೆಂದು ಮುಕ್ತಾಯಕ್ಕಗಳು ಬೆಸಗೊಂಡ ಪ್ರಸ್ಥಾವದ ವಚನ॥

ಸಚ್ಚಿದಾನಂದಸ್ವರೂಪವಾದ ಪಾತ್ರನಕ್ಕ ಗೋಚರವಾದ ಜ್ಞಾನ ಕ್ರಿಯೆ ನೊಳಕೊಂಡು, ನಿಂದ ಜಂಗಮನೆ ಅಂಗ ಪ್ರಾಣವಾದ ಶರಣರನೊಳಕೊಂಡು, ಚಿದ್ಘನದೊಳಗೆ ಅವಿರಳೈಕ್ಯವಾದ ಎನ್ನ ಅಜಗಣ್ಣ ತಂದೆಯ ನರಿದು, ಶರಣೆಂಬುವಾತ ನೀನಾರು ಹೇಳಯ್ಯಾ?॥೮॥

ಈ ಹೀಗೆಂದು ಕೇಳಿದ ಮುಕ್ತಾಯಕ್ಕಗಳಿಗೆ ಪ್ರಭುದೇವರು ತಮ್ಮ ಕುರುಹ ಹೇಳುವ ಪ್ರಸ್ಥಾವದ ವಚನ॥

ಶರಣು ಶರಣಾರ್ಥಿ ಎಲೆ ತಾಯೆ, ಧರೆ ಆಕಾಶ ಮನೆಗಟ್ಟದಂದು, ಹರಿವನಿಲ ಅಗ್ನಿ ಜಲ ಮೊಳೆದೋರದಂದು, ಹುಟ್ಟಿದಳೆಮ್ಮವ್ವೆ! ಅವಕ್ಕೆ ಮುನ್ನವೆ ಹುಟ್ಟಿದೆ. ಬೆಳೆದ ನಮ್ಮಯ್ಯ. ಈ ಇಬ್ಬರ ಬಸಿರಲ್ಲಿ ಬಂದೆ. ನಾನು ನಮ್ಮ ತಂಗಿಯಕ್ಕೈವರು ಮೊರೆಗೆಟ್ಟು ಹೆಂಡಿರಾದರೆ ನಗೆ. ಕಾಮಬಾಣ ತಾಗದೆ, ಅವರ ಸಂಗವ ಮಾಡಿದೆನು. ನಾ ನಿಮ್ಮ ಭಾವನಲ್ಲಯ್ಯನು. ನೀನೆನಗೆ. ನಗೆವೆಣ್ಣು. ನಮ್ಮ ಗುಹೇಶ್ವರನ ಕೈ ಹಿಡಿದು ಪರಮ ಸುಖಿಯಾಗಿ ಕಳವಳ ಕಂಡೆರವಿದೇನು ಹೇಳಾ?॥೯॥

ಈ ಹೀಗೆಂದು ಪ್ರಭುದೇವರು ತಮ್ಮ ಪೂರ್ವಾಪರ ಸಂಬಂಧವಂ ನಿರೂಪಿಸಲು, ಆ ಮುಕ್ತಾಯಕ್ಕಗಳು ಕೇಳಿ ಹರುಷಿತೆಯಾದ ಪ್ರಸ್ಥಾವದ ವಚನ॥

ದೇವ ದೇವ ಶರಣಾರ್ಥಿ ಅವಧರಿಸಯ್ಯಾ! ಕೇಳಿದ ಸುಖ ಕಿವಿಗೆ ಬೇಟವಾಯಿತ್ತು. ಕಿವಿಗಳ ಬೇಟ ಕಂಗಳ ಮುಂದೆ ಮೂರ್ತಿಗೊಂಡಿತ್ತು. ಕಂಗಳ

ಮುಂದೆ ಕಂಡ ಸುಖವು ಮನಕೆ ವೇದ್ಯವಾಯಿತ್ತು. ಶಿವ ಶರಣರ ದರುಶನದ ಸುಖವನೇನೆಂದೆನ್ನಬಹುದು? ಮದವಳಿದು ಮೋಹವ ನೊಡಗೂಡಿದ ಎನ್ನ ಅಜಗಣ್ಣನಗಲಿದ ದುಃಖ ನಿಮ್ಮ ಸಂಗದಲ್ಲಿ ಸ್ವಯವಾಯಿತ್ತು ಕಾಣಾ ಪ್ರಭುವೆ. ॥೧೦॥

ಇಂತು ಮುಕ್ತಾಯಕ್ಕಗಳು ನಿಮ್ಮ ದರುಶನದಿಂದವೇ ಕೃತಾರ್ಥೆಳಾದೆನೆಂದು ಬಿನ್ನಪಂಗೈಯ್ಯಲು, ಆ ಪ್ರಭುದೇವರು ಆಕೆಯ ಅನುತಾಪವಂ ಸಂತೈಸಿ ನಿಲಿಸುವ ಪ್ರಸ್ತಾವದ ವಚನ॥

ಅರಿವರತು ಮರಹುಗೆಟ್ಟು ತನ್ನಲ್ಲಿ ತಾನೆ ಸನ್ನಿಹಿತನಾದಂಗೆ ದುಃಖಿಸುವರೆ ಹೇಳಾ! ಆಳೋಕಿಸುವರೆ ಹೇಳಾ! ಒಡಲಿಲ್ಲದಾತಂಗೆ, ಎಡೆಯುಲೊಂದು ಅಳಿವುಂಟೆಂದು ಹೇಳುವ ಮಾತು ಭ್ರಾಂತು ನೋಡಾ. ಎರಡಿಲ್ಲದ ಐಕ್ಯಂಗೆ ಒಳ ಹೊರಗಿಲ್ಲ ನೋಡಾ! ಗುಹೇಶ್ವರನ ಶರಣ ಅಜಗಣ್ಣಂಗೆ. ॥೧೧॥

ಈ ಹೀಗೆಂದು ಪ್ರಭುದೇವರು ನಿರೂಪಿಸಲು, ಅಜಗಣ್ಣನು ಪರಮಯೋಗೀಶ್ವರನು, ಸುಜ್ಞಾನ ಪರಿಪೂರ್ಣನು, ಅಂತರಂಗದಲ್ಲಿ ಅವಿರಳ ಲಿಂಗೈಕ್ಯನು, ಬಹಿರಂಗ ವ್ಯವಹಾರ ದೂರಸ್ಥನು, ಸರ್ವ ಕಾರಣ ನಿರ್ಮುಕ್ತನು ಸರ್ವಾಂಗ ರಹಿತನು, ನಿತ್ಯ ನಿಜತತ್ವದಲ್ಲಿ ಮನೋವೇದ್ಯನು, ಸಚ್ಚಿದಾನಂದ ರಸಾರ್ಣವನು, ಸದ್ಯೋನ್ಮುಕ್ತನು. ಸರ್ವ ಕ್ರಿಯಾತೀತನು, ನಿಃಶಬ್ದ ಗಂಭೀರನು, ನಿರುಪಮ ಚರಿತ್ರನು, ನಿಸ್ಸಂಸಾರನು, ಸಕಲತತ್ವ ಶಿರೋರತ್ನನು, ಶರೀರವಿಡಿದು ಸಂಗ ರಹಿತನು, ಇಂದ್ರಿಯಂಗಳ ವಿಡಿದು ನಿಃಕಾಮನು, ಗಮನವಿಡಿದು ಅಗಮ್ಯನು, ವಿವೇಕವಿಡಿದು ನಿರ್ವಿಚಾರನು. ಅರುಹು ವಿಡಿದು ತ್ರಿಪುಟಿ ರಹಿತನು, ಘನದಲ್ಲಿ ಗಂಭೀರನು, ನೆನಹಿನಲ್ಲಿ ನಿಸ್ಸಂಚಲನು, ನುಡಿಯಲ್ಲಿ ಪರವಶನು, ಗತಿಯಲ್ಲಿ ಇಹಪರವೆಂಬೆರಡು ಹೊದ್ದದ ನಿರಾಶಾ ಭರಿತನು, ಸ್ಥಿತಿಯಲ್ಲಿ ನಿಃಸ್ಥಿತನು, ಇರವಿನಲ್ಲಿ ಪರಶಿವನು. ಇಂತಪ್ಪ ಮಹಾ ಮಹಿಮನ ನಗಲಿ ನಾನೆಂತು ಜೀವಿಸುವೆನೆಂದು ಮುಕ್ತಾಯಕ್ಕಗಳು ಚಿನ್ತೈಸುತ್ತಿರ್ದ ಪ್ರಸ್ತಾವದ ವಚನ॥

ಅಂಬರದಲಾಡುವ ತುಂಬಿಯು ಬಿಂಬದ ಕಂಬನಿಯೊಳಗಣ ರತ್ನದ ಬಯಕೆಯ ಆದ್ಯಂತವನೇನೆಂಬೆನಯ್ಯಾ? ವೇದಶಾಸ್ತ್ರ ಶ್ರುತಿ ಸ್ಮೃತಿಗಳು ಸ್ತುತಿಯಿಸಲರಿಯವು. ನಾದವಲ್ಲ, ಸುನಾದದ ನಿಲವಲ್ಲ. ಭೇದಿಸುವಕೆ

ಅಗಮ್ಯ ನೋಡಾ! ಸೊಲ್ಲಿಲ್ಲದ ಸೊಮ್ಮಿಲ್ಲದ ಘನವನೇನೆಂಬೆನು? ಎಂತು ಮರೆವೆನಯ್ಯ ಎನ್ನ ಅಜಗಣ್ಣ ತಂದೆಯನು?॥೧೨॥

ಹೀಗೆಂದು ಮುಕ್ತಾಯಕ್ಕಗಳು ಬಿನ್ನೈಸಲು ಅದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ಥಾವದ ವಚನ॥

ಕಂಡೆನೆಂಬುದು ಕಂಗೆ ಮರವೆ. ಕಾಣೆನೆಂಬುದು ಮನದ ಮರವೆ. ಕೂಡಿದೆನೆಂಬುದು ಅರಿವಿನ ಮರವೆ. ಅಗಲಿದೆನೆಂಬುದು ಮರಹಿನ ಮರವೆ. ಇಂತು ಕಂಡೆ ಕಾಣೆ ಕೂಡಿದೆನಗಲಿದೆನೆಂಬ ಭ್ರಾಂತಿ ಸೂತಕವ ತಿಳಿದು ನೋಡಲು, ಗುಹೇಶ್ವರನೆಂಬ ಲಿಂಗವನಗಲಲೆಡೆ ಇಲ್ಲ ಕೇಳಾ ಎಲೆ ತಾಯೆ. ॥೧೩॥

ಇದಕ್ಕೆ ಮುಕ್ತಾಯಕ್ಕಗಳು ಕೊಟ್ಟ ಪ್ರತ್ಯುತ್ತರ.

ಕಣ್ಣ ಮೊದಲಲ್ಲಿ ಕುಳ್ಳಿರ್ದು ಬಣ್ಣದೋರುವ ಪರಿಯ ನೋಡಾ. ಬಣ್ಣವಿಲ್ಲದ ಬಣ್ಣವನುಟ್ಟು ಸುಳಿದ ಅಜಗಣ್ಣನ ಯೋಗಕ್ಕೆ ಬೆರಗಾದೆನು. ಈ ಅರಿವೆಂತುಟೆಲ್ಲವನೊಳಗಿಟ್ಟುಕೊಂಡನು ಶಿವಗಣಸಂಚ ಶಿವಯೋಗಿ ಅಜಗಣ್ಣ ದೇವನು. ॥೧೪॥ ಮತ್ತಂ ನೀರಬೊಂಬೆಗೆ ನಿರಾಳದ ಗೆಜ್ಜೆಯ ಕಟ್ಟಿ ಬಯಲ ಬೊಂಬೆಯ ಕೈಯ್ಯಲ್ಲಿ ಕೊಟ್ಟು, ಮುದ್ದಾಡಿಸುತ್ತಿರ್ದನಯ್ಯಾ. ಕರ್ಪುರದ ಪುತ್ಥಳಿಗೆ ಅಗ್ನಿಯ ಸಿಂಹಾಸನವನಿಕ್ಕಿ ಅಗ್ನಿ ಕರಗಿ ಕರ್ಪುರ ಉಳಿವುದಕ್ಕೆ ಬೆರಗಾದೆನಯ್ಯ ಎನ್ನ ಅಜಗಣ್ಣನ ಯೋಗಕ್ಕೆ. ॥೧೫॥

ಇಂತು ದೇಹವಿದ್ದು ದೇಹವಿಲ್ಲದೆ ತನ್ನರಿವುದೋರದೆ ತಾನೆಂಬ ಸ್ವರೂಪವನು ಶಿವತತ್ವ ಸ್ವರೂಪದಲ್ಲಿ ನಿರ್ವಹಿಸಿ ತಾ ತನ್ನ ತಪ್ಪಿಸಿಕೊಂಡು, ಹೋದನೆಂದು ಮುಕ್ತಾಯಕ್ಕಗಳು ಬಿನ್ನೈಸಲು, ಆ ಪ್ರಭುದೇವರು ನಿರೂಪಿಸಿದ ಪ್ರತ್ಯುತ್ತರ.

ಅಳಿವನಲ್ಲ, ಉಳಿವನಲ್ಲ, ಘನಕ್ಕೆ ಗಮಿಸವಲ್ಲ, ಮನಕ್ಕೆ ಸಾಧ್ಯನಲ್ಲ, ತನ್ನ ತಪ್ಪಿಸಿ ಇದ್ದರ ನೊಪ್ಪಿಸಿದೆನೆಂಬ ಭಿನ್ನ ಭಾವಿಯಲ್ಲ. ಗುಹೇಶ್ವರನ ಶರಣ ಅಜಗಣ್ಣನ ಅಂಕಿಂತೆನಬಾರದು ಕೇಳಾ ತಾಯೆ. ॥೧೬॥

ಈ ಹೀಗೆಂದು ಪ್ರಭುದೇವರು ನಿರೂಪಿಸಲು, ಅದಕ್ಕೆ ಮುಕ್ತಾಯಕ್ಕಗಳು ಕೊಟ್ಟ ಪ್ರತ್ಯುತ್ತರ.

ತನುವಿಡಿದೆನಾಗಿ ಅನುಪನರಿಯದೆ ಕೆಟ್ಟೆನು. ಮನವಿಡಿದೆನಾಗಿ ಅರಿವು ಉಳಿಯದೆ ಕೆಟ್ಟೆನು. ಭಾವದ ಬಯಕೆ ಹಿಂಗದಾಗಿ, ವಿಯೋಗಿಯಾಗಿ ಕೆಟ್ಟೆನು. ಅರಿವ ನುಡಿದು, ಮರಹಿನೊಳಗಾದೆನು. ಎನ್ನ ಕಾಣದೆ ಭಿನ್ನ ಜ್ಞಾನಿಯಾದೆನು. ಅಜಗಣ್ಣನೆಂಬ ಮಹಿಮನು ಘನವೇದ್ಯನಾಗಿ, ಎನ್ನ ಮತಿಗೆ ಮರವೆಯ ಮಾಡಿ, ಹೋದನು. ॥೧೭॥

ಈ ಹೀಗೆಂದು ಮುಕ್ತಾಯಕ್ಕಗಳು ಬಿನ್ನೈಸಲು, ಪ್ರಭುದೇವರು ಕೊಟ್ಟ ಪ್ರತ್ಯುತ್ತರವು.

ತನು ಉಂಟೆಂದರೆ ಪಾಶಬದ್ಧ. ಮನ ಉಂಟೆಂದರೆ ಭವಕ್ಕೆ ಬೀಜ. ಅರಿವ ನುಡಿದು ಕೆಟ್ಟೆನೆಂದರೆ ಅಜ್ಞಾನ. ಭಾವದಲ್ಲಿ ಸಿಲುಕಿದೆನೆಂಬ ಮಾತು ಬಯಲ ಭ್ರಮೆ ನೋಡಾ! ಒಮ್ಮೆ ಕಂಡೆ, ಒಮ್ಮೆ ಕಾಣೆ, ಒಮ್ಮೆ ಕೂಡಿದೆ ಒಮ್ಮೆಯಗಲಿದೆನೆಂದರೆ ಕರ್ಮ ಬೆಂಬತ್ತಿ ಬಿಡದು. ನಿನ್ನೊಳಗೆ ನೀ ತಿಳಿದುನೋಡಲು, ಭಿನ್ನ ಉಂಟೇ? ಗುಹೇಶ್ವರಲಿಂಗವನರಿವರೆ ನೀನೆಂದೇ ತಿಳಿದುನೋಡಾ ಮರುಳೆ. ॥೧೮॥

ಪರತತ್ವವೆಂಬುದು ಬೇರಿಲ್ಲ. ನಿನ್ನಿಂದ ನೀ ತಿಳಿದು ನೋಡೆನಲು, ಅದಕ್ಕೆ ಮುಕ್ತಾಯಕ್ಕಗಳು ಕೊಟ್ಟ ಪ್ರತ್ಯುತ್ತರ.

ಹಿಡಿದಾಚಾರವು ಬಿಡದನ್ನಕ್ಕರ, ಎನ್ನಅರಿವು ಮರೆಯದನ್ನಕ್ಕರ, ಎನ್ನ ಮನವ ಸುಡದನ್ನಕ್ಕರ, ಎನ್ನ ಬೆಡಗಿನ ಗುರುವ ತೊರೆಯದನ್ನಕ್ಕರ, ಉಸುರುವುದೆಂತಪ್ಪದು ಹೇಳಾ. ಹೋಹ ಬಟ್ಟೆಯನರಿಯದನ್ನಕ್ಕರ ತಾನಾಗಬಾರದು ಕಾಣಾ ಎನ್ನ ಅಜಗಣ್ಣ ತಂದೆಯಂತೆ. ॥೧೯॥

ದೇಹೇಂದ್ರಿಯ ಮನಃ ಪ್ರಾಣಾದಿ ಸೂತಕಂಗಳು ಹಿಂಗದನ್ನಕ್ಕರ, ಉತ್ಪತ್ತಿ ಸ್ಥಿತಿ ಲಯಂಗಳ ಭೇದವ ತಿಳಿಯದನ್ನಕ್ಕರ, ಲಿಂಗದಲ್ಲಿ ಇದಿರಿಟ್ಟು ಮಾಡುವ ಕ್ರಿಯಾಸೂತಕ ಹಿಂಗದನ್ನಕ್ಕರ, ತಾನು ಶಿವನಾಗಬಾರದೆಂದು ಮುಕ್ತಾಯಕ್ಕಗಳು ಬಿನ್ನೈಸಲು, ಅದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ಥಾವದ ವಚನ॥

ಇಲ್ಲದ ಶಂಕೆಯನುಂಟೆಂದು ಭಾವಿಸಿ, ಅದು ಕಣ್ಣ ಮುಂದೆ ರೂಪಾಗಿ ಕಾಡುತ್ತಿಪ್ಪುದು. ಇಲ್ಲದ ತನುವನುಂಟೆಂಬನ್ನಕ್ಕರ ಅದೇ ಮಾಯೆಯಾಗಿ ಕಾಡುತ್ತಿಪ್ಪುದು. ನೀ ಕ್ರಿಯಾಲಿಂಗಕ್ಕೆ ಕ್ರಿಯಾಂತಲ್ಲದೆ ಆಗದೆಂಬದರ

ಸಂದುಸಂಶಯ ಮುಂದುಗೆಡಿಸುತ್ತಿಪ್ಪುದು ಕೇಳಾ. ಮನವ ಮನೆಯ ಮಾಡಿಕೊಂಡಿಪ್ಪ ಲಿಂಗದ ಅನುವನರಿಯಬಲ್ಲರೆ, ಗುಹೇಶ್ವರನೆಂಬ ಲಿಂಗ ದೂರವಿಲ್ಲ ಕೇಳಾ ಮರುಳೆ. ॥೨೦॥

ಈ ಹೀಗೆಂದು ಪ್ರಭುದೇವರು ನಿರೂಪಿಸಲು, ಅದಕ್ಕೆ ಮುಕ್ತಾಯಕ್ಕಗಳು ಕೊಟ್ಟ ಪ್ರತ್ಯುತ್ತರ.

ತನುವಿನೊಳಗೆ ತನುವಾಗಿ ಮನದೊಳಗೆ ಮನವಾಗಿ, ಪ್ರಾಣದೊಳಗೆ ಪ್ರಾಣವಾಗಿಪ್ಪುದೆಂದರೆ ಕೆಲಬರಿಗೆ ಅರಿಯಬಪ್ಪುದೆ? ಅಂತರಂಗದೊಳಗೆ ಅದೆ ಎಂದರೇನು ಹೇಳಾ! ಮನಮುಟ್ಟಿ ಕಾಣಬಾರದು. ಬಹಿರಂಗದಲ್ಲಿ ಅದೆ ಎಂದರೆ ಪೂಜಿಸುವನ್ನಕ್ಕರ ಕಾಣಬಾರದು. ಸಾಕಾರವಲ್ಲದೆ ನಿರಾಕಾರ ಲಿಂಗವು ವ್ಯಾಕುಲವುಳ್ಳನ್ನಕ್ಕರ ಸಾಧ್ಯವಾಗದು. ಎನ್ನ ಮನದೊಳಗೆ ಘನವನನುಗೊಳಿಸಿ ತೋರುವರಿಲ್ಲದ ಕಾರಣ ಎನ್ನ ಅಜಗಣ್ಣನಿಕ್ಕಿದ ಸರಿ ಮೂಡಕೆಂಗೆ ಬೆರಗಾದೆನು ಕಾಣಾ ಪ್ರಭುವೆ. ॥೨೧॥

ಈ ಹೀಗೆಂದು ಮುಕ್ತಾಯಕ್ಕಗಳು ಬಿನ್ನೈಸಲು, ಪ್ರಭುದೇವರು ಕೊಟ್ಟ ಪ್ರತ್ಯುತ್ತರ.

ತೆರಹಿಲ್ಲದ ಘನವು ಕುರುಹಿಂಗೆ ಬಾರದ ಮುನ್ನ ತೋರಿದವರಾರು ಹೇಳಾ ಮಹಾಲಿಂಗೈಕ್ಯವನು? ಆ ರೂಢಿಯ ಕೂಟದಲ್ಲಿ ನಾನಾರನು ಸಾಕ್ಷಿಯ ಕಾಣೆ. ಬೇರು ಮಾಡಿ ನುಡಿಯಬಹುದೆ ಪ್ರಾಣಲಿಂಗವನು? ಅರಿವು ಸ್ವಯವಾಗಿ ಮರಹು ನಷ್ಟವಾಗಿಪ್ಪರೆ, ಗುಹೇಶ್ವರನೆಂಬ ಲಿಂಗವು ತಾನೆ ನೋಡಾ. ॥೨೨॥

ಇಂತು ಉಪದೇಶದಿಂ ಮುನ್ನವೆ ಸಂಸಾರ ವ್ಯಾಪ್ತಿಯಂ ತೊಲಗಿಸಿ ತನಗೆ ತಾನೆ ಲಿಂಗದಲ್ಲಿ ಲಿಯ್ಯವಾಗಬೇಕೆಂಬ ಬುದ್ಧಿ ಹುಟ್ಟಿದ ಬಳಿಕ ಒಂದು ಗುರೂಪಾವಸ್ಥೆಯಂ ಮಾಡಿದ ಶಿಷ್ಯನು ತನ್ನಿಂದ ತಾನೆ ತಿಳಿದು. ತನ್ನ ತಾನೆ ಶಿವನೆಂದರಿಯಬೇಕಲ್ಲದೆ, ಭಿನ್ನನಾಗಿ ಅರಸಲಾಗದೆಂದು ಪ್ರಭುದೇವರು ನಿರೂಪಿಸಲು, ಅದಕ್ಕೆ ಮುಕ್ತಾಯಕ್ಕಗಳು ಕೊಟ್ಟ ಪ್ರತ್ಯುತ್ತರ.

ಗುರುವಚನದಿಂದಲ್ಲದೆ, ಲಿಂಗವನರಿಯಬಾರದು. ಗುರುವಚನದಿಂದಲ್ಲದೆ ಜಂಗಮವನರಿಯಬಾರದು. ಗುರುವಚನದಿಂದಲ್ಲದೆ ಪ್ರಸಾದವ

ನರಿಯಬಾರದು. ಗುರುವಚನದಿಂದಲ್ಲದೆ ತನ್ನ ತಾನರಿಯಬಾರದು. ಹಿಂವಣ ಜನ್ಮದಲ್ಲಿ ಲಿಂಗವ ಪೂಜೆಯಿಂದ ಜ್ಞಾನೋದಯವಾದರೆ ಗುರುವಿಲ್ಲದ ಮುನ್ನ ಆಯಿತ್ತೆನ್ನಬಹುದೆ? ತನ್ನಲ್ಲಿ ತಾನೆ ಸನ್ನಿಹಿತನಾದೆನೆಂದರೆ ಗುರುವಿಲ್ಲದೆ ಆಗದು ಕೇಳಾ. ಎನ್ನ ಅಜಗಣ್ಣನೆಂಬ ಗುರುವಿಲ್ಲದೆ ಆರೂಢಿಯ ಕೂಟ ಸಮನಿಸದು ಕೇಳಾ. ॥೨೩॥

ಇಂತು ಗುರುಕರುಣವಿಲ್ಲದೆ ತಾನಾಗದೆಂದು ಮುಕ್ತಾಯಕ್ಕಗಳು ಬಿನ್ನೈಸಲು, ಅದಕ್ಕೆ ಪ್ರಭುದೇವರು ಕೊಟ್ಟ ಪ್ರತ್ಯುತ್ತರ.

ಗುರುವಿಂಗು ಶಿಷ್ಯಂಗು ಆವುದು ದೂರ, ಆವುದು ಸಾರೆಂಬುವನಾರು ಬಲ್ಲರು? ಗುರು ಶಿಷ್ಯನಾದ ತನ್ನ ವಿನೋದಕ್ಕೆ. ಶಿಷ್ಯನೆ ಗುರುವಾದ ತನ್ನ ವಿನೋದಕ್ಕೆ. ಕರ್ಮವೆಂಬ ಕೌಟಿಲ್ಯ ಎದೆಯೊಕ್ಕ ಕಾರಣ ಭಿನ್ನವಾಗಿ ಇದ್ದಿತ್ತೆಂದರೆ ಅದು ನಿಶ್ಚಯವಹುದೆ? ಆದಿ ಅನಾದಿಯಿಂದತ್ತತ್ತ ಮುನ್ನ ಪರತತ್ವಮಂ ತಿಳಿದು ನೋಡಲು, ನೀನೆ ಸ್ವಯಂಜ್ಯೋತಿ ಪ್ರಕಾಶನೆಂದರಿಯಲು, ನಿನಗೆ ನೀನೆ ಗುರುವಲ್ಲದೆ ನಿನ್ನಿಂದಧಿಕವಪ್ಪ ಗುರು ಉಂಟೇ? ಇದು ಕಾರಣ ಗುಹೇಶ್ವರಲಿಂಗವು ತಾನೆ ಎಂಬುದನು ನಿನ್ನಿಂದರಿಯಬೇಕು ನೋಡಾ. ॥೨೪॥

ಇಂತು ಅನಾದಿಯಲ್ಲಿ ನೀನೆ ಪರಶಿವನಾಗಿಪ್ಪಲ್ಲಿ ನಿನಗಾರು ಗುರುವಿಲ್ಲ. ಮಧ್ಯದಲ್ಲಿ ಕರ್ಮವೆಂಬ ಕನ್ನಡದ ಕಟ್ಟೆದಲ್ಲಿಯು ನಿನ್ನ ಜ್ಞಾನೋದಯದಿಂದ ನಿನ್ನ ನೀ ತಿಳಿದೆಯಲ್ಲದೆ ಅನ್ಯರ ಕೈಯಲ್ಲಿ ಆಗದು. ಆದು ಕಾರಣ ನೀನೆ ಪರತತ್ವ ತಿಳಿದು ನೋಡೆಂದು ಪ್ರಭುದೇವರು ನಿರೂಪಿಸಲು, ಅದಕ್ಕೆ ಮುಕ್ತಾಯಕ್ಕಗಳು ಕೊಟ್ಟ ಪ್ರತ್ಯುತ್ತರ.

ತನ್ನ ತಾನರಿವವಂಗೆ ಅರಿವೆ ಗುರು. ಅರಿವರತು ಮರಹು ನಷ್ಟವಾಗಿದ್ದಲ್ಲಿ ದೃಷ್ಟ ನಷ್ಟವೆ ಗುರು. ತಾನಾದಲ್ಲಿ ಮುಟ್ಟಿ ತೋರಿದವರಿಲ್ಲದೇನು? ಸಹಜವ ನೆಲೆಗೊಳಿಸದವ ನಿರ್ಣಯ, ನಿಷ್ಪತ್ತಿಯೇ ಗುರು ನೋಡಾ! ಗುರು ತಾನಾದಡೂ ಗುರುವಿಡಿದಿರಬೇಕು. ಎನ್ನ ಅಜಗಣ್ಣನಂತೆ. ॥೨೫॥

ಇಂತು ಅವ ತೆರದಲ್ಲಿಯು ಗುರುವಿಡಿದಲ್ಲದೆ ಆಗದೆಂದರೆ ಪ್ರಭುದೇವರು ಕೊಟ್ಟ ಪ್ರತ್ಯುತ್ತರ.

ಅರಿವೆನರಿದಿಹೆನೆಂಬುದು ಮರವೆ. ಮರಹ ಮರದಿಹೆನೆಂಬುದು ಮರವೆ. ಸಾಕಾರ ನಷ್ಟ ನಿರಾಕಾರ ದೃಷ್ಟವೆಂಬುದೇ ಭಾವದ ಬಳಿಕೆ. ಗುರುವೆಂಬುದು ಶಿಷ್ಯನೆಂದಲ್ಲಿಯೇ ಹೋಯಿತ್ತು. ಶಿಷ್ಯನೆಂಬುದು ಗುರುವೆಂಬಲ್ಲಿಯೇ ಹೋಯಿತ್ತು. ನಿರ್ಣಯದಲ್ಲಿ ನಿಜೈಕ್ಯನಾಗಿಹೆನೆಂದರೆ ಎಚ್ಚರಿಕೆಯಲ್ಲಿ ತಪ್ಪಿತ್ತು. ಸಹಜ ಸಂಬಂಧಕ್ಕೆ ಗುರುವಲ್ಲದೆ ಸಹಜಕ್ಕೆ ಗುರು ಉಂಟೆ? ಗುಹೇಶ್ವರಲಿಂಗದಲ್ಲಿ ಪರವೆಂಬಲ್ಲಿ ಗುರು ಉಂಟಲ್ಲದೆ ಸ್ವಯವೆಂದಲ್ಲಿಯೇ ನುಡಿಯಲಿಲ್ಲ. ॥೨೬॥

ಇಂತು ತಾನೆ ಲಿಂಗವಾದಿಹೆನೆಂಬನ್ನಕ್ಕರ ಗುರು ಉಂಟಲ್ಲದೆ ತಾನು ತಾನೆಯಾದ ಬಳಿಕ ಗುರು ತಾನೇಕೆಂದು ಪ್ರಭುದೇವರು ನಿರೂಪಿಸಲು, ಅದಕ್ಕೆ ಮುಕ್ತಾಯಕ್ಕಗಳು ಕೊಟ್ಟ ಪ್ರತ್ಯುತ್ತರ.

ಅದ್ವೈತವ ನೆಲೆಗೊಳಿಸಿ ಎರಡಳಿದೆನೆಂಬುದು ಶಿಸು ಕಂಡ ಕನಸಿನಂತಿರಬೇಕಲ್ಲದೆ, ನುಡಿದು ಹೇಳುವನ್ನಕ್ಕರ ಭಿನ್ನವಲ್ಲವೇ ಹೇಳಾ? ಅರಿವರತು ಮರಹು ನಷ್ಟವಾಗಿ, ಗುರುವ ತೋರಿದೆನೆಂಬವರು ಇದಿರಿಂಗೆ ಕರುಳ ತಲೆಯನರಹುವ ಪರಿ ಎಂತು ಹೇಳಾ? ಮನದ ಕೊನೆಯ ಮೊನೆಯ ಮೇಲಣ ಅರುಹಿನ ಕಣ್ಣ ಮುಂದೆ ಸ್ವಯಂ ಪ್ರಕಾಶ ತೋರುತ್ತಿರ್ದಡೆ ತಾನಾಗಬಲ್ಲನೆ? ನೆರೆಯರಿತು, ಮರೆಯ ಬಲ್ಲರೆ ಎನ್ನ ಅಜಗಣ್ಣನಂತೆ ಶಬ್ದ ಮುಗ್ಧವಾಗಿರಬೇಕಲ್ಲದೆ, ಶಬ್ದ ಸಂದಣಿಯ ಮಾತು ಸಮಯವಲ್ಲ ನೋಡಾ ಪ್ರಭುವೆ. ॥೨೭॥

ನಿನ್ನ ನೀನರಿತು ಪರಬ್ರಹ್ಮವಾದೆನೆಂದರೆ ನಿಃಶಬ್ದ ವೇದ್ಯವಾಗಿರಬೇಕಲ್ಲದೆ, ಶಬ್ದ ಸಂದಣಿ ಹಿಂಗದೆಂದರೆ ಪ್ರಭುದೇವರು ಕೊಟ್ಟ ಪ್ರತ್ಯುತ್ತರ.

ಮಾತೆಂಬುದು ಜ್ಯೋತಿರ್ಲಿಂಗ. ಸ್ವಯವೆಂಬುದು ಪರತತ್ವ. ತಾಳೋಷ್ಠ ಸಂಪುಟವೆಂಬುದು ನಾದಬಿಂದುಕಳಾತೀತ. ಗುಹೇಶ್ವರನ ಶರಣರು ನುಡಿದು ಸೂತಕಿಗಳಲ್ಲ ಕೇಳಾ ಮರುಳೆ. ॥೨೮॥

ಶಿವಶರಣರು ಶಬ್ದಸೂತಕಿಗಳಲ್ಲವೆಂದು ಪ್ರಭುದೇವರು ನಿರೂಪಿಸಲು, ಅದಕ್ಕೆ ಮುಕ್ತಾಯಕ್ಕಗಳು ಕೊಟ್ಟ ಪ್ರತ್ಯುತ್ತರ.

ನಡೆದು ನಡೆದು ನಡೆಯ ಕಂಡವರು ನುಡಿದು ನುಡಿದು ಹೇಳುತ್ತಿಹರೆ? ನುಡಿದು ನುಡಿದು ಹೇಳುವನ್ನಕ್ಕರ ನಡೆದುದೆಲ್ಲ ಹುಸಿ ಎಂಬೆನು.

ಮಾತಿನ ಮಥನದಿಂದರಿವ ಕಾರಣ ಮಥನದಿಂದಾದನಲ್ಲದೆ, ಅನುಪಮ ಸ್ವರಭೇದವಾದ ಪರಿ ಎಂತು ಹೇಳಾ! ಇದಿರ ಗೆಲಬೇಕೆಂದು, ನುಡಿ ದುಕೊಂಡರೇನು? ಮನಕ್ಕೆ ಮನವೇ ಸಾಕ್ಷಿಯಾಗಿ ನಿಷ್ಪತ್ತಿಯಲ್ಲ ನೊಡಾ! ಎನ್ನ ಅಜಗಣ್ಣ ತಂದೆ ಶಬ್ದಕ್ಕೆ ಹೇಸಿ ಮುಗುದನಾದನು. ॥೨೯॥

ಇಂತು ಇದಿರ ಗೆಲಬೇಕೆಂದು ನುಡಿದ ನುಡಿಗಳಿವಲ್ಲದೆ ಅರಿವನ ರಿದು ಮರೆದ ನುಡಿಗಳಿವಲ್ಲ. ಸಹಜ ಜ್ಞಾನ ನಿನಗಿಲ್ಲವೆಂದು ಬಿನ್ನೈ ಸಲು, ಪ್ರಭುದೇವರು ಕೊಟ್ಟ ಪ್ರತ್ಯುತ್ತರ.

ತನ್ನ ತಾನರಿದರೆ ನುಡಿ ಎಲ್ಲ ಪರತತ್ವ ನೋಡಾ! ತನ್ನ ತಾ ಮರೆದರೆ ನುಡಿ ಎಲ್ಲ ಮಾಯೆ ನೋಡಾ! ಅರಿದು ಮರೆದ ಶಿವಯೋಗಿಯ ಶಬುದವೆಲ್ಲವು ಉಪದೇಶವಲ್ಲದೆ ಭಿನ್ನ ಉಂಟೆ? ನಿನ್ನ ಮನದ ಕಳವ ಳವ ತಿಳುಹಲೆಂದು ಮಾತನಾಡಿಸಿ ನೋಡಿದಡೆ ಎನ್ನ ಮನದೊಳಗೆ ಕಂದುಕಲೆ ಎಂಬುದಿಲ್ಲ ನೋಡಾ. ನಮ್ಮ ಗುಹೇಶ್ವರ ಲಿಂಗಕ್ಕೆ ನೀನು ಕರುಣದ ಶಿಸುವಾದಕಾರಣ ಬಾಯ್ದೆರೆದೆನಲ್ಲದೆ ಭಿನ್ನ ಉಂಟೆ ಹೇಳಾ ಮರುಳೆ. ॥೩೦॥

ಈ ಹೀಗೆಂದು ಪ್ರಭುದೇವರು ನಿರೂಪಿಸಲು, ಅದಕ್ಕೆ ಮುಕ್ತಾ ಯಕ್ಕಗಳು ಕೊಟ್ಟ ಪ್ರತ್ಯುತ್ತರ.

ನುಡಿಯ ಹಂಗಿನ್ನು ನಿಮಗೆ ಹಿಂಗದು. ನಡೆಯನೆಂತು ನೀವು ಪರರಿಗೆ ಹೇಳುವಿರಿ? ಒಡಲು ಹಂಗಿನ ಸುಳುವು ಬಿಡದು ಎನ್ನೊಡನೆ ಮತ್ತ್ರ್ಯತರನು ಭಾವವಣ್ಣ ತಾನಾದಲ್ಲದೆ ಇದಿರಿಂಗೆ ಹೇಳಬಹುದೆ? ಅರಿವ ತೋರಬಲ್ಲರೆ ತನ್ನನರುಹದೆ ಅರುಹುವನು ಕಾಣಾ ಎನ್ನ ಅಜ ಗಣ್ಣ ತಂದೆ ॥೩೧॥

ನಿನಗಿನ್ನು ಒಡಲ ಹಂಗು ಬಿಡದು. ಮಾತಿನ ಮಥನ ಹಿಂಗದು. ಎನಗೇತರರಿವ ಹೇಳಿಹೆ ಹೋಗೆಂದು ಮುಕ್ತಾಯಕ್ಕಗಳು ಬಿನ್ನೈಸಲು, ಅದಕ್ಕೆ ಪ್ರಭುದೇವರು ಕೊಟ್ಟ ಪ್ರತ್ಯುತ್ತರ.

ಅಂಗದ ಕಳೆಯು ಲಿಂಗದಲ್ಲಿ ಅರಿತ ಬಳಿಕ ಅಂಗವೆಂಬ ಶಂಕೆ ಇಲ್ಲ ನೋಡಾ ಶರಣಂಗೆ. ಪ್ರಾಣದ ಕಳೆ ಅರುಹಿನಲ್ಲಿ ಅರಿತಬಳಿಕ ಶಬ್ದ ಸಂದಣಿಗೆ ಹಂಗಿಲ್ಲ ನೋಡಾ! ಶರಣಂಗೆ ನಡೆದರೆ ನಿರ್ಗಮನಿ, ನುಡಿ ದರೆ ನಿಶ್ಶಬ್ದ. ಗುಹೇಶ್ವರನ ಶರಣಂಗೆ ಕುರುಹಿಲ್ಲ ಕೇಳಾ ಎಲೆ ಅವ್ವ ॥೩೨॥

# ಬಸವನು ಚನ್ನಬಸವನಿಗೆ ಉಪದೇಶ ಸಂಪಾದನೆ.

## (ಚತುರ್ಥೋಪದೇಶ.)



ಚನ್ನಬಸವೇಶಗೊಲವಿಂ ನನ್ನಿಯೊಳುಪದೇಶವ ಶರಣ ಬಸವೇಶ್ವರ ತಾಂ॥ ಸನ್ನುತವಾಗಿತ್ತುದನೊಲವಿಂ ಬಿನ್ನವಿಸುವೆ ಶರಣಗಣರು ಅಹುದ ಹುದೆನಲು. ॥೧॥

ಅದೆಂತೆಂದೊಡೆ ಪ್ರಭುದೇವರು ಸಿದ್ಧರಾಮಯ್ಯ ದೇವರು ಬಸವ ರಾಜದೇವರ ಮಹಾತ್ಮೆಯಂ ಕೊಂಡಾಡುತ್ತ ಪರಮಾನಂದದೊಳೋಲಾ ಡುತ್ತ ಬರುತ್ತಿರಲತ್ತ, ಅಖಂಡಾದ್ವಯ ನಿತ್ಯ ನಿರವಯ ನಿಃಶೂನ್ಯವಪ್ಪ ನಿಃಕಲ ಪರಶಿವನ ಸ್ಥೂಲತತ್ವವೇ ಮರ್ತ್ಯಲೋಕದಲ್ಲಿ ಜಗಹಿತಾರ್ಥವಾಗಿ ಬಸವೇಶ್ವರ ನಾಮದಿಂದವತರಿಸಿ ಷಡುದರುಶನ ಷಣ್ಮತ ಷಟ್‌ಸಮಯ ಗಳಿಂದ ವೀರಶೈವ ಸದ್ಭಕ್ತಿ ಮುಸುಳಿಸಿರಲಾ ಶಿವಭಕ್ತಿಯನುದ್ಧರಿಸಿ, ಸರ್ವಾ ಚಾರವನಿಂಬುಗೊಂಡು ಕಲ್ಯಾಣ ಪಟ್ಟಣದಲ್ಲಿ ಗುರುಲಿಂಗಜಂಗಮ ಭಕ್ತಿಯ ಮಾಡುತ್ತ, ನಿತ್ಯವೆಂಬತ್ತೆಂಟು ಪವಾಡಂಗಳಂ ಜಯಿಸುತ್ತಿರ್ಪ ಬಸವೇಶನೆಂತಾತನೆಂದೊಡೆ,

ಶೈವಂಗೆದೆಗೊಂತ, ವೈಷ್ಣವ ಜೀಮೂತ ಜಂಝಾ ಮಾರುತ, ಚಾರ್ವಾಕ ಚೌದಂತಶೃಣಿ, ಬೌದ್ಧ ಧರ್ದುರ ಫಣಿ, ಕ್ಷಪಣ ವನದಾವಾ ನಲ, ನೈಯ್ಯಾಯಿಕ ಹರಿಣ ಶಾರ್ದೂಲ, ಭಾಟ್ಟ ಗೋಮತ ಶರಧಿಕುಂಭಜ, ಪ್ರಭಾಕರ ಕದಳೀ ಮತ್ತಗಜ, ಮೀಮಾಂಸ ಹಿಮ ಚೈತ್ರ, ವೈಶೇಷ ಲತಾಲವಿತ್ರ, ಕಪಾಲಿ ಕುಮುದ ಮಾರ್ತಾಂಡ, ಸಾಂಖ್ಯ ಮತ ಶರಭ ಬೇರುಂಡ, ಕರ್ಮವಾದ ಕುಧರ ಕುಲಿಶ, ಕಾಲವಾದ ಕಮಲತಾರೇಶ, ಮಂತ್ರವಾದ ಮಸ್ತಕಶೂಲ, ಮಾಯಾವಾದ ಮೂಲ ಕುದ್ದಾಲ, ಕೌಳ ಮತ ತರುಪರಶು, ಕಾಳಾಮುಖ ಕಂಠ ಪಾಶ, ಶಾಕ್ತೇಯ ತಿಮಿರ ದೀಪ, ಸೌರಮತ ಪನ್ನಗ ಖಗಾಧಿಪನೆನಿಸಿ, ವೀರಶೈವ ಸದ್ಭಕ್ತಿಯ ವರ್ಧನಂ ಗೈವುತ್ತ ಶಿವ ಶರಣ ಸಾಗರಕ್ಕೆ ಪೂರ್ಣೇಂದುವಾಗಿ, ಸುಖಮಿರುತ್ತಲೊಂ ದುದಿನ ಶಿವಲಿಂಗಾರ್ಚನೆಯಂ ಮಾಡುತ್ತ, ಲಿಂಗದೊಳ್ಳಿಳಿದು ಆ ಲಿಂಗದ ಕಳೆ ಏಕವಾಗಿ, ವಾರಿ ವಾರಿ ಕೂಡಿದಂತೆ ಕ್ಷೀರ ಕ್ಷೀರ ಬೆರೆದಂತೆ, ರತ್ನ

ದೋಳ್ಕಳೆ ಬೆರಸಿಪ್ಪಂತೆ, ಅಂತರಂಗದ ಜ್ಞಾನ ಬಹಿರಂಗದ ಕ್ರಿ ಒಂದಾಗಿ, ಇಷ್ಟಲಿಂಗದ ಕಳೆ ಪ್ರಾಣಲಿಂಗಕ್ಕೆ ವೇದಿಸಿ, ಪ್ರಾಣಲಿಂಗ ಸಂಬಂಧವಪ್ಪ ಭೇದವು ಶರಣ ಸಂಗದಿಂದಲ್ಲದೆ, ದೊರೆಕೊಳ್ಳದೆಂದು ಜ್ಞಾನಮುಖದೊಳು ನಿರೀಕ್ಷಿಸುತ್ತಿರಲು, ನಿಃಕಲ ಪರಶಿವನ ಸೂಕ್ಷ್ಮತತ್ವವೆ ಚನ್ನಬಸವೇಶ್ವರ ನೆಂಬ ನಾಮದಿಂದ ಮರ್ತ್ಯಕ್ಕವತರಿಸಿ, ಸಕಲ ಪ್ರಮಥರ್ಗೆ ಷಡುಸ್ಥಲವಂ ಬೋಧಿಸುವದಕ್ಕೆ ತಾನೇ ಕಾರಣವಾಗಿ, ಅಲ್ಲಮ ಪ್ರಭುದೇವರ ಬರವಿಂಗೆ ತಾನೆ ಮೂಲಿಗನಾಗಿ ಬಂದು ಆ ಬಸವೇಶ್ವರನ ಸ್ತೋತ್ರಮಂ ಮಾಡಿ, ಅನುಗ್ರಹಮಂ ಪಡೆದರದೆಂತೆಂದೊಡೆ ಆ ಪ್ರಸ್ಥಾವದ ವಚನ. ॥

ಮೀನಜ ರೋಮಜ ಋಷಿಯರು ಮೊದಲಾಗಿ ಅನಂತ ಕೋಟಿ ಹರಿಬ್ರಹ್ಮರಿಲ್ಲದಂದು, ಅಲ್ಲಿಂದತ್ತತ್ತ ನೀನೇಕೋ? ಲಿಂಗ ಒಬ್ಬನೆ ಶರಣ ಗುರುವೆ ಪರಮ ಗುರುವೆ ನೀನೆ, ಗತಿಯಯ್ಯ! ಆದಿ ಕುಳಕೆ ನೀನೆ ಮೂಲಿಗನಾಗಿ ಸುಳುಹುದೋರಿ ಪಾವನವ ಮಾಡಬಂದಿರಿ. ಬಹು ಮುಖ ಜೀವರಿಗೆ ಬಹು ಮುಖ ಪ್ರಸಾದವ ತೋರಿದಿರಯ್ಯ! ಭುವನವ ಸಲಹಲೆಂದು ಅವತರಿಸಿ ಆದಿಲಿಂಗ ಅನಾದಿ ಶರಣನೆಂಬುದು ತಪ್ಪದು. ನೀವು ಪುಟ್ಟಿಸಿದ ಘಟಕ್ಕೆ ಕಾರುಣ್ಯವ ಮಾಡಿ ಸಲಹಯ್ಯ ಕೂಡಲ ಚನ್ನಸಂಗಮ ದೇವಾ. ॥೧॥

ಇಂತು ಚಿಕ್ಕದಂಣಾಯಕರು ಉಪಾವಸ್ಥೆಯಂ ಮಾಡಲು ಬಸವ ರಾಜದೇವರು ಭಕ್ತಿಭಾವ ಸಂಪನ್ನನಾಗಿ ಸರ್ವವೂ ಸಂಗಮನಾಥನೆಂಬ ಭಾವದಿಂದೆ ನಾನು ಉಪದೇಶವ ಮಾಡಲಮ್ಮೆನೆಂದು ನಿರೂಪಿಸಿದ ಪ್ರಸ್ಥಾವದ ವಚನ. ॥

ಹೋ ಹೋ ನಾನೊಬ್ಬರಿಗೆ ಉಪದೇಶವ ಮಾಡಲಮ್ಮೆನು. ಮುನ್ನಲಾದವರು ತಮ್ಮಿಂದ ತಾವಾದರು. ಅವರೆಲ್ಲರು ನಿಜಲಿಂಗೈಕ್ಯರು. ನಾನೇನು ಮಾಡಲಿಲ್ಲ. ತತ್ವವ ಹಿಡಿದವರಿಗೆ ತೊತ್ತಾಗಿ ನಡೆವೆನು. ಅಮರಗಣಂಗಳೇ ಸಾಕ್ಷಿ. ಕೂಡಲ ಸಂಗಮದೇವರ ಮುಂದೆ ಭಾಷೆ ಪ್ರಸಾದವನಿಕ್ಕಲಮ್ಮೆನಯ್ಯ ಚನ್ನಬಸವಣ್ಣಾ. ॥೨॥

ಹೀಗೆಂದು ಬಸವರಾಜದೇವರು ನಿರೂಪಿಸಲು ಅದಕ್ಕೆ ಚನ್ನಬಸವಣ್ಣನು ನಿಮ್ಮ ಕರುಣದಿಂದೆ ಅನುಗ್ರಹವ ಪಡೆವನಲ್ಲದೆ ಬಿಡುವನಲ್ಲ ಅನಾದಿವಿಡಿದು ನಿಮ್ಮ ಶಿಷ್ಯನೆಂಬ ಭೇದವ ತೋರಿಸಿ ಒಡಂಬಡಿಸಿ ಉಪಾವಸ್ಥೆಯಂ ಮಾಡುವ ಪ್ರಸ್ಥಾವದ ವಚನ. ॥

ಅಂಜದಿರಿ ಅಂಜದಿರಿ ನಿಮ್ಮ ಪ್ರಮಥರ ಮುಂದೆ ನಿಮಗೆ ಆಹು ದಹುದೆನಲು, ನಿಮಗನಾದಿಯ ಶಿಸು ನಾನಯ್ಯ ಅದೆಂತೆಂದೊಡೆ, ಜಲಗರ ಬೆಳೆಯಿತ್ತೆಂದು ಅಂಜಿ ಹೇಮರಸವ ಕುಡಿದಲ್ಲಿ ಒಳಗಿದ್ದ ಕಪಿ ಶೃಂಗಾರವ ಮಾಡನೆ? ಕೆಡುವುದೆ ಗುರುವಿನುಪದೇಶ? ಪಿಂಡವ ಮರೆ ವುದೆ ಶಿವಜ್ಞಾನವು? ಹಿಂದೆ ಏಳುನೂರು ವರುಷ ಮಂಡೋದರಿಯ ಬಸಿ ರಲ್ಲಿಉಪಯಂಗಯ್ಯನೆ ಇಂದ್ರಜಿತು? ನೀವು ನಾನು ಹೊಟ್ಟೆಯಲ್ಲಿರ್ದಂದು ವಿಭೂತಿಯ ಪಟ್ಟವ ಕಟ್ಟಿದಂದೆ ಅನುಗ್ರಹವಾಯಿತ್ತು ಕೂಡಲ ಚೆನ್ನಸಂಗ ಮದೇವಯ್ಯ ನಿಮ್ಮ ತೊತ್ತಿನ ತೊತ್ತು ಚನ್ನಬಸವಣ್ಣನು. ॥೩॥

ಹೀಗೆಂದು ಚಿಕ್ಕದಣ್ಣಾಯಕರು ಬಿನ್ನೈಸಲು, ಬಸವರಾಜ ದೇವರು ಎಲ್ಲ ಶಿವಭಕ್ತರಿಗು ಶಿಸುವಲ್ಲದೆ ಒಬ್ಬರಿಗೆ ನಾನು ಗುರುವಲ್ಲವೆಂದು ನಿರೂಪಿಸಿದ ಪ್ರಸ್ಥಾವದ ವಚನ॥

ಆದಿ ಅನಾದಿಯಿಂದತ್ತತ್ತ ಮುನ್ನ ಲಿಂಗಜಂಗಮವೆಂಬುದನಾರು ಬಲ್ಲ ವರಿಲ್ಲೆಂದು, ಇವರ ಸಕೀಲ ಸಂಬಂಧವ ತಿಳುಹಲೆಂದು ಮರ್ತ್ಯಕ್ಕೆ ಕಳುಹಿದನು ಶಶಿಧರನು. ಅಂಗದ ಮೇಲೆ ಲಿಂಗವುಳ್ಳುದೆಲ್ಲವು ಸಂಗಮನಾ ಥನಲ್ಲದೆ ಮತ್ತಾರನು ಕಾಣೆ. ಶಿಷ್ಯಂಗೆ ಗುರು ಉಪದೇಶ ಮಾಡಬೇಕ ಲ್ಲದೆ, ಗುರುವಿಂಗೆ ಶಿಷ್ಯ ಅನುಗ್ರಹವ ಮಾಡಿದ ಠಾವುಂಟೆ? ಎನ್ನ ಅರುಹಿನ ಆದಿಗೆ ನೀನೇ ಕರ್ತನೆಂದು ನಾನಿರುತ್ತಿರಲು, ನಿನಗೆ ನಾನಿನ್ನ ಅನುಗ್ರಹವ ಮಾಡುವ ಪರಿ ಎಂತಯ್ಯ ಕೂಡಲ ಸಂಗಮದೇವರ ಸ್ವರೂ ಪೆಂದು, ನಿನ್ನ ಕಂಡಿಪ್ಪೆ ಕಾಣಾ ಚನ್ನಬಸವಣ್ಣಾ. ॥೪॥

ಹೀಗೆಂದು ಬಸವರಾಜ ದೇವರು ನಿರೂಪಿಸಲು, ಚಿಕ್ಕದಣ್ಣಾಯ ಕರು ಬಿನ್ನೈಸಿದ ಪ್ರಸ್ಥಾವದ ವಚನ.॥

ಆದಿ ಲಿಂಗ ಅನಾದಿ ಶರಣನೆಂಬುದು ತಪ್ಪದು. ಆದಿ ಗುರು ಅನಾದಿ ಶಿಷ್ಯನೆಂಬುದು ತಪ್ಪದು. ಗುರುವಿಂಗೆ ಶಿಷ್ಯಂಗೆ ಏನು ದೂರ ಹೇಳಾ ದೇವಾ? ಮುಳ್ಳು ಗುತ್ತುವರೆ ತೆರಹಿಲ್ಲದೆ ಪರಿಪೂರ್ಣದ ಘನವು ಒಬ್ಬರಲ್ಲಿ ಒಂದು ಭಾವ ಉಂಟೆ? ಎನ್ನೊಳಗೆ ಬೆಳಗುವ ಜ್ಞಾನ ನಿನ್ನ ಹೃದಯ ಕಮಲದೊಳಗಣ ಅವ್ಯಕ್ತಲಿಂಗ ನಿನ್ನೊಳಗೆ ತೊಳಗಿ ಬೆಳಗುವ ಜ್ಯೋತಿರ್ಲಿಂಗ ಎನ್ನ ಸುಜ್ಞಾನಲಿಂಗ ಒಂದರಲ್ಲಿ ಒಂದು ಬಿಚ್ಚಿ ಬೇರು ಮಾಡಬಾರದಾಗಿ, ಪ್ರಾಣಲಿಂಗ ಒಂದೆ ಉಪದೇಶ, ಒಂದೆ ಕ್ರಿಯಾಕರ್ಮ,

ಒಂದೆ ನೀವಿನ್ನು ಆವುದು ಬೇರು ಮಾಡಿ ನುಡಿವಿರಯ್ಯ! ಕಾಯದಲ್ಲಿ ಗುರುವಾಗಿ ಅಂತರಂಗಕ್ಕೆ ಸುಜ್ಞಾನೋಪದೇಶವ ಮುನ್ನವೆ ಮಾಡಿದ ಬಳಿಕ ಕ್ರಿಯಿಂದ ಮಾಡಲಮ್ಮೆನೆಂದರೆ ಹೋಹುದೆ ಕೂಡಲ ಚನ್ನ ಸಂಗಮದೇವರು ಸಾಕ್ಷಿಯಾಗಿ, ಎನಗೆ ನೀವು ಉಪದೇಶವ ಮಾಡಿದರೆ ಮರ್ತ್ಯಲೋಕದ ಮಹಾಗಣಂಗಳ ಕೈಯ್ಯಲ್ಲಿ ಅಹುದಹುದೆನಿಸುವೆ ಕಾಣಾ ಬಸವಣ್ಣಾ. ॥೫॥

ಹೀಗೆಂದು ಚಿಕ್ಕದಣ್ಣಾಯಕರು ಬಿನ್ನೈಸಲು, ಅದಕ್ಕೆ ಬಸವರಾಜ ದೇವರು ನಿರೂಪಿಸಿದ ಪ್ರಸ್ಥಾವದ ವಚನ॥

ಗುರುವಿಂಗೆ ನೀನೆ ಕರ್ತ. ಲಿಂಗಕ್ಕೆ ನೀನೆ ಕರ್ತ. ಜಂಗಮಕ್ಕೆ ನೀನೆ ಕರ್ತ. ಪ್ರಸಾದಕ್ಕೆ ನೀನೆ ಕರ್ತ. ಉಪದೇಶಕ್ಕೆ ನೀನೆ ಕರ್ತ. ಕೂಡಲ ಸಂಗಮದೇವರು ಸಾಕ್ಷಿಯಾಗಿ ಎನಗೆಯು ನೀನೆ ಕರ್ತನಾದ ಕಾರಣ ನಾನು ಬೇಕೆನಲಮ್ಮೆ, ಬೇಡೆನಲಮ್ಮೆ ಕಾಣಾ ಚನ್ನಬಸವಣ್ಣಾ. ॥೬॥

ಎನಗೆ ನೀನೇ ಕರ್ತನಾದ ಕಾರಣ ನೀನೆ ಹಗೆ ಮಾಡಿದಡೆ ಆ ಹಗೆಯು ಪ್ರಸಾದವೆಂಬೆನಲ್ಲದೆ, ಬೇರೆ ಸ್ವತಂತ್ರವನರಿಯೆನೆಂದು ಬಸವ ರಾಜ ದೇವರು ನಿರೂಪಿಸಲು, ಚಿಕ್ಕದಣ್ಣಾಯಕರು ಆ ಉತ್ತರಕ್ಕೆ ಮಹಾ ಪ್ರಸಾದವೆಂದು ಅನುಗ್ರಹವ ಮಾಡಿಸಿಕೊಂಬ ಪ್ರಸ್ಥಾವದ ವಚನ. ॥

ದೇವ ದೇವ ಮಹಾಪ್ರಸಾದ ತನ್ನ ರೂಪ ತಿಳಿದು ನೋಡಬೇಕೆಂದು ಕನ್ನಡಿಯನುಪಾವಸ್ಥೆಯಂ ಮಾಡಲು, ಆ ಕನ್ನಡಿ ಬೇಕು ಬೇಡೆಂಬುದೇ ಅಯ್ಯ? ಪತಿಯಾಜ್ಞೆಯಿಂದ ಸತಿಪತಿಭಾವ ಧರಿಸೆಂದರೆ ಸಂಯೋಗ ಕಾಲ ದಲ್ಲಿ ಅಲ್ಲವೆಂದೆನಬಹುದೇ? ನೀವೆ ಮಾಡಿದರೆ ನೀವೆ ಮಾಡಿದುದು. ನಾನೆ ಮಹಾಪ್ರಸಾದವ ಸ್ವೀಕರಿಸಿದರೂ ನೀವೆ ಮಾಡಿದುದು. ಅಂಗೈಯ್ಯ ಲಿಂಗದ ಲಕ್ಷಣವ ನೋಡಿ ಎಂದು ಕೈಯ್ಯಲ್ಲಿ ಕೊಟ್ಟರೆ, ಲಿಂಗದ ಲಕ್ಷ ಣವ ನೋಡಲಾಗದೆಂದು ಚನ್ನ ಸಂಗಮನಾಥನಕೋ ಎಂದು ಕೊಟ್ಟರೆ ಮಹಾಪ್ರಸಾದವೆಂದು ಕೈಕೊಂಡೆನು. ಗುರು ಬೆದರಿ ಅಂಜಿದರೆ ಮನವ ಸಂತೈಸಿ, ಏಕಾರ್ಥದ ಭೇದವ ತೋರಿ ಬಿನ್ನಹವ ಮಾಡಿದೆನು. ಕೂಡಲ ಚನ್ನಸಂಗಮ ದೇವರ ಮಹಾ ಮನೆಯ ಗಣಂಗಳು ಮೆಚ್ಚಲು ಸಂಗನ ಬಸವಣ್ಣನ ಕರುಣದ ಶಿಸುವೆಂಬುದ ಮೂರು ಲೋಕವೆಲ್ಲವು ಅರಿದು ಜಯಜಯ ಎನುತಿದ್ದಿತು. ॥೭॥

ಮತ್ತಂ, ಕೃತಾಯುಗ, ತ್ರೇತಾಯುಗ, ದ್ವಾಪರ ಕಲಿಯುಗ ವಿಲ್ಲದಿಂವತ್ತತ್ತ ನೋಡಾ! ಧರೆಯು ಬ್ರಹ್ಮಾಂಡವು ಮೂರುತಿಗೊಳ್ಳದ ಲಿಂದತ್ತತ್ತಲಾದ ಮಹಾಪ್ರಸಾದವ ಸಾಧಿಸಿ ತಂದು ಎನ್ನ ಕೈಯ್ಯಲ್ಲಿ ಕೊಟ್ಟನಯ್ಯ ನಿಕ್ಷೇಪವಾಗಿ ಕೂಡಲ ಚನ್ನಸಂಗೈಯ್ಯನಲ್ಲಿ ಬಸವಣ್ಣನೆಂಬ ಗುರುಲಿಂಗವು. ॥೮॥

ಇಂತು ಬಸವರಾಜ ದೇವರ ಕೈಯ್ಯಲ್ಲಿ ಉಪದೇಶವ ಪಡೆದು ಲಿಂಗಾನುಗ್ರಹವ ತಾಳ್ದ ಚಿಕ್ಕದಣ್ಣಾಯಕರು ತಮಗೆ ಲಿಂಗಸ್ವಾಯತ ಸಂಬಂಧ ಸ್ವಯವಾದ ಭೇದಮಂ ವಿವೇಕದಿಂ ಪ್ರತಿಷ್ಠಿಸಿಕೊಂಡ ಪ್ರಸ್ಥಾವದ ವಚನ.॥

ಭಾವದಲ್ಲಿ ಗಮನ, ಪ್ರಾಣದಲ್ಲಿ ಲೋಭ, ಜಿಹ್ವೆಯಲ್ಲಿ ರುಚಿ, ಶ್ರೋತ್ರದಲ್ಲಿ ಕುಶಬ್ದ, ನಾಸಿಕದಲ್ಲಿ ದುರ್ಗಂಧ, ನೋಟದಲ್ಲಿ ಕಾಮ, ಶಬ್ದದಲ್ಲಿ ವಿರೋಧ, ಇಂತಹ ಭವಿಯ ಕಳೆದು, ಭಕ್ತನ ಮಾಡಿದ ಪರಿ ಎಂತೆಂದಡೆ, ಆಕಾರವಿಲ್ಲದಂದಿನ, ನಿರಾಕಾರವಿಲ್ಲದಂದಿನ, ಕಾಮನ ಸುಟ್ಟ ಭಸ್ಮವಿಲ್ಲದಂದಿನ, ತ್ರಿಪುರವ ಸುಟ್ಟ ಭಸ್ಮವಿಲ್ಲದಂದಿನ, ಕಾಲನ ಸುಟ್ಟ ಭಸ್ಮವಿಲ್ಲದಂದಿನ, ಆದಿ ಆಧಾರವಿಲ್ಲದಂದಿನ, ಚಿದ್ವಿಭೂತಿಯನೆ ತಂದು, ಪಟ್ಟವ ಕಟ್ಟಿದರೆ, ಭಾವಕ್ಕೆ ಗುರುವಾಯಿತ್ತು. ಪ್ರಾಣಕ್ಕೆ ಲಿಂಗ ವಾಯಿತ್ತು. ಜಿಹ್ವೆಗೆ ಪ್ರಸಾದವಾಯಿತ್ತು. ಶ್ರೋತ್ರಕ್ಕೆ ಶಿವಮಂತ್ರ ವಾಯಿತ್ತು. ನಾಸಿಕಕ್ಕೆ ಸುಗಂಧವಾಯಿತ್ತು. ನೋಟಕ್ಕೆ ಜಂಗಮ ವಾಯಿತ್ತು. ಶಬ್ದಕ್ಕೆ ಸಂಭಾಷಣೆಯಾಯಿತ್ತು. ಇಂತು ಪೂರ್ವದ ಗುಣಂಗಳೆಲ್ಲವಕಳೆದು, ಪುನರ್ಜಾತನಾದ ಕಾರಣ ಕೂಡಲ ಚನ್ನ ಸಂಗಯ್ಯನಲ್ಲಿ ಬಸವಣ್ಣನಿಂದೆ ಸರ್ವಾಂಗ ಲಿಂಗವಾದೆನು. ॥೯॥

ಮತ್ತಂ, ಪೃಥ್ವಿ, ಅಪ್ಪು, ತೇಜ, ವಾಯು, ಆಕಾಶವೆಂಬ ಪಂಚ ಭೂತಂಗಳಲ್ಲಿ ಪಂಚಲಿಂಗ ಪ್ರತಿಷ್ಠೆಯ ಮಾಡಿದನಯ್ಯ! ಮನ, ಬುದ್ಧಿ, ಚಿತ್ತ, ಅಹಂಕಾರವೆಂಬ ಅಂತಃಕರಣ ಚತುಷ್ಟಯದಲ್ಲಿ ಚತುರ್ಮುಖ ಲಿಂಗವನು ಪ್ರತಿಷ್ಠೆಯ ಮಾಡಿದನಯ್ಯ! ಬಹಿರಂಗ ಹತವ ಮಾಡಿ ಶ್ರೋತ್ರ, ಘ್ರಾಣ, ತ್ವಕ್ಕು, ಜಿಹ್ವೆ, ನೇತ್ರ, ವಾಕ್ಕು, ಪಾಣಿ, ಪಾದ, ಪಾಯು, ಗುಹ್ಯಗಳೆಂಬ ದಶ ಇಂದ್ರಿಯಂಗಳಲ್ಲಿ ದಶಮುಖ ಲಿಂಗಪ್ರತಿಷ್ಠೆಯ ಮಾಡಿದನಯ್ಯ! ಅಂತರಂಗ ಬಹಿರಂಗ ಹತವ ಮಾಡಿದನಯ್ಯ, ಕೂಡಲ ಚನ್ನ ಸಂಗಮದೇವ ಎನ್ನ ಶ್ರೀಗುರು ಬಸವಣ್ಣನು. ॥೧೦॥

ಮತ್ತಂ, ಹಸ್ತ ಮಸ್ತಕ ಸಂಯೋಗವಾಗದ ಮುನ್ನ, ಯೌವ್ವನ ಮಥನವಾಯಿತ್ತು. ಆವುದು ಅಂತರಂಗವೆಂಬೆ? ಆವುದು ಬಹಿರಂಗ ವೆಂಬೆ? ಆವುದು ಆತ್ಮಸಂಗವೆಂಬೆ? ಹಸ್ತಮಸ್ತಕ ಸಂಯೋಗವೆಂಬುದೆ ಬಹಿರಂಗ. ಮನ ಸಂಯೋಗವೆಂಬುದೆ ಅಂತರಂಗ. ಕೂಡಲ ಚನ್ನ ಸಂಗೈಯ್ಯನಲ್ಲಿ ಆತ್ಮ ಸಂಗವಾಯಿತ್ತು. ॥೧೧॥

ಚನ್ನಬಸವರಾಜ ದೇವರು ತಮಗೆ ಉಪದೇಶವ ಮಾಡಿದ ಮಹಾ ತ್ಮೆಯನು ವಿವೇಕಮುಖದಿಂದರಿದರಿದು, ಪರಿಣಾಮಿಸಿ ಕೃತನಿಶ್ಚಯ:ವನೈದಿದ ಪ್ರಸ್ಥಾವದ ವಚನ.॥

ಪ್ರಥಮ ಗುರು ಕಾಣುವಿಕೆಯಾಗಿ ಕರ್ಮಂಗಳು ಬಿಚ್ಚಿಬೆದರಿದವು. ಹುಸಿಯಾಮಿಷ ತಾಮಸ ಕುಟಿಲಂಗಳು ಕಳೆದು, ತಮಗೆ ನಿಂದಿರೆ ಠಾವಿ ಲ್ಲೆನುತ್ತಿರ್ದವು. ಸದ್ಗುರು ಕಾರುಣ್ಯ ಹಸ್ತ ಮಸ್ತಕ ಸಂಯೋಗವಾದಲ್ಲಿ ಪೂರ್ವಗುಣವಳಿದು ಪುನರ್ಜಾತನಾಗಿ ಕರಣಾದಿ ಗುಣಂಗಳ ಕಳೆದು, ಶಿವಲಿಂಗದಲ್ಲಿ ಉಳಿದು, ಅನುಪಮ ಸುಖಸಾರಾಯ ಶರಣನೆನಿಸಿದರೆ ಇದ ನರಿದು ಲಿಂಗದಲ್ಲಿ ತದ್ಗತನಾಗಿರ್ದೆನು. ಜಂಗಮದಲ್ಲಿ ಕರುಣವ ಪಡೆದು, ಭವಿಯನೊಲ್ಲೆನೆಂದು ಬೇರೆ ನಿಂದ ಕಾರಣ ಕೂಡಲ ಚನ್ನಸಂಗಮದೇವ ನಿಮ್ಮ ಶರಣ ಬಸವಣ್ಣ ಭವ ಕಲ್ಪಿತವ ಕಳೆದನು. ॥೧೨॥

ಮತ್ತಂ, ಚರಣವಿಡಿದಂಗೆ ಕರುಣಿ ಕಂದೆರವೆಯ ಮಾಡಬೇಕೆಂದು, ಮರಹಿಂದ ಬಂದ ಕಾಯುದ ಕರ್ಮವ ಕಳೆದು, ಕರುಣಿ ಕಂದೆರವೆಯ ಮಾಡಿದ ಪ್ರಾಣಲಿಂಗ ಸಂಗವೆಂತಿದ್ದುದೆಂದರೆ, ಆಲಿ ನುಂಗಿದ ನೋಟ ದಂತೆ, ಬಯಲ ನುಂಗಿದ ಬ್ರಹ್ಮಾಂಡದಂತೆ, ಮುತ್ತನುಂಗಿದ ಉದಕದಂತೆ, ಪುಷ್ಪ ನುಂಗಿದ ಪರಿಮಳದಂತೆ ಇಪ್ಪ ಮಹಾನುಭಾವಿಗಳಿಗೆನ್ನ ಒಡಲ ಗುರಿ ಮಾಡಿದೆಯಾಗಿ ಎನ್ನ ಒಡಲ ಪರಿಯಾಯ ಕೆಟ್ಟಿತ್ತಯ್ಯ ಕೂಡಲ ಚನ್ನಸಂಗಮದೇವಾ. ॥೧೩॥

ಹರ ತನ್ನ ರೂಪವ ತೋರಬೇಕೆಂದು ಗುರುರೂಪಾಗಿ ಮರ್ತ್ಯಕ್ಕೆ ಬಂದು ಮನಸ್ಥಲಕ್ಕೆ ಮಂತ್ರವಾದನು. ತನುಸ್ಥಲಕ್ಕೆ ಪ್ರಸಾದವಾದನು. ಕರಸ್ಥಲಕ್ಕೆ ಲಿಂಗವಾದನು. ಪ್ರಾಣಸ್ಥಲಕ್ಕೆ ಜಂಗಮವಾದನು. ಇಂತೀ ಚತುರ್ವಿಧ ಸ್ವಾಯತವಾದನು ಕೂಡಲ ಚನ್ನಸಂಗನಬಸವಣ್ಣನು. ॥೧೪॥

ಮತ್ತಂ, ಮಾಂಸಪಿಂಡವೆಂದೆನಿಸದೆ, ಮಂತ್ರಪಿಂಡವೆಂದೆನಿಸಿದನು ಬಸವಣ್ಣನು. ವಾಯು ಪ್ರಾಣಿಯೆಂದೆನಿಸದೆ, ಲಿಂಗ ಪ್ರಾಣಿಯೆಂದೆನಿ

ಸಿದಾತ ಬಸವಣ್ಣನು. ಲಿಂಗ ಭರಿತನೆಂಬ ಶಬ್ದಕ್ಕೆ ಅಂಗವಿಸದೆ ಶರಣ ಭರಿತ ಲಿಂಗವೆಂದೆನಿಸಿದನು ಕೂಡಲ ಚನ್ನಸಂಗನಲ್ಲಿ ಎನ್ನ ಪರಮ ಗುರು ಬಸವಣ್ಣನು. ॥೧೫॥

ಮತ್ತಂ, ಆದಿ ಬಸವಣ್ಣ ಅನಾದಿ ಲಿಂಗವೆಂದೆಂಬರು. ಹುಸಿ ಹುಸಿ. ಈ ನುಡಿಯ ಕೇಳಲಾಗದು. ಆದಿ ಲಿಂಗ ಅನಾದಿ ಬಸವಣ್ಣನು. ಲಿಂಗವು ಬಸವಣ್ಣನ ಉದರದಲ್ಲಿ ಹುಟ್ಟಿತ್ತು. ಜಂಗಮವು ಬಸವಣ್ಣನ ಉದರದಲ್ಲಿ ಹುಟ್ಟಿತ್ತು. ಪ್ರಸಾದವು ಬಸವಣ್ಣನನುಕರಿಸಲಾಯಿತ್ತು. ಇಂತೀ ತ್ರಿವಿಧಕ್ಕೆ ಬಸವಣ್ಣನೆ ಕಾರಣನೆಂದರಿದೆನಯ್ಯ ಕೂಡಲ ಚನ್ನ ಸಂಗಮದೇವಾ. ॥೧೬॥

ಮತ್ತಂ, ಲಿಂಗದ ಪೂರ್ವಾಶ್ರಯುವಂ ಕಳೆದು, ಇದು ಪ್ರಾಣಲಿಂಗವೆಂದು ತೋರಬಂದನಯ್ಯ ಬಸವಣ್ಣನು. ಲಾಂಛನದ ಪೂರ್ವಾಶ್ರಯುವ ಕಳೆದು ಲಿಂಗಜಂಗಮವೆಂದು, ತೋರ ಬಂದನಯ್ಯ ಬಸವಣ್ಣನು. ಪ್ರಸಾದದ ಪೂರ್ವಾಶ್ರಯುವ ಕಳೆದು, ಇದು ಮಹಾ ಪ್ರಸಾದವೆಂದು ತೋರ ಬಂದನಯ್ಯ ಬಸವಣ್ಣನು. ಲಿಂಗ ಜಂಗಮ ಪ್ರಸಾದದ ಪೂರ್ವಾಶ್ರಯುವ ಕಳೆಯುಲೆಂದು ಮರ್ತ್ಯಕ್ಕೆ ಜನಿಸಿದನಯ್ಯ ಕೂಡಲ ಚನ್ನಸಂಗನಲ್ಲಿ ಬಸವಣ್ಣನು. ॥೧೭॥

ಮತ್ತಂ, ಸ್ತೋತ್ರ ಒಮ್ಮೆಯು ಶ್ರೀಗುರುವಿನ ಚರಣವ ನೆನೆಯಲೊಡನೆ ಭವಬಂಧನ ಬಿಡುವುದು. ಗುರುವೆ ಶರಣು ಗುರುಲಿಂಗವೆ ಶರಣು ಹರಿಬ್ರಹ್ಮಾದಿಗಳಿಗೆ ಅಗೋಚರವಾದ ಕೂಡಲ ಚನ್ನಸಂಗನೆಂಬ ಲಿಂಗವ ತೋರಿದ ಬಸವಣ್ಣ ಗುರುವೆ ಶರಣು. ॥೧೮॥

ಮತ್ತಂ, ನಮಃ ಶಿವಾಯ ಲಿಂಗ, ಓಂ ನಮಃ ಶಿವಾಯ ಬಸವಣ್ಣನು, ನಮಃ ಶಿವಾಯ ಲಿಂಗವು, ಓಂ ನಮಃ ಶಿವಾಯ ಬಸವಣ್ಣನು, ಎನ್ನ ಮನಸ್ಥಲದೊಳಗೆ ಬೆಳಗಿ ತೋರಿದೆಯಾಗಿ, ಇದುಕಾರಣ ಕೂಡಲ ಚನ್ನಸಂಗಯ್ಯ, ಆದಿ ಆಧಾರವಿಲ್ಲದಂದು ಮೊದಲಾಗಿ, ಓಂ ನಮಃ ಶಿವಾಯ ಎನುತಿರ್ದೆನು. ॥೧೯॥

ಮತ್ತಂ, ಬಸವಣ್ಣನು ಓಂಕಾರದಿಂದತ್ತತ್ತ ನಾದಬಿಂದುಕಳೆಗಳಿಂದತ್ತತ್ತ, ಪ್ರಥಮಾಚಾರಿ ನೀನೆ. ಲಿಂಗಾಚಾರಿ ನೀನೆ. ಜಂಗಮಾಚಾರಿ ನೀನೆ. ಪ್ರಸಾದಾಚಾರಿ ನೀನೆ, ಎನಗೆ ಸರ್ವಾಚಾರಿಯು ನೀನೆ. ಗತಿ

ಮತಿಯಾಗಿ ಎನ್ನನುಳುಹಿದ ಕಾರಣ ಕೂಡಲ ಚನ್ನ ಸಂಗಮದೇವಾ, ಆವ ನಿರ್ಣಯವಿಲ್ಲದಂದು ಓಂ ನಮಃ ಶಿವಾಯ ಎನುತಿರ್ದೆನು. ॥೨೦॥

ಇಂತು ಚಿಕ್ಕದಣ್ಣಾಯಕರು ಬಸವರಾಜ ದೇವರ ಕೈಯ್ಯಲ್ಲಿ ಅನುಗ್ರಹವಂ ಪಡೆದು, ಪ್ರಾಣಲಿಂಗ ಸಂಬಂಧವಳವಟ್ಟು, ಅಂತರಂಗದ ಜ್ಞಾನ ಬಹಿರಂಗದ ಕ್ರಿಯಲ್ಲಿ ಸಮರಸವನೈದಿ ಸರ್ವಾಚಾರ ಸಂಪನ್ನನಾಗಿ ಕೃತಾರ್ಥನಾದ ಪರಮ ಹರುಷದಿಂದೆ ಬಸವರಾಜ ದೇವರ ಮಹಾತ್ಮೆಗೆ ನಮಸ್ಕಾರವಂ ಮಾಡಿ, ಸ್ತೋತ್ರವಂ ಮಾಡುತ್ತಿರಲು, ಆ ಬಸವರಾಜ ದೇವರು ಚನ್ನಬಸವಣ್ಣನ ಮಹಾತ್ಮೆಯಂ ನೋಡಿ ನೋಡಿ, ಪರಮ ಹರುಷಿತರಾಗಿರ್ದ ಪ್ರಸ್ಥಾವದ ವಚನ ॥

ಬಿತ್ತದೆ ಬೆಳೆಯದೆ ಬೆಳೆದ ಹೆಬ್ಬೆಳಸಿನ ರಾಸಿಯ, ನೋಡಾ! ಸುಗಂಧ ಬಂಧ ಬಂಧುರದಂತೆ ಹುಟ್ಟುತ್ತವೆ ಪರಿಮಳ. ಆದಿ ಅನಾದಿ ಇಲ್ಲದ ಮುನ್ನವೆ ತನ್ನಿಂದವೆ ತಾನಾಗಿರ್ದ ಕಾರಣ ಮುಟ್ಟದೆ ತಟ್ಟದೆ ಗುರುಕಾರುಣ್ಯವ ಪಡೆದು, ಲಿಂಗಸ್ವಯವಾಗಿ, ಎನಗೆ ಗತಿ ಪಥವ ತೋರಿಸಬೇಕೆಂದು ಹಾಗಾದನು ಕೂಡಲ ಸಂಗಮದೇವರಲ್ಲಿ ಚನ್ನಬಸವಣ್ಣನು. ॥೨೧॥

ಮತ್ತಂ, ನಾನಾ ಸ್ಥಾನದಲ್ಲಿ ಬಂದು ತೊಳಲಿ ಬಳಲಿ ಅಳಿದುಳಿದು ನಿಂದ ನಿಲದವನಲ್ಲ. ಮರ್ತ್ಯಲೋಕದಲ್ಲಿ ಶಿವಾಚಾರದ ಘನವು ಹೂಳಿ ಹೋಯಿತ್ತೆಂದು ಕರ್ತನು ತಾನೆ ಮಹಾಪ್ರಸಾದಿಯಾಗಿ ಉದಯವಾದನು. ಹಸ್ತ ಮಸ್ತಕ ಸಂಯೋಗವಿಲ್ಲದ ಮುನ್ನವೆ ಆದಿ ಗುರು ಅನಾದಿ ಶಿಷ್ಯನೆಂಬುದ ನೆಲೆಮಾಡಿ ಸಂಗಮನಾಥನೆಂಬ ಲಿಂಗವನೆನ್ನ ಕೈಯ್ಯಲ್ಲಿ ಕೊಟ್ಟು ಸಾಮರ್ಥ್ಯದಿಂದೆ ಅನುಗ್ರಹಿಸಿಕೊಂಡನು. ಎನ್ನ ಹಿಂದಣ ಪೂರ್ವಾಪರವನೆತ್ತಿ ತೋರಿ ತನ್ನತ್ತ ತೆಗೆದುಕೊಂಡನು ಕೂಡಲ ಚನ್ನ ಸಂಗಮದೇವರಲ್ಲಿ ಚನ್ನಬಸವಣ್ಣನು. ॥೨೨॥

ಮತ್ತಂ, ಅಯ್ಯ ನಿಮ್ಮ ಶರಣನ ಮರ್ತ್ಯಕ್ಕೆ ತಂದೆಯಾಗಿ ನೆನೆ ನೆನೆದು ಸುಖಿಯಾಗಿ ಆನು ಬದುಕಿದೆನಯ್ಯ! ಅದೇನು ಕಾರಣ ತಂದೆ ಎಂದರಿದೆನಯ್ಯ! ಎನ್ನ ಕಾರಣ ತಂದೆ ಎಂದರಿದೆನಯ್ಯ ಅರಿದರಿದು ನಿಮ್ಮ ಶರಣನು ಆಚರಿಸುವ ಆಚರಣೆಯ ಕಂಡು ಕಣ್ದೆರೆದೆನಯ್ಯ ಕೂಡಲ ಸಂಗಮದೇವಾ. ॥೨೩॥

ಮತ್ತಂ, ಇಂದು ಹುಟ್ಟಿದ ಕೂಸಿಂಗೆ ಇಂದೇ ಜವ್ವನವಾಯಿತ್ತಯ್ಯ! ಆ ಕೂಸು ಬೀದಿಯಲ್ಲಿ ಒತ್ತೆಗೊಳಲು ನಿಂದಿತ್ತಯ್ಯ. ಇದರ ಸಂಗ ಸುಖದನುಭವವನು ಕೂಡಲ ಸಂಗಮದೇವ ತಾನೆ ಬಲ್ಲ. ॥೨೪॥

ಇಂತು ಬಸವರಾಜ ದೇವರು ಚಿಕ್ಕದಣ್ಣಾಯಕರ ಸ್ತೋತ್ರಮಂ ಮಾಡಲು, ಆ ತನ್ನ ಬಸವರಾಜ ದೇವರು ಬಸವರಾಜ ದೇವರ ಪೂರ್ವಾಪರ ಸಂಬಂಧಮಂ ತಿಳಿಯ ಪೇಳಿ ಕೊಂಡಾಡುತ್ತಿರ್ದ ಪ್ರಸ್ಥಾವದ ವಚನ. ॥

ಪ್ರಥಮ ಕಾಲದಲ್ಲಿ ನಿರಾಲಂಬಿಯಾಗಿರ್ದರಯ್ಯ! ದ್ವಿತೀಯ ಕಾಲದಲ್ಲಿ ತೇಜೋ ಮೂರ್ತಿಯಾಗಿರ್ದಿರಯ್ಯ! ತೃತೀಯ ಕಾಲದಲ್ಲಿ ನಾದಮೂರ್ತಿಯಾಗಿರ್ದಿರಯ್ಯ! ಚತುರ್ಥ ಕಾಲದಲ್ಲಿ ಚೈತನ್ಯರೂಪ ತಾಳಿರ್ದಿರಯ್ಯ! ಪಂಚಮ ಕಾಲದಲ್ಲಿ ಧರ್ಮಮೂರ್ತಿಯಾಗಿರ್ದಿರಯ್ಯ! ಷಷ್ಠಮ ಕಾಲದಲ್ಲಿ ನೀವು ಪರಮಪುರುಷಾರ್ಥ ಸಾಧನವಾಗಿ ತ್ರಿವಿಧ ಭಕ್ತಿಗೆ ನೀವೆ ಕಾರಣವಾಗಿ ಬಂದಿರಿ. ನೀವು ಪ್ರಮಥರು ಸಹಿತ ಮುಟ್ಟಿ ಪ್ರಾಣಲಿಂಗದ ಹರಿವ ತೋರಿಸಬೇಕೆಂಬ ನಿಮಿತ್ಯ ಬೆಸನವಿಡಿದು, ನಿಮ್ಮ ಕರುಣದ ಶಿಸುವಾಗಿ ಹುಟ್ಟಿಡೆ. ನಿಮ್ಮ ಕರಸ್ಥಲದಲ್ಲಿ ಕೂಡಲ ಚನ್ನ ಸಂಗಮದೇವ ನಿಮ್ಮ ಮಹಿಮೆಗೆ ನಮೋ ನಮೋ ಎನುತಿರ್ದೆನು. ॥೨೫॥

ಇಂತೀ ಚಿಕ್ಕದಣ್ಣಾಯಕರು ಪ್ರಾಣಲಿಂಗ ಸಂಬಂಧದ ಹರಿವ ತೋರಿಸಬೇಕೆಂಬ ನಿಮಿತ್ಯ ಬೆಸನನಿಡಿದು ಬಂದಿರೆಂದು ಬಿನ್ನೈಸಲು, ಅದಕ್ಕೆ ಬಸವರಾಜ ದೇವರು ನಿರೂಪಿಸಿದ ಪ್ರಸ್ಥಾವದ ವಚನ. ॥

ಲಿಂಗ ಪ್ರಾಣದ ಸಕೀಲ ಸಂಬಂಧವೆಂತಿಪ್ಪುದೆಂದರಿಯೆನು. ಪ್ರಾಣಲಿಂಗದ ಸಕೀಲ ಸಂಬಂಧವೆಂತಿಪ್ಪುದೆಂದರಿಯೆನು. ಹುಸಿ ಹುಂಡನ ಮಾಡಿ, ಹೊರಗನೆ ಪೂಜಿಸಿ, ವೃಥಾ ದಿನಂಗಳು ಸವೆದು ಹೋದವು. ಕೂಡಲ ಸಂಗಮದೇವರಲ್ಲಿ ಎನ್ನ ಪ್ರಾಣ ನಿಕ್ಷೇಪವಹ ಭೇದವ ತೋರಾ ಚನ್ನಬಸವಣ್ಣಾ. ॥೨೬॥

ಹೀಗೆಂದು ಬಸವರಾಜ ದೇವರು ಬಿನ್ನೈಸಲು, ಆದಕ್ಕೆ ಚಿಕ್ಕದಣ್ಣಾಯಕರು ಪ್ರಾಣಲಿಂಗ ಸಂಬಂಧದ ಭೇದಮಂ ತಿಳುಹುತಿರ್ದ ಪ್ರಸ್ಥಾವದ ವಚನ. ॥

ಹೋ ಹೋ, ಗುರುವೇ ನಿಮ್ಮ ಕರಕಮಲದಲ್ಲಿ ಉದಯಿಸಿ ಅಂಗದ ಮೇಲೆ ಲಿಂಗವ ಧರಿಸಿ, ಆ ಲಿಂಗದಲ್ಲಿ ಅಂಗವಾಗಿ, ಪ್ರಾಣಲಿಂಗ ಲಿಂಗ

ಪ್ರಾಣವೆಂಬುದ ನಾನು ಕಂಡೆನು. ನಿಮಗಾನು ತೋರಲು ಸಮರ್ಥನೆ? ಆಚಾರ ಅಂಗದ ಮೇಲೆ ನೆಲೆಗೊಂಡು ಇಷ್ಟಲಿಂಗದಲ್ಲಿ ದೃಷ್ಟಿನಟ್ಟ ಭಾವ ಸಂಪನ್ನನಾಗಿಪ್ಪ ನಿಮ್ಮ ಘನವ ನಾನೆತ್ತ ಬಲ್ಲೆನು? ಸುಜ್ಞಾನ ಸಮಾಧಿಯೊಳಗೆ ಬಯಕೆಯಡಗಿ ಪರಿಣಾಮ ಲಿಂಗದಲ್ಲಿ ಮನಸು ಲಯವಾಗಿ, ನಿಜಲಿಂಗಸಂಗದಲ್ಲಿ ತೃಪ್ತರಾಗಿಪ್ಪಿರಿ ನೀವು. ನಿಮ್ಮ ಘನವ ನಾನೆತ್ತ ಬಲ್ಲೆನು? ಅಂಗದ ಮೇಲೆ ಲಿಂಗವುಳ್ಳುದೆಲ್ಲವು ಸಂಗಮನಾಥನೆಂದಲ್ಲಿ ಜಂಗಮಲಿಂಗ ಪ್ರಾಣಿಯಾಗಿಪ್ಪಿರಿ ನೀವು. ನಿಮ್ಮ ಘನವ ನಾನೆತ್ತ ಬಲ್ಲೆನಯ್ಯ? ಲಿಂಗಕ್ಕೆ ಬಂದ ಪದಾರ್ಥವಲ್ಲದೆ ಕೊಳ್ಳೆನೆಂದು ಮನ ಮೊಸಲು ತನು ಮೊಸಲು ಮಾಡಿ, ಸರ್ವಾಂಗವೆಲ್ಲವನು ಪ್ರಾಣದಲ್ಲಿ ಆರ್ಪಿಸಿ ನೀವು ತೊಲಗಿ ನಿರಾಭಾರಿಯಾಗಿ ಪ್ರಸಾದಲಿಂಗ ಪ್ರಾಣಿಯಾಗಿರ್ಪಿರಿ. ನಿಮ್ಮ ಘನವ ನಾನೆತ್ತ ಬಲ್ಲೆನಯ್ಯ? ಅನಾದಿ ಶಿವಂಗೆ ಆಧಾರವಿಲ್ಲೆಂದು, ಅಖಂಡಿತವ ನಿನ್ನ ರೋಮದ ಕೊನೆಯಲ್ಲಿ ಧರಿಸಿ, ಮಹಾಲಿಂಗ ಪ್ರಾಣಿಯಾಗಿಪ್ಪಿರಿ ನೀವು. ನಿಮ್ಮ ಘನವ ನಾನೆತ್ತ ಬಲ್ಲೆನಯ್ಯ! ಕೂಡಲ ಚನ್ನಸಂಗಯ್ಯ ಸಾಕ್ಷಿಯಾಗಿ, ನಿಮ್ಮ ಪ್ರಾಣಲಿಂಗ ಸಂಬಂಧದ ಸೆರಗು ಸೋಂಕಿನ ಒಕ್ಕುಮಿಕ್ಕ ಪ್ರಸಾದಿ ನಾನು ಕಾಣಾ ಸಂಗನಬಸವಣ್ಣ. ॥೨೭॥

ಇಂತು ಪ್ರಾಣಲಿಂಗ ಸಂಬಂಧದ ನಿರ್ಣಯಮಂ ಉಪಾಯದಿಂ ಸ್ತೋತ್ರಮುಖದಿಂದವೆ ಚಿಕ್ಕದಣ್ಣಾಯಕರು ಹೇಳದ ಹಾಗೆ ಹೇಳಿ ತೋರಲು, ಅವಕ್ಕೆ ಬಸವರಾಜ ದೇವರು ಪ್ರಾಣಲಿಂಗದಲ್ಲಿ ಸಂಬಂಧದ ಭೇದಮಂ ತನ್ನೊಳು ತಾನೆ ಕಂಡು ಹಾರೈಸಿ ಹರುಷಂ ಬಟ್ಟು ಆ ಚಿಕ್ಕದಣ್ಣಾಯಕರ ಕೊಂಡಾಡಿದ ಪ್ರಸ್ಥಾವದ ವಚನ॥

ಅಯ್ಯ, ಮರದೊಳಗೆ ಅಗ್ನಿ ಇದ್ದರೇನಯ್ಯ! ಮಥನಿಸಿ ತೋರುವರಿಲ್ಲದನ್ನಕ್ಕರ ಕಾಣಬಹುದೆ? ಜಗದೊಳಗೆ ಕೂಡಿ ಪರಿಪೂರ್ಣ ಶಿವನೆಂದರೆ ಅಂತರಂಗದಲ್ಲಿ ಕಾಣ ಬಹುದೆ? ಆದಿಲಿಂಗ ಅನಾದಿಶರಣನ ಭೇದವ ತಿಳುಹಿ ನಿಜಪ್ರಾಣದೊಳಗಿಪ್ಪ ಸುಜ್ಞಾನ ಲಿಂಗವ ಕರಸ್ಥಲಕ್ಕೆ ತಂದು. ಆ ಕರಸ್ಥಲದ ಲಿಂಗವೆನ್ನ ಸರ್ವಾಂಗದೊಳಗೆ ಪ್ರತಿಷ್ಠಿಸಿ ತೋರಿ ನಿತ್ಯ ನಿತ್ಯ ನಿಜಲಿಂಗೈಕ್ಯವಹ ಹೊಲಬಿನ ಹರಿವ ತೋರಿಸಿ ಮರ್ತ್ಯಲೋಕದೊಳಗೆಲ್ಲ ಇಂದು ಮೊದಲಾಗಿ, ಪ್ರಾಣಲಿಂಗದ ಘನವ

ಹರಹಿ ಶಿವ ಭಕ್ತಿಯನುದ್ಧರಿಸಿದನು. ಕೂಡಲ ಸಂಗಮದೇವರಲ್ಲಿ ಚೆನ್ನಬಸವಣ್ಣನೆನ್ನ ನಾಗುಮಾಡಿ ಉಳುಹಿದನಾಗಿ, ನಾನು ಕೃತಾರ್ಥನಾದೆನೆಂದು ಬಸವರಾಜ ದೇವರು ನಿರೂಪಿಸಲು, ಅದಕ್ಕೆ ಚಿಕ್ಕದಣ್ಣಾಯಕರು ಬಿನ್ನೈಸಿದ ಪ್ರಸ್ಥಾವದ ವಚನ. ॥

ಮರ್ತ್ಯಲೋಕ ಶಿವಲೋಕವೆಂಬುದೊಂದು ನಿಚ್ಚಣಿಕೆಯಾದವು ನೋಡಾ! ದೇವ, ನೀವೀಕಲ್ಯಾಣಕ್ಕೆ ಬಂದವತರಿಸಿದಲ್ಲಿ ಸತ್ಯಶರಣರೆಲ್ಲರನು ಪಾವನವ ಮಾಡಲೆಂದು ಬಂದೆರೆ ಜನ್ಮದಲ್ಲಿ ಬಂದನೆಂದು ನುಡಿಯಬಹುದೆ? ಕರ್ತರ ರೂಪು ಭೃತ್ಯಂಗೆ ಬಂದಲ್ಲಿ ಆ ಭೃತ್ಯ ಕರ್ತನನರಸಿಕೊಂಡು ಬಂದವನಲ್ಲ. ಸತ್ಯಸದಾಚಾರವ ಹರಹಿ ಮರ್ತ್ಯರ ಪಾವನವ ಮಾಡಿ, ನಿಜಲಿಂಗ ಸಮಾಧಿಯೊಳು ನಿಲ್ಲುವರಿನ್ನಾರು ಹೇಳಾ ನೀನಲ್ಲದೆ? ಕೂಡಲ ಚೆನ್ನಸಂಗಮದೇವರು ಸಾಕ್ಷಿಯಾಗಿ, ನಿಮಗೆ ಭವ ಉಂಟೆಂದು ಮನದಲ್ಲಿ ಹಿಡಿದರೆ ಸಂಗನಬಸವಣ್ಣ ನಿಮ್ಮ ಶ್ರೀಪಾದದಾಣೆ. ॥೨೯॥

ನೀವು ಮರ್ತ್ಯಕ್ಕೆ ಬಂದರೇನು? ಶಿವಲೋಕದಲ್ಲಿ ಇದ್ದರೇನು? ನಿಮಗೆ ಭವಂಗಳಿಲ್ಲವೆಂದು ಚಿಕ್ಕದಣ್ಣಾಯಕರು ಬಿನ್ನೈಸಲು, ಅದಕ್ಕೆ ಬಸವರಾಜ ದೇವರು ಪರಮ ಹರುಷಿತರಾಗಿ ನಿಜ ಸಮಾಧಿಯೊಳು ಬೆರಿಸುವ ಭೇದ ಎನಗೆಂದು ಸಯವಪ್ಪುದೆಂದು ಉಪಾವಸ್ಥೆಯಂ ಮಾಡುವ ಪ್ರಸ್ಥಾವದ ವಚನ. ॥

ಲಿಂಗವ ಪೂಜಿಸಿ ಫಲವೇನಯ್ಯ ಸಮರತಿ ಸಮಕಳೆ ಇಲ್ಲದನ್ನಕ್ಕರ? ಲಿಂಗವ ಪೂಜಿಸಿ ಫಲವೇನಯ್ಯ ಕೂಡಲ ಸಂಗಮದೇವರಲ್ಲಿ ನದಿಯೊಳಗೆ ನದಿ ಬೆರೆಯದನಕ್ಕರಾ? ॥೩೦॥

ಇಂತು ಬಸವರಾಜ ದೇವರು ಲಿಂಗದೊಳು ಒಡವೆರಸಿ ಬೆರಸಿ, ಸಮರಸೈಕ್ಯ ಮನ ಮಗ್ನ ಯೋಗವೆಂದಾಗುವದೆಂದು ಚೆನ್ನಬಸವರಾಜ ದೇವರ ಬೆಸಗೊಳಲು, ಆ ಚೆನ್ನಬಸವರಾಜ ದೇವರು ಸುಜ್ಞಾನದೃಷ್ಟಿಯಿಂ ನೋಡಿ ಆ ಲಿಂಗದ ಪರಮಕಳಾ ಚೈತನ್ಯವೆ ಜಂಗಮ, ಆ ಜಂಗಮವೆ ಅನಾದಿ ಗಣನಾಥ ಅಲ್ಲಮಪ್ರಭುದೇವರು ನೀವು ಜಂಗಮ ಪ್ರಾಣಿ ಎಂಬುದ ನೋಡಿ ಅರಸಿಕೊಂಡು, ಬರುತ್ತಿಹರೆ ಅವರ ಬರವನೀಗವೆ ತೋರುವೆನೆಂದು ಬಿನ್ನೈಸುವ ಪ್ರಸ್ಥಾವದ ವಚನ. ॥

ಲಿಂಗಜಂಗನು, ಜಂಗಮುಲಿಂಗದ ಮುಖವ ನೀವಲ್ಲದೆ ಇನ್ನು ಬಲ್ಲ ವರಾರಯ್ಯ? ಅಂಗದ ಮೇಲೆ ಲಿಂಗವುಳ್ಳುದೆಲ್ಲವು ಸಂಗಮನಾಥನೆಂದಲ್ಲಿ ಪರವಾದಿ ಬಿಜ್ಜಳನು ಒರೆದು ನೋಡಲೆಂದಟ್ಟಿದರೆ ಹಗರಣಿಗರ ಜಂಗಮ ಮುಖದಲ್ಲಿ ಲಿಂಗವ ಮಾಡಿದರಾರು ಹೇಳಾ ನೀವಲ್ಲದೆ? ಮರೆದ ಮಾನೀ ಶನ ಕರೆದು, ಓ ಎನಿಸಿ, ನುಡಿಸಿ, ಉಣಿಸಿ, ಜಂಗಮುಲಿಂಗಪ್ರಾಣಿ ಸಂಗನ ಬಸವಣ್ಣನೆಂಬ ಧ್ವಜವನೆತ್ತಿ ಮೆರೆದವರಾರು ಹೇಳಾ ಈ ಕಲ್ಯಾಣ ದಲ್ಲಿ ನೀವಲ್ಲದೆ? ಜಂಗಮ ಮುಖದಿಂದಲ್ಲದೆ ಲಿಂಗವನರಿಯೆನೆಂದು, ಎನ್ನ ಮನಕ್ಕೆ ಸಂದೇಹವನೊಡ್ಡಿ ಜಾರಿದರೆ ನಾನು ಸೈರಿಸಬಲ್ಲೆನೆ? ನೀನು ಜಂಗಮ ಮುಖ ಲಿಂಗಸಂಬಂಧಿ ಎಂಬುದಕ್ಕೆ ಆದಿ ಗಣನಾ ಥನು ಅಲ್ಲಮಪ್ರಭುವೆಂಬ ನಾಮವ ಧರಿಸಿ ನಿನ್ನ ನರಸಿಕೊಂಡು ಬರುತ್ತ ಲೈದಾನೆ ಕೂಡಲ ಚನ್ನಸಂಗಮದೇವರು ಸಾಕ್ಷಿಯಾಗಿ, ಸಂಗನ ಬಸ ವಣ್ಣ ನೀನೆ ಜಂಗಮ ಪ್ರಾಣಿ ಎಂದು ನಾನು ನಂಬಿದೆನು. ॥೩೧॥

ಅಲ್ಲಮಪ್ರಭುದೇವರು ನಿಮ್ಮನರಸಿಕೊಂಡು ಬಪ್ಪುದನೀಗಳೆ ತೋರಿ ದಪೆನೆಂದು ಚಿಕ್ಕದಣ್ಣಾಯಕರು ಬಿನ್ನೈಸಲು ಅದಕ್ಕೆ ಬಸವರಾಜ ದೇವರು ಪರಮ ಹರುಷಿತರಾದ ಪ್ರಸ್ಥಾವದ ವಚನ.॥

ಜಂಗಮಲಿಂಗವೆಂಬ ಭಾವ ಫಲಿಸಿದರೆ ಇಂದಿನ ಪುಣ್ಯಕ್ಕೆ ಸರಿ ಯುಂಟೆ? ಲಿಂಗದ ಒಡಲ ಮನೆ ಮಾಡಿಪ್ಪ ಜಂಗಮವೆನ್ನ ಕಣ್ಣ ಮುಂದೆ ತೋರಿದರೆ ಇಂದೆನ್ನ ಭಾಗ್ಯಕ್ಕೆ ಕಡೆ ಇಲ್ಲ. ಆ ಜಂಗಮವ ದಿಟಕ್ಕೆನ್ನ ಮನೆಗೆ ಬಂದಡೆ ಕೂಡಲ ಸಂಗಮದೇವರಲ್ಲಿ ಸಲುಗೆಯ ವರವ ಹಡೆವೆನು ಕಾಣಾ ಚನ್ನಬಸವಣ್ಣ ನೀನಹುದೆನಲು. ॥೩೨॥

ಹೀಗೆಂದು ಚಿಕ್ಕದಣ್ಣಾಯಕರು ಹಿರಿಯದಣ್ಣಾಯಕರು ತಮ್ಮೊಳಗೆ ತಾವು ಜ್ಞಾನಾನುಭಾವವ ಸಂಬಂಧಿಸಿ ನೋಡಿ ಕಂಡು ಈಗಳೆ ಪ್ರಭು ದೇವರ ಬರವು ತಪ್ಪಲರಿಯದೆಂದು ಮಹಾನುಭಾವ ಗೋಷ್ಠಿಯೊಳಗೋ ಲಾಡುತ್ತಿರಲು, ಇತ್ತಲಾ ಸಕಲ ಪರಶಿವತತ್ವದ ಕಾರಣಾವತಾರದ ಪ್ರಭು ದೇವರು ಸಿದ್ಧರಾಮಯ್ಯ ದೇವರು ಸೊನ್ನಲಿಗೆಯ ಪುರಮಂ ಸೂರೆವುಟ್ಟ ಅನಂತ ದೇಶಂಗಳೊಳು ದೇಶಾಂತರಮಂ ಮಾಡುತ್ತ ಹಲಕೆಲವು ದಿವ ಸಂಗಳಂ ಕಳೆವುತ್ತ ಬಂದು ಮರ್ತ್ಯಲೋಕದ ಸಕಲೈಶ್ವರ್ಯದ ಭಂಡಾ ರದ ನಿಜ ನಿಳಯವೆನಿಸಿಪ್ಪ, ಮತ್ತಂ, ಭೂಮಿಗೆ ಹೃತ್ಕಮಲಕರ್ಣಿಕಾವಾ

ಸೆಮೆನಲೊಪ್ಪುವ ವಾಣಿಯ ಮುಖದರ್ಪಣವೆನಿಸಿರ್ಪ ಸಕಲ ಕರ್ಮಂಗಳಂ ತೀವುವ ಕರಂಡವೆನಿಸಿರ್ಪ ಸತ್ಯದ ಸಾಗರ, ಭಕ್ತಿಯ ತವರ್ಮನೆ, ಮುಕ್ತಿಗೆ ಮುಖ, ಪುಣ್ಯದ ಪುಂಜ, ಅಭಿನವ ಕೈಲಾಸವೆನಿಸಿಪ್ಪ ಶ್ರೀಕಲ್ಯಾಣಮಂ ಕಂಡು ಪೊಕ್ಕು ಇಲ್ಲಿ ಬಸವರಾಜ ದೇವರು ಮೂರ್ತಿಗೊಂಡು ಇರುತಿರ್ಪರೆಂದು ಅರಿದು ಆ ಪುರಕ್ಕೆ ವಂದನೆಯ ಮಾಡಿ ಸ್ತುತಿಸುತ್ತ ಆ ಪ್ರಭುದೇವರು ಸಿದ್ಧರಾಮಯ್ಯ ದೇವರಿಗೆ ಆ ಕಲ್ಯಾಣಪುರಮಂ ತೋರಿಸಿ ಕೊಂಡಾಡುತಿರ್ದ ಪ್ರಸ್ಥಾವದ ವಚನ.

ಕಲ್ಯಾಣವೆಂಬ ಪ್ರಣತೆಯಲ್ಲಿ ಭಕ್ತಿರಸವೆಂಬ ತೈಲವನೆರೆದು, ಆಚಾರವೆಂಬ ಬತ್ತಿಯಲ್ಲಿ ಬಸವಣ್ಣನೆಂಬ ಜ್ಯೋತಿಯ ಮುಟ್ಟಿಸಲು ತೊಳಗಿ ಬೆಳಗುತ್ತಿರ್ದಿತ್ತೈಯ್ಯ ಶಿವನ ಪ್ರತಾಪ. ಆ ಬೆಳಗಿನೊಳು ಒಪ್ಪುತ್ತಿರ್ದರಯ್ಯ ಅಸಂಖ್ಯಾತ ಭಕ್ತ ಮಹಾಗಣಂಗಳು. ಶಿವ ಭಕ್ತರಿರ್ದ ಕ್ಷೇತ್ರ ಅವಿಮುಕ್ತ ಕ್ಷೇತ್ರವೆಂಬುದು ಹುಸಿಯೆ? ಶಿವ ಭಕ್ತರಿರ್ದ ದೇಶ ಪಾವನವೆಂಬುದು ಹುಸಿಯೆ? ಗುಹೇಶ್ವರ ಲಿಂಗದಲ್ಲಿ ಎನ್ನ ಪರಮಾರಾಧ್ಯರು ಸಂಗನಬಸವಣ್ಣನ ಮಹಿಮೆಯ ನೋಡಾ ಸಿದ್ಧರಾಮಯ್ಯ. ॥೩೩॥

ಇಂತು ಪ್ರಭುದೇವರು ಸಿದ್ಧರಾಮಯ್ಯ ದೇವರಿಗೆ ಕಲ್ಯಾಣಪುರದ ಮಹಾತ್ಮೆಯಂ ಹೇಳಿ ಕೊಂಡಾಡುತಿರ್ಪ ತತ್ಕಾಲೋಚಿತದೊಳು ಆ ಪುರದ ದ್ವಾರವಟ್ಟದ ಮುಂದೆ ಶಾಸನದೊಳು ಕಲ್ಯಾಣದ ಮಹಾತ್ಮೆಯನು ಚನ್ನಬಸವರಾಜ ದೇವರು ವಿವರವಾಗಿ ವಚನ ರೂಪಕವಾಗಿ ಬರೆದಿರಲು, ಅದಂ ಪ್ರಭುದೇವರು ಕಂಡು ಓದಿ ನೋಡಿದ ಪ್ರಸ್ಥಾವದ ವಚನ.

ಸ್ವಸ್ತಿ ಸಮಸ್ತ ಪ್ರಶಸ್ತ ಸಹಿತ ಶ್ರೀಮತ್ಕಲ್ಯಾಣಪುರದ ಮಹಾತ್ಮೆ ಎಂತೆಂದೊಡೆ, ವಿಸ್ತರಿಸಿ ಪೇಳುವೆನು ಎಲ್ಲ ಶಿವಗಣಂಗಳು ಕೇಳಿ ಕೃತಾರ್ಥರಾಗಿರಯ್ಯ. ಹದಿನಾಲ್ಕು ಭುವನಕ್ಕೆ ಕಲಶವೆಂದೆನಿಸುವ ರುದ್ರಲೋಕವ ಮರ್ತ್ಯಲೋಕಕ್ಕೆ ತಂದು, ಕಲ್ಯಾಣವೆಂಬ ಪುರವಾಗಿ ಹುಟ್ಟಿತ್ತು ನೋಡಿರಯ್ಯ! ಅಲ್ಲಿ ಸತ್ಯರು, ಸಾತ್ವಿಕರು, ನಿತ್ಯರು, ನಿಜೈಕ್ಯರು, ಮಹಾಜ್ಞಾನಿಗಳು, ಪರಮ ಶಿವಯೋಗಿಗಳು, ಶಿವಾನುಭಾವಸಂಪನ್ನರು, ಶಿವಲಿಂಗಪ್ರಾಣಿಗಳು, ಶಿವಪ್ರಸಾದ ಪಾದೋದಕ ಸಂಬಂಧಿಗಳು, ಶಿವಾಚಾರ ವೇದ್ಯರು, ಶಿವಾಗಮಸಾಧ್ಯರು, ಶಿವಸಮಯ ಪಕ್ಷರುಗಳಲ್ಲದೆ ಮತ್ತಾರು ಅಲ್ಲಿಲ್ಲ

ನೋಡಿರಯ್ಯಾ. ಪಾಪಿಗಳು, ಕೋಪಿಗಳು, ಅಸತ್ಯರು, ಅನಾಚಾರಿಗಳು ಹೋಗಬಾರದು ಕಲ್ಯಾಣವ. ಮಿಾರಿ ಹೊಕ್ಕೆಹೆನೆಂಬವರಿಗೆ ಬಾಳಬಾಯಿಧಾರೆ ನೋಡಯ್ಯ. ಆ ಮಹಾಕಲ್ಯಾಣದ ವಿಸ್ತಾರ ತಾನೆಂತೆಂದೊಡೆ, ಹನ್ನೆರಡು ಯೋಜನ ಪರಿ ಪ್ರಮಾಣದ ವಿಸ್ತೀರ್ಣ ಪಟ್ಟಣಕ್ಕೆ ಮುನ್ನೂರರುವತ್ತು ಬಾಗಿಲುವಾಡ, ಆ ಬಾಗಿಲಿಂಗೆ ನೂರುಐವತ್ತೈದು ವಜ್ರದ ಹಾರೆಯ ಕದಂಗಳು, ಇನ್ನೂರಿಪ್ಪತ್ತೈದು ಕಲುಗೆಲಸದ ದ್ವಾರವಟ್ಟಕ್ಕೆ ನಾನೂರುಐವತ್ತು ಸುವರ್ಣದ ಕೆಲಸದ ಕದಂಗಳು, ಅಲ್ಲಿ ನೂರುಹದಿನೈದು ಚೋರಗಂಡಿ, ಅದಕ್ಕೆ ನೂರುಹದಿನೈದು ಮೊಳೆಯ ಕಂದಗಳು, ಇಪ್ಪತ್ತು ಬಾಗಿಲು, ಆವಾರಿಯಾಗಿಪ್ಪವಾಗಿ, ಅದಕ್ಕೆ ಕದಂಗಳಿಲ್ಲ. ಆ ಪಟ್ಟಣಕ್ಕೆ ಬಳಸಿ ಬಂದ ಕೋಟೆ ನಾಲ್ವತ್ತೆಂಟು ಯೋಜನ ಪರಿ ಪ್ರಮಾಣು, ಬಾಹತ್ತರಮನೆ ಲಕ್ಷ, ಮಾಂಡಲಿಕರ ಮನೆ ಲಕ್ಷ, ಸಾವಂತರ ಮನೆ ಲಕ್ಷ, ರಾಯ ರಾವುತರ ಮನೆಯೊಳಗಡಗಿಹ ಮನೆಗಳಿಗೆ ಲೆಕ್ಕವಿಲ್ಲ. ದ್ವಾದಶ ಯೋಜನ ವಿಸ್ತೀರ್ಣ ಸೂರ್ಯವೀಧಿ ನೂರಿಪ್ಪತ್ತು. ದ್ವಾದಶ ಯೋಜನ ಸೋಮವೀಧಿ ನೂರಿಪ್ಪತ್ತೈದು. ಅದಕ್ಕಿಮ್ಮಿಗಲಾದ ಒಳಕೇರಿ ಹೊರಕೇರಿಗೆ ಗಣನೆ ಇಲ್ಲ. ಆ ಪಟ್ಟಣದೊಳಗೆ ಲಕ್ಷದ ಮೇಲೆ ತೊಂಭತ್ತಾರು ಸಾವಿರ ಶಿವಾಲಯ. ಆ ಶಿವಾಲಯಂಗಳಿಗೆ ಮುಖ್ಯವಾದ ತ್ರಿಪುರಾಂತಕ ದೇವರ ಶಿವಾಲಯ. ಮುನ್ನೂರರುವತ್ತು ಪದ್ಮಪತ್ರ ತೀವಿದ ಸರೋವರಂಗಳು ಎರಡು ಲಕ್ಷವು. ಎಂಭತ್ತೈದು ಸಾವಿರದ ಏಳನೂರೆಪ್ಪತ್ತು ದಾಸೋಹದ ಮಠಗಳು. ಆ ದಾಸೋಹದ ಮಠಂಗಳಿಗೆ ಮುಖ್ಯವಾದ ಬಸವರಾಜ ದೇವರ ಮಠದ ವಿಸ್ತೀರ್ಣ ಎಂತೆಂದೊಡೆ, ಯೋಜನವರೆಯ ಬಿನ್ನಾಣದ ಕಲುಗೆಲಸದ ಪೌಳಿ, ಅತಿಸೂಕ್ಷ್ಮದ ಕುಸುರಿಗೆಲಸದ ದ್ವಾರವಟ್ಟವೈದು, ಪಂಚಾಕ್ಷರದ ಶಾಸನ ಮಿಸುನಿಯ ಕಂಭದ ತೋರಣಂಗಳಲ್ಲಿ ರುದ್ರಾಕ್ಷಿಯ ಸೂಸಕ, ಆ ಬಾಗಿಲುವಾಡದಲ್ಲಿ ಒಪ್ಪುತಿಪ್ಪವಯ್ಯ. ನಂದಿಯ ಕಂಭದ ಸುವರ್ಣದುಪ್ಪರಿಗೆ ಧ್ವಜ, ಉಪ್ಪರಗುಡಿ ಪತಾಕೆ, ವ್ಯಾಸನ ಧ್ವಜ ಒಪ್ಪುತಿಪ್ಪವಯ್ಯ! ಅದರ ಮಧ್ಯದಲ್ಲಿ ಬಸವರಾಜ ದೇವರ ಸಿಂಹಾಸನದ ವಿಸ್ತೀರ್ಣದ ಪ್ರಮಾಣು, ಸಹಸ್ರ ಕಂಭದ ಸುವರ್ಣದುಪ್ಪರಿಗೆ, ಆ ಮನೆಗೆತ್ತಿದ ಹೊನ್ನಕಲಶ ಸಾವಿರ, ಗುರಲಿಂಗಜಂಗಮಕೆ ಪಾದಾರ್ಚನೆಯ ಮಾಡುವ ಹೊಕ್ಕರಣೆ, ನಾಲ್ಕು ಪುರುಷ ಪ್ರಮಾಣದ ಘಾತ, ಅಲ್ಲಿ ತುಂಬಿದ ಪಾದೋದಕದ ತುಂಬನುಚ್ಚಲು, ಬೆಳೆವ ರಾಜಸಾಲೆಯ ಗದ್ದೆ

ಹನ್ನೆರಡು ಖಂಡಗ, ಆ ಯೋಜನವರೆಯ ಬಿನ್ನಾಣದ ಅರಮನೆಯ ವಿಸ್ತೀರ್ಣದೊಳಗೆ ಲಿಂಗಾರ್ಚನೆಯ ಮಾಡುವ ಮಠದ ಕಟ್ಟಳೆ ಲಕ್ಷದ ಮೇಲೆ ತೊಂಭತ್ತಾರು ಸಾವಿರ, ಇಂತೀ ಬಸವರಾಜ ದೇವರು ಮುಖ್ಯವಾದ ಅಸಂಖ್ಯಾತರ ಮಠಗಳು, ಆ ಕಲ್ಯಾಣದೊಳಗೆ ಎಷ್ಟು ಎಂದರೆ, ಹನ್ನೆರಡು ಸಾವಿರ ಕಟ್ಟಳೆಯ ನೇಮದ ಭಕ್ತರ ಮಠಂಗಳು, ಇ(ಎ?)ಪ್ಪತ್ತೆಂಟು ಸಾವಿರ ಮಹಾಮನೆಗಳು, ಆ ಕಲ್ಯಾಣದೊಳಗೆ ಹತ್ತುಸಾವಿರ ನಿತ್ಯ ನೇಮಿಗಳ ಮಠಂಗಳು, ಹದಿನೈದು ಸಾವಿರ ಚಿಲುಮೆಯ ಅಗ್ಗವಣೆಯ ವ್ರತಸ್ತರ ಮಠಂಗಳು, ಐದುಸಾವಿರ ವ್ರತನೇಮಿಗಳ ಕಟ್ಟಳೆಯ ಮಠಂಗಳು, ಹನ್ನೆರಡು ಸಾವಿರ ಅಚ್ಚಪ್ರಸಾದಿಗಳ ಮಠಂಗಳು ಒಂದು ಸಾವಿರ. ಅರವತ್ತುನಾಲ್ಕು ಶೀಲಸಂಪನ್ನರ ಮಠಂಗಳು ಒಂದುಸಾವಿರ. ಜಂಗಮಕ್ಕೆ ಆರೋಗಣೆಯ ಮಾಡಿಸುವ ದಾಸೋಹಿಗಳ ಮಠಂಗಳು ಮೂವತ್ತೆರಡು ಸಾವಿರ. ನಿತ್ಯ ಐನೂರು ಜಂಗಮಕ್ಕೆ ಒಲಿದು ದಾಸೋಹವ ಮಾಡುವ ಸದಾಚಾರಿಗಳ ಮಠಂಗಳು ಐವತ್ತೆಂಟು ಸಾವಿರ. ನಿತ್ಯ ಸಾವಿರದ ನೂರು ಜಂಗಮಕ್ಕೆ ಒಲಿದು ದಾಸೋಹವ ಮಾಡುವ ದಾಸೋಹಿಗಳ ಮಠಂಗಳು ಹನ್ನೊಂದು ಸಾವಿರ. ನಿತ್ಯ ಆವಾರಿಯಿಂದ ಮಾಡುವ ಮಾಟ ಕೂಟದ ಸದ್ಭಕ್ತರ ಮಠಂಗಳು ಒಂದು ಲಕ್ಷ. ಜಂಗಮ ಸಹಿತ ಸಮಯಾಚಾರದಿಂದ ಲಿಂಗಾರ್ಚನೆಯ ಮಾಡುವ ಜಂಗಮ ಭಕ್ತರ ಮಠ ಎರಡು ಸಾವಿರದ ಏಳನೂರೆಪ್ಪತ್ತು. ಅಂತು ಎರಡು ಲಕ್ಷವು ಎಂಬತ್ತೈದು ಸಾವಿರದ ಎಳುನೂರೆಪ್ಪತ್ತು ಅಸಂಖ್ಯಾತರಿಗೆ ಮುಖ್ಯವಾಗಿ ರುದ್ರಲೋಕದಿಂದಿಳಿತಂದ ಪ್ರಮಥ ಗಣಂಗಳ ಮಠಂಗಳು ಏಳುನೂರೆಪ್ಪತ್ತು. ಇಂತೀ ಮಹಾಪ್ರಮಥರಿಗೆ ಪುರಾತರಿಗೆ ಅಸಂಖ್ಯಾತ ಮಹಾಗಣಂಗಳಿಗೆ ಪ್ರಮಥ ನಾಯಕನಾಗಿ, ಏಕಮುಖ, ದಶಮುಖ, ಶತಮುಖ, ಸಹಸ್ರಮುಖ, ಲಕ್ಷಮುಖ, ಕೋಟಿಮುಖ, ಅನಂತ ಕೋಟಿಮುಖವಾಗಿ, ಭಕ್ತರಿಗೆ ಒಡನಾಡಿಯಾಗಿಪ್ಪನು ಸಂಗನಬಸವಣ್ಣನು ಜಗದಾರಾಧ್ಯ ಬಸವಣ್ಣನು, ಪ್ರಮಥ ಗುರು ಬಸವಣ್ಣನು, ಶರಣ ಸನ್ನಿಹಿತ ಬಸವಣ್ಣ, ಸತ್ಯಸಾತ್ವಿಕ ಬಸವಣ್ಣ, ನಿತ್ಯನಿಜೈಕ್ಯ ಬಸವಣ್ಣ, ಷಡುಸ್ಥಲಸಂಪನ್ನ ಬಸವಣ್ಣ, ಸರ್ವಾಚಾರಸಂಪನ್ನ ಬಸವಣ್ಣ, ಸರ್ವಾಂಗ ಲಿಂಗಿ ಬಸವಣ್ಣ, ಸುಜ್ಞಾನ ಭರಿತ ಬಸವಣ್ಣ, ನಿತ್ಯಪ್ರಸಾದಿ ಬಸವಣ್ಣ, ಸಚ್ಚಿದಾನಂದ ಮೂರ್ತಿ ಬಸವಣ್ಣ, ಸದ್ಯೋನ್ಮುಕ್ತಿ ರೂಪು ಬಸವಣ್ಣ, ಅಖಂಡ ಪರಿಪೂರ್ಣ ಬಸವಣ್ಣ, ಅಕಾಯ ಚಾರಿತ್ರ ಬಸವಣ್ಣ, ಅಸಾಧ್ಯ ಸಾಧನ

ಬರವಣ್ಣ, ಅಭೇದ್ಯ ಭೇದಕ ಬಸವಣ್ಣ, ಅನಾಮಯ ಮೂರ್ತಿ ಬಸವಣ್ಣ, ಮಹಾಮನೆಯ ಮಾಡಿದಾತ ಬಸವಣ್ಣ, ರುದ್ರಲೋಕವ ಮರ್ತ್ಯಲೋಕಕ್ಕೆ ತಂದಾತ ಬಸವಣ್ಣ, ಶಿವಾಚಾರದ ಘನವ ಮೆರೆದಾತ ಬಸವಣ್ಣ, ಇಂತಹ ಬಸವಣ್ಣನ ಭಕ್ತಿಯನು ಒರೆದೊರೆದು ನೋಡಿ, ಪ್ರಬಲಿತವ ಮಾಡುವ ಅಶ್ವಪತಿ ಜಗಪತಿ ನರಪತಿರಾಯ ರಾಜಾಧಿರಾಜ ಬಿಜ್ಜಳರಾಯನು, ಆ ಬಸವಣ್ಣನು ಆ ಕಲ್ಯಾಣ ಪಟ್ಟಣದೊಳಗೆ ಸುಖಸಂಕಥಾ ವಿನೋದದಿಂದ ರಾಜ್ಯಂಗೈವುತ್ತಿರಲು, ಆ ಕಲ್ಯಾಣದ ನಾಮವಪಿಡಿದು, ವಿವಾಹಕ್ಕೆ ಕಲ್ಯಾಣವೆಂಬ ನಾಮವಾಯಿತ್ತು. ಲೋಕದೊಳಗೆ ಕಲ್ಯಾಣವೇ ಕೈಲಾಸವೆನಿಸಿತ್ತು. ಇಂತಪ್ಪ ಕಲ್ಯಾಣದ ದರುಶನವ ಮಾಡಿದರೆ, ಭವಂ ನಾಸ್ತಿ. ಇಂತಪ್ಪ ಕಲ್ಯಾಣವ ನೆನೆದರೆ ಪಾಪಕ್ಷಯ. ಇಂತಪ್ಪ ಕಲ್ಯಾಣದ ಮಹತ್ವವ ಕೇಳಿದರೆ ಕರ್ಮಕ್ಷಯವಹುದು. ಮೋಕ್ಷ ಸಾಧ್ಯವಹುದು. ಇದು ಕಾರಣ ಕೂಡಲ ಚನ್ನಸಂಗಮದೇವ ನಿಮ್ಮ ಭಕ್ತ ಬಸವಣ್ಣನಿದ್ದ ಠಾವೆ ಮಹಾ ಕಲ್ಯಾಣವೆಂದರಿದು ದಿವ್ಯಶಾಸನವ ಬರೆದು ಪಠಿಸಿದ ಕಾರಣ ಎನ್ನ ಭವಂ ನಾಸ್ತಿಯಾಯಿತ್ತಯ್ಯ. ॥೩೫॥

ಇಂತು ಪ್ರಭುದೇವರು ಕಲ್ಯಾಣಪುರದ ದ್ವಾರವಟ್ಟದ ಮುಂದಣ ಶಾಸನಮಂ ಓದಿ ನೋಡಿ ಪರಮ ಹರುಷಿತರಾಗಿ, ಬಸವರಾಜ ದೇವರ ಮಹಾತ್ಮೆಯನು ಸ್ತೋತ್ರಮಂ ಮಾಡುತ್ತ ಸಿದ್ಧರಾಮಯ್ಯ ತಂದೆಗಳೊಡನೆ ನಿರೂಪಿಸುತ್ತಿರ್ದ ಪ್ರಸ್ಥಾವದ ವಚನ.॥

ಆದಿ ಆಧಾರವಿಲ್ಲದ ಆಗಮ ನಾಸ್ತಿಯಾಗಿಪ್ಪ ಸಾಗರ ವಿರಹಿತನನಾರು ಅರಿಯರಲ್ಲ. ದಶಮುಖದ ಮಾಣಿಕದ ಎಸಳು ಕಂಗಳು ಪರ್ಬಿಪಸರಿಸಿದುದನಾರು ಅರಿಯರಲ್ಲ. ಹಿರಿದೊಂದು ವೃಕ್ಷವು ಅತಿಶಯದ ರೂಪಾಗಿ ಪೃಥ್ವಿಗಿಂಬಾಗಿರ್ದುದನಾರು ಅರಿಯರಲ್ಲ. ಅಂತರಂಗದ ಭುವನವ ಮೆಟ್ಟಿ ನೋಡುತ್ತ ಬೆಡಗಿನ ತಾವರೆಯ ಮಧ್ಯದ ತಾರಕಿಯನಾರು ಅರಿಯರಲ್ಲ. ಇನಶಶಿಗಳಿಬ್ಬರು ನಯನ ನೋಟದ ಪುಷ್ಪ ಪರಿಮಳವಾಗಿರ್ದುದನಾರು ಆರಿಯರಲ್ಲ. ಇಂಬು ನಯನದಲ್ಲಿ ಸಂಭ್ರಮವಿಲ್ಲದ ರೂಪು ಮಹತ್ವಾಗಿರ್ದುದನಾರು ಅರಿಯರಲ್ಲ. ಸಾಗರದೊಳಗಣ ಜ್ಯೋತಿಯಂತೆ ಗುಹೇಶ್ವರ ಲಿಂಗದೊಳಗೆ ಎನ್ನ ಪರಮಾರಾಧ್ಯರು ಸಂಗನ ಬಸವಣ್ಣನು ನಿಂದ ನಿಲವನುಪಮಿಸಬಾರದು ಕಾಣಾ ಸಿದ್ಧರಾಮಯ್ಯ. ॥೩೬॥

ಇಂತೀ ಪ್ರಭುದೇವರು ಸಿದ್ಧರಾಮಯ್ಯ ದೇವರೊಡನೆ ಬಸವರಾಜ ದೇವರ ಮಹಾತ್ಮೆಯಂ ಕೊಂಡಾಡಿ ಹೇಳುತ್ತಿರಲು, ಆ ಸಿದ್ಧರಾಮಯ್ಯ ದೇವರು ಪ್ರಭುದೇವರೊಡನೆ ಬಸವರಾಜ ದೇವರ ಮಹಾತ್ಮೆಯಂ ಕೊಂಡಾಡಿ ಹೇಳುತ್ತಿರ್ದ ಪ್ರಸ್ಥಾವದ ವಚನ. ॥

ಯತ್ರ ಯತ್ರ ಮಹೇಶ್ವರರಿರ್ದ ಗ್ರಾಮ ತತ್ರ ತತ್ರ ಶಿವಲೋಕ ನೋಡಾ ಎಲೆ ಅಯ್ಯ. ಸತ್ಯ ವಚನವು ತಪ್ಪುವದೆ ಎಲೆ ಅಯ್ಯ? ಕಪಿಲ ಸಿದ್ಧಮಲ್ಲಿನಾಥ ನಿಮ್ಮ ಶರಣರು ಮೆಟ್ಟಿ ನಿಂದ ಧರೆ ಪಾವನವೆಂಬುದು ಇಂದೆನಗೆ ಅರಿಯ ಬಂದಿತ್ತೈಯ್ಯ. ॥೩೬॥

ಮತ್ತಂ, ಜಲದಲುದಯಿಸಿ ಮತ್ತೆ ಜಲವು ತಾನಲ್ಲ. ಜಲವೆಂದಿಪ್ಪರು ಲೋಕದವರು. ಪರಮಗುರು ಬಸವಣ್ಣ ಜಗವ ಪಾಲಿಸ ಬರಲು, ಎನ್ನ ಪರಿಭವದ ದಂದುಗ ಹರಿಯಿತ್ತೈಯ್ಯ. ಆ ಸುದ್ದಿಯನರಿಯದೆ, ಬೇಕಾದ ಪರಿಯಲ್ಲಿ ಅನೇಕ ಜಡರೆಲ್ಲರು ನುಡಿವುತ್ತಿಹರು. ಸತ್ತ ಪ್ರಾಣವನೆತ್ತಿ ಒಪ್ಪಿಪ್ಪ ನಿಶ್ಚಯವು ಮರ್ತ್ಯದವರಿಗುಂಟೆ ಶಿವಂಗಲ್ಲದೆ? ಶಿವ ಗುರು ಬಸವಣ್ಣ, ಬಸವ ಗುರು ಶಿವನಾಗಿ ದೆಸೆಗೆಟ್ಟ ದೇವತಾಪಶುಗಳಿಗೆ ಪತಿಯಾದನು. ಬಸವಣ್ಣನ ನೆನಹು ಸುಖ ಸಮುದ್ರವಯ್ಯ ಕಪಿಲ ಸಿದ್ಧಮಲ್ಲಿನಾಥ ಬಸವಣ್ಣನ ತೋರಿದಿರಾಗಿ ನಾನು ಬದುಕಿದೆನು. ॥೩೭॥

ಇಂತು ಸಿದ್ಧರಾಮಯ್ಯ ದೇವರು ಬಸವರಾಜ ದೇವರ ಮಹಾತ್ಮೆಯಂ ಕೊಂಡಾಡುತ್ತ ಬರುತ್ತಿರಲು, ಆ ಬಸವರಾಜ ದೇವರ ದ್ವಾರವಟ್ಟದ ಮುಂದೆ ನಿಂದಲ್ಲಿ ಪ್ರಭುದೇವರು ಆ ಬಸವರಾಜ ದೇವರ ಮಠವ ಕೊಂಡಾಡುವ ಪ್ರಸ್ಥಾವನ ವಚನ. ॥

ಕರ್ಮವಿಲ್ಲದ ಕಾಯ, ಕರಣವಿಲ್ಲದ ಪ್ರಾಣ, ಮಥನವಿಲ್ಲದ ಶಬ್ದ, ಗಮನವಿಲ್ಲದ ಮನ, ಗುಹೇಶ್ವರನ ಬರವು ಸಂಗನಬಸವಣ್ಣನ ಅಂಗಳವ ಕಂಡಲ್ಲಿ ತರಹರವಾಯಿತ್ತು ಕಾಣಾ ಸಿದ್ಧರಾಮಯ್ಯ. ॥೩೮॥

ಮತ್ತಂ, ಉಪಪಾತಕ ಮಹಾಪಾತಕಂಗಳ ಮಾಡಿದ ಕರ್ಮಂಗಳು ಕೋಟಾನು ಕೋಟಿ ಒಬ್ಬ ಶಿವಭಕ್ತನ ಅಂಗಳವ ಕಂಡಲ್ಲಿ ಅಳಿದು ಹೋಹುದು ನೋಡಾ! ಅದೇನು ಕಾರಣವೆಂದಡೆ, ಆ ಶರಣನ ಅಂತರಂಗದಲ್ಲಿ ಶಿವನಿಪ್ಪನು. ಆ ಶಿವನಿದ್ದಲ್ಲಿ ಕೈಲಾಸವಿಪ್ಪುದು. ಆ ಕೈಲಾಸವಿದ್ದಲ್ಲಿ ಮಹಾ ರುದ್ರಗಣಂಗಳಿಪ್ಪರು. ಅಲ್ಲಿ ಅಷ್ಟಾಷಷ್ಟಿ ತೀರ್ಥಂಗಳು ನೆಲಸಿ

ಪ್ಪವು. ಇಂತಪ್ಪ ಶರಣ ಸಂಗನಬಸವಣ್ಣನ ಅಂಗಳವ ಕಂಡೆನಾಗಿ ಗುಹೇ ಶ್ವರ ಲಿಂಗಕ್ಕೆ ಕಂಗಳ ತೃಪ್ತಿಯಾಯಿತ್ತು ಕಾಣಾ ಸಿದ್ಧರಾಮಯ್ಯ. ॥೩೯॥

ಹೀಗೆಂದು ಪ್ರಭುದೇವರು ಬಸವರಾಜ ದೇವರ ಮಠವಂ ಕೊಂಡಾಡಿ ಸಿದ್ಧರಾಮಯ್ಯ ದೇವರಿಗೆ ಹೇಳಿ ತೋರುತ್ತಿರಲು, ಆ ಸಿದ್ಧರಾಮಯ್ಯ ದೇವರು ಬಸವರಾಜ ದೇವರ ಗೃಹವಂ ಕೊಂಡಾಡಿ ಪ್ರಭುದೇವರಿಗೆ ಬಿನ್ನೈಸುವ ಪ್ರಸ್ಥಾವದ ವಚನ. ॥

ನಿಶ್ಚಲ ಶರಣನ ಮನೆಯ ಅಂಗಳದಲ್ಲಿ ಅಷ್ಟಾಷಷ್ಟಿ ತೀರ್ಥಂಗಳು ನೆಲಸಿರ್ಪವಯ್ಯ! ನೀನು ಇನಿಸುವೆರಸಿ ಒಲಿದಲ್ಲಿ ನೆಲಸಿಪ್ಪವಯ್ಯ ಕಪಿಲ ಸಿದ್ಧಮಲ್ಲಿನಾಥಯ್ಯ. ॥೪೦॥

ಇಂತು ಸಿದ್ಧರಾಮಯ್ಯ ದೇವರು ಬಸವರಾಜ ದೇವರ ಅಂಗಳವೇ ಅವಿಮುಕ್ತ ಕ್ಷೇತ್ರವೆಂದು ಕೊಂಡಾಡುತ್ತಿರಲು, ಆ ಬಸವರಾಜ ದೇವರ ಮಠದಲ್ಲಿ ಶಿವಗಣಂಗಳ ತಿಂಥಿಣಿಯಾದುದಂ ಕಂಡು, ಪ್ರಭುದೇವರು ಸಿದ್ಧ ರಾಮಯ್ಯ ದೇವರಿಗೆ ತೋರಿಸಿ ಕೊಂಡಾಡಿ ಹೇಳುವ ಪ್ರಸ್ಥಾವದ ವಚನ.

ಮರ್ತ್ಯಲೋಕದ ಮಹಾಮನೆ ಹಾಳಾಗಿ ಹೋಗಬಾರದೆಂದು ಕರ್ತ ನಟ್ಟಿದನಯ್ಯ ಒಬ್ಬ ಶಿವಶರಣನ. ಆ ಶರಣ ಬಂದು ಕಲ್ಯಾಣವೆಂಬ ಶಿವ ಪುರವ ಕೈಲಾಸವ ಮಾಡಿ, ರುದ್ರಗಣ ಪ್ರಮಥ ಗಣಂಗಳೆಲ್ಲರ ಹಿಡಿತಂದು, ಅಸಂಖ್ಯಾತರೆಂದು ಹೆಸರಿಟ್ಟು ಕರೆದು ಭಕ್ತಿಯ ಕುಳಸ್ಥಳವ ಶ್ರುತ ದೃಷ್ಟ ಪವಾತದಿಂ ಮೆರೆದು ತೋರಿ, ಜಗವರಿಯಲು ಶಿವಾಚಾರದ ಧ್ವಜವನೆತ್ತಿಸಿ ಮರ್ತ್ಯಲೋಕ ಶಿವಲೋಕವೆರಡಕ್ಕೆ ನಿಚ್ಚಣಿಕೆಯಾದನು. ಶಿವಶರಣರ ಮನೆಯೊಳಗಿಪ್ಪ ಶಿವಗಣಂಗಳ ತಿಂಥಿಣಿಯುಂ ಕಂಡು, ಎನ್ನ ಮನವು ಉಬ್ಬಿ ಕೊಬ್ಬಿ ಓಲಾಡುತ್ತಿರ್ದೆನಯ್ಯ. ನಮ್ಮ ಗುಹೇಶ್ವರನ ಶರಣ ಸಂಗನ ಬಸವಣ್ಣನ ದಾಸೋಹದ ಘನವನೇನೆಂದೆನ್ನಬಹುದು ನೋಡಾ, ಸಿದ್ಧರಾ ಮಯ್ಯ. ॥೪೧॥

ಇಂತು ಪ್ರಭುದೇವರು ಬಸವರಾಜ ದೇವರ ಗೃಹದ ಗಣ ತಿಂಥಿ ಣಿಯುಂ ಕಂಡು, ಹೃದಯ ಕಮಲವರಳುತ್ತ ಪರಮಾನಂದ ರಸವೊಳ್ಮು ಳುಂಗಿ ತೇಂಕಾಡುತ್ತ ಸಿದ್ಧರಾಮಯ್ಯ ದೇವರೊಡನೆ ಪ್ರಭುದೇವರು ಮರಳಿ ಆ ಬಸವರಾಜ ದೇವರ ಗೃಹವಂ ಕೊಂಡಾಡಿದ ಪ್ರಸ್ಥಾವದ ವಚನ. ॥

ಆದಿಯ ಲಿಂಗವ ಮೇದಿನಿಗೆ ತಂದು ಮರ್ತ್ಯಲೋಕದಲ್ಲಿ ಮಹ ಮನೆಯ ಮಾಡಿ ಕಟ್ಟಿದನಯ್ಯ ಸಂಗನಬಸವಣ್ಣನು. ಆ ಮನೆಯ ನೋಡಲೆಂದು ಹೋದರೆ ಆ ಮನೆಯು ಹೊಗದ ಮುನ್ನವೆ ಎನ್ನ ನುಂಗಿತ್ತಯ್ಯ. ಅದಕ್ಕೆ ಕಂಭ ಒಂದು, ತೊಲೆ ಆರು, ಜಂತೆವಲಗೆ ಮೂವತ್ತಾರು, ಧರೆ ಆಕಾಶ ಹೊದ್ದದ ಕೆಸರುಗಲ್ಲು ಒಂಭತ್ತುಬಾಗಿಲ ಬಿಯ್ಯಗವಿಕ್ಕಿಹವು. ಬೇರೊಂದು ಬಾಗಿಲು ಉರಿಯನುಗುಳುತ್ತಿಹುದು. ಮುತ್ತಿನ ಕಂಭದ ಮೇಲುಕಟ್ಟಿನ ಮೇಲೆ ಮಾಣಿಕ್ಯದ ಶಿಖರ, ಆ ಶಿಖರದ ತುದಿಯಲ್ಲಿ ಹೊಂಗಳಸವಿಪ್ಪುದು. ಅದು ಕಾಬರಿಗೆ ಕಾಣಬಾರದು. ಕಾಣಬಾರದವರಿಗೆ ಕಾಣಬಪ್ಪುದು. ಅಲ್ಲಿ ಹತ್ತುಮಂದಿ ಪರಿಚಾರಕರು ಎಡೆಯಾಡುತ್ತಿಪ್ಪರು. ಇಬ್ಬರು ದಡಿಕಾರರು ಬಾಗಿಲ ಕಾಯ್ದಿಪ್ಪರು. ಒಬ್ಬಳು ಎಡೆಯಾಡುತ್ತಿಪ್ಪಳು. ಒಬ್ಬಳೆ ಲಿಂಗಾರ್ಚನೆಗೆ ನೀಡುತ್ತಿರ್ಪಳು. ಒಬ್ಬಳೆ ಷಡ್ವಿಧಾನಂಗಳೆಲ್ಲವ ಶೋಧಿಸಿ ತಂದುಕೊಡುತ್ತಿಪ್ಪಳು. ಒಬ್ಬಳೆ ಉರಿ ಇಲ್ಲದಗ್ನಿಯಲ್ಲಿ ಪಾಕವ ಮಾಡುತ್ತಿಪ್ಪಳು. ಒಬ್ಬಳೆ ಲಿಂಗಜಂಗಮಕ್ಕೆ ಮಾಡಿ ನೀಡಿ ಊಡಿಸಿ ತೃಪ್ತಿಯ ಮಾಡುತ್ತಿಪ್ಪಳು. ಒಂದಡ್ಡಣಿಗೆಯ ಮೇಲೆ ಐದು ಅಗಲೊಳಗೆ ಇಟ್ಟ ಬೋನವ ಒಬ್ಬನುಂಡಡೆ ಪ್ರಮಥಗಣಂಗಳೆಲ್ಲರು ಆತನ ಒಕ್ಕುದ ಕೊಳ್ಳಲೆಂದು ಬಂದು ಆ ಮನೆಯ ಪೊಕ್ಕು ನಿಶ್ಚಿಂತ ನಿವಾಸಿಗಳಾಗಿಪ್ಪರು. ಗುಹೇಶ್ವರ ಶರಣನ ಸಂಗನಬಸವಣ್ಣನ ಮಹಾಮನೆಯ ಕಂಡು ಧನ್ಯನಾದೆನು ಕಾಣಾ ಸಿದ್ಧರಾಮಯ್ಯ. ‖೪೨‖

ಇಂತು ಪ್ರಭುದೇವರು ಬಸವರಾಜ ದೇವರ ಗೃಹಮಂ ಕಂಡು ಕೊಂಡಾಡಿ ಸಿದ್ಧರಾಮಯ್ಯ ದೇವರೊಡನೆ ಹೇಳುತ್ತಿರಲು, ಆ ಸಿದ್ಧರಾಮಯ್ಯ ದೇವರು ಆ ಗೃಹವಂ ಕೊಂಡಾಡಿ ಪ್ರಭುದೇವರಿಗೆ ಬಿನ್ನಹಂ ಮಾಡುವ ಪ್ರಸ್ಥಾವದ ವಚನ.

ಅಯ್ಯ ನಿಮ್ಮ ಶರಣರಲ್ಲದವರ ಮನೆ ಕೆಮ್ಮನೆ ಕಂಡಯ್ಯ! ನಿಮ್ಮ ಶರಣರ ಮನೆಯ ನೆಲೆವನೆ ನೋಡಾ! ಎನಗೆ ಸಿರಿಯಾಳನ ಮನೆಗಟ್ಟಿ ಬೇರೂರಿಗೆ ಒಕ್ಕಲು ಹೋದ ದಾಸಿಮಯ್ಯನ ಮನೆಗಟ್ಟಿ ವ್ಯವಹಾರವನಾಡಿ ಹೋದ ಸಿಂಧುಬಲ್ಲಾಳನ ಮನೆಗಟ್ಟಿ ಕೈಕೂಲಿಗಾರನಾಗಿ ಹೋದ, ಗಂಗೆವಾಳುಕರ ಮನೆಗಟ್ಟಿ ಲಿಂಗದ ಹೊಲಬನರಿಯದೆ ಹೋದರು. ಇವರೆಲ್ಲರು ಮನೆಯ ಮಾಡಿ ಮಹವನರಿಯದೆ ಸಾಲೋಕ್ಯ ಸಾಮೀಪ್ಯ ಸಾರೂಪ್ಯ

ಸಾಯುಜ್ಯವೆಂಬ ಪದವಿಗೊಳಗಾದರು. ನಿಮ್ಮ ಸಂಗನಬಸವಣ್ಣ ಬಂದು ಕಲ್ಯಾಣದಲ್ಲಿ ಮನೆಯ ಕಟ್ಟಿದರೆ, ಮರ್ತ್ಯಲೋಕವೆಲ್ಲವು ಭಕ್ತಿಸಾಮ್ರಾಜ್ಯವಾಯಿತ್ತು. ಆ ಮನೆಗೆ ತಲೆವಾಗಿ ಹೊಕ್ಕವರೆಲ್ಲರು ನಿಜಲಿಂಗಪದಮಂ ಪಡೆದರು. ಆ ಗೃಹವ ನೋಡಬೇಕೆಂದು ನಾನು ಹಲಕಾಲ ತಪಸಿದ್ದೆನು. ಕಪಿಲ ಸಿದ್ಧಮಲ್ಲಿನಾಥ ನಿಮ್ಮ ಶರಣ ಸಂಗನಬಸವಣ್ಣನ ಮಹಮನೆಗೆ ನಮೋ ನಮೋ ಎಂದು ಬದುಕಿದೆನು. ॥೪೩॥

ಇಂತೀ ಶ್ರೀಮತ್ಸಕಲಗಣ ಪುರಾತನರೊಳ್ ಪ್ರಭುದೇವರು ಮಹಾನುಭಾವ ಸದ್ಗೋಷ್ಠಿಯಂ ಮಾಡಿದ ಶೂನ್ಯ ಸಂಪಾದನೆಯೊಳ್ ಬಸವರಾಜ ದೇವರು ಚನ್ನಬಸವರಾಜ ದೇವರಿಗೆ ಅನುಗ್ರಹವಂ ಮಾಡಿದುದು ಚತುರ್ಥೋಪದೇಶ ಸಮಾಪ್ತ.

# ಪ್ರಭುದೇವರು ಕಲ್ಯಾಣಕ್ಕೆ ಬಂದ ಸಂಪಾದನೆ.

## (ಪಂಚವೋಪದೇಶ.)

ಲಿಂಗಾರ್ಚನೆಯಿಂದೇಳದೆ। ಮಂಗಳಮಯ ಬಸವ ಚರರ ಕೇಳು ಹಲ್ಕಾ ಪ್ರಭು॥ ಲಿಂಗನದ ಜರಿದು, ಭಕ್ತಿಯ ಇಂಗಿತವಂ ಬೋಧಿಸಿದು ದನುಸುರುವೆನೊಲವಿಂ॥

ಅದೆಂತೆಂದೊಡೆ ಆ ಪ್ರಭುದೇವರು ಸಿದ್ಧರಾಮಯ್ಯದೇವರು ಬಸವರಾಜ ದೇವರ ಮಹಾತ್ಮೆಯಂ ಕೊಂಡಾಡುತ್ತ ದ್ವಾರವಟ್ಟದ ಮುಂದೆ ನಿಂದಿರಲು, ಆ ಪ್ರಸ್ಥಾವದೊಳು ಹಡಪದಪ್ಪಣ್ಣಗಳು ಕಂಡು, ಪರಮ ಹರುಷಿತರಾಗಿ ಹೋಗಿ ಬಸವರಾಜ ದೇವರು ಲಿಂಗಾರ್ಚನೆಯಂ ಮಾಡುವ ವೇಳೆಯಲ್ಲಿ ಬಿನ್ನಹಂ ಮಾಡುವ ಪ್ರಸ್ಥಾವದ ವಚನ.॥

ದೇವ ದೇವ ಮಹಾಪ್ರಸಾದಿ ಕಂಗಳಲ್ಲಿ ಕರುಳಿಲ್ಲ. ಕಾಯದಲ್ಲಿ ಹೊರೆ ಇಲ್ಲ. ನುಡಿಯಲ್ಲಿ ಕಡೆ ಇಲ್ಲ. ನಡೆಯಲ್ಲಿ ಗತಿ ಇಲ್ಲ. ಇದೆಂತಹ ಸುಳುಹೆಂದರಿಯೆ. ಇದೆಂತಹ ನಿಲವೆಂದು ತಿಳಿಯಬಾರದು. ಮರುಳಿಲ್ಲದ ಮರುಳು, ಅರಿವಿಲ್ಲದ ಅರಿವು ಬಸವಪ್ರಿಯ ಕೂಡಲ ಚೆನ್ನಸಂಗಯ್ಯನ ಬರವು ಕೌತುಕವಾಯಿತ್ತು ಚಿತ್ತೈಸಯ್ಯ ಸಂಗನಬಸವಣ್ಣಾ. ॥೧॥

ಇಂತು ಹಡಪದಪ್ಪಣ್ಣಗಳು ಬಸವರಾಜದೇವರಿಗೆ ಬಿನ್ನಹಂ ಮಾಡಲು ಆ ವೇಳೆಯಲ್ಲಿ ಶಿವಲಿಂಗಾರ್ಚನೆಯ ಪರಮ ಸುಖದೊಳೋಲಾಡುತ್ತ ಪರವಶರಾಗಿರ್ದು ಸುಜ್ಞಾನಮುಖದಿಂದ ವಿವೇಕಿಸಿ ನೋಡಿ ಲಿಂಗಾರ್ಚನೆಯ ಬಿಟ್ಟು. ಏಳಲೊಲ್ಲದೆ ಎನ್ನ ಕಾಯವೇ ಭಕ್ತ ಪ್ರಾಣವೇ ಜಂಗಮವಾದ ಬಳಿಕ ಅಲ್ಲಿ ಇಲ್ಲಿ ಎಂಬ ಭೇದವಿಲ್ಲೆಂದು ಏಕೀಭಾವಮಂ ಕೃತನಿಶ್ಚಯಮಂ ಮಾಡಿ, ಆ ಜಂಗಮವನೊಡಗೊಂಡು ಬನ್ನಿ ಎಂದು ಮರಳಿ ಹಡಪದಪ್ಪಣ್ಣಗಳಿಗೆ ನಿರೂಪಿಸಿ ಕಳುಹುವ ಪ್ರಸ್ಥಾವದ ವಚನ॥

ಕಾಯದ ಕೈಯ್ಯಲ್ಲಿ ಕರಸ್ಥಲ, ಪ್ರಾಣದ ಕೈಯ್ಯಲ್ಲಿ ಜಂಗಮಸ್ಥಲ, ಈ ಉಭಯ ಭಾವ ಶಿವಲಿಂಗಾರ್ಚನೆಯ ಪರಮಾನಂದ ಸುಖಸ್ಥಲ, ಕಾಯ ಭಕ್ತ ಪ್ರಾಣಜಂಗಮ ಆವುದು ಘನವೆಂಬೆ, ಆವುದು ಕಿರಿದೆಂಬೆ,

ಕೂಡಲ ಸಂಗನ ಶರಣರು ಬಂದರೆ ಉಪಚಾರಕ್ಕೆ ಇಂಬಿಲ್ಲ. ಕರುಣಾದಿಂದೆ ಬರಹೇಳಾ ಅಪ್ಪಣ್ಣಾ. ॥೨॥

ಹೀಗೆಂದು ಬಸವರಾಜ ದೇವರು ನಿರೂಪಿಸಿ ಹಡಪದಪ್ಪಣ್ಣಗಳ ಕರೆಯಲಟ್ಟಲು, ಆ ಅಪ್ಪಣ್ಣಗಳು ಬಂದು ಪ್ರಭುದೇವರ ಬಿಜಯ್ಯಂಗೆಯ್ಯೆಂದು, ಕರೆವ ಪ್ರಸ್ಥಾವದ ವಚನ.॥

ಮನ ಮನವೇಕಾರ್ಥವಾಗಿ, ಕಾಯಕ್ಕೆ ಕಾಯ ಸಂಬಂಧವಾಗಿ, ಪ್ರಾಣಕ್ಕೆ ಪ್ರಾಣ ಸಮದರುಶನವಾಗಿದ್ದವರಲ್ಲಿ ತೆರೆಮರೆ ಎಂಬುದಿಲ್ಲ ನೋಡಯ್ಯ! ಸಂಗ ನಿಸ್ಸಂಗವಾಗಿಪ್ಪವರಲ್ಲಿ ಉಪಚಾರಕ್ಕೆ ಇಂಬಿಲ್ಲ ನೋಡಯ್ಯ ಬಸವ ಪ್ರಿಯ ಕೂಡಲ ಚನ್ನಸಂಗಯ್ಯನ ಶರಣ ಬಸವಣ್ಣನಟ್ಟಿದನು. ಕೃಪೆ ಮಾಡು ಪ್ರಭುವೇ. ॥೩॥

ಹೀಗೆಂದು ಹಡಪದಪ್ಪಣ್ಣಗಳು ಬಿನ್ನಹಂ ಮಾಡಿ, ಬಿಜಯಂಗೈಯೆನಲು, ಆ ಪ್ರಭುದೇವರು ಅಟ್ಟಟ್ಟಿಕೆಯಲ್ಲಿ ಕರೆಯಲಟ್ಟಿದರೆಂದು ಮುನಿಸನೊಳಗಿಟ್ಟುಕೊಂಡು ನುಡಿವ ಪ್ರಸ್ಥಾವದ ವಚನ.॥

ಮನ ಮನ ಒಂದಾಗಿ ತನು ತನು ಒಂದಾಗಿ ಬೆರಸಿದ ಬಳಿಕ ಕರೆಯಲಿಲ್ಲ ಕಾಲುನಿಡಿಲಿಲ್ಲ ಎಂದರಿದವರು ಉಪಚರಿಸಿ ಬರಹೇಳಿದರೆ ಅದೆ ಕೊರತೆ ನೋಡಾ! ಅಂಗದ ಕೈಯ್ಯಲ್ಲಿ ಕ್ರಿ ಇರಲು, ಮಾತಿನ ಅದ್ವೈತವೆಂತಪ್ಪುದೊ? ಆನಾಗದ ಮುನ್ನವೆ ತಾನಾದೆನೆಂಬವರಲ್ಲಿಗೆ ನಮ್ಮ ಗುಹೇಶ್ವರ ಲಿಂಗವು ಅಡಿ ಇಡುವನಲ್ಲ. ॥೪॥

ಅಂಗದಲ್ಲಿ ಕ್ರಿ ಇರಲು, ಮತ್ತೆ ಮಾತಿನಲ್ಲಿ ಅದ್ವೈತವನಾಡುವ ಭೃತ್ಯಾಚಾರ ಹೀನರ ಮನೆಗೆ ಬಾರೆನೆಂದು ಪ್ರಭುದೇವರು ನಿರೂಪಿಸಲು, ಆ ಹಡಪದಪ್ಪಣ್ಣಗಳು ಮರಳಿ ಬಂದು ಬಸವರಾಜ ದೇವರಿಗೆ ಬಿನ್ನಹಂ ಮಾಡುವ ಪ್ರಸ್ಥಾವದ ವಚನ.

ಅಂಗದ ಕಳೆ ಲಿಂಗದಲ್ಲಿ ಲಿಯ್ಯವಾಗದು. ಲಿಂಗದ ಕಳೆ ಅಂಗದಲ್ಲಿ ಲಿಯ್ಯವಾಗದು. ಮಾತಿನ ಮಾಲೆಯ ಬೊಮ್ಮವೇತರದೊ? ಕಾಯ ಭಕ್ತನಾದರೆ ಭೃತ್ಯಾಚಾರ ವಿರಬೇಕು. ಪ್ರಾಣ ಜಂಗಮವಾದರೆ ಅರಿವಿರಬೇಕು. ಇಂತೀ ಭಕ್ತಿ ಜ್ಞಾನವುಳ್ಳವರಲ್ಲದೆ ಭಕ್ತರಲ್ಲ, ಶರಣರಲ್ಲ. ಹಿರಿಯರು ಬಂದರೆ ಇದಿರೆದ್ದು, ಬಾರದವರ ಮನೆಗೆ ಅಡಿವಿಡೆವೆಂದು

ಬಸವಪ್ರಿಯ ಕೂಡಲ ಚನ್ನ ಸಂಗನ ಶರಣರು ಕಾಡಿಹರು ಕೇಳಾ ಸಂಗನ ಬಸವಣ್ಣಾ. ॥೫॥

ಹೀಗೆಂದು ಅಪ್ಪಣ್ಣಗಳು ಬಿನ್ನೈಸಲು, ಬಸವರಾಜ ದೇವರು ಮರಳಿ ಕರೆಯ ಕಳುಹಿದ ಪ್ರಸ್ಥಾವದ ವಚನ. ॥

ಭಕ್ತನ ಕಾಯವ ಜಂಗಮ ಧರಿಸಿಪ್ಪ ನೋಡಾ! ಜಂಗಮದ ಪ್ರಾಣವ ಭಕ್ತ ಧರಿಸಿಪ್ಪ ನೋಡಾ! ಭಕ್ತನಲ್ಲಿಯು ಭಕ್ತಜಂಗಮವೆರಡು ಸನ್ನಿಹಿತ. ಜಂಗಮದಲ್ಲಿಯು ಜಂಗಮಭಕ್ತನೆಂಬೆರಡು ಸನ್ನಿಹಿತ. ಜಂಗಮಕ್ಕಾದರು ಭಕ್ತಿಯೇ ಬೇಕು. ಭಕ್ತಂಗೆ ಭಕ್ತಿಸ್ಥಲಬೇಕು. ಭಕ್ತನ ಅರ್ಥ ಪ್ರಾಣಾಭಿಮಾನಕ್ಕೆ ತಾನೆ ಕರ್ತನೆಂದು ಬಂದ ಜಂಗಮ ಆ ಭಕ್ತನ ಮನೆಗೆ ತಾನೆ ಕರ್ತನಾಗಿ ಹೊಕ್ಕು ತನು ಮನ ಧನಂಗಳನೆಲ್ಲವನೊಳಕೊಂಡು, ಆ ಭಕ್ತನ ಪಾವನವ ಮಾಡಬಲ್ಲರೆ ಆತ ಜಂಗಮನೆಂಬೆ. ಆ ಜಂಗಮದ ಗಳಗರ್ಜನೆಗೆ ಸೈರಿಸಿ ಮುಡುಹಿಂಗೆ ಮುನ್ನೂರ ಪಟ್ಟವ ಕಟ್ಟಿದರೆ ಆತ ಭಕ್ತನೆಂಬೆ. ತನ್ನ ಮಠಕ್ಕೆ ತಾ ಬಾಹರೆ ಮುನಿಸುಂಟೆ? ಕೂಡಲ ಸಂಗನ ಶರಣರ ಮನೆಯ ಬಾಗಿಲುಗಾಹಿ ನಾನಾಗಿರ್ದು ಕರ್ತರು ಗೃಹಕ್ಕೆ ಬಂದರೆ ಬೇಕು ಬೇಡೆನ್ನೆ. ॥೬॥

ಹೀಗೆಂದು ಬಸವರಾಜ ದೇವರು ಬಿನ್ನೈಸಲು, ಹಡಪದಪ್ಪಣ್ಣಗಳು ಪ್ರಭುದೇವರ ಕರೆವ ಪ್ರಸ್ಥಾವದ ವಚನ. ॥

ನಿಮ್ಮ ತನು, ನಿಮ್ಮ ಮನ, ನಿಮ್ಮ ಧನ, ನಿಮ್ಮದಲ್ಲದೆ ಅನ್ಯವೆಂದಣು ಮಾತ್ರವಿಲ್ಲ ನೋಡಯ್ಯಾ! ಭಕ್ತನ ಮಠವೆಂದು ಮುನ್ನವೆ ಅರಿದರಿದು ಬಂದು ಮತ್ತೊಂದ ನೆನೆವರೆ ಬಸವಪ್ರಿಯ ಕೂಡಲ ಚನ್ನಸಂಗಯ್ಯನ ಶರಣ ಬಸವಂಗೆ ಸ್ವತಂತ್ರ ಭಾವವುಳ್ಳಡೆ ನಿಮ್ಮ ಪಾದದಾಣೆ. ॥೭॥

ಹೀಗೆಂದು ಅಪ್ಪಣ್ಣಗಳು ಬಿನ್ನೈಸಲು, ಪ್ರಭುದೇವರು ನಿರೂಪಿಸಿದ ಪ್ರತ್ಯುತ್ತರ. ॥

ಭಕ್ತ ಜಂಗಮದ ಸಕೀಲ ಸಂಬಂಧವನಾರು ಬಲ್ಲರು ಹೇಳಾ! ಅರ್ಥವನೊಪ್ಪಿಸಿದಾತ ಭಕ್ತನಲ್ಲ. ಪ್ರಾಣವನೊಪ್ಪಿಸಿದಾತ ಭಕ್ತನಲ್ಲ. ಅಭಿಮಾನವನೊಪ್ಪಿಸಿದಾತ ಭಕ್ತನಲ್ಲ. ಅದೇನು ಕಾರಣವೆಂದರೆ, ಸತ್ಯ ಸದಾಚಾರಕ್ಕೆ ಸಲ್ಲನಾಗಿ. ಆ ಭಕ್ತನ ಮನೆಯ ಹೊಕ್ಕು ಪಾದಾರ್ಚ

ನೆಯ ಮಾಡಿಸಿಕೊಂಡು ಒಡಲಕಕ್ಕುಲಿತೆಗೆ ಅಶನವನುಂಡು ವ್ಯಸನದ ಕಕ್ಕುಲಿತೆಗೆ ಹಣವ ಬೇಡಿ, ಕೊಟ್ಟಡೆ ಕೊಂಡಾಡಿ, ಕೊಡದಿರ್ದಡೆ ದೂರಿ ಕೊಂಡು ಹೋಹಾತ ಜಂಗಮವಲ್ಲ. ಆದಿ ಅನಾದಿಯಿಂದತ್ತತ್ತ ಮುನ್ನ ಮಹಾ ಘನವ ಭೇದಿಸಿ ಕಂಡರಿದು, ಕಾಯದ ಜೀವದ ಹೊಲಿಗೆಯ ಬಿಚ್ಚಿ ಬಿಸಾಡಿ ತನ್ನನೆ ಅರ್ಪಿಸಿ ಇರಬಲ್ಲಾತ ಭಕ್ತ. ಸುಳುಹಿನ ಸೂತಕ ವ್ಯೆದೋರದೆ ಒಡಲ ಕಳವಳದ ರುಚಿಗೆ ಹಾರೈಸದೆ, ಅರಿವೆ ಅಂಗವಾಗಿ ಆಪ್ಯಾಯನವೆ ಭಕ್ತಿಯಾಗಿ ಕಿಂಕುರುವಾಣವೆಂಬ ಶಿವಮಂತ್ರಕ್ಕೆ ನಮೋ ನಮೋ ಎನಬಲ್ಲರೆ ಆತ ಜಂಗಮ. ಆ ಜಂಗಮದ ಆ ಭಕ್ತನ ಸಮ್ಮೇಳವೆ ಸಮ್ಮೇಳ. ಮಿಕ್ಕಿನ ಅರೆಭಕ್ತರೊಡೆತನ ಸಂಗ ನಮ್ಮ ಗುಹೇಶ್ವರ ಲಿಂಗಕ್ಕೆ ಸೊಗಸದು. ॥೮॥

ಹೀಗೆಂದು ಪ್ರಭುದೇವರು ನಿರೂಪಿಸಲು, ಅದಕ್ಕೆ ಹಡಪದಪ್ಪಣ್ಣ ಗಳು ಬಿನ್ನೈಸುವ ಪ್ರಸ್ಥಾವದ ವಚನ. ॥

ಲಿಂಗಜಂಗಮ ಜಂಗಮಲಿಂಗವೆಂಬುದನಾರು ಬಲ್ಲರಯ್ಯ? ಮರ್ತ್ಯ ಲೋಕ ಶಿವಲೋಕದಲ್ಲಿ ಬಸವಣ್ಣನಲ್ಲದೆ, ಲಿಂಗಕ್ಕಾಧಾರವಿಲ್ಲೆಂದು ಮರ್ತ್ಯ ಲೋಕದಲ್ಲಿ ಬಂದವತರಿಸಿದನಯ್ಯ ಬಸವಣ್ಣನು! ಜಂಗಮಮುಖ ಲಿಂಗ ವೆಂಬುದನರಿದು, ತನ್ನನರ್ಪಿಸಿ ಇದಿರ ತಪ್ಪಿಸಿ, ಇರಬಲ್ಲನಯ್ಯ ಬಸವ ಣ್ಣನು. ಅಂಗಮುಖವೆಲ್ಲ ನಷ್ಟವಾಗಿ, ಭೃತ್ಯಾಚಾರವೆ ತನುವಾಗಿರಬ ಲ್ಲನಯ್ಯ ಬಸವಣ್ಣನು. ಪ್ರಾಣಕಳೆಯರತು ಅಂತು ಜಂಗಮವೆ ಪ್ರಾಣ ವಾಗಿ ಹಂಗು ಹರಿಯದಿರಬಲ್ಲನಯ್ಯ ಬಸವಣ್ಣನು. ಉಪಾಧಿ ಎಂಬ ಕೀರ್ತಿವಾರ್ತೆಯನು ಜರಿದು, ನಿರುಪಾಧಿಕವೆಂಬ ವಿವೇಕಕ್ಕೆ ಅತೀತ ನಾಗಿ ಸಹಜ ದಾಸೋಹಿಯಾಗಿರಬಲ್ಲನಯ್ಯ ಬಸವಣ್ಣನು. ಬಸವಪ್ರಿಯ ಕೂಡಲ ಚನ್ನಸಂಗನಶರಣ ಬಸವಣ್ಣನೆ ನಿಮಗೆ ಭಕ್ತನಲ್ಲದೆ ಮತ್ತಾರನು ಕಾಣೆನಯ್ಯಾ. ॥೯॥

ನಿಮಗೆ ಸಂಗನಬಸಣ್ಣನಲ್ಲದೆ ಮತ್ತಾರು ಭಕ್ತರಿಲ್ಲವೆಂದು ಅಪ್ಪಣ್ಣ ಗಳು ಬಿನ್ನೈಸಲು, ಅದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ಥಾವದ ವಚನ. ॥

ನಿಮ್ಮಲ್ಲಿ ಭಕ್ತಿಯುಂಟು, ತಮ್ಮಲ್ಲಿ ಭಕ್ತಿಯುಂಟು, ಎಮ್ಮಲ್ಲಿ ಭಕ್ತಿ ಯುಂಟು ಎಂದರೆ ಶಿವಶರಣರು ಮೆಚ್ಚುವರೆ? ಹೂಸಿ ಹುಂಡನೆ ಮಾಡಿ ಬಾಯಸವಿಯ ನುಡಿವರೆಲ್ಲ ಭಕ್ತರಪ್ಪರೇ? ಮಾತಿನ ಅದ್ವೈತವ ಕಲಿತು

ಮೂರಗೊಲಬಿಡುವರೆಲ್ಲ ಭಕ್ತರಪ್ಪರೇ? ಬೆಳ್ಳಿಗೆ ಮಕ್ಕಳೆಂದರೆ ಬಳ್ಳಿವಾಲ ಕರೆವುದೆ ಮರುಳೆ? ಸಂಗನಬಸವಣ್ಣನೆಂದರೆ ಮಾತಿನ ಮಾತಿಂಗೆಲ್ಲ ಭಕ್ತಿಯುಂಟೆ? ಬಂದ ಜಂಗಮದ ಇಂಗಿತಾಕಾರವನರಿದು ಇದಿರೆದ್ದು ವಂದಿಸಿ ಕೈಮುಗಿದು, ನಡನಡುಗಿ ಕಿಂಕರನಾಗಿ ಭಯಭೀತಿ ಭೃತ್ಯಾಚಾರವಾಗಿರಬಲ್ಲರೆ ಅದು ಭಕ್ತಿ, ಅದು ಮಾರ್ಗ. ಬಂದವರಾರೆಂದರಿಯದೆ, ನಿಂದ ನಿಲವನರಿಯದೆ ಕೆಮ್ಮನೆ ಅಹಂಕಾರವ ಹೊತ್ತುಕೊಂಡು ಇಪ್ಪವರಿಗೆ ನಮ್ಮ ಗುಹೇಶ್ವರ ಲಿಂಗನೊಲ್ಲ ನೋಡಾ ॥೧೦॥

ಹೀಗೆಂದು ಪ್ರಭುದೇವರು ಬಾರೆವೆಂದು ನಿರೂಪಿಸಲು, ಹಡಪದಪ್ಪಣ್ಣಗಳು ಮರಳಿ ಬಂದು ಬಸವರಾಜದೇವರಿಗೆ ಬಿನ್ನೈಸುವ ಪ್ರಸ್ಥಾವದ ವಚನ. ॥

ದೇವ ದೇವ, ಮಹಾ ಪ್ರಸಾದ. ನಿಮ್ಮ ಶರಣರ ಮನೆಯ ಸಲುಗೆಯ ಬಂಟ ನಾನಲ್ಲಯ್ಯ! ತನುಮನಧನವ ಹಿಂದಿಕ್ಕಿಕೊಂಡಿಪ್ಪ ವಂಚಕನಾನಯ್ಯ! ನಿಮ್ಮ ಶರಣರು ಎನ್ನಿಚ್ಛೆಗೆ ಬಪ್ಪರೆ? ಚಕಿತಮಭಿಧತ್ತೆ ಶೃತಿರಪಿ ಎನಲು ಎಮ್ಮ ನುಡಿ ನಿಮ್ಮ ಶರಣರ ತಾಗಬಲ್ಲವೆ? ಹಣೆಯ ಹೊಣೆಯ ತೋರಿ ಉದರವ ಹೊರೆವ ನಿಮ್ಮ ಮರೆಯಲಡಗಿಪ್ಪ ಹಡಪಿಗ ನಾನಯ್ಯ. ಬಸವಪ್ರಿಯ ಕೂಡಲ ಚನ್ನಸಂಗನ ಶರಣರು ಎನ್ನ ಮಾತಿಂಗೆ ಬಾರರು. ನೀವೆ ಹೋಗಿ ಬಿಜಯಂಗೈಸಿಕೊಂಡು ಬಾರಾ ಸಂಗನಬಸವಣ್ಣಾ. ॥೧೧॥

ಮತಂ॥ ನಿನ್ನಳವಲ್ಲ, ಎನ್ನಳವಲ್ಲ. ಇದಾರಳವಲ್ಲದ ಘನವು ನೋಡಯ್ಯ! ಕಾಬರಿಗೆ ಕಂಗಳಿಗೆ ಅಸಾಧ್ಯ. ಮುಟ್ಟುವರೆ ಸೋಂಕಿಂಗಸಾಧ್ಯ. ಮಾತನಾಡಿಸಿ ನೋಡಿದರೆ ವಾಙ್ಮನಾತೀತ. ನಿಂದರೆ ನೆಳಲಿಲ್ಲ. ಸುಳಿದರೆ ಹೆಜ್ಜೆ ಇಲ್ಲ. ಪ್ರಭುದೇವರೆಂಬ ಭಾವ ತೋರುತ್ತಿದೆ. ಬಸವಪ್ರಿಯ ಕೂಡಲ ಚನ್ನಸಂಗಯ್ಯನ ಶರಣರ ಚರಣವಿಡಿವರೇಳಾ ಸಂಗನಬಸವಣ್ಣಾ. ॥೧೨॥

ನಾನು ಭಕ್ತನಲ್ಲವಾಗಿ ನನ್ನಿಚ್ಛೆಗೆ ಬಾರರು. ನೀವೆ ಹೋಗಿ ಬಿಜಯಂಗೈಸಿ ತನ್ನಿ ಎಂದು ಅಪ್ಪಣ್ಣಗಳು ಬಿನ್ನಹಂ ಮಾಡುವ ಪ್ರಸ್ಥಾವದೊಳು ಚಿಕ್ಕದಣ್ಣಾಯಕರು ಬಂದು ಪ್ರಭುದೇವರು ಸಿದ್ಧರಾಮಯ್ಯ

ದೇವರು ಬಂದು ನಿಮ್ಮ ದ್ವಾರವಟ್ಟದ ಮುಂದೆ ನಿಂದೈದಾರೆ. ನೀವೆ ಬಿಜಯಂಗೈಸಿ ತನ್ನಿ ಎಂದು ಬಿನ್ನಹಂ ಮಾಡುವ ಪ್ರಸ್ಥಾವದ ವಚನ.॥

ಲಿಂಗವೆ ಜಂಗಮು ಜಂಗಮುವೆ ಲಿಂಗವೆಂದು ನಂಬಿ ಬಂದಲ್ಲಿ ಹೊರೆಹುಟ್ಟಿದ ಬಳಿಕ ಹಾಲ ಹರವಿಯೊಳಗೆ ಹುಳಿ ಹೊಕ್ಕಂತೆ, ನೋಡಯ್ಯ! ಅಂಗದ ಮೇಲೆ ಲಿಂಗವುಳ್ಳುದೆಲ್ಲವು ಸಂಗಮನಾಥನೆಂದು ನಂಬಿದ ನಂಬುಗೆಯು ಬಂದ ಶರಣರ ನಿಲವನರಿಯದಿದ್ದರೆ ತಪ್ಪಿತ್ತು ನೋಡಾ! ಗುರುವೆ ಸಂಗಮನಾಥ ಮನೆಗೆ ಅಂಗವಿಡಿದು ಬಂದರೆ ಗಮ್ಮನೆ ಇದಿರೆದ್ದು ವಂದಿಸಬೇಕು ನೋಡಯ್ಯ! ಕೂಡಲ ಚನ್ನಸಂಗನ ಶರಣರು ಪ್ರಭುದೇವರು ಸಿದ್ಧರಾಮಯ್ಯ ದೇವರು ಬಂದು ಬಾಗಿಲಲ್ಲಿರಲು, ಕಣ್ಣರಿಯದಿದ್ದರೂ ಕರುಳರಿಯ ಬೇಡವೇ ಸಂಗನಬಸವಣ್ಣಾ. ॥೧೩॥

ಅಲ್ಲಮ ಪ್ರಭುದೇವರು ಸಿದ್ಧರಾಮಯ್ಯ ದೇವರು ಬಂದು ಬಾಗಿಲಲ್ಲಿರಲು, ಆಟ್ಟಾಟಿಕೆಯುಲಿಂತು ತೆರಹು ಮರಹಾಗಿಪ್ಪುದು ನಿಮಗುಚಿತವಲ್ಲೆಂದು ಚಿಕ್ಕದಣ್ಣಾಯಕರು ಬಿನ್ನೈಸಲು, ಈ ವಾಕ್ಯವ ಕೇಳಿದಾಕ್ಷಣವೆ ಬಸವರಾಜ ದೇವರು ಹಮ್ಮದಂಬೋಗಿ ನಡುನಡುಗಿ ಭಯಾರ್ಣವದೊಳ್ಮುಳುಂಗಿ ಕಂಗಳ ಬಾಷ್ಪುವಿನೊಳು ಮುಂದುಗಾಣದೆ ಚಿಕ್ಕದಣ್ಣಾಯಕರ ಪಾದದ ಮೇಲೆ ಬಿದ್ದು ಪ್ರಭುದೇವರ ಮುನಸ ತಿಳುಹಿಕೊಡು ಎಂದು ಬಿನ್ನಹಂ ಮಾಡುವ ಪ್ರಸ್ಥಾವದ ವಚನ.॥

ಇನ್ನೇವೆನಿನ್ನೇವೆ? ಕೆಮ್ಮನೆ ಕೆಟ್ಟನು. ನಿಮ್ಮ ಶರಣರು ಬಂದು ಬಾಗಿಲೊಳಿರಲು, ಗಮ್ಮನಿದಿರೆದ್ದು ವಂದಿಸಲರಿಯದೆ ಕೆಟ್ಟ ಕೇಡನೇನೆಂದು ಪಮಿಸುವೆನು? ಕೂಡಲ ಸಂಗಮದೇವ ನಾನುಭಯಭ್ರಷ್ಟನೆಂಬುದು ಎನಗಿಂದರಿಯಬಂದಿತ್ತು. ॥೧೪॥

ಮತ್ತಂ, ಮತಿಗೆಟ್ಟು ಧೃತಿಗುಂದಿ ಬೆಳ್ಳಾದೆನಯ್ಯ! ಗತಿಗೆಟ್ಟು ವ್ರತಗೆಟ್ಟು ಧಾತುಗೆಟ್ಟ ಬಾಹಿರ ನಾನಯ್ಯ! ಕಹಿ ಸೋರೆ ಮುತ್ತಂತಾಯಿತ್ತು. ಎನ್ನ ಭಕ್ತಿ ನಡೆದು ಲಿಂಗಜಂಗಮ ಮನೆಗೆ ಬಂದರೆ ಇಂಬುಗೊಳ್ಳಲರಿಯದೆ ಕೆಟ್ಟ ಕೇಡನೇನೆಂದು ಹವಣಿಸುವೆನಯ್ಯ! ನವರತ್ನವ ಕೆತ್ತು ಮಡುವಿನೊಳಗೆ ಹಾಯ್ಕಿದ ಕಪಿಯಂತಾಯಿತ್ತೆನ್ನ ಭಕ್ತಿ. ಕೂಡಲ ಸಂಗಮದೇವರ ತಂದು ಕೆಟ್ಟರೆ ನಿಮ್ಮ ಚಮ್ಮಾವುಗೆಯ ಹೊತ್ತುಕೊಂಡು ಕುಣಿದಾಡುವೆ ಕಾಣಾ ಚನ್ನಬಸವಣ್ಣಾ. ॥೧೫॥

ಹೀಗೆಂದು ಅತ್ಯಂತ ಭೀತನಾಗಿ ಬಿನ್ನಹಂ ಮಾಡುತ್ತಿರಲು, ಚಿಕ್ಕ ದಣ್ಣಾಯಕರು ಹಿರಿಯದಣ್ಣಾಯಕರ ಪಾದಕ್ಕೆ ನಮಸ್ಕಾರಮಂ ಮಾಡಿ ಬಿನ್ನೈಸಿದ ಪ್ರಸ್ಥಾವದ ವಚನ.॥

ಹೋ ಹೋ ಗುರುವೆ ನಿಮ್ಮ ಚಮ್ಮಾವುಗೆಯ ಬಂಟ ನಾನಾಗಿರಲು, ಅಂಜುವರೇ ಅಳುಕುವರೇ? ಸಂಗಮನಾಥ ಬಂದು ನಿಮ್ಮ ಮನವ ನೋಡಲೆಂದು ತಮ್ಮನವ ನಷ್ಟ ನಿಕ್ಕಿದನೊಂದು ಲೀಲೆಯಿಂದ ಅದು ನಿಮಗೆ ಸಹಜವಾಗಬಲ್ಲುದೆ? ಮಂಜಿನ ಮೋಹರ ರವಿಯ ಕಿರಣವ ಕೆಡಿಸಲಾಪವೆ? ನಿಮ್ಮ ನೆನೆವರಿಗೆ ಸಂಸಾರವಿಲ್ಲೆಂದು ಶೃತಿಗಳು ಹೊಗಳುತ್ತಿರಲು, ನಿಮ್ಮರುವಿಂಗೆ ಕೇಡುಂಟೇ? ಕೂಡಲ ಚನ್ನಸಂಗನ ಶರಣರ ಕರೆವರೆ ಎನ್ನ ಮನವೆಂಬ ಚಮ್ಮಾವುಗೆಯ ಮೆಟ್ಟಿ, ನಡೆಯಾ ಸಂಗನಬಸವಣ್ಣ. ॥೧೬॥

ಹೀಗೆಂದು ಬಿನ್ನೈಸಲು, ಇದಕ್ಕೆ ಬಸವರಾಜ ದೇವರು ಚಿಕ್ಕದಣ್ಣಾಯಕರ ಪಾದದ ಕೃಪೆಯಿಂದ ಕಂಡು ನಾನು ಬದುಕಿದೆನೆಂದು ಕೃತನಿಶ್ಚಯವನ್ನೈದಿದ ಪ್ರಸ್ಥಾವದ ವಚನ.॥

ನಂಬಿದೆನಯ್ಯ ನಾನು, ನಚ್ಚಿದೆನಯ್ಯ ನಾನು, ಬದುಕಿದೆನಯ್ಯ ನಾನು. ನಿಮ್ಮ ಕೃಪೆಯಿಂದ ಹಾಳುಕುಳಿಯಲ್ಲಿ ಬಿದ್ದ ಪಶುವಿನ ಕರವ ತೆಗೆದು ತಾಯಮುಖವ ತೋರುವಂತೆ ಪಾಪಕೂಪದಲ್ಲಿ ಬಿದ್ದವನನೆಬ್ಬಿಸಿ ಕೂಡಲ ಸಂಗನ ಶರಣರ ಚರಣವ ತೋರಿ ಎನ್ನನುಳುಹಿದನು. ಹೋದ ಜೀವಕ್ಕೆ ತನ್ನ ಕರುಣವೆಂಬ ಮರುಜೀವಣಿಯ ಹಿಂಡಿ ಎತ್ತಿದನು ಚನ್ನಬಸವಣ್ಣನಿಂದಲಿಂತಕ್ಕೆ ಬದುಕಿದೆನು. ॥೧೭॥

ಬಸವರಾಜ ದೇವರು ತಮ್ಮ ತಾವೆ ಸಂತೈಸಿಕೊಂಬ ಕಾಲದೊಳು ಸೊಡ್ಡಳಬಾಚರಸರು ಬಂದು ಬಿನ್ನಹಂ ಮಾಡುವ ಪ್ರಸ್ಥಾವದ ವಚನ.॥

ತೆರಹು ಮರಹೆಂಬುದು ನಿಮ್ಮ ಗುಣವಲ್ಲ. ಅಮೃತ ಸಾಗರದೊಳಗೆ ಬೇವಿನ ಬಿಂದು ಉಂಟೆ? ಮನವ ನೋಡಲೆಂದು ನಾಟಕವನೋಡಿದರೆ ಅದಕ್ಕೆ ಸಹಜವಲ್ಲಾಗಿ, ಹೆದರಲಿಲ್ಲ. ಮಹಾದಾನಿ ಸೊಡ್ಡಳನ ಮನ ನೊಂದಿತ್ತೆಂದು ಅಂಜಬೇಡನೇಳಾ ಸಂಗನಬಸವಣ್ಣಾ. ॥೧೮॥

ಹೀಗೆಂದು ಸೊಡ್ಡಳ ಬಾಚರಸರು ಬಿನ್ನಹಂ ಮಾಡಲು ಬಸವೆರಾಜ ದೇವರು ನಿರೂಪಿಸಿದ ಪ್ರಸ್ಥಾವದ ವಚನ. ॥

ಮಾರಾಂಕ ನಿರಿವಲ್ಲಿ ಘಾಯ ಖಂಡೆಯ ತೋರಿದಾತನೆ ತೆತ್ತಿಗ. ಕೈಯ್ಯ ಕೈದು ಬಿದ್ದಲ್ಲಿ ಎತ್ತಿಕೊಟ್ಟಾತನೆ ಹಿತನು. ಕೂಡಲ ಸಂಗನ ಶರಣ ಸೊಡ್ಡಳ ಬಾಚರಸರ ಕರುಣ ಉಳ್ಳನ್ನಕ್ಕರ ಇನ್ನು ನಾನು ಅಂಜುವನಲ್ಲ ಕಾಣಾ ಚನ್ನಬಸವಣ್ಣಾ. ॥೧೯॥

ಹೀಗೆಂದು ಬಸವರಾಜ ದೇವರು ನಿರೂಪಿಸಿ ಲಿಂಗಾರ್ಚನೆಯಂ ಮಾಡುತ್ತ ಲಿಂಗಮಂ ಕರಸ್ಥಲದಲ್ಲಿ ಧರಿಸಿಕೊಂಡು, ಹನ್ನೆರಡು ಸಾವಿರ ರುದ್ರಾಕ್ಷೆಯಂ ಧರಿಸಿಕೊಂಡು, ಭಸ್ಮಾಂಗದ ಕಳೆ ಥಳಥಳಿಸಿ ಹೊಳೆವುತ್ತಿಹ ಆಭರಣದಿಂದೊಪ್ಪುತ್ತ ಭಕ್ತವತ್ಸಲ, ಮುಕ್ತಿಯ ಮುಖದರ್ಪಣ, ಅಹಂಕಾರ ಕಾಸಾರ, ಶೃಂಗಾರ ಛೇದನ, ಕರುಣರಸ ಸಿಂಧು, ಷಡುಸ್ಥಲ ಸಂಧಾನನಿವಾಸ, ಶತಏಕಸ್ಥಲ ಮೂಲಿಗ, ಪಂಚಮುಖ ಪಂಚಲಿಂಗ ಸ್ಥಾಪನಾಚಾರ್ಯ, ಭಕ್ತಜನಹೃತ್ಕಮಲಾರ್ಕ, ಶರಣನಿಕುರುಂಬಾಬ್ಧಿ ಶಶಾಂಕ, ಭವ ವಿಪಿನ ದಾವಾನಲ, ಭವಸಿಂಧು ವಡವಾಗ್ನಿ, ಬಸವ ದಂಡಾಧೀಶ್ವರನು ಚನ್ನಬಸವರಾಜ ದೇವರು ಹಡಪವಪ್ಪಣ್ಣಗಳು ಸೊಡ್ಡಳ ಬಾಚರಸರು ಗಮಿತ ಮುಖಯುಕ್ತರಾಗಿ, ನಿರೂಪಿಸಿದ ಪ್ರಸ್ಥಾವದ ವಚನ. ॥

ಲಿಂಗಾರ್ಚನೆಯ ಮಾಡುವೆನಯ್ಯ ಜಂಗಮವೆನ್ನ ಮಠಕ್ಕೆ ಬರಬೇಕೆಂದು. ಆ ಜಂಗಮವೆನ್ನ ಮಠಕ್ಕೆ ಬಂದರೆ ಲಿಂಗಾರ್ಚನೆಯ ಮಾದು ಜಂಗಮಾರ್ಚನೆಯ ಮಾಡುವೆನು. ಅದೇನು ಕಾರಣವೆಂದರೆ ಆ ಲಿಂಗದಲ್ಲಿ ಫಲಉಂಟು, ಪದಉಂಟು, ಭವಉಂಟು. ಆ ಜಂಗಮದಲ್ಲಿ ಫಲನಾಸ್ತಿ, ಪದನಾಸ್ತಿ, ಭವನಾಸ್ತಿಯಾದ ಕಾರಣ "ಲಿಂಗಾರ್ಚನಂ ನ ಕರ್ತವ್ಯಂ ಕರ್ತವ್ಯಂ ಜಂಗಮಾರ್ಚನಂ॥ ಲಿಂಗ ಜಂಗಮ ಸಂಯುಕ್ತಂ। ಜಂಗಮಾದಿ ವಿಶೇಷಿತಂ" ಎಂದುದಾಗಿ, ಕೂಡಲ ಸಂಗಮದೇವಯ್ಯ ನಾನಿನ್ನು ಭವಭವಾಂತರ ನಿಮ್ಮ ಜಂಗಮಾರ್ಚನೆಯ ಮಾಡುವೆನು. ॥೨೦॥

ಮತ್ತಂ, ಎನ್ನ ತನುವಿಡಿದವರ ತನುವ ಬೆರಿಸುವೆನು. ಎನ್ನ ಮನವಿಡಿದವರ ಮನವ ಬೆರಿಸುವೆನು. ಎನ್ನ ಶಿರವನವರ ಪಾದಕ್ಕೆ ಪೂಜೆಯ ಮಾಡುವೆನು. ಕೂಡಲ ಸಂಗನ ಶರಣರನೊಡಗೊಂಡು ಬಂದೆನ್ನ ಭವವ ಹರಿವೆನು. ॥೨೧॥

ಹೀಗೆಂದು ಬಸವರಾಜ ದೇವರು ಲಿಂಗಾರ್ಚನೆಯಿಂದೆದ್ದು ಚನ್ನ ಬಸವರಾಜ ದೇವರು ಮೊದಲಾದ ಅಸಂಖ್ಯಾತ ಗಣಂಗಳ ಕರಸಿಕೊಂಡು, ವಿಭೂತಿ ವೀಳೆಯುವ ಕಾಣಿಕೆ ಸಹವಾಗಿ ನವರತ್ನಖಚಿತ ಒಡಗೂಡಿದ ದಿವ್ಯಾಂಬರಂಗಳಂ ಗುಡಿತೋರಣಂಗಳ ಕಟ್ಟಿ, ದೇವಾಂಗ ಮೌಕ್ತಿಕದ ಸೆರಗಿನ ಸೀರೆಯುಂ ನಡೆಮುಡಿಯು ಹಾಸಿ, ಚೀನಚೀನಾಂಬರ ದಲ್ಲಿ ಪವಳದ ಝುಲ್ಲರಿಯು ಮೇಲುಕಟ್ಟಂ ಕಟ್ಟಿ, ಕಳಸ ಕನ್ನಡಿಯುಂ ಪಂಚ ಮಹಾವಾದ್ಯದಿಂ ಧೂಪಾರತಿ ಘಂಟೆ ಸಹವಾಗಿ, ಪ್ರಭುದೇವರ ಕರೆಯ ಬಹ ಸಂಭ್ರಮದಿಂದಿರುತ್ತಿರಲಿತ್ತಲಾ ಪ್ರಭುದೇವರು ಬಸವ ರಾಜ ದೇವರ ತೆರಹು ಮರಹಂ ನೋಡಿ, ವಿಸ್ಮಯುಂದಾಳ್ದು ಸಿದ್ಧರಾಮಯ್ಯ ದೇವರಿಗೆ ಹೇಳುವ ಪ್ರಸ್ಥಾವದ ವಚನ. ॥

ನೋಡಾ, ಸಿದ್ಧರಾಮಯ್ಯ ದೇವ ಅಗ್ಗಳಿಕೆ ಭಕ್ತರಿಗೆ ಅಹಂಕಾರ ವಾಯಿತ್ತು. ಭೃತ್ಯನಿದ್ದೆಡೆಗೆ ಕರ್ತನೆಯಿತಂದರೆ ಅಟ್ಟಾಟಿಕೆಯಲ್ಲಿ ಇಂತು ಕರೆವರುಂಟೆ? ಬಸವಣ್ಣನೊಳಗೆ ಇಂತು ಮರವೆ ಹುಟ್ಟಿದ ಬಳಿಕ ಉಳಿದ ಶಿವಭಕ್ತರ ಪಾಡೇನು ಹೇಳಾ? ಗುಹೇಶ್ವರ ಲಿಂಗವನು ಭಕ್ತಿರತಿಯಿಂದ ಮನವುಟ್ಟಿ ಕರೆದರೆ ಹೋಹುದಲ್ಲದೆ ವ್ಯರ್ಥಕ್ಕೆ ಹೋಗಲಾರದು ನೋಡಯ್ಯಾ. ॥೨೨॥

ಹೀಗೆಂದು ಪ್ರಭುದೇವರು ನಿರೂಪಿಸಲು, ಅದಕ್ಕೆ ಸಿದ್ಧರಾಮಯ್ಯ ದೇವರು ಮರಳಿ ಪ್ರಭುದೇವರೊಡನೆ ಬಿನ್ನಹಂ ಮಾಡುವ ಪ್ರಸ್ಥಾವದ ವಚನ. ॥

ನಿಮ್ಮ ಶಕ್ತಿ ಆತನಲ್ಲಿಪ್ಪುದು ಕಂಡೆಯ್ಯ! ಆತನ ಪ್ರಾಣ ನಿಮ್ಮಲ್ಲಿಪ್ಪುದು. ನಿಮ್ಮ ತಮ್ಮ ಭೇದವನಾರು ಬಲ್ಲರು ಹೇಳಯ್ಯ? ಕಪಿಲ ಸಿದ್ಧಮಲ್ಲಿನಾಥಯ್ಯ, ನಿಮ್ಮ ಶರಣ ಬಸವಣ್ಣನ ಅನುವ ನೀವೆ ಬಲ್ಲಿರಿ. ॥೨೩॥

ಇಂತು ಪ್ರಭುದೇವರು ಸಿದ್ಧರಾಮಯ್ಯ ದೇವರು ತಮ್ಮೊಳಗೆ ತಾವು ಬಸವರಾಜ ದೇವರ ಅಂತಸ್ಥಿತಿಗತಿಯನು ಪ್ರಸಂಗ ಮುಖದಿಂ ನುಡಿವುತ್ತಿರಲು, ಇತ್ತ ಬಸವರಾಜ ದೇವರು ಅಸಂಖ್ಯಾತ ಮಹಾಗಣಂಗಳು ಸಹಿತ ಬಂದು ಪ್ರಭುದೇವರ ಪಾದದರ್ಶನವಾದ ಪ್ರಸ್ಥಾವದ ವಚನ. ॥

ಭವರೋಗ ವೈದ್ಯನೆಂದು ನಂಬಿವೆ ನಾನು. ಒಮ್ಮೆಗೆ ಕರುಣಿಸಯ್ಯ! ಫಲದಾಯಕ ನೀನು ಒಮ್ಮೆಗೆ ಕರುಣಿಸಯ್ಯ! ಜಯ ಜಯ ಶ್ರೀ ಮಹಾ

ದೇವ ಎನುತಿರ್ದೆನು ಕೂಡಲ ಸಂಗಮ ದೇವಯ್ಯ ನಿಮ್ಮ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು. ॥೨೪॥

ಕಂಡಡೆ ಕಡು ಸುಖವೆನಗೆ ಕಾಣದಿರ್ದಡೆಯುವಸ್ಥೆಯಯ್ಯ! ತವಕವ ಸ್ನೇಹವ ದರ್ಶನವಲ್ಲಿ ತನಹರವಾಯಿತ್ತು. ಕೂಡಲ ಸಂಗಮ ದೇವಯ್ಯ ನಿಮ್ಮ ಶ್ರೀಪಾದವ ಕಂಡು ಧನ್ಯನಾದೆನು. ॥೨೫॥

ಮತ್ತಂ, ನಿಮ್ಮ ಶರಣರ ಕಂಡ ಕಡು ಸುಖವನೇನೆಂಬೆನಯ್ಯ? ಅದು ಸಾಲೋಕ್ಯದಂತುಟಲ್ಲ. ಅದು ಸಾಮೀಪ್ಯದಂತುಟಲ್ಲ. ಅದು ಸಾರೂಪ್ಯದಂತುಟಲ್ಲ. ಅದು ಸಾಯುಜ್ಯದಂತುಟಲ್ಲ. ಕೂಡಲ ಸಂಗನ ಶರಣರ ಪಾದ ದರ್ಶನವ ಕಂಡು ನಾನು ಧನ್ಯನಾದೆನು. ॥೨೬॥

ಮತ್ತಂ, ನಮಸ್ಕಾರಮಂ ಮಾಡುವ ಪ್ರಸ್ತಾವದ ವಚನ.॥

ಮನ ಮನ ಮುಟ್ಟಿದ ಭಕ್ತಿಗೆ ತನುವೇ ಅರ್ಪಿತ. ತನು ಮುಟ್ಟಿದ ಭಕ್ತಿಗೆ ಮನವೆ ಅರ್ಪಿತವಯ್ಯ! ಎನ್ನ ತನುಮನವೆರಡು ನಿಮ್ಮ ಚರಣಕ್ಕೆ ನೈವೇದ್ಯನೋಡಯ್ಯ! "ದೀರ್ಘದಂಡ ನಮಸ್ಕಾರಂ। ನಿರ್ಲಜ್ಜಂ ಗುರುಸನ್ನಿಧೌ॥ ಶರೀರಮರ್ಥಪ್ರಾಣಂ ಚ। ಸದ್ಗುರುಭ್ಯೋ ನಿವೇದಯೇತ್॥" ಎಂಬುದಾಗಿ, ತ್ರಾಹಿ ತ್ರಾಹಿ ಶರಣಾರ್ಥಿ ನೀವೆ ಬಲ್ಲಿರಿ ಕೂಡಲ ಸಂಗಮದೇವಾ. ॥೨೭॥

ಮತ್ತಂ, ಎನ್ನ ಶರೀರ ನಿಮ್ಮ ಚರಣ ಒರಸೊರಸಿ ಬೆರಸಿ ಭೇದವಲ್ಲಯ್ಯ! ಎನ್ನ ಕಾಯದ ಕಪಟ ಎನ್ನ ಮನದ ವಿಕಾರ ನಿಮ್ಮ ಉಂಗುಷ್ಠದ ಮೊನೆಯ ಸೋಂಕಲೊಡನೆ ಹರಿದುದು ನೋಡಯ್ಯ! ಕೂಡಲ ಸಂಗಮದೇವಯ್ಯ ನಿಮ್ಮ ಶ್ರೀಪಾದ ಬೆಳಗ ಕಂಡು ಎನ್ನ ಅಂತರಂಗದ ಕತ್ತಲೆ ಓಡಿತ್ತಯ್ಯ. ॥೨೮॥

ಇಂತು ಬಸವರಾಜ ದೇವರು ದೀರ್ಘದಂಡ ನಮಸ್ಕಾರಮಂ ಮಾಡುತ್ತಿರಲು, ಪ್ರಭುದೇವರ ನಿಜ ಮೂರ್ತಿ ನಿರಾಕಾರಸ್ಥಲದೊಳು ನಿಂದು ನಮಸ್ಕಾರಾದಿ ಕ್ರಿಗಳಿಗೆ ಸಾಧ್ಯವಾಗಿರ್ದ ಪ್ರಸ್ತಾವದ ವಚನ.॥

ರೂಪು ಅರೂಪಿನಲ್ಲಿ ನಿಂದಿತ್ತು. ಆ ರೂಪು ನಿಜರೂಪವ ನವಗ್ರಹಿಸಿತ್ತು. ನಿಜರೂಪು ನಿರ್ಣಯದಲ್ಲಿ ನಿಷ್ಪತ್ತಿಯಾಯಿತ್ತು. ನಿಷ್ಪತ್ತಿಯಾದ ನಿಜ ಶರಣರ ನಿಲವು ಕಾಯವಿಡಿದು ಕಂಡಿಹೆನೆಂಬರೆ ಕಾಣಬಹುದೇ?

ಕೂಡಲ ಸಂಗಮ ದೇವರ ಶರಣ ಪ್ರಭುದೇವರ ನಿಲವು ಎನಗೆ ಸಾಧ್ಯ ವಪ್ಪುದೆ? ॥೨೯॥

ತೋರುವನಯ್ಯ ಶಿವನು ಕಂಗಳ ಮುಂದೆ. ಕಾಯಗೊಂಡು ಮನದ ಮುಂದೆ ಕನಸಾಗಿ ಕಾಡುವನಯ್ಯ ಶಿವನು. ಒಂದೆಡೆಯಲ್ಲಿದ್ದು ಹಲವು ಎಡೆಯಲ್ಲಿ ತೋರುವನು. ಹಲವು ಎಡೆಯಲ್ಲಿದ್ದು ಒಂದೆಡೆಯಲ್ಲಿ ರೂಪಾಗಿಪ್ಪನು. ಕೂಡಲ ಸಂಗಮದೇವರು ಚಿನುಮಯರಾಗಿ ಎನಗೆ ಅಸಾಧ್ಯ ನಾದನು. ॥೩೦॥

ಮತ್ತಂ, ಕಂಡಿಹರೆಂದು ಕಣ್ಣ ಮರೆಮಾಡಿದ. ಕೇಳಿಹರೆಂದು ಕಿವಿಗೆ ಮರೆಮಾಡಿದ. ಮುಟ್ಟಿಹರೆಂದು ಕೈಗೆ ಮರೆಮಾಡಿದ. ಸೋಂಕಿಹರೆಂದು ತನುವಿಂಗೆ ಮರೆಮಾಡಿದ. ನೆನೆದಿಹರೆಂದು ಮನಕ್ಕೆ ಮರೆ ಮಾಡಿದ. ಅರಿದಹರೆಂದು ಅಂತರಂಗದಲ್ಲಿ ಮರೆಮಾಡಿದ. ಪೂಜಿಸಿಹರೆಂದು ಕ್ರಿಗೆ ಮರೆಮಾಡಿದ. ಕೂಡಲ ಸಂಗಮದೇವರೊಡನೆ ಅಹಂಕಾರವ ಮಾಡಿ ಕೆಟ್ಟ ಕೇಡನೇನೆಂದುಪಮಿಸುವೆನು? ॥೩೧॥

ಇಂತು ಬಸವರಾಜ ದೇವರು ನಾನಾ ಭಕ್ತಕ್ರಿಯೆಗಳಿಂದ ಮುಟ್ಟಿ ನೋಡಲು, ಆ ಪ್ರಭುದೇವರ ನಿಲವಸಾಧ್ಯವಾಗಿರಲು, ಎನ್ನ ಅಹಂಕಾರದಿಂದೆ ನಾನು ಕೆಟ್ಟೆನೆಂದು ಅನುತಾಪಾಗ್ನಿಯೊಳು ಕರಗಿ ಕೊರಗಿ ಮನ ನೊಂದು ಬಿನ್ನಹಂ ಮಾಡಿದ ಪ್ರಸ್ಥಾವದ ವಚನ॥

ಶರಣೆಂದು ಪಾದವ ಹಿಡಿದಿಹೆನೆಂದರೆ ಚರಣದ ನಿಲವು ಕಾಣಬಾರದು. ಕುರುಹಿಡಿದಿಹೆನೆಂದರೆ ಕೈಗೆ ನಿಲುಕದು. ಬೆರಸಿ ಹೊಕ್ಕಿಹೆನೆಂದರೆ ಮುನ್ನವೆ ಅಸಾಧ್ಯ. ಅಕಟಕಟಾ! ಅಹಂಕಾರದಲ್ಲಿ ಕೆಟ್ಟೆನಲ್ಲ ಗುರುವೆ! ಎನ್ನ ಪರಮ ಗುರುವೇ ಬಾರಯ್ಯ ಅರಿಯದ ತರುಳನ ಅವಗುಣವ ನೋಡುವರೆ ಕೂಡಲ ಸಂಗಮದೇವಾ? ॥೩೨॥

ಮತ್ತಂ, ತ್ರಿವಿಧ ತ್ರಿವಿಧದಲ್ಲಿ ತಪ್ಪಿದ ತಪ್ಪುಕ ನಾನಯ್ಯ! ಒಮ್ಮಿಂಗೆ ಕರುಣಿಸಯ್ಯ! ಇವನರಿದು ಇನ್ನು ತಪ್ಪಿದೆನಾದರೆ ನೀವು ಮಾಡಿತ್ತೆ ಸಲುವುದು ಕೂಡಲ ಸಂಗಮದೇವಾ. ॥೩೩॥

ಮತ್ತಂ ಡಂಬು, ಡಳ್ಳು ಹುಸಿ ಎನ್ನದಯ್ಯ, ಡಂಭಕ ಮನದವ ನಾನಯ್ಯ! ಎನ್ನಲ್ಲೇನರಸುವಿರಿ? ನಿಮ್ಮ ನಂಬಿಯೂ ನಂಬದ ಡಂಭಕ

ನಾನು. ಹಾವ ತೋರಿ ಹವಿಯು ಬೇಡುವಂತೆ ಎನ್ನ ಭಕ್ತಿ ಕೂಡಲ ಸಂಗಮದೇವಾ. ॥೩೪॥

ಮತ್ತಂ, ಮಸಿಯನೇಸು ಕಾಲ ಬೆಳಗಿದರೆ ಬಿಳಿದಾಗ ಬಲ್ಲುದೆ? ಕರ್ಮಸ್ಥಿತಿ ಬೆನ್ನ ಬಿಡದು. ಅನಂತ ಕೋಟಿ ಸನ್ಮಾನವ ಮಾಡಿಪಡೇನು? ಒಂದು ನಿಮಿಷದ ಉದಾಸೀನ ಕೆಡಿಸಿತ್ತು ಕೂಡಲ ಸಂಗಮದೇವ ನಿಮ್ಮ ನಂಬಿಯೂ ನಂಬದ ಡಂಭಕ ನಾನು. ॥೩೫॥

ಮತ್ತಂ, ಸ್ಥಾವರ ಜಂಗಮ ಒಂದೇ ಎಂದು, ಇದಿರ ನುಡಿವೆ. ನುಡಿದು ನಾನೆಡಹುತಿಪ್ಪೆ. ಆನು ಸಹಜನಲ್ಲ. ಆನುಭಯಲಿಂಗ ಸಂಬಂಧಿ ಎಂಬ ನುಡಿ ಸುಡದಿಹುದೆ ಕೂಡಲ ಸಂಗಮದೇವಾ? ॥೩೬॥

ಮತ್ತಂ, ತಂದೆ ನೀವು, ತಾಯಿ ನೀವು, ಬಂಧು ನೀವು, ಬಳಗ ನೀವು. ನೀವಲ್ಲದೆ ಮತ್ತಾರು ಇಲ್ಲ. ಕೂಡಲ ಸಂಗಮದೇವ ಹಾಲ ಲದ್ದು ನೀರಲದ್ದು. ॥೩೭॥

ಎನ್ನವರೆನ್ನ ಕೊಂಡಾಡಿ ಹೊನ್ನ ಶೂಲಕ್ಕೆ ಇಕ್ಕಿದರು. ಅಹಂ ಕಾರ ಗಾಯದಲ್ಲಿ ನಾನೆಂತು ಬದುಕುವೆನು? ನಾನೆಂತು ಜೀವಿಸುವೆನು? ಜಂಗಮವಾಗಿ ಬಂದು, ಶೂಲವನಿಳುಹಿ ಪ್ರಸಾದದ ಮದ್ದನಿಕ್ಕಿ ಸಲಹು ಕೂಡಲ ಸಂಗಮದೇವಾ. ॥೩೮॥

ಇಂತು ಆ ಬಸವರಾಜ ದೇವರು ಅನುತಾಪದಿಂ ನೊಂದು ಅತ್ಯಂತ ಕಿಂಕರನಾಗಿ ಬಿನ್ನಹಂ ಮಾಡುತ್ತಿರಲು, ಆ ಪ್ರಭುದೇವರು ಸಾಕಾರವಾಗಿ ಆಕ್ಷೇಪದಿಂದ ನಿರೂಪಿಸಿದ ಪ್ರಸ್ಥಾವದ ವಚನ.॥

ಲಿಂಗದೊಳಗೆ ಜಂಗಮ ಜಂಗಮದೊಳಗೆ ಲಿಂಗವೆಂದರಿದು, ಮರಳಿ, ಬರುದೊರೆ ಓಡುವರು. ಜಂಗಮವನಿನ್ನು ಬೆರಸಲೇತಕಯ್ಯ? ಆ ಲಿಂಗದೊಳಗೆ ಜಂಗಮವ ನರಸಿಕೊಂಬುದು. ಲಿಂಗಾರ್ಚನೆಯವಸ ರಕ್ಕೆ ಜಂಗಮ ಮನೆಗೆ ಬಂದರೆ ಲಿಂಗಾರ್ಚನೆಯ ಮಾದು ಜಂಗ ಮಕ್ಕೆ ಇದಿರೆದ್ದು ವಂದಿಸಿ ಭಕ್ತಿಯ ಮಾಡಬಲ್ಲಾತನೆ ಭಕ್ತ. ಆ ಜಂಗಮ ಹೊರಗಿರಲು, ಲಿಂಗಾರ್ಚನೆಯ ಮಾಡುತ್ತಿಪ್ಪಾತನೇತರ ಭಕ್ತ? ಜಂಗ ಮದ ಮುಂದೆ ಲಿಂಗವ ಕೈಯ್ಯಲ್ಲಿ ಹಿಡಿದುಕೊಂಡು, ಸಹಪಂಕ್ತಿಯಲ್ಲಿ ಕುಳ್ಳಿರ್ದು ಪೂಜಿಸುವಾತ ಭೃತ್ಯಾಚಾರ ದ್ರೋಹನು. ಆ ಭಕ್ತನ ಮನೆಯು

ಹೊಗುವ ಜಂಗಮವೇ ಅಜ್ಞಾನಿ. ನಮ್ಮ ಗುಹೇಶ್ವರನ ಶರಣರ ಕೂಡ ಅಹಂಕಾರವ ಹೊತ್ತಿಪ್ಪವರ ಕಂಡಡೆ ನಾನೊಲ್ಲೆ ಕಾಣಾ ಸಂಗನಬಸವಣ್ಣಾ. ॥೩೯॥

ಜಂಗಮವೆ ಹೊರಗಿರಲು ಲಿಂಗಾರ್ಚನೆ ಆವುದಯ್ಯ? ಪ್ರಾಣವ ಹೊರಗಿರಿಸಿ ಎಡೆಯಾಡುವ ದೇಹ ಉಂಟೆ? ಶರಣರು ಬಂದು ಬಾಗಿಲಲ್ಲಿ ನಿಂದಿರಲು, ತನ್ನ ತಾ ಮರೆದವರ ಕಂಡರೆ ನಮ್ಮ ಗುಹೇಶ್ವರ ಲಿಂಗ ಒಡೆಯ ಹಾಯ್ಕದೆ ಮಾಣ್ಬನೆ? ॥೪೦॥

ಇಂತು ಬಸವರಾಜ ದೇವರು ಲಿಂಗಾರ್ಚನೆಯಂ ಮಾಡುತ್ತ ತೆರಹುಮರಹಾಗಿರ್ದ ವೃತ್ತಾಂತಮಂ ಪ್ರಭುದೇವರು ಎಚ್ಚರಿಸಿ ಮೂದಲಿಸಿ ನಿರೂಪಮಂ ಕೊಡುತ್ತಿರಲು, ಆ ಬಸವರಾಜ ದೇವರು ಅತ್ಯಂತ ನೊಂಡು ತಮ್ಮ ಲಿಂಗಾರ್ಚನೆಯ ಠಾವೆ ಜರಿದು ತೋರುತ್ತಿರ್ದ ಪ್ರಸ್ತಾವದ ವಚನ. ॥

ಮುನ್ನೂರರುವತ್ತು ದಿನ ಸಾಧನೆಯ ಮಾಡಿ, ಕಳನನೇರಿ ಕೈಮರೆದಂತಾಯಿತ್ತೆನ್ನ ಭಕ್ತಿ. ಎನಿಸು ಕಾಲ ಲಿಂಗಾರ್ಚನೆಯಂ ಮಾಡಿ ಏವೆನಯ್ಯ? ಎನ್ನ ಮನದಲ್ಲಿ ದೃಢವಿಡಿಯದನ್ನಕ್ಕರ, ಕೊಡನ ತುಂಬಿದ ಹಾಲನೊಡೆಯ ಹಾಯ್ಕಿ ಇನ್ನಡುಗಿಹೆನೆಂದರೆ ಎನ್ನಳವೆ ಕೂಡಲ ಸಂಗಮದೇವಾ? ॥೪೧॥

ಎನಿಸು ಕಾಲ ಕಲ್ಲು ನೀರೊಳಗಿದ್ದರೇನು? ನೆನೆದು ಮೃದುವಾಗಬಲ್ಲುದೆ ಅಯ್ಯ? ಎನಿಸು ಕಾಲ ನಿಮ್ಮ ಪೂಜಿಸಿ ಏವೆನಯ್ಯ ಮನದಲ್ಲಿ ದೃಢವಿಲ್ಲದನ್ನಕ್ಕರ? ನಿಧಾನವ ಕಾಯಿದಿರ್ದ ಬೆಂತರನ ವಿಧಿ ಎನಗಾಯಿತ್ತು ಕಾಣಾ ಕೂಡಲ ಸಂಗಮದೇವಾ. ॥೪೨॥

ಮತ್ತಂ, ಅಷ್ಟವಿಧಾರ್ಚನೆ, ಷೋಡಶೋಪಚಾರಂಗಳ ಅರಸರಿಯದ ಬಿಟ್ಟಿಯ ಮಾಡುವೆನು. ಎನ್ನ ತಾಗಿದ ಸುಖವನು ಜಂಗಮಕ್ಕರ್ಪಿಸಲರಿಯದ ಉಪಚಾರಿಯಾನು. ಸ್ಥಾವರ ಜಂಗಮದ ಭೇದವನರಿಯದ ಪೂಜಕ ನಾನು. ಮತ್ತೆ ನಾಚದೆ ಕೂಡಲ ಸಂಗಮದೇವರೆನ್ನ ಪ್ರಾಣಲಿಂಗವೆಂಬ ಡಂಭಕ ನಾನು. ॥೪೩॥

ಮತ್ತಂ, ನೋಡುವರುಳ್ಳರೆ ಮಾಡುವೆ ದೇಹಾರವನು. ಎನಗೊಂದು ನಿಜವಿಲ್ಲ. ಎನಗೊಂದು ನಿಷ್ಪತ್ತಿ ಇಲ್ಲ ನೋಡಯ್ಯ! ಲಿಂಗವ

ತೋರಿ ಉದಕವ ಹೊರೆವ ಭಂಗಗಾರನಾನಯ್ಯ ಕೂಡಲ ಸಂಗಮ ದೇವಯ್ಯ. ॥೪೪॥

ಲಿಂಗವೆಂತಿಪ್ಪುದೆಂದರಿಯೆನು. ಲಿಂಗದ ನಿಲವೆಂತುಟೆಂಬುದ ಹೋದ ಹೊಲಬನರಿಯೆನು. ಲಿಂಗಾರ್ಚನೆಯ ಮಾತು ಎನಗೇತ ಕಯ್ಯ? ಜಂಗಮ ಲಿಂಗವಾಗಿ ಬಂದು ನೀವಿರುತ್ತಿರಲು, ಸ್ಥಾವರಕ್ಕೆ ಮಚ್ಚಿ ಮರುಳಾದೆನು. ಕೂಡಲ ಸಂಗಮದೇವ ಎನ್ನ ತಪ್ಪನೆಣಿಸಿಹೆ ನೆಂದರೆ ಕಡೆಯಿಲ್ಲ. ॥೪೫॥

ಎನ್ನ ತಪ್ಪು ಅನಂತಕೋಟಿ. ನಿನ್ನ ಸೈರಣೆಗೆ ಕಡೆ ಇಲ್ಲವಯ್ಯ! ಇನ್ನು ತಪ್ಪಿದೆನಾದರೆ ನಿಮ್ಮ ಪಾದವೇ ದಿಬ್ಯ. ಕೂಡಲ ಸಂಗಮ ದೇವಯ್ಯ ನಿಮ್ಮ ಪ್ರಮಥರ ಮುಂದೆ ಕಿನ್ನರಿ ಬೊಮ್ಮಣ್ಣಗಳ ಪಾದವೇ ಸಾಕ್ಷಿ. ॥೪೬॥

ಮುನ್ನ ತಪ್ಪಿದ ತಪ್ಪಲ್ಲದೆ ಇನ್ನು ತೆರಹು ಮರಹಾಗಿದ್ದೆನಾದರೆ ಕಿನ್ನರಿ ಬೊಮ್ಮಣ್ಣಗಳು ಸಾಕ್ಷಿಯಾಗಿ ನಿಮ್ಮ ಶ್ರೀಪಾದದಾಣೆ ಎಂದು ಬಸವರಾಜ ದೇವರು ಬಿನ್ನಹಂ ಮಾಡುತ್ತಿರಲು, ಅಲ್ಲಿ ಕಿನ್ನರಿ ಬೊಮ್ಮಯ್ಯ ತಂದೆ ಗಳು ಪ್ರಭುದೇವರೊಡನೆ ಬಿನ್ನಹಂ ಮಾಡುವ ಪ್ರಸ್ತಾವದ ವಚನ. ॥

ತನು ಸೆಜ್ಜೆ, ಮನ ಲಿಂಗವಾದ ಬಳಿಕ ಅನುವ ಬೇರೆ ಮತ್ತರಸ ಲುಂಟೆ? ತನುವೇ ಬಸವಣ್ಣ. ಮನವೇ ಪ್ರಭುದೇವರೆಂಬ ಘನ ಒಳ ಕೊಂಡಿದ್ದ ಬಳಿಕ ಗುಣಾವಗುಣವ ಸಂಪಾದಿಸುವರೆ ಮಹಾಲಿಂಗ ತ್ರಿಪು ರಾಂತಕ ದೇವ ಸಂಗನಬಸವಣ್ಣನಲ್ಲಿ ನಿಮ್ಮಡಿಗಳಲ್ಲಿ ಸಂದು ಸಂಶಯ ಉಂಟೆ? ಬಿಜಯಂಗೈವುದಯ್ಯ ಪ್ರಭುವೆ. ॥೪೭॥

ಹೀಗೆಂದು ಕಿನ್ನರೀ ಬೊಮ್ಮಣ್ಣಗಳು ಬಿನ್ನೈಸುತ್ತಿರಲು, ಅದಕ್ಕೆ ಪ್ರಭುದೇವರು ನಿರೂಪಿಸಿದ ಪ್ರತ್ಯುತ್ತರ. ॥

ಜಂಗಮದಿಂಗಿತಾಕಾರವ ನೋಡಿ, ಲಿಂಗವೆಂದರಿದ ಸದ್ಭಕ್ತರು ಮನ ಮನ ಬೆರಸಿದ ಕೂರ್ಮನ ಶಿಸುವಿನ ಸ್ನೇಹದಂತೆ ಕಾಣದ ಮುನ್ನವೆ ತೆರಹಿಲ್ಲದಿರಬೇಕು ನೋಡಾ. ಬಂದ ಭರವನರಿಯದೆ ನಿಂದ ನಿಲವನರಿಯದೆ ಕೆಮ್ಮನೆ ಅಹಂಕಾರವ ಹೊತ್ತಿಪ್ಪವರ ನಮ್ಮ ಗುಹೇಶ್ವರ ಲಿಂಗನೊಲ್ಲ ಕಾಣಾ ಕಿನ್ನರಿ ಬೊಮ್ಮಣ್ಣ. ॥೪೮॥

ಹೀಗೆಂದು ಪ್ರಭುದೇವರು ಕಿನ್ನರಿ ಬೊಮ್ಮಣ್ಣಗಳೊಡನೆ ನಿರೂಪಿಸಲು, ಇದಕ್ಕೆ ಬಸವರಾಜ ದೇವರು ಕಿಂಕುರ್ವಾಣ ಭಾವದಿಂದೆ ಬಿನ್ನೈಸಿದ ಪ್ರಸ್ಥಾವದ ವಚನ. ॥

ಸತ್ಯ ಸದಾಚಾರ ಸಂಬಂಧವಾದ ಭೃತ್ಯಾಚಾರ ಎನಗಿಲ್ಲಯ್ಯ! ಆನು ನಿಮ್ಮ ನೆನೆಯಲು ಎನಗೆ ಭಕ್ತಿ ಇಲ್ಲಯ್ಯ! ಕರುಣದಿಂದೆ ಕೃಪೆಮಾಡಾ ಕೂಡಲಸಂಗಮದೇವಾ. ॥೪೯॥

ಎನ್ನ ಅಹಂಕಾರವ ಅವಗುಣವ ಕಳೆದು, ಕೃತಾರ್ಥನ ಮಾಡೆಂದು ಬಿನ್ನಹಂ ಮಾಡುವ ಪ್ರಸ್ಥಾವದ ವಚನ. ॥

ಕರಗಿಸಿ ಎನ್ನ ಮನದ ಕಾಳಿಕೆಯ ಕಳೆಯಯ್ಯ! ಒರೆಗೆ ಬಣ್ಣಕ್ಕೆ ತಂದೆನ್ನ ಪುಟವಿಕ್ಕಿ ನೋಡಯ್ಯ. ಕಡಿಹಕ್ಕೆ ಬಡಿಹಕ್ಕೆ ತಂದೆನ್ನ ಕಡೆಯಾಣಿಯ ಮಾಡಿ ನಿಮ್ಮ ಶರಣರ ಪಾದಕ್ಕೆ ತೊಡಿಗೆಯ ಮಾಡಿ ಸಲಹಯ್ಯ ಕೂಡಲಸಂಗಮದೇವಯ್ಯ ॥೫೦॥

ಈ ಹೀಗೆಂದು ಬಸವರಾಜ ದೇವರು ಬಿನ್ನೈಸಲು, ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ಥಾವದ ವಚನ ॥

ತನುವಿನಲ್ಲಿ ತನು ಸವೆಯದು. ಮನದಲ್ಲಿ ಮನ ಸವೆಯದು. ಧನದಲ್ಲಿ ಧನ ಸವೆಯದು. ಭಕ್ತಿ ಯುಕ್ತಿಯ ಮಾತು ನಿನಗೇಕೆ ಹೇಳಾ ಬಸವ? ಮಾಟಕೂಟವೆಂಬ ಕೀರ್ತಿಗೆ ಸಿಲ್ಕಿ ಜಂಗಮವೆ ಲಿಂಗವೆಂಬುವ ಮರೆದೆಯಲ್ಲ ಬಸವ? ಗುಹೇಶ್ವರನ ಶರಣರಿಗೆ ತ್ರಿಕರಣವನೊಪ್ಪಿಸಿದಲ್ಲದೆ, ಭಕ್ತನಾಗಬಾರದು ಕಾಣಾ ಸಂಗನಬಸವಣ್ಣಾ ॥೫೧॥

ಹೀಗೆಂದು ಪ್ರಭುದೇವರು ನಿರೂಪಿಸಲು, ಬಸವರಾಜದೇವರು ತನು, ಮನ, ಧನಂಗಳನು ವಂಚನೆ ಇಲ್ಲದೆ ನಿಮಗರ್ಪಿಸಿದೆನೆಂಬ ಪ್ರಸ್ಥಾವದ ವಚನ. ॥

ಹೊನ್ನಿನೊಳಗೊಂದೊರೆಯ ಸೀರೆಯೊಳಗೊಂದೆಳೆಯ ಇಂದಿಂಗೆ ನಾಳಿಂಗೆ ಬೇಕೆಂದೆನಾದರೆ, ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ನಿಮ್ಮ ಶರಣರಿಗಲ್ಲದೆ ಮತ್ತೊಂದನರಿಯೆನು ಕೂಡಲ ಸಂಗಮದೇವ ನಿಮ್ಮಾಣೆ. ॥೫೨॥

ಮತ್ತಂ॥ ತನುವ ಬೇಡಿದಡೀವೆ. ಮನವ ಬೇಡಿದಡೀವೆ. ಧನವ ಬೇಡಿದಡೀವೆ. ನಿಮ್ಮ ಶರಣರಿಗೆ ಎನಗೆ ಬೇಕೆಂಬ ಭಾವ ಮನವಲ್ಲಿ ಹೊದ್ದಿದರೆ, ಘನಮಹಿಮ ನಿಮ್ಮ ಪಾದದಾಣೆ. ಮನ ವಚನ ಕಾಯದಲ್ಲಿ ನೀವೆ

ಲ್ಲದೆ ಪಾತ್ರೋಂದ ನರಿಯೆನು. ಅರಿದರೆ ಕೂಡಲಸಂಗಮದೇವ ಭವ ಘೋರ ದಲ್ಲಿಕ್ಕುಯ್ಯಾ. ॥೫೩॥

ತನು ಮನ ಧನಂಗಳ ನಿಮಗರ್ಪಿಸಿ, ಶುದ್ಧವಾಗಿಪ್ಪೆನೆಂದು ಬಸವ ರಾಜದೇವರು ಬಿನ್ನಹಂ ಮಾಡಲು ಈ ಉತ್ತರವಂ ಖಂಡಿಸಿ ನಿರೂಪಿಸಿದ ಪ್ರಸ್ಥಾವದ ವಚನ. ॥

ಮೇರು ಗಿರಿಗಳೆಲ್ಲವು ಪ್ರಮಥರೊಡವೆ. ರಜತಗಿರಿಗಳೆಲ್ಲವು ಪುರಾ ತನರೊಡವೆ. ಚತುರ್ದಶ ಭುವನವೆಲ್ಲವು ಲಿಂಗದೊಡವೆ. ಪೃಥ್ವಿ ಎಂಬುದು ಕರ್ತಾರನ ಕಮ್ಮಟ. ಅಚ್ಚಿನ ಪೊಳೆ ಬಾಣಸದ ಮನೆ ತನುಮನಧ ನಂಗಳೆಲ್ಲವು ನಮ್ಮ ಗುಹೇಶ್ವರ ಲಿಂಗದ ಸೊಮ್ಮು. ನೀನೇನ ಕೊಟ್ಟು ಭಕ್ತ ನಾದೆ ಹೇಳಾ ಬಸವಣ್ಣಾ? ॥೫೪॥

ಮತ್ತಂ ತನುವರ್ಪಿತವೆಂದರೆ ಗುರುದ್ರೋಹ, ಮನವರ್ಪಿತವೆಂದರೆ ಲಿಂಗದ್ರೋಹ, ಧನವರ್ಪಿತವೆಂದರೆ ಜಂಗಮದ್ರೋಹ. ಇಂತೀ ತನು ಮನ ಧನಂಗಳೆಂಬ ಅನಿತ್ಯವನು ನಿತ್ಯಕ್ಕರ್ಪಿಸಿ ಭಕ್ತನಾದೆನೆಂದರೆ ಅದು ಅಜ್ಞಾನ ನೋಡಾ! ಒಡೆಯರಿಗೆ ಉಂಡೆಯ ಮುರಿದಿಕ್ಕಿ ನಾ ಭಕ್ತನಾದೆ ನೆಂಬ ಮಾತ ಸಮ್ಯಜ್ಞಾನಿ ಶರಣರು ಮಚ್ಚುವರೆ? ನಮ್ಮ ಗುಹೇಶ್ವರ ಲಿಂಗಕ್ಕೆ ನೀನಾವುದರಲ್ಲಿ ಏನನರ್ಪಿಸಿ ಭಕ್ತನಾದೆ ಹೇಳಾ ಬಸವಣ್ಣಾ ?॥೫೫॥

ಹೀಗೆಂದು ಪ್ರಭುದೇವರು ನಿರೂಪಿಸಲು, ಅದಕ್ಕೆ ಬಸವರಾಜ ದೇವರು ಅನುತಾಪಂ ಬಟ್ಟ ಪ್ರಸ್ಥಾವದ ವಚನ. ॥

ಎಳ್ಳಿಲ್ಲದ ಗಾಣವನಾಡಿದ ಎತ್ತಿನಂತಾಯಿತೆನ್ನ ಭಕ್ತಿ. ಉಪ್ಪು ಅಪ್ಪು ವಿನಲ್ಲಿ ಅದ್ದಿ ಮೆಲಿದಂತಾಯಿತ್ತೆನ್ನ ಭಕ್ತಿ. ಕೂಡಲಸಂಗಮದೇವ ನಾನು ಮಾಡಿದೆನೆಂಬ ಕಿಚ್ಚು ಎನ್ನನೆ ಸುಟ್ಟಿತ್ತು. ಇನ್ನು ಸಾಲದೆ ಹೇಳಾ ಪ್ರಭುವೆ? ॥೫೬॥

ಮತ್ತಂ॥ ತನುವ ಕೊಟ್ಟೆಹೆನೆಂದು ನುಡಿದು, ಗುರುವಚನಕ್ಕೆ ದೂರ ವಾದೆ; ಮನವ ಕೊಟ್ಟೆಹೆನೆಂದು ನುಡಿದು ಲಿಂಗಮುಖಕ್ಕೆ ದೂರವಾದೆ; ಧನವ ಕೊಟ್ಟೆಹೆನೆಂದು ನುಡಿದು ಜಂಗಮ ಮುಖಕ್ಕೆ ದೂರವಾದೆ; ಕೂಡ ಲಸಂಗಮದೇವಯ್ಯ ನಿಮಗೆ ಮಾಡಿದೆನೆಂದು ನುಡಿದು ಕೆಟ್ಟ ಕೇಡಿಂಗೆ ಕಡೆ ಇಲ್ಲ. ॥೫೭॥

ಮತ್ತಂ, ನಾನು ಭಕ್ತನಲ್ಲಯ್ಯ! ನಾನು ಯುಕ್ತನಲ್ಲಯ್ಯ! ನಾನು ಮುಕ್ತನಲ್ಲಯ್ಯ! ಕಪಟ ವೇಷದ ಡಂಭಕ ನಾನು ಕೂಡಲಸಂಗಮದೇವ

ಎನ್ನ ಭಕ್ತಿ ಮಾಳಲೊಟ್ಟೆ ಎಂಬುದ ನೀವು ತೋರಬಂದಿರಾಗಿ, ಎನಗಿಂದೆ ರಿಯು ಬಂದಿತ್ತು. ॥೫೮॥

ಹೀಗೆಂದು ಬಸವರಾಜದೇವರು ಕಿಂಕುರ್ವಾಣದಿಂ ಬಿನ್ನೈಸಲು, ಇದಕ್ಕೆ ಪ್ರಭುದೇವರು ವಿಡಂಬಿಸುತಿರ್ದ ಪ್ರಸ್ಥಾವದ ವಚನ ॥

ಸಜ್ಜನ ಸನ್ನಿಹಿತವಾದ ಭಕ್ತಿ ಹೊತ್ತಿಗೊಂದು ಪರಿಯುಂಟೆ ಹೇಳಾ? ಒಮ್ಮೆ ಅಹಂಕಾರ ಒಮ್ಮೆ ಕಿಂಕಲವೆ? ಮನಕ್ಕೆ ಮನಸಾಕ್ಷಿಯಾಗಿ ಮಾಡುವ ಭಕ್ತನಲ್ಲಿ ಗುಹೇಶ್ವರನಿಪ್ಪನಲ್ಲದೆ ಪ್ರಪಂಚಿನೊಳಗಿಲ್ಲ ಕಾಣಾ ಸಂಗನಬಸವಣ್ಣಾ. ॥೫೯॥

ಮತ್ತಂ, ಜಂಗಮವೆ ಲಿಂಗವೆಂದು ನಂಬಿದ ಬಳಿಕ ಸಂದೇಹವಿಲ್ಲದೆ ಇರಬೇಕು ನೋಡಾ! ಸಂದು ಸಂಶಯುವಳಿದು, ಸಯುವಾದ ಭಕ್ತಿ ಹಿಮ್ಮೆಟ್ಟಿ ಹೋಯಿತ್ತು. ಒಪ್ಪಚ್ಚಿ ಬಳಿಕ ಕಿಂಕಲನಾಗಿ, ಒಪ್ಪಚ್ಚಿ ಬಳಿಕ ಅಹಂಕಾರಿಯಾದರೆ, ಹೊರಗೆ ನೂಕುವ ಕಾಣಾ ನಮ್ಮ ಗುಹೇಶ್ವರಲಿಂಗವು. ॥೬೦॥

ಹೀಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಬಸವರಾಜದೇವರು ಬಿನ್ನೈಸಿದ ಪ್ರಸ್ಥಾವದ ವಚನ. ॥

ಬೆದಕದಿರು, ಬೆದಕದಿರು. ಬೆದಕಿದಿರೆ ಹುರುಳಿಲ್ಲ. ಚಿತ್ತರಟ್ಟೆಯ ಕಾಯಲ್ಲಿ ಮತ್ತೇನನರಸುವಿರಿ? ನಿಮ್ಮುತ್ತಮಿಕೆಯ ಮರೆಯಯ್ಯ ಕೂಡಲಸಂಗಮದೇವ. ॥೬೧॥

ಎನ್ನ ಚಿತ್ತ ಅತ್ತಿಯ ಹಣ್ಣು ನೋಡಯ್ಯ. ವಿಚಾರಿಸಿ ನೋಡಿದರೆ ಹುರುಳಿಲ್ಲ ನೋಡಯ್ಯ! ಪ್ರಪಂಚಿನ ಡಂಭಿನಲ್ಲಿ ಎನ್ನನೊಂದು ರೂಪ ಮಾಡಿ ನೀವಿರಿಸಿದಿರಿ ಕೂಡಲಸಂಗಮದೇವಾ. ॥೬೨॥

ಹೀಗೆಂದು ಬಸವರಾಜದೇವರು ಬಿನ್ನೈಸಲು, ಅದಕ್ಕೆ ಪ್ರಭುದೇವರ ಪ್ರತ್ಯುತ್ತರ, ॥

ಕೈಯ್ಯಲ್ಲಿ ದೊಣ್ಣೆ, ಮನದಲ್ಲಿ ಕ್ರೋಧ, ವಚನದಲ್ಲಿ ಕಿಂಕಲ, ಲಿಂಗದ ವಾರ್ತೆ ನಿನಗೇಕೆ ಹೇಳಾ ಬಸವ? ಜಂಗಮವೆ ಲಿಂಗವೆಂಬ ಶಬ್ದ ಸೂತಕ ಉಂಟಲ್ಲದೆ ಸಜ್ಜನ ಸದ್ಭಕ್ತಿಯ ಮಾತು ನಿನಗೇಕೆ ಹೇಳಾ ಬಸವ? ಕಬ್ಬುನದ ರೂಪು ಪರುಷವ ಮುಟ್ಟಿ ಹೊನ್ನಾಯಿತ್ತಲ್ಲದೆ ಪರುಷವಾಗಬಲ್ಲುದೆ ಹೇಳಾ ಬಸವ? ಗುಹೇಶ್ವರನೆಂಬ ಪರುಷದ ಪುತ್ಥಳಿಯನರಿವರೆ ತಿಳಿದು ನೋಡಾ ಸಂಗನಬಸವಣ್ಣಾ. ॥೬೩॥

ಹೀಗೆಂದು ಪ್ರಭುದೇವರು ನಿರೂಪಿಸಲು, ಅದಕ್ಕೆ ಬಸವರಾಜ ದೇವರು ಬಿನ್ನೈಸಿದ ಪ್ರಸ್ಥಾವದ ವಚನ.॥

ಆನೆತ್ತ ಬಲ್ಲೆನಯ್ಯ ನಿಮ್ಮ ಭಕ್ತಿಯ ಘನವ? ನಾನೆತ್ತ ಬಲ್ಲೆನಯ್ಯ ನಿಮ್ಮ ಪ್ರಸಾದವ ನಿಲವ? ಕಾಯದ ಕಳವಳದ ಮರೆಯಲ್ಲಿದ್ದವರಲ್ಲಿ ಸಂಬುಗೆಯು ಅಳವಡುವುದೆ? ಕೂಡಲಸಂಗಮದೇವ ಎನ್ನವಗುಣವ ನೋಡದೆ ಕರುಣದಿಂದೆ ಭಕ್ತಿಯ ನಿಲವ ತೋರಾ ತಂದೆ. ॥೬೪॥

ಹೀಗೆಂದು ಬಸವರಾಜದೇವರು ಬಿನ್ನೈಸಲು, ಅದಕ್ಕೆ ಪ್ರಭುದೇವರ ಪ್ರತ್ಯುತ್ತರ.॥

ಕೂರ್ಮನ ಶಿಸುವಿನ ಸ್ನೇಹದಂತಿರಬೇಡಾ ಸಂಗನಬಸವಣ್ಣ. ಕಾಕ ಪಿಕ ಸಂಧಾನದಂತಿರಬೇಡಾ ಸಂಗನಬಸವಣ್ಣ. ಕೊಂಬೆಗೆ ತಪ್ಪದೆ ಹಾಯ್ವ ಕಪಿಯಂತಿರಬೇಡಾ ಸಂಗನಬಸವಣ್ಣ. ನೀರು ಕ್ಷೀರ ಭೇದಿಸಿ ತೆಗೆವ ಹಂಸೆಯಂತಿರಬೇಡಾ ಸಂಗನಬಸವಣ್ಣ. ಗುಹೇಶ್ವರಲಿಂಗವಲ್ಲಿ ಅವಧಾನ ತಪ್ಪಿ ಮರಳಿ ಅರಸಿದರುಂಟೆ ಹೇಳಾ ಸಂಗನಬಸವಣ್ಣಾ? ॥೬೫॥

ಹೀಗೆಂದು ಪ್ರಭುದೇವರು ನಿರೂಪಿಸಲು ಇದಕ್ಕೆ ಬಸವರಾಜದೇವರು ಬಿನ್ನೈಸಿದ ಪ್ರಸ್ಥಾವದ ವಚನ.॥

ಎನ್ನ ತನುವಿಂಗೆ ನೀನೊಡೆಯ. ಎನ್ನ ಮನಕ್ಕೆಯು ನೀನೊಡೆಯ. ಎನ್ನ ಧನಕ್ಕೆಯು ನೀನೊಡೆಯನಾದ ಬಳಿಕ ಎನ್ನರಿವು ನಿನ್ನದು, ಎನ್ನ ಮರಹು ನಿನ್ನದು. ಕೂಡಲಸಂಗಮದೇವ ಭೃತ್ಯಾಪರಾಧಸ್ವಾಮಿನೋ ದಂಡವೆಂಬುದ ವಿಚಾರಿಸಿ ನೋಡಾ ಪ್ರಭುವೆ. ॥೬೬॥

ಹೀಗೆಂದು ಬಸವರಾಜದೇವರು ಬಿನ್ನೈಸಲು, ಅದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ಥಾವದ ವಚನ.॥

ತಾ ಬಾಳಲಾರದೆ ವಿಧಿಯ ಬೈದನೆಂಬ ನಾಣ್ನುಡಿಯಾಯಿತ್ತಲ್ಲ ಬಸವಣ್ಣ! ಅವಧಾನ ತಪ್ಪಿ ಆಚಾರಗೆಟ್ಟು ನಡೆದು ಶಿವಾಧೀನವೆಂದರೆ ಹೋಹುದೆ ಗುಹೇಶ್ವರ ಲಿಂಗದಲ್ಲಿ? ಈ ಬಣ್ಣಿಗೆಯ ಮಾತು ಸಲ್ಲದು ಕೇಳಾ ಸಂಗನಬಸವಣ್ಣಾ. ॥೬೭॥

ಲಿಂಗಜಂಗಮವ ಪೂಜಿಸಿ ಭಕ್ತನಾದೆನೆಂದರೆ ಭೃತ್ಯಾಚಾರ ಸದಾಚಾರವೆ ಮೊದಲು ನೋಡಾ! ವಿಶ್ವಾಸವುಳ್ಳ ಭಕ್ತಿ ಹೊರೆ ಇಲ್ಲ ನೋಡಾ! ಅಹಂಕಾರವೆಂಬ ಅಲಗ ಹಿಡಿದು ಮಾಡುವ ಭಕ್ತಿ ತನ್ನನೆ ಇರಿವುದು ಗುಹೇ

ಶ್ವರನೆಂಬ ಹಗೆಯ ಗೆಲುವರೆ ಅರಿವೆಂಬ ಅಲಗ ಅವಧಾನ ತಪ್ಪದೆ ಹಿಡಿಯಬೇಕು ನೋಡಾ ಸಂಗನಬಸವಣ್ಣಾ. ॥೬೮॥

ಹೀಗೆಂದು ಪ್ರಭುದೇವರು ನಿರೂಪಿಸಲು ಅದಕ್ಕೆ ಬಸವರಾಜ ದೇವರ ಬಿನ್ನಹ.

ಧ್ಯಾನ ಮೌನವೆಂಬ ಶಸ್ತ್ರವ ಹಿಡಿಯಲರಿಯದೆ, ಅಂಹಕಾರ ಧಾರೆಯ ಮೊನೆ ಅಲಗೆಂಬ ಶಸ್ತ್ರವ ಹಿಡಿದು ಕೆಟ್ಟೆನಯ್ಯ. ಅಂಜುವೆನಂಜುವೆನಯ್ಯ! ಜಂಗಮ ಲಿಂಗವೆಂಬ ಭಾಷೆ ಪಲ್ಲಟವಾಯಿತ್ತು! ಇನ್ನು ಜಂಗಮಲಿಂಗವೆಂಬ ಶಿಕ್ಷಾಶಸ್ತ್ರದಲ್ಲಿ ಎನ್ನ ಹೊಯ್ದು ಬೈದು ರಕ್ಷಿಸುವದು ಕೂಡಲಸಂಗಮದೇವಾ. ॥೬೯॥

ಹೀಗೆಂದು ಬಸವರಾಜದೇವರು ಬಿನ್ನೈಸಲು, ಅದಕ್ಕೆ ಮುಳಿಸ ತಿದ್ದಿ ತೋರಿ ನಿರೂಪಿಸಿದ ಪ್ರಸ್ಥಾವದ ವಚನ. ॥

ಮನಕ್ಕೆ ಮನವೇಕಾರ್ಥವಾಗಿ, ಕಾಯಕ್ಕೆ ಕಾಯ ಸಮುದರುಶನವಾಗಿ ಪ್ರಾಣಕ್ಕೆ ಪ್ರಾಣ ಸಮುದರುಶನವಾಗಿದ್ದವರಲ್ಲಿ ಮನವಚನಕಾಯದಲ್ಲಿ ಶಬ್ದ ಸೂತಕ ಹುಟ್ಟಿದರೆ ಸೈರಿಸಬಾರದು ಕಾಣಾ ನಮ್ಮ ಗುಹೇಶ್ವರ ಲಿಂಗದಲ್ಲಿ ನೀನೆ ಭಕ್ತನಾದ ಕಾರಣ ಮುಳಿಸು ಮೊನೆದೋರಿತ್ತು ಕಾಣಾ ಸಂಗನಬಸವಣ್ಣಾ. ॥೭೦॥

ಮತ್ತಂ, ಸೂಳೆ ಹಲಬರನುರುಳಿದಳೆಂದು ನಿಂದಿಸುವರಿಲ್ಲ ಕೇಳಾ! ಪತಿವ್ರತೆ ತನ್ನ ಪುರುಷನಲ್ಲದೆ ಮತ್ತೊಬ್ಬನ ಮುಖವ ನೋಡಿದರೆ, ಅವಳು ಚಾಂಡಾಲಗಿತಿ ಎಂಬುದು ಲೋಕವೆಲ್ಲವು. ಕೀರ್ತಿ ವಾರ್ತೆಗೆ ಮಾಡುವ ಭಕ್ತ ತಪ್ಪಿದರೆ, ಅದ ಮನಕ್ಕೆ ತರಲಿಲ್ಲ. ಸಜ್ಜನ ಸದ್ಭಕ್ತಿಯಡಹಿದರೆ, ಅದ ಸೈರಿಸಬಾರದು ನೋಡಾ. ನಮ್ಮ ಗುಹೇಶ್ವರ ಲಿಂಗಕ್ಕೆ ಆದಿಯಿಂದತ್ತ ನೀನೆ ಭಕ್ತನಾದ ಕಾರಣ ಮನ ನೊಂದಿತ್ತು ಕಾಣಾ ಸಂಗನಬಸವಣ್ಣಾ. ॥೭೧॥

ಹೀಗೆಂದು ಪ್ರಭುದೇವರು ಮುಳಿಸ ತೋರಿ ಹೇಳುತ್ತಿರಲು, ಅವಕ್ಕೆ ಬಸವರಾಜದೇವರು ಅನುತಾಪದಿಂದೆ ಬಿನ್ನಹಂ ಮಾಡಿದ ಪ್ರಸ್ಥಾವದ ವಚನ. ॥

ಎನ್ನ ನುಡಿ ಎನಗೆ ನಂಜಾಯಿತ್ತು. ಎನ್ನ ಅಲಗೆ ಎನ್ನ ಕೊಂದಿತ್ತು. ಆನು ಪಾಪಿಯಯ್ಯ. ಆನು ಕೋಪಿಯಯ್ಯ. ತರಳತನದಲ್ಲಿ ಕೆಟ್ಟೆನಯ್ಯ! ಭಕ್ತಿ ಯುಕ್ತಿಯ ಹೊಲಬನರಿಯದೆ, ಆನು ಮರುಳಾದೆನಯ್ಯ! ಆಳು ಮುನಿ

ದರೆ ಆಳೆ ಕೆಡುವುದು. ನೀವು ಮುನಿದರೆ ನಾನೆ ಕೆಡುವೆನಯ್ಯ ಕೂಡಲಸಂಗ ಮದೇವಾ. ॥೭೨॥

ಮತ್ತಂ, ಒಲೆ ಹೊತ್ತಿ ಉರಿದರೆ ನಿಲಬಹುದಲ್ಲದೆ ನೆಲ ಹೊತ್ತಿ ಉರಿದರೆ ನಿಲಬಹುದೆ? ಏರಿ ನೀರುಂಬರೆ, ಬೇಲಿ ಕೈಯ್ಯ ಮೆಯ್ದರೆ, ನಾರಿ ತನ್ನ ಮನೆಯಲ್ಲಿ ಕಳವರೆ, ತಾಯ ಮೊಲೆವಾಲು ನಂಜಾಗಿ ಕೊಲುವರೆ ಇನ್ನಾರಿಗೆ ದೂರುವೆನಯ್ಯ? ಕೂಡಲಸಂಗಮದೇವ ನೀವು ಮುನಿದರೆ ನಾನು ಸೈರಿಸಬಲ್ಲೆನೆ ಹೇಳಾ ಪ್ರಭುವೆ? ॥೭೩॥

ಮತ್ತಂ, ಎನ್ನ ಗುಣಾವಗುಣವ ಸಂಪಾದಿಸದಿರಯ್ಯ. ನಿಮಗಾನು ಸರಿಯೆ? ಅಪ್ರತಿಮ ಮಹಿಮ ನಿಮಗಾನು ಸರಿಯೆ? ಅಪ್ರತಿಮ ಕೂಡಲ ಸಂಗಮದೇವ ನೀವು ಮಾಡಲಾನಾದೆನು. ಎನ್ನೊಡನೆ ಮುನಿವರೆ ಎಲೆ ತಂದೆ ಹೇಳಾ? ॥೭೪॥

ಮತ್ತಂ, ಕಣ್ಣ ಕೋಪಕ್ಕೆ ಮುಂದುವರಿಯದೆ ನುಡಿದೆನು. ಮನ ನಿವೃತ್ತ ಮುಂದಾಗಿ ಕಂಡೆನಯ್ಯ! ಸಖಿಯರಿಲ್ಲದೆ ಸುಖವ ಬಯಸಿದ ರುಂಟೆ? ಎನ್ನ ಮುನಿಸು ಎನ್ನಲ್ಲಿಯೆ ಅಡಗಿತ್ತು. ಇನ್ನು ಬಾರಾ ಎಲೆ ಪ್ರಭುವೇ ಕೂಡಲಸಂಗಮದೇವಾ. ॥೭೫॥

ಹೀಗೆಂದು ಬಸವರಾಜದೇವರು ಬಿನ್ನೈಸಲು, ಅದಕ್ಕೆ ಪ್ರಭುದೇವರು ಬಸವರಾಜದೇವರ ಮಹತ್ವವನೆತ್ತಿ ತೋರಿಸಿ ಆಕ್ಷೇಪಂ ಬಡುತ್ತಿರ್ದ ಪ್ರಸ್ಥಾವದ ವಚನ. ॥

ಆರಾಧಿಸಿ ವಿರೋಧಿಸುವರೆ, ಪೂಜಿಸಿ ಪೂಜೆಯ ಮರೆವರೆ, ಜಂಗ ಮಲಿಂಗವೆಂದರಿದವರು ಸಂಚಲವಪ್ಪರೆ ಗಾಳಿಯು ಗಂಧವು ಕೂಡಿದಂತೆ, ಜಗದೊಳಗೆ ಇದೆ ಕೀರ್ತಿವಾರ್ತೆಯ ಹಡದೆಯಲ್ಲ ಬಸವಣ್ಣ. ನಿನ್ನ ಶಿಸುವಿನೊಡತಣ ತೆರಹು ಮರಹ ವಸುಧೆಯೊಳಗಣ ಪ್ರಮಥರು ಮೆಚ್ಚು ವರೆ, ತಿಳಿದು ನೋಡುವರೆ? ಗುಹೇಶ್ವರನ ಶರಣ ಅಲ್ಲಯ್ಯಂಗೆ ನೀನು ಪರಮಾರಾಧ್ಯರು ಕಾಣಾ ಸಂಗನಬಸವಣ್ಣಾ. ॥೭೬॥

ಎನಗೆ ನೀನು ಪರಮಾರಾಧ್ಯರಾಗಿ ಇಹುವ ಮರದೆಯಲ್ಲ ಎಂದು ಪ್ರಭುದೇವರು ನಿರೂಪಿಸಲು, ಅದಕ್ಕೆ ಬಸವರಾಜದೇವರು ಬಿನ್ನೈಸಿದ ಪ್ರಸ್ಥಾವದ ವಚನ. ॥

ಎನ್ನ ಗತಿ ಮತಿ ನೀನೆ ಕಂಡಯ್ಯ! ಎನ್ನ ಗುರು ಪರಮ ಗುರು ನೀನೆ ಕಂಡಯ್ಯ! ಎನ್ನ ಅಂತರಂಗದ ಜ್ಯೋತಿ ನೀನೆ ಕಂಡಯ್ಯ. ಕೂಡಲಸಂಗಮದೇವ ನೀನೆ ಎನಗೆ ಗುರು, ನಾನೆ ನಿಮ್ಮ ಶಿಷ್ಯನೆಂಬುದ ನಿಮ್ಮ ಶರಣ ಸಿದ್ಧರಾಮಯ್ಯದೇವರು ಬಲ್ಲರು ಕೃಪೆ ಮಾಡಾ ಪ್ರಭುವೆ. ॥೭೭॥

ಎನ್ನ ಗುರು ಪರಮಗುರು ನೀನೆ ಎಂಬುದನು ನಾ ನಿಮಗೆ ಭಕ್ತನೆಂಬುದನು ಸಿದ್ಧರಾಮಯ್ಯ ದೇವರು ಬಲ್ಲರೆಂದು ಬಸವರಾಜದೇವರು ಬಿನ್ನಹಂ ಮಾಡಿ, ಮಠಕ್ಕೆ ಬಿಜಯಂಗೈವುದೆಂದು ಬಿನ್ನೈಸುತ್ತಿರಲು, ಆ ಸಿದ್ಧರಾಮಯ್ಯ ದೇವರು ಪ್ರಭುದೇವರೊಡನೆ ಬಸವರಾಜದೇವರ ಕೊಂಡಾಡಿ ಆ ಬಸವರಾಜದೇವರ ಮಠಕ್ಕೆ ಬಿಜಯಂಗೈವುದೆಂದು ಬಿನ್ನೈಸುವ, ಪ್ರಸ್ತಾವದ ವಚನ. ॥

ಕೇಳು ಕೇಳು ಎಲೆ ಅಯ್ಯ. ಆದಿ ಅನಾದಿ ಇಲ್ಲದಂದು, ಬಸವಣ್ಣನೆ ಭಕ್ತ, ನಾದ ಬಿಂದು ಕಳೆಗಳಿಲ್ಲದಂದು ನೀನೆ ಜಂಗಮ, ಶಿವಶಕ್ತಿಗಳುದಯವಾಗದ ಮುನ್ನ ಬಸವಣ್ಣನೆ ಭಕ್ತ, ಸುರಾಳ ನಿರಾಳವೆಂಬ ಶಬ್ದ ಹುಟ್ಟದ ಮುನ್ನ ನೀನೆ ಜಂಗಮ. ಈ ಉಭಯಭಾವದಲ್ಲಿ ಭೇದ ಉಂಟೆ? ಕಪಿಲ ಸಿದ್ಧಮಲ್ಲಿನಾಥಯ್ಯ, ಬಸವಣ್ಣನಾರೆಂಬುದ ನಿಮ್ಮಲ್ಲಿ ನೀವೆ ತಿಳಿದು ನೋಡಿ ಕೃಪೆ ಮಾಡಾ ಪ್ರಭುವೆ. ॥೭೮॥

ಇಂತು ಸಿದ್ಧರಾಮಯ್ಯ ದೇವರು ಬಸವರಾಜ ದೇವರ ಘನವ ತೋರಿ ಪ್ರಭುದೇವರಿಗೆ ಬಿನ್ನಹಂ ಮಾಡಲು, ಆ ಪ್ರಸ್ತಾವದೊಳು ಚಿಕ್ಕದಣ್ಣಾಯಕರು ಪ್ರಭುದೇವರಿಗೆ ನಮಸ್ಕಾರಮಂ ಮಾಡಿ ಬಿನ್ನೈಸುವ ಪ್ರಸ್ತಾವದ ವಚನ. ॥

ಶರಣು ಶರಣಾರ್ಥಿ ಮಹದೇವಾ. ಶರಣು ಶರಣಾರ್ಥಿ ಪರಬ್ರಹ್ಮಸ್ವರೂಪ. ಶರಣು ಶರಣಾರ್ಥಿ ನಿರಾಕಾರತತ್ವವೆ. ನೀವೆ ಗತಿಮತಿ. ನಿಮ್ಮ ಚರಣಕೆ ಶರಣಯ್ಯ. ಸತಿಪತಿಯ ಒಲುಮೆಯು ಮುನಿಸು ಅತಿ ಬೇಟವೆಂಬುದು ತಪ್ಪದು ನೋಡಾ! ನಿಮ್ಮ ಶರಣ ಬಸವಣ್ಣನೊಡತಣ ಮುನಿಸು ಎನ್ನ ಮನಕ್ಕೆ ಸಂಶಯ ತೋರದು ನೋಡಾ! ಸಂತೆಯ ನೆರಹಿಯಲ್ಲಿ ಅಭಿಮಾನದ ಮಾತ ಮಾರ ಬಹುದೆ? ಬೀದಿಯಲ್ಲಿ ನಿಂದು

ನುಡಿಯನುಭಾವದ ರಚ್ಚೆಯು ನಗೆಗೇಡ ನೋಡಯ್ಯ! ಸಂಗನಬಸವಣ್ಣ ನೊಳಗೆ ನಿನ್ನೊಳಗೆ ಭೇದವಿಲ್ಲವೆಂಬುವ ನೀವೆ ಅರಿದರಿದು ಮತ್ತೆ ಬಾರೆ ನೆಂಬುದುಚಿತವೆ? ಕೂಡಲ ಸಂಗನ ಶರಣ ಬಸವಣ್ಣನೆ ನಿಮ್ಮ ಪ್ರಾಣ ವಾಗಿರುತ್ತಿರಲು, ಇನ್ನಾರೊಡನೆ ಮುನಿವಿರಿ ಕೃಪೆ ಮಾಡಾ ಪ್ರಭುವೆ? ॥೭೯॥

ವುತ್ತಂ॥ ಭಕ್ತರ ಹೆಚ್ಚುಕುಂದೆಂಬುದನರಿಯಾ ಪ್ರಭುವೆ. ನಿನ್ನ ಪ್ರಾಣವೆ ಬಸವಣ್ಣನ ಪ್ರಾಣ. ಬಸವಣ್ಣನ ಪ್ರಾಣವೆ ನಿನ್ನಪ್ರಾಣ. ನಿನ್ನ ಕಾಯವೆ ಬಸವಣ್ಣನ ಕಾಯ. ಬಸವಣ್ಣನ ಕಾಯವೆ ನಿನ್ನ ಕಾಯ. ನೀವಿಲ್ಲದಿರೆ ಬಸವಣ್ಣನಿಲ್ಲ. ಬಸವಣ್ಣನಿಲ್ಲದಿರೆ ನೀವಿಲ್ಲ- ಇಂತೊಂದಾ ನೊಂದ ಬಿಚ್ಚಿ ಬೇರು ಮಾಡಬಾರದೆಂಬುದನರಿದು, ಮತ್ತೆ ಬರಿದೆ ಮುನಿ ವರೆ? ಬಲ್ಲವರು ನಡೆವ ಹಾರುವ ಮುಗ್ಗಿದೊಡೆ ನಡಿಸಿ ಕೊಂಬುದ ಲ್ಲದೆ, ಮುಡಿಯ ಹರಿಯ ಹೊಯ್ವವರುಂಟೆ? ಲೋಕದೊಳಗೆ ಮರಹಿಂದ ಗುಣವ ಸಂಪಾದಿಸದೆ ಬಿಜಯಂಗೈವುದೈಯ್ಯ ನಿಮ್ಮ ಗೃಹಕ್ಕೆ ಕೂಡಲ ಸಂಗಮದೇವ ನಿಮ್ಮ ಶರಣ ಬಸವಣ್ಣನಾರೆಂಬುದ ನೀನೊಮ್ಮೆ ತಿಳಿದು ನೋಡಾ ಪ್ರಭುವೆ. ॥೮೦॥

ಇಂತು ಚಿಕ್ಕದಣ್ಣಾಯಕರು ಬಿನ್ನಪಂ ಗೈದಲ್ಲಿ ಮಡಿವಾಳ ತಂದೆ ಗಳು ಪ್ರಭುದೇವರಿಗೆ ಬಿನ್ನೈಸಿದ ಪ್ರಸ್ಥಾವದ ವಚನ. ॥

ಶರಣು ಶರಣಾರ್ಥಿ .ಎನ್ನ ಬಿನ್ನಪವನವಧರಿಸಯ್ಯ. ಬಸವಣ್ಣನೆ ಗುರು ರೂಪಾಗಿ ಮರ್ತ್ಯಕ್ಕೆ ಬಂದನು. ಚನ್ನಬಸವಣ್ಣನೆ ಲಿಂಗರೂಪಾಗಿ ಮರ್ತ್ಯಕ್ಕೆ ಬಂದರು. ಪ್ರಭುವೇ ನೀವು ಜಂಗಮ ರೂಪಾಗಿ ಮರ್ತ್ಯಕ್ಕೆ ಬಂದಿರಿ. ಭಕ್ತಿಯ ಬೆಳವಿಗೆಗೆ ಬಸವಣ್ಣನೆ ಕಾರಣಿಕನಾದ. ಅರಿವಿನ ಬೆಳ ವಿಗೆಗೆ ಚನ್ನಬಸವಣ್ಣನೇ ಕಾರಣಿಕನಾದ. ಈ ಇಬ್ಬರನು ಒಳಕೊಂಬ ಮಹಾಘನಕ್ಕೆ ನೀವು ಕಾರಣಿಕರಾದಿರಿ. ಇಂತು ಗುರುಲಿಂಗ ಜಂಗಮ ಒಂದೆಯಲ್ಲದೆ ಭಿನ್ನಭಾವವುಂಟೆ? ಬಸವಣ್ಣ ಚನ್ನಬಸವಣ್ಣನ ಬಿನ್ನಪವ ಮೀರದೆ ಬಿಜಯಂಗೈವುದಯ್ಯ ಕಲಿದೇವರ ದೇವಾ. ॥೮೧॥

ಇಂತು ಚಿಕ್ಕದಣ್ಣಾಯಕರು ಮಡಿವಾಳ ತಂದೆಗಳು ಬಿನ್ನಹಂ ಮಾಡಲು, ಪ್ರಭುದೇವರು ಪ್ರಸನ್ನರಾಗಿ, ನಿತ್ಯ ಬಸವಣ್ಣ, ನಿರಂಜನ ಬಸ ವಣ್ಣ, ಸಚ್ಚಿದಾನಂದ ನಿತ್ಯ ಪರಿಪೂರ್ಣ ಬಸವಣ್ಣ, ಅಖಂಡಪಿಂಡ ಬಸ ವಣ್ಣ, ಶಿವಾಚಾರ ಚಕ್ರವರ್ತಿ ಬಸವಣ್ಣ, ಸರ್ವಾಚಾರ ಸಂಪನ್ನ ಬಸ

ವಣ್ಣ, ಷಡುಸ್ಥಲ ಬ್ರಹ್ಮರೂಪು ಬಸವಣ್ಣ, ಸರ್ವಾಂಗ ಲಿಂಗಮೂರ್ತಿ ಬಸವಣ್ಣ, ಸ್ವಾನುಭಾವ ಸಾರೋದ್ಧಾರ ಬಸವಣ್ಣ, ಜಂಗಮ ಪ್ರಾಣಿ ಲಿಂಗೈಕ್ಯ ಬಸವಣ್ಣ, ಆರೂಢ ದಾಸೋಹಿ ಬಸವಣ್ಣ, ನಿಃಸಂಗ ನಿಜರೂಪು ಬಸವಣ್ಣ, ಶಿವಸಮಯ ಪ್ರತಿಷ್ಠಾಚಾರ್ಯ ಬಸವಣ್ಣನೆಂದು ಬಸವರಾಜದೇವರ ಮಹಾತ್ಮೆಯನು ನಾನಾ ವಿಧದಿಂ ಸ್ತೋತ್ರಮಂ ಮಾಡಿ ಆ ಪ್ರಭುದೇವರು ತಾವು ನಮಸ್ಕಾರಮಂ ಮಾಡುವ ಪ್ರಸ್ಥಾವದ ವಚನ ॥

ಆಯತದಲ್ಲಿ ಪೂರ್ವಾಚಾರಿಯ ಕಂಡೆ, ಸ್ವಾಯತದಲ್ಲಿ ಪೂರ್ವಾಚಾರಿಯ ಕಂಡೆ, ಸನ್ನಿಹಿತದಲ್ಲಿ ಪೂರ್ವಾಚಾರಿಯ ಕಂಡೆ. ಗುಹೇಶ್ವರ ಲಿಂಗದಲ್ಲಿ ಪರಮ ಪೂರ್ವಾಚಾರಿ ಸಂಗನಬಸವಣ್ಣನ ಶ್ರೀ ಪಾದಕ್ಕೆ ನಮೋ ನಮೋ ಎಂಬೆನಯ್ಯ. ॥೮೨॥

ಮತ್ತಂ। ಗುರುಸ್ಥಲ, ಲಿಂಗಸ್ಥಲ, ಜಂಗಮಸ್ಥಲ, ಪ್ರಸಾದಸ್ಥಲ, ಮಡಗಿ ಕರಸ್ಥಲವಿನ್ನಾರಿಗೆ ಸಾರಿತ್ತು? ನಿರ್ವಂಚಕತ್ವದ ನಿತ್ಯ ನಿಜಸ್ಥಲವಾದ ಭಕ್ತಿಸ್ಥಲವಿನ್ನಾರಿಗೆ ಸಾರಿತ್ತು ಬಸವಣ್ಣಂಗಲ್ಲದೆ? ಗುಹೇಶ್ವರ ನಿಮ್ಮ ಶರಣ ಸಂಗನಬಸವಣ್ಣನ ಮೊರೆಹೊಕ್ಕು ನಾನು ಬದುಕಿದೆನು. ॥೮೩॥

ಮತ್ತಂ॥ ಕುಲದೊಳಗೆ ಹುಟ್ಟಿ ಕುಲವ ಬೆರಿಸದೆ ತನ್ನ ನಿಲವ ಬಲಿದಿಪ್ಪವರಾರು ಹೇಳಾ? ಹಬ್ಬಿದ ಮೂರು ಬೆಟ್ಟಕ್ಕೆ ತನ್ನ ಮನವ ಹಬ್ಬಲೀಯ್ಯದೆ ಲಿಂಗ ಜಂಗಮಕ್ಕೆ ಸವಿಸಿ ಸ್ವಯಂಲಿಂಗವಪ್ಪವರಿನ್ನಾರು ಹೇಳಾ? ಸ್ವಯೋಲಿಂಗ ಸ್ವಯೋಶರಣ ಸ್ವಯೋಭೋಗವೆಂದುದಾಗಿ ಗುಹೇಶ್ವರ ನಿಮ್ಮ ಶರಣ ಸಂಗನಬಸವಣ್ಣಂಗೆ ನಮೋ ನಮೋ ಎಂಬೆನು. ॥೮೪॥

ಮತ್ತಂ, ತನುವ ಗೆಲಲರಿಯದೆ, ಮನವ ಗೆಲಲರಿಯದೆ ಧನವ ಗೆಲಲರಿಯದೆ ಭ್ರಮೆಗೊಂಡಿತ್ತು ಲೋಕವೆಲ್ಲವು. ತನು ದಾಸೋಹಕ್ಕೆ ಸವಿಸಿ ಮನವ ಲಿಂಗಧ್ಯಾನದಲ್ಲಿ ಸವಿಸಿ ಧನವ ಜಂಗಮದಲ್ಲಿ ಸವಿಸಿ ಗೆಲಬಲ್ಲರೆ ಸಂಗನಬಸವಣ್ಣನಲ್ಲದೆ ಮತ್ತಾರನು ಕಾಣೆ ಗುಹೇಶ್ವರ ನಿಮ್ಮ ಶರಣ ಸಂಗನ ಬಸವಣ್ಣಂಗೆ ನಮೋ ನಮೋ ಎನುತಿರ್ದೆನು. ॥೮೫॥

ಮತ್ತಂ, ಬಯಲಮೂರ್ತಿಗೊಳಿಸಿದನೊಬ್ಬ ಶರಣ ಆ ಮೂರ್ತಿಯಲ್ಲಿ ಭಕ್ತಿ ಸ್ವಾಯತವ ಮಾಡಿದನೊಬ್ಬ ಶರಣ- ಆ ಭಕ್ತಿಯನೆ ಸುಜ್ಞಾನಮುಖವ ಮಾಡಿದನೊಬ್ಬ ಶರಣ. ಆ ಸುಜ್ಞಾನವನು ಲಿಂಗ ಮುಖ

ವಾಗಿ ಧರಿಸಿದನೊಬ್ಬ ಶರಣ. ಆ ಲಿಂಗವನು ಸರ್ವಾಂಗದಲ್ಲಿ ವೇಧಿಸಿಕೊಂಡನೊಬ್ಬ ಶರಣ. ಆ ಸರ್ವಾಂಗವನೆ ನಿರ್ವಾಣ ಸಮಾಧಿಯಲ್ಲಿ ನಿಲಿಸಿದನೊಬ್ಬ ಶರಣ. ನಾನು ನಿರ್ವಾಣದಲ್ಲಿ ನಿಂದು ಅಗಮ್ಯನಾದೆನೆಂದರೆ ಭಕ್ತಿ ಕಂಪಿತನೆನಿಸಿ ಎನ್ನ ತನ್ನಲ್ಲಿಗೆ ಬರಿಸಿಕೊಂಡನೊಬ್ಬ ಶರಣ. ಗುಹೇಶ್ವರ ನಿಮ್ಮ ಶರಣ ಸಂಗನಬಸವಣ್ಣನ ಶ್ರೀಪಾದವ ಕಂಡು, ಶರಣೆಂದು ಬದುಕಿದೆನು. ॥೮೬॥

ಇಂತು ಪ್ರಭುದೇವರು ಪ್ರಸನ್ನರಾಗಿ ಬಸವರಾಜದೇವರ ಸ್ತೋತ್ರಮಂ ಮಾಡುತ್ತಿರಲು, ಆ ಬಸವರಾಜದೇವರು ಪ್ರಭುದೇವರ ಸ್ತೋತ್ರಮಂ ಮಾಡುವ ಪ್ರಸ್ತಾವದ ವಚನ. ॥ ●

ಕಾಲಿಲ್ಲದೆ ನಡೆವನು, ಕೈಯ್ಯಿಲ್ಲದೆ ಹಿಡಿವನು, ಕಣ್ಣಿಲ್ಲದೆ, ನೋಡುವನು, ಸಹಜವಾಗಿ ಪೈಯಿಲ್ಲದ ಬಣ್ಣ ಮಥನವಿಲ್ಲದ ಕೂಟ ಅಲ್ಲಿ ಕೈನೆರದಾಗಿ ನಿಲೆಯ ಮೇಲಿಹ ಒಡಲು ತನ್ನತಾನರಿಯದೆ ಬಿಡದೆ ಎನ್ನ ಬೆಂಬತ್ತಿ ಬಂದ ಪರಿಯನೋಡಾ. ಜಡವಿಡಿದ ಎನ್ನ ಕಾಯದ ಕಳವಳವ ತಿಳುಹಲೆಂದು, ಅಡಿ ಅಡಿಗೆ ಅನುಭಾವ ತೋರುತ್ತಿದ್ದಾನೆ. ಕುಳ್ಳಿಡೆಯಲ್ಲಿ, ಕುಂಟನಿಪ್ಪೆಡೆಯಲ್ಲಿ, ಹೆಳವ ಎಲ್ಲಿ, ನೋಡಿದಡಲ್ಲಿ ಪರಿಪೂರ್ಣನು. ಮೆಲ್ಲ ಮೆಲ್ಲನೆ ಒಳಗ ನೆರೆದು ತೋರುತ್ತಿದ್ದಾನೆ. ಬಲ್ಲವರೆಲ್ಲ ಬದುಕಿ ಎಂದು ಝಲ್ಲರಿಯ ಮೇಲೊಂದು ಜಿಳುಗೊಡೆಯ ಹಿಡಿದು, ಬಲ್ಲಿದ ನಾನೆಯ ತಡೆದು ನಿಲ್ಲಿಸಬಲ್ಲನು ಕೂಡಲಸಂಗಮ ದೇವರ ಮಹಮನೆಯಲ್ಲಿ ಪ್ರಭುದೇವರ ಮರೆಹೊಕ್ಕು ಬದುಕಿದೆ ನಾನು. ।೮೭॥

ಮತ್ತಂ, ಆದಿಯನರುಹಿದ. ಅನಾದಿಯ ತೋರಿದ. ಇಹವ ಕೆಡಿಸಿದ. ಪರವ ನಿಲಿಸಿದ. ಘನವ ತೋರಿದ. ಮನವು ಸರಸವಿಟ್ಟು ಅನುವ ತೋರಿದ. ಅಯತವ ಮಾಡಿ, ತನುವ ಮರಸಿ, ಮಹಾ ತನುವ ನರುಹಿದ. ಹಿಂದಣ ಪೂರ್ವಾಶ್ರಯವ ಹಿಂದುಮಾಡಿ ತೋರಿ, ಮುಂದಣ ಗತಿಯ ಸಂದೇಹವ ಬಿಡಿಸಿದ. ಕೂಡಲಸಂಗಮದೇವರಲ್ಲಿ ಪ್ರಭುದೇವರ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು. ॥೮೮॥

ಮತ್ತಂ, ಸ್ತೋತ್ರದ ಪದಂಗಳು. ॥

ರಾಗ ಗುಜ್ಜರಿ ॥ ಗುರುಚರಣವೆ ಗತಿ, ಗುರುಚರಣವೆ ಮತಿ, ಗುರು ಶಬ್ದ ಪರುಷಪಾವನವೆನಗೆ, ನ ಗುರೋರಧಿಕಂ ನ ಗುರೋರಧಿಕಂ ನಗುರೋರಧಿಕವೆನುತಿರ್ದವು ಶ್ರುತಿ ॥ಪಲ್ಲ॥

ಅಜಾತನಲ್ಲ ಅಜಾತಜನಿತನಲ್ಲ ಖೇಚರನಲ್ಲ, ಭೂಚರನಲ್ಲ, ಆಚರಿಸುವನಲ್ಲ ಅನ್ಯಸುಖಂಗಳ ಭ್ರಾಂತನಲ್ಲದ ನಿಭ್ರಾಂತ ಲಿಂಗೈಕ್ಯನು. ॥೧॥

ಯತ್ರ ಯತ್ರ ಶಿವತತ್ವ ಸಾಧಕನಲ್ಲ, ಅಷ್ಟತನು ಮೂರುತಿಯಲ್ಲ, ಅಷ್ಟಮದಂಗಳ ಮೆಟ್ಟಿಯೆ ನಿಲಿಸಿದ ಅಷ್ಟದಳ ಕಮಲಪೂಜಿತನು ನೀನೆ ॥೨॥

ಆಕಾರ ನಿರಾಕಾರ ಸನುಮತ ತಾನಾಗಿ ಮಾಕರಿಸುವನಲ್ಲ ಮನದಿಚ್ಛೆಗೆ ಆಕಾರ ನಿರಾಕಾರ ಸಾಕಾರ ಸನುಮತನು ಏಕಾಂತದೊಳಗಿಪ್ಪ ನಿಜಸ್ವರೂಪಂಗೆ. ॥೩॥

ಜೀವ ಜೀವಾದಿಗಳೊಳಗಣ ಅನ್ಯಭಿನ್ನ ಭಾವಕನಲ್ಲ, ಸಮಸ್ತವಾದ ಜೀವಿಗಳ್ಸುಖಭೋಗ, ಅಣುರೇಣುಸ್ಥೂಲಸೂಕ್ಷ್ಮ ಕಾರಣಿಕನುಭಾವ ಭರಿತ ನೀನೆ. ॥೪॥

ಭೃಂಗವು ಕುಸುಮ ಪರಿಮಳಕೆರಗುವಂತೆ, ಲಿಂಗ ಸಂಗಸುಖ ನಿರ್ಲೇಪ ಅಂಗಲಿಂಗ ಸಂಗವಾಗಿಪ್ಪ ಶಿವಯೋಗಿಸಂಗ ಕೂಡಲಸಂಗನಲ್ಲಿ ಪ್ರಭುದೇವಾ. ॥೫॥

ಅಂತು ಪದಸಹ ವಚನ. ॥೯೩॥

ಇಂತೀ ಶ್ರೀಮತ್ಸಕಲಗಣ ಪುರಾತನರೊಳ್ ಪ್ರಭುದೇವರು ಮಹಾನುಭಾವ ಸಂಗೋಷ್ಠಿಯಂ ಮಾಡಿದ ಶೂನ್ಯಸಂಪಾದನೆಯೊಳ್ ಬಸವೇಶ್ವರನು ಪ್ರಭುದೇವರ ಮುನಿಸ ತಿಳುಹಿದ ಸಂಪಾದನೆಗೆ ಪಂಚಮೋಪದೇಶ ಸಮಾಪ್ತ ಮಂಗಳಮಹಾ. ಶ್ರೀ



# ಮರುಳ ಶಂಕರದೇವರ ಸಂಪಾದನೆ.

## (ಷಷ್ಠಮೋಪದೇಶ.)

॥ಕಂದ॥ ವರಬಸವ ದಂಡನಾಥನ। ನಿರಹಂಭಾವಕ್ಕೆ ಮೆಚ್ಚಿ ಬರುತಿರ್ಪ್ಪ ಪ್ರಭು॥ ಮರುಳುಶಂಕರನಿತ್ಯೈಕ್ಯವ। ನಿರದಿತ್ತುದ ಪೇಳ್ವೆ ಶರಣಜನಕತಿಶಯದಿಂ॥

ಅದೆಂತೆಂದೊಡಾ ಪ್ರಭುದೇವರು ಬಸವರಾಜದೇವರು ಮಾಡುವ ಸ್ತೋತ್ರಕ್ಕಂ ಮೆಚ್ಚಿ ಮುಂದಕ್ಕೆ ಗಮಿಸುತ್ತಿರಲು, ಅಲ್ಲಿ ಪ್ರಮಥರ ತಿಂಥಿಣಿಯಿಂ ಅನುಭಾವ ಸದ್ಗೋಷ್ಠಿಯಿಂ ಉಘೆ ಚಾಂಗು ಭಲಾ ಎಂಬ ಶಬ್ದದ ಸಡಗರದಿಂ ಬಸವರಾಜದೇವರ ರಾಜಭವನಕ್ಕೆ ಅತ್ಯಂತ ಸಂಭ್ರಮದಿಂ ಪೋಪ ಪ್ರಸ್ಥಾವದೊಳು ಮುಂದೆ ಅಂಗಳದಲ್ಲಿ ಪ್ರಸಾದದ ಕುಂಡ ಸಮೀಪಸ್ಥವಾಗಾಅ, ಲಲ್ಲಿರ್ದ ಮರುಳು ಶಂಕರದೇವರು ಶರಣ ತಿಂಥಿಣಿಯುಂ ಪ್ರಭುದೇವರ ಶ್ರೀ ಮೂರ್ತಿಯುಂ ಕಂಡು, ಮೆಲ್ಲನೆ ಆ ಪ್ರಸಾದದ ಕುಂಡದಿಂ ಪೊರಮಡುತಿರ್ದರದೆಂತೆನೆ॥

ವಸಂತ ಮಾರುತ ಬರಲು, ಚೂತದಿಂದಂಕುರಂ ಪೊರಮಡುವಂತೆ, ಸ್ವಾತಿಯ ವರ್ಷದ ದಿನಕ್ಕೆ ಅಂಬುಧಿಯೊಳಗಿರ್ದ ಮೌಕ್ತಿಕಶಂಖ ಅಂಬುಧಿಯೊಳಗಿರ್ದು ಕಾಣಬಪ್ಪಂತೆ, ಸೂಜಿಕಲ್ಲ ಕಾಣುತ್ತ ಸೂಜಿ ಮೆಲ್ಲನೆ ತನ್ನ ಸ್ಥಾನದಿಂದೇಳುವಂತೆ, ಶಿವಯೋಗಾನಂದದಲ್ಲಿ ತನುವ ಮರೆದಿರ್ದ ಶಿವಯೋಗಿ ತನಗೆ ಶಿವಪ್ರಸನ್ನವಾಗಲು, ಮುಂದೆ ಶ್ರೀ ಶಿವನ ಚರಣಕಮಲಮಂ ಕಂಗಳಿಂದೊತ್ತಿಕೊಂಬೆನೆಂಬ ತೆರನಂತೆ ಪೌರ್ಣಮಿ ಚಂದ್ರಮನುದಯಕ್ಕೆ ಸಿಂಧು ಮೆಲ್ಲನೆ ಮುಂದಕುಬ್ಬಿ ನಡೆದು ಬಪ್ಪಂತೆ, ಮರುಳು ಶಂಕರ ದೇವರು ಪ್ರಸಾದಕುಂಡದಿಂ ಪೊರಮಡುತಿರ್ದ ಪ್ರಸ್ಥಾವದೊಳು, ಅಲ್ಲಿ ಅಲ್ಲಮಪ್ರಭುದೇವರಿಗೆ ಅವರ ನಿಲವ ತೋರಿದದೆಂತೆನೆ.॥

ಜ್ಞಾನಚಕ್ಷುವಿಂಗೆ ಆತ್ಮನ ನಿಲವು ತೋರಿದಂತೆ, ಅಂಜನವುಳ್ಳವನಿಗೆ ಕಡವಂದಿರವ ತೋರಿದಂತೆ, ಅಲ್ಲಮಪ್ರಭುದೇವರಿಗೆ ಮರುಳುಶಂಕರದೇವರ ನಿಲವು ಕಡೆಹೋಗಿ ತೋರುತ್ತಿರಲು, ಅಲ್ಲಿ ಪ್ರಭುದೇವರು ನಿಂತು ಬಸವರಾಜದೇವರು ಮಾಡುವ ಸ್ತೋತ್ರಂಗಳಂ ಸಾಕೆಂದು ನಿರೂಪಿಸಿದ ಪ್ರಸ್ಥಾವದ ವಚನ॥

ಮನವುನ ಒಂದಾಗಿ ಅರಿಯು ಸಮವಾದ ಬಳಿಕ ಕೊಂಡಾಡಲಿಕ್ಕೆ ಇಂಬುಂಟೆ ಹೇಳಾ? ಶಬ್ದಕ್ಕೆ ತೆರಹಿಲ್ಲ. ಗುಹೇಶ್ವರ ಲಿಂಗದಲ್ಲಿ ಬೆರಸಿ ಬೇರಿಲ್ಲ ಕಾಣಾ ಸಂಗನ ಬಸವಣ್ಣಾ ॥೧॥

ಮತ್ತಂ, ಪ್ರಭುದೇವರು ಸ್ತೋತ್ರಮಂ ನಿಲಿಸಿ ಒಂದಾಶ್ಚರ್ಯವಮಂ ಕಂಡೆನೆಂದು ನುಡಿದ ಪ್ರಸ್ಥಾವದ ವಚನ. ॥

ನೀರು ಕ್ಷೀರದಂತೆ ಕೂಡಿದ ಭೇದವನಾರಿಗು ಹೇಳಲಿಲ್ಲ ಕೇಳಲಿಲ್ಲ. ಬೆಳುಗಾರ ಬೆರಸಿ ಬೆಚ್ಚ ಬಂಗಾರಕ್ಕೆ ಸಂದುಂಟೆ ಹೇಳಾ? ಉರಿಯುಂಡ ಕರ್ಪುರದ ಪರಿಯಂತಿರ್ದುದನಿದಿರಿಂಗೆ ಕೊಂಡಾಡಿ ಹೇಳಲುಂಟೆ? ಅಂತಿರಲಿ. ನಮ್ಮ ಗುಹೇಶ್ವರ ಲಿಂಗದ ಕಣ್ಣ ಮುಂದೆ ನಿಮ್ಮ ಧರ್ಮದಿಂದೆ ಒಂದಾಶ್ಚರ್ಯವಮಂ ಕಂಡು ಬದುಕಿದೆನು ಕಾಣಾ ಸಂಗನಬಸವಣ್ಣಾ. ॥೨॥

ಹೀಗೆಂದು ಪ್ರಭುದೇವರು ನಿರೂಪಿಸಲು, ಬಸವರಾಜದೇವರು ನೀವು ಕಂಡಾಶ್ಚರ್ಯವಾವುದೆಂದು ಬೆಸಗೊಂಬ ಪ್ರಸ್ಥಾವದ ವಚನ. ॥

ದೇವದೇವ ಮಹಾ ಪ್ರಸಾದ ನೀವೆಂದಂತೆ ನಿಮ್ಮ ಚರಣದಲ್ಲಿ ಸಂದು ಭೇದವಿಲ್ಲದೆ ಇಪ್ಪೆನಲ್ಲದೆ, ಬೇರೆ ಭಿನ್ನನಾಗಿರ್ದೆನಾದರೆ ನೀವೆ ಸಾಕ್ಷಿ. ನಿಮ್ಮ ಶ್ರೀಪಾದವ ಕಂಡೆನ್ನ ಭವಂ ನಾಸ್ತಿಯಾಯಿತ್ತು. ಕೂಡಲ ಸಂಗಮದೇವ ನಿಮ್ಮಿಂದೊಂದಾಶ್ಚರ್ಯವಿಲ್ಲೆಂದು ಶೃತಿ ಹೊಗಳುತ್ತಿರಲಾಗಿ, ನೀವು ಕಂಡಾಶ್ಚರ್ಯವಾವುದೆನಗೊಮ್ಮೆ ನಿರೂಪಿಸಾ ಪ್ರಭುವೆ. ॥೩॥

ಇಂತು ಬಸವರಾಜದೇವರು ಮರುಳು ಶಂಕರದೇವರು ಗೋಪ್ಯದೊಳಿರ್ದು ಪೊರಮಡುವದಂ ಕಂಡು ಆಶ್ಚರ್ಯಂ ಬಟ್ಟು ಅನುಭಾವದ ಬೆಡಗಿನಿಂ ನುಡಿವ ಪ್ರಸ್ಥಾವದ ವಚನ. ॥

ಓಹೋ ನಮಃಶಿವಾಯ ಮಹಾದಾಕಾಶದ ಮರೆಯಲ್ಲಿರ್ದ ಶಾಂತಾರ್ಕನ ನಿಲವು ದಶಮರುತನ ಹೊಯಿಲಿಲ್ಲದೆ ಬೆಳಗುವ ಲಿಂಗದಜ್ಞಾನ ಜ್ಯೋತಿಯ ನಿಲವೊ, ತನ್ನಿಂದ ತಾನಾಗಿ ಮುಕ್ತಿಯೇ ಕರಿಗೊಂಡುದೋ, ಧವಳದ ಕಾಂತಿಯ ನಿಲವೋ, ರುದ್ರಾಕ್ಷಿಯ ಹಂಗುಬೇಡವೆಂದು ಹೊದ್ದ ಚರ್ಮದ ಹೊದಕೆಯಂ ತೆಗೆದ ಗಿಟಿಗಿಟಿ ಜಂತ್ರದ ನಿಲವೊ, ಅಲ್ಲಿ ತನ್ನ ನಿಲವನರಿಯದೆ ವಾದಿಸುತ್ತಿರಲು, ಉರಿಲಿಂಗೋದ್ಭವವಾದ ಉರಿಲಿಂಗದ ನಿಲವೋ, ಆವ ನಿಲವೆಂದರಿಯ ಬಾರದು ಗುಹೇಶ್ವರನ ಕಂಗಳಿಗೆ ಒಂದಾಶ್ಚರ್ಯ ತೋರಿತ್ತು ಕಾಣಾ ಸಂಗನಬಸವಣ್ಣಾ. ॥೪॥

ಹೀಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಬಸವರಾಜ ದೇವರು ನಿಮ್ಮಿಂದೊಂದಾಶ್ಚರ್ಯವಾವುದೆಂದು ಪ್ರಭುದೇವರು ಕೊಂಡಾಡುವ ಪ್ರಸ್ತಾವದ ವಚನ. ॥

ದೇವರ ದೇವ ಮಲಯಜದಿಂದಂ ಮೇಲೆ, ಮಲಯಜ ಉಂಟೆ? ಪರುಷದಿಂದಂ ಮೇಲೆ ಪರುಷವಾವುದುಂಟು ಅಯ್ಯ? ಅಮೃತ ಹಾರದಿಂದಂ ಮೇಲೆ ಭೋಜನ ಉಂಟೆ ಅಯ್ಯ? ನಿಮ್ಮಿಂದೊಂದಾಶ್ಚರ್ಯವ ಕಂಡೆನೆಂಬುದ ಎನಗೆ ನಿರೂಪಿಸಾ ಕೂಡಲ ಸಂಗಮದೇವಾ ಪ್ರಭುವೆ ॥೫॥

ಇಂತು ಬಸವರಾಜದೇವರು ನಿಮ್ಮಿಂದೊಂದಾಶ್ಚರ್ಯವಾವುದೆಂದು ಬಿನ್ನೈಸಲು ಅದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ಥಾವದ ವಚನ. ॥

ಎಲೆ ಬಸವಣ್ಣ, ನಾವು ಬಾಹುದಕ್ಕೆ ಮುನ್ನವೆ ಬಂದಿಹರೆಂದು ಶುಭ ಸೂಚನೆ ತೋರಿತ್ತಂಡೆ· ಮನವ ವಿಾರಿ ಮುಂದಿಹದೇನು ಎಂಬುದ ತಿಳಿ ಗುಹೇಶ್ವರ ಲಿಂಗದಲ್ಲಿ ಸಂಗನಬಸವಣ್ಣಾ- ॥೬॥

ಮತ್ತಂ, ಮರುಳ ಶಂಕರದೇವರು ಘನ ಪ್ರಸಾದದ ಕುಳಿಯೊಳಗೆ ಒಕ್ಕು ಮಿಕ್ಕ ಪ್ರಸಾದಮಂ ಸ್ವೀಕರಿಸಿ ಹನ್ನೆರಡು ವರುಷ ಪರಿಯಂತರ ತಮ್ಮ ನಿಜಸ್ವರೂಪಮಂ ಮರಸಿಕೊಂಡಿರುತ್ತಿರಲು, ಆ ಭೇದವಾರಿಗೂ ಕಾಣಬಾರದೆಂದು ಪ್ರಭುದೇವರು ನಿರೂಪಿಸಿದ ಪ್ರಸ್ಥಾವದ ವಚನ. ॥

ಬೀದಿಯಲ್ಲಿ ಬಿದ್ದ ಮಾಣಿಕ್ಯವು ಹೂಳಿದ್ದ ನಿಧಾನವಾರಿಗು ಕಾಣಬಾರದು ನೋಡಾ! ಮರಣವುಳ್ಳವರಿಗೆ ಮರುಜೀವಣಿ ಸಿಕ್ಕುವದೆ? ಪಾಪಿಯ ಕಣ್ಣಿಂಗೆ ಪರುಷ ಕಲ್ಲಾಗಿ ಇಪ್ಪಂತೆ ಇಪ್ಪರಯ್ಯ ಶಿವಶರಣರು. ನಮ್ಮ ಗುಹೇಶ್ವರನ ಶರಣ ಮರುಳು ಶಂಕರದೇವರ ನಿಲವ ನೋಡಾ ಸಂಗನಬಸವಣ್ಣಾ. ॥೭॥

ಮತ್ತಂ, ಅಂಗಳದ ಬಾಗಿಲವ ನೆರೆಯಲ್ಲಿ ನಿಂದಿರ್ದ ಲಿಂಗವನರಿದುದಿಲ್ಲವೆ? ಸುಸಂಗಿ ನಿರಂಗ ನಿಃಕಳಬ್ರಹ್ಮ ಮರುಳು ಶಂಕರಲಿಂಗ ಪ್ರಸಾದದ ಕುಳಿಯಲ್ಲಿ ನಿಜನಿವಾಸದಂಗವ ನೋಡು ಗುಹೇಶ್ವರಲಿಂಗದಲ್ಲಿ ಸಂಗನಬಸವಣ್ಣಾ. ॥೮॥

ಮತ್ತಂ, ಆದಿಯಸಂಗ ಮುಖಕರ್ಪಿಸಿ, ಅನಾದಿಯ ಪ್ರಾಣ ಮುಖ ಕರ್ಪಿಸಿ ಮರವೆಂಬುದ ಅರುಹಿನ ಮುಖಕರ್ಪಿಸಿ, ತಾನೆಂಬುದ ನಿರಾ

ಕಾರದಲ್ಲಿ ನಿಲಿಸಿ, ಪರಿಣಾಮ ಪ್ರಸಾದದಲ್ಲಿ ತದ್ಗತನಾಗಿ ಪ್ರಸಾದವೆ ಪ್ರಾಣವಾಗಿ, ಪ್ರಸಾದವೆ ಕಾಯವಾಗಿ, ಪ್ರಸಾದವೆ ಜ್ಞಾನವಾಗಿ, ಪ್ರಸಾದವೇ ಧ್ಯಾನವಾಗಿ, ಪ್ರಸಾದವೆ ಲಿಂಗಭೋಗೋಪಭೋಗಿಯಾಗಿಪ್ಪ ನಮ್ಮ ಗುಹೇಶ್ವರಲಿಂಗದಲ್ಲಿ ನಿಜಪ್ರಸಾದಿ ಮರುಳು ಶಂಕರದೇವರ ನಿಲವ ನೋಡಾ ಸಂಗನಬಸವಣ್ಣಾ. ॥೯॥

ಹೀಗೆಂದು ಪ್ರಭುದೇವರು ಬಸವರಾಜದೇವರಿಗೆ ನಿರೂಪಿಸುತ್ತಿರಲು, ಆ ಸಮಯದಲ್ಲಿ ಮರುಳು ಶಂಕರದೇವರು ಪ್ರಸಾದ ಕುಂಡದಿಂದ ನಲಿನಲಿದು ಬಂದು ಪ್ರಭುದೇವರಿಗೆ ನಮಸ್ಕಾರಮಂ ಮಾಡಿದ ಪ್ರಸ್ಥಾವದ ವಚನ. ॥

ಜಯ ಜಯ ತ್ರಾಹಿ ತ್ರಾಹಿ ಗರ್ಭದೊಳಗಣ ಶಿಸುವು ನವ ಮಾಸವ ಹಾರೈಸಿ ಕೊಂಡಿರ್ದಂತೆ ಇದ್ದೆನಯ್ಯಾ! ಎನ್ನ ಜನ್ಮ ಸಫಲವಾಯಿತ್ತು. ಶುದ್ಧ ಸಿದ್ಧ ಪ್ರಸಿದ್ಧ ಪ್ರಸನ್ನ ಪ್ರಭುವೇ ಶಾಂತ ಮಲ್ಲಿಕಾರ್ಜುನ ದೇವಯ್ಯ ಬಸವರಾಜದೇವರ ದಯದಿಂದ ಪ್ರಭುದೇವರ ಶ್ರೀಮೂರ್ತಿಯಂ ಕಂಡು ಬದುಕಿದೆನು. ನಿಮ್ಮ ಧರ್ಮ ನಿಮ್ಮ ಧರ್ಮ ಶರಣುಶರಣಾರ್ಥಿ ಸಕಲ ಪುರಾತರಿಗೆ ॥೧೦॥

ಮತ್ತಂ, ಎನಗೆ ಹರಿಯಿತ್ತು ತಮವೆಂಬ ಸಂಸಾರದ ಬಂಧ. ಅಡಗಿ ಉಡಿಗಿ ಕಂಡಿಹೆನೆಂಬ ಭ್ರಮೆಭಾವಕ್ಕೆ ಬಯಲಾಯಿತ್ತು. ನಿತ್ಯ ನಿರಂಜನ ಪರಂಜ್ಯೋತಿ ಪ್ರಕಾಶವಾಯಿತ್ತು. ಶುದ್ಧ ಸಿದ್ಧ ಪ್ರಸಿದ್ಧ ಪ್ರಸನ್ನ ಪ್ರಭುವೆ ಶಾಂತ ಮಲ್ಲಿಕಾರ್ಜುನ ದೇವಯ್ಯ, ಪ್ರಭುದೇವರ ಕಾರುಣ್ಯದಿಂದೆ ಬದುಕಿದೆನು. ॥೧೧॥

ಇಂತು ಮರುಳ ಶಂಕರ ದೇವರು ಸ್ತುತಿಸುತ್ತಿರಲು ಅದಕ್ಕೆ ಪ್ರಭುದೇವರು ಮರುಳು ಶಂಕರದೇವರ ನಿಲವ ಬಸವರಾಜದೇವರಿಗೆ ನಿರೂಪಿಸಿದ ಪ್ರಸ್ಥಾವದ ವಚನ. ॥

ಕಂಡೆಯಾ ಬಸವಣ್ಣ ಕಣ್ಣಿನೊಳಗಣ ಬೊಂಬೆಯು ಸೂತ್ರದ ಇರವಿನಂತೆ, ಗುಂಡಣದೊಳಡಗಿ ತೋರುವ ಪ್ರತಿ ಛಾಯದಂತೆ, ನವನೀತದೊಳಡಗಿದ ಸಾರದ ಸವಿಯಂತೆ, ಅಂಗವಿಲ್ಲದ ಕುರುಹು ಭಾವವಿಲ್ಲದ ಬಯಲು, ಬೆಳಗನರಿಯದ ಜ್ಯೋತಿಯ ಕಂಡೆಯಾ ಗುಹೇಶ್ವರ ಲಿಂಗದಲ್ಲಿ ಮರುಳ ಶಂಕರದೇವರ ಸಂಗನಬಸವಣ್ಣಾ. ॥೧೨॥

ಹೀಗೆಂದು ಪ್ರಭುದೇವರು ಬಸವರಾಜದೇವರಿಗೆ ಕೊಂಡಾಡಿ ಹೇಳು ತ್ತಿರಲು, ಆ ಮರುಳು ಶಂಕರದೇವರು ನಿರಹಂಭಾವದಿಂ ಬಿನ್ನೈಸಿದ ಪ್ರಸ್ಥಾವದ ವಚನ. ॥

ಸಿಂಬಿಗೆ ರಂಜಿತನ ಉಂಟೆ? ಸಂಭ್ರಮವಳಿದುದಕ್ಕೆ ನವರಸದಂಗದ ಕಳೆಯುಂಟೆ? ಡಿಂಗರಿಗಂಗೆ ಸಮವೆಂಬ ಸಂಭ್ರಮ ಉಂಟೆ? ಪರುಷದ ದೆಸೆಯಿಂ ಪಾಷಾಣದ ಕುಲ ಹರಿವಂತೆ ಬಂದೆಯಲ್ಲ ಶುದ್ಧ ಸಿದ್ಧ ಪ್ರಸಿದ್ಧ ಪ್ರಭುವೆ ಶಾಂತಮಲ್ಲಿಕಾರ್ಜುನ ದೇವಯ್ಯ ಪ್ರಭುದೇವರ ಕಾರುಣ್ಯದಿಂದೆ ಬದುಕಿದೆನು.. ॥೧೩॥

ಇಂತು ಮರುಳು ಶಂಕರದೇವರು ನಿರಹಂಭಾವದಿಂದೆ ಬಿನ್ನೈಸಲು ಅದಕ್ಕೆ ಪ್ರಭುದೇವರು ಮರುಳ ಶಂಕರದೇವರ ಸ್ತುತಿಸಿದ ಪ್ರಸ್ಥಾವದ ವಚನ. ॥

ಕಂಡೆನಲ್ಲ ಕರುಳಿಲ್ಲದ ಕಲಿಯಾ ಕಂಡೆನಲ್ಲ ಯವ್ವನವಿಲ್ಲದ ದೇಹವ. ಕಂಡೆನಲ್ಲ ಕೈದುವಿಲ್ಲದ ಕಲಿತನವ. ಕಂಡೆನಲ್ಲ ಕುಸುಮವಿಲ್ಲದ ಗಂಧವ. ಕಂಡೆನಲ್ಲ ಗುಹೇಶ್ವರನ ಲಿಂಗದಲ್ಲಿ ಮರುಳು ಶಂಕರದೇವರೆಂಬ ನಾಮವಾ. ॥೧೪॥

ಹೀಗೆಂದು ಪ್ರಭುದೇವರು ಸ್ತುತಿಸುತ್ತಿರಲು, ಅದಕ್ಕೆ ಮರುಳು ಶಂಕರದೇವರ ಬಿನ್ನಹ,

ಬೆಟ್ಟನ ನೆಮ್ಮಿ ಕಟ್ಟಿಗೆಯು ತಳ್ಳುವದು ಅದಾವಚ್ಚರಿ? ಪ್ರಾಣಕ್ಕೆ ಹೊಣೆಯಾದಲ್ಲಿ ಕಾದುವದು ಅದಾವಚ್ಚರಿ? ಪರಕಾಯದ ತೊಟ್ಟಿದ್ದಲ್ಲಿ ಅದು ಅಚ್ಚರಿ. ಆದಿ ಬಿರಿದ ನಿಮ್ಮ ಕಾರುಣ್ಯವಾಗಿದ್ದಲ್ಲಿ ಎನಗೆಲ್ಲಿಯ ಸುಖ? ಶುದ್ಧಸಿದ್ಧ ಪ್ರಸಿದ್ಧ ಪ್ರಸನ್ನ ಪ್ರಭುವೆ ಶಾಂತ ಚನ್ನಮಲ್ಲಿಕಾರ್ಜುನ ದೇವಯ್ಯ ಪ್ರಭುದೇವರ ದಯದಿಂದೆ ಬದುಕಿದೆನು. ॥೧೫॥

ಇಂತು ಮರುಳು ಶಂಕರದೇವರು ಪ್ರಭುದೇವರ ಸ್ತುತಿಸುತ್ತಿರಲು, ಆ ಸಮಯದೊಳು ಎಲ್ಲ ಪುರಾತರು ಕಂಡು, ಅತ್ಯಂತ ಆಶ್ಚರ್ಯವಂ ಬಡುತ್ತಿರಲು, ಅಲ್ಲಿ ಬಸವರಾಜದೇವರು ಮರುಳು ಶಂಕರದೇವರ ನಿಲವ ಕಂಡು, ಚಿಂತಾಕ್ರಾಂತರಾಗಿ ನಡನಡುಗಿ ಇನಿತು ದಿನವೆನ್ನ ಅಂಗಳದಲ್ಲಿ ಮಹಾಲಿಂಗೈಕ್ಯನಪ್ಪ ಶರಣನಿರುತ್ತಿರಲು, ಈತನ ನಿಲವನರಿಯದೆ ಕೆಟ್ಟೆನೆಂದು ಅನುತಾಪಂ ಬಟ್ಟ ಪ್ರಸ್ಥಾವದ ವಚನ ॥

ಅಯ್ಯ ನಿಮ್ಮ ಶರಣರು ಬಂದೆನ್ನ ಅಂಗಳದೊಳಗೆ ರಕ್ಷಿಸಿಹೆನೆಂದಿರಲು, ನಾನು ತೆರಹು ಮರಹಾಗಿರ್ದು ಕೆಟ್ಟೆನಯ್ಯ! ನಾನು ಕೆಟ್ಟ ಕೇಡಿಂಗೆ ಕಡೆ ಇಲ್ಲವಯ್ಯ. ಕೂಡಲ ಸಂಗಮದೇವಯ್ಯ, ಎನ್ನ ಭಕ್ತಿ ಸಾವಿರ ನೋಂಪಿಯ ನೋಂತು ಹಾದರದಲ್ಲಿ ಅಳಿದಂತಾಯಿತ್ತಯ್ಯ. ॥೧೬॥

ಮತ್ತಂ, ಕಾಯದ ಕಪಟವು ಬಿಡದೆನಗೆಂತಯ್ಯ. ಮಾಯಾ ಪ್ರಪಂಚಿನ ಬಲೆಯೊಳಗೆ ಸಿಲುಕಿದೆ. ಮಾಯದ ಸಂಭ್ರಮದ ಹಿಡಿವವಗೆ ಇದಾವ ಭಾವದ ಮುಖವೇದರಿಯದೆ ಜ್ಞಾನಶೂನ್ಯನಾಗಿರ್ದೆನಯ್ಯ. ಅಷ್ಟಮದಂಗಳನು ಸೃಷ್ಟಿಸಿ ಇದ್ದಿರಾಗಿ, ಕಟ್ಟುಗ್ರದಿಂದೆ ನಿಮ್ಮ ಕಾಣಲೀಯವು. ಎನ್ನ ತನುವಿನ ಅವಗುಣವು ಮನದ ಮರ್ಕಟತನವು ಬಿಡವು. ನೀನೆ ಗತಿ. ಕೂಡಲಸಂಗಮದೇವ ನಿಮ್ಮ ಶರಣರ ಇರವನರಿಯದೆ, ಭವದುಃಖಿಯಾದೆನಯ್ಯ ॥೧೭॥

ಮತ್ತಂ, ಬಸವರಾಜದೇವರು ಈ ಮರುಳು ಶಂಕರದೇವರ ಕೃಪೆ ಎನಗಿನ್ನೆಂತಪ್ಪುದೊ ಎಂದು ಪ್ರಭುದೇವರ ಬೆಸಗೊಂಬ ಪ್ರಸ್ಥಾವದ ವಚನ ॥

ನಡುತೊರೆಯೊಳಗೆ ಹರುಗೋಲನಿಳಿದಂತಾಯಿತ್ತೆನ್ನಭಕ್ತಿ. ಮರನೇರಿ ಕೈಯ್ಯ ಬಿಟ್ಟಂತಾಯಿತ್ತೆನ್ನ ಭಕ್ತಿ. ಶಿವಶಿವ ಕೆಟ್ಟೆನಲ್ಲ ಗುರುವೆ. ಕೂಡಲ ಸಂಗಮದೇವ ಈ ಮರುಳುಶಂಕರದೇವರ ಕೃಪೆ ಎನಗಿನ್ನೆಂತಪ್ಪುದು ಹೇಳಾ ಪ್ರಭುವೆ? ॥೧೮॥

ಹೀಗೆಂದು ಬಸವರಾಜದೇವರು ಬಿನ್ನೈಸಲು, ಅದಕ್ಕೆ ಪ್ರಭುದೇವರು ಕೊಟ್ಟ ಪ್ರತ್ಯುತ್ತರ ॥

ಹೂಮಿಡಿಯ ಹರಿದು, ಒತ್ತಿ ಹಣ್ಣ ಮಾಡಿಹೆನೆಂಬರೆ ಹಣ್ಣಾಗಬಲ್ಲುದೆ? ಪರಿಮಳವಿಲ್ಲದ ನನೆಯನರಳಿಸಿ ಮುಡಿದಿಹೆನೆಂಬರೆ ಸೌರಭ ಉಂಟೆ? ಶಿವಶರಣರ ನಿಲವ ಕಾಂಬ ಕಾಲಕ್ಕೆ ಕಾಣಬಹುದಲ್ಲದೆ, ಎಲ್ಲ ಹೊತ್ತು ಕಾಣಬಹುದೆ? ಆಹ ಕಾಲಕ್ಕೆ ತಾನೆಯಪ್ಪುದು. ಗುಹೇಶ್ವರನ ಶರಣರ ನಿಲವ ಕಂಡ ಬಳಿಕ ಮರಹು ಬೆಳಗ ಕಂಡ ಕತ್ತಲೆಯಂತೆ ನೋಡ ನೋಡಾ ಹರಿವುದು ನೋಡಾ ಸಂಗನಬಸವಣ್ಣಾ ॥೧೯॥

ಹೀಗೆಂದು ಪ್ರಭುದೇವರು ನಿರೂಪಿಸಲು, ಅದಕ್ಕೆ ಬಸವರಾಜದೇವರು ಮರುಳ ಶಂಕರದೇವರ ಶ್ರೀಪಾದಕ್ಕೆ ಶರಣೆಂಬ ಪ್ರಸ್ಥಾವದ ವಚನ ॥

ಮುಗಿಲ ಮರೆಯ ಮಿಂಚಿನಂತೆ, ಒಡಲ ಮರೆಯ ಆತ್ಮನಂತೆ, ನೆಲದ ಮರೆಯ ನಿಧಾನದಂತೆ ಇಪ್ಪ ನಿಮ್ಮ ನಿಲವನಾರು ಬಲ್ಲರು? ದೇವ ನಿಮ್ಮ ನಿಲವ ಹಲಕಾಲದಿಂದ ಕಂಡು ಕಂಡು ಕಡೆಗಾಣಿಸಿ ಮರೆದು ಮತಿ ಗೆಟ್ಟು ಮರುಳಾದೆನು. ಎನ್ನ ತಪ್ಪಿಂಗೆ ಕಡೆ ಇಲ್ಲ ಕಾಣಾ ತ್ರಾಹಿ ತ್ರಾಹಿ ಕಾಯಯ್ಯ ಕೂಡಲಸಂಗಮದೇವಾ ॥೨೦॥

ನಿಮ್ಮ ಶರಣರ ಇರವನರಿಯೆನೆಂದು ಬಸವರಾಜದೇವರು ನೊಂದು ಪ್ರಭುದೇವರಿಗೆ ಬಿನ್ನೈಸುತ್ತಿರಲು, ಅಲ್ಲಿ ಮರುಳುಶಂಕರದೇವರು ಬಸವ ರಾಜದೇವರ ಕೊಂಡಾಡಿದ ಪ್ರಸ್ಥಾವದ ವಚನ ॥

ಏಕ ಬೀಜಸಮಾವೃಕ್ಷಂ ಏಕ ಲಿಂಗಂ ತು ಪೂಜನಂ ॥ ಏಕ ಧ್ಯಾನ ಸಮಾಚಿತ್ತಂ ಊರ್ಧ್ವಲಿಂಗಂ ತು ಪೂಜನಂ। ಏಕಾಕ್ಷರಂ ತು ಪೂಜಾನಾಂ। ಮಹಾಲಿಂಗಂತು ದರ್ಶನಂ। ಇಂತೆಂದುದಾಗಿ ಇದು ಕಾರಣ ನಿಮ್ಮ ಶರಣ ಬಸವಣ್ಣನು ಲೋಕದ ಮರ್ತ್ಯನೆಂದರೆ ಅಘೋರ ನರಕ ಕಾಣಾ. ಶುದ್ಧ ಸಿದ್ಧ ಪ್ರಸಿದ್ಧ ಪ್ರಸನ್ನ ಪ್ರಭುವೆ ಶಾಂತಮಲ್ಲಿಕಾರ್ಜುನದೇವಯ್ಯ ನಿಮ್ಮ ಶರಣ ಬಸವಣ್ಣನ ನಿಲವಿನ ಪರಿಯ ನೀವೆ ಬಲ್ಲಿರಲ್ಲದೆ ನಾನೆತ್ತ ಬಲ್ಲೆನಯ್ಯ ನಿಮ್ಮ ಧರ್ಮ ನಿಮ್ಮ ಧರ್ಮ. ॥೨೧॥

ಇಂತು ಮರುಳುಶಂಕರದೇವರು ಬಸವರಾಜದೇವರ ಕೊಂಡಾಡು ತ್ತಿರಲು, ಆ ಬಸವರಾಜದೇವರು ಮರುಳುಶಂಕರದೇವರ ಘನವನು ಚನ್ನ ಬಸವರಾಜದೇವರಿಗೆ ನುಡಿದು ತೋರುವ ಹಾಗೆ ಕೊಂಡಾಡುತ್ತಿರ್ದ ಪ್ರಸ್ಥಾ ವದ ವಚನ ॥

ಕಂಗಳೊಳಗೆ ಕರುಳಿಲ್ಲ. ಕಾಯದೊಳಗೆ ಮಾಯವಿಲ್ಲ. ಮನದೊ ಳಗೆ ಅಹಂಕಾರವಿಲ್ಲ. ದೇಹವೆಂದರಿಯ. ನಿರ್ದೇಹನೆಂದರಿಯ ಜಂತ್ರದ ಸೂತ್ರದಂತಿಪ್ಪ ನಿಚ್ಚೈರಗಿನ ಮೂರ್ತಿಯ ನೋಡಾ. ಲಿಂಗಜಂಗಮದ ಒಕ್ಕ ಮಿಕ್ಕಪ್ರಸಾದವ ಕೊಂಡು ಮಿಕ್ಕು ಮೀರಿನಿಂದ ಮಹಾಪ್ರಸಾದಿಯ ನೋಡಾ! ತನ್ನ ಕಂಡಹರೆಂದು ಜಗದ ಕಣ್ಣಿಂಗೆ ಮಾಯದ ಮಂಜ ಕವಿಸಿ ನಿಜಪದ ದಲ್ಲಿ ತದುಗತನಾದನು. ಕೂಡಲಸಂಗಮದೇವರಲ್ಲಿ ಮರುಳು ಶಂಕರ ದೇವರ ನಿಲವ ನೋಡಾ ಸಂಗನಬಸವಣ್ಣಾ ॥೨೨॥

ಹೀಗೆಂದು ಬಸವರಾಜದೇವರು ನಿರೂಪಿಸಲು, ಆ ಚನ್ನಬಸವರಾಜ ದೇವರು ಮರುಳುಶಂಕರದೇವರ ನಿಲವ ನಿಮ್ಮಿಂದ ಕಂಡೆನೆಂದು, ಬಸವರಾಜ ದೇವರಿಗೆ ಬಿನ್ನೈಸಿದ ಪ್ರಸ್ಥಾವದ ವಚನ ॥

ಅಂಗವನಾಚಾರಕರ್ಪಿಸಿ, ಆಚಾರವನಂಗಕರ್ಪಿಸಿ, ಆಚಾರ ಲಿಂಗ ಪ್ರಸಾದಿಯಾದ. ಪ್ರಾಣಲಿಂಗವ ಅಂಗವಲ್ಲಿ ಅರ್ಪಿಸಿ ಆ ಲಿಂಗವ ಪ್ರಾಣಕ್ಕೆ ಅರ್ಪಿಸಿ ಪ್ರಾಣಲಿಂಗ ಪ್ರಸಾದಿಯಾದ. ದೇಹಭಾವದ ಅಂಹಕಾರ ದಾಸೋಹ ಭಾವದೊಳಗಲ್ಲದೆ ಅಳಿಯದೆಂದು ಲಿಂಗಜಂಗಮಕ್ಕೆ ತೊತ್ತು ಒಕ್ಕು ಲಿಂಗ ಜಂಗಮ ಪ್ರಸಾದಿಯಾದ ಸತ್ಯ ಶರಣರ ಅಂಗಳದೊಳಗೆ ಬಿದ್ದ ಅಗುಳನೆತ್ತಿ ಕೊಂಡಿಪ್ಪೆನೆಂದು ನಿಮ್ಮ ಪ್ರಸಾದದ ಕುಳಿಯೊಳಗೆ ಹನ್ನೆರಡು ವರುಷ ಪರಿಯಂತರ ಪ್ರಸಾದಿಯಾಗಿರ್ದ ಕೂಡಲಸಂಗಮದೇವರಲ್ಲಿ ಮರುಳುಶಂಕರ ದೇವರ ಶ್ರೀಪಾದದ ಘನವನು ನಿಮ್ಮಿಂದ ಕಂಡು ಬದುಕಿದೆನು ಕಾಣಾ ಸಂಗನಬಸವಣ್ಣಾ. ॥೨೩॥

ಮರುಳುಶಂಕರದೇವರ ಘನವ ನಿಮ್ಮಿಂದ ಕಂಡು ಬದುಕಿದೆನೆಂದು, ಚನ್ನಬಸವರಾಜದೇವರು ಬಸವರಾಜದೇವರ ಕೂಡ ಬಿನ್ನಹಂ ಮಾಡು ತ್ತಿರಲು, ಮತ್ತಂ ಮರುಳುಶಂಕರದೇವರು ಚನ್ನಬಸವರಾಜದೇವರ ಸ್ತುತಿಯ ನೊಳಕೊಂಡು ನಿರೂಪಿಸಿದ ಪ್ರಸ್ತಾವದ ವಚನ. ॥

ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣೈಕ್ಯ ಇಂತು ಷಡುಸ್ಥಲ ಚಕ್ರವರ್ತಿಯಯ್ಯ ಚೆನ್ನಬಸವಣ್ಣನು. ಷೋಡಶಾಧಾರಂ ಸರ್ವ ಭೇದಂ, ಸರ್ವಾಚಾರಂ ತು ಲಿಂಗಯೊ॥ ಷಡೂರ್ವಿ ತ್ರಿವಿಧಂ ಏಕಂ ತಸ್ಮಾತ್ ಲಿಂಗಪ್ರಯೋಜನಂ॥ ಇಂತೆಂದುದಾಗಿ, ಇಂತಪ್ಪ ಲಿಂಗಾಂಗಿ ಯಯ್ಯ ಚನ್ನಬಸವಣ್ಣನು. ಆಚಾರವೆ ಕಾಯ, ಆಚಾರವೆ ಪ್ರಾಣ, ಆಚಾ ರವೆ ಲಿಂಗ, ಆಚಾರವೆ ಸಂಗ, ಇಂತಪ್ಪ ಆಚಾರಸನ್ನಿಹಿತನಯ್ಯ ನಮ್ಮ ಚನ್ನಬಸವಣ್ಣನು. ಶುದ್ಧ, ಸಿದ್ಧ, ಪ್ರಸಿದ್ಧ, ಪ್ರಸನ್ನ, ಪ್ರಭುವೆ ಶಾಂತ ಮಲ್ಲಿಕಾರ್ಜುನ ದೇವಯ್ಯ, ನಿಮ್ಮ ಚನ್ನಬಸವಣ್ಣನು ಸರ್ವಾಚಾರಸಂಪ ನ್ನನು. ಇಂತಪ್ಪ ಚನ್ನಬಸವಣ್ಣನ ನಿಲವ ನೀವೆ ಬಲ್ಲಿರಲ್ಲದೆ ನಾನೆತ್ತ ಬಲ್ಲೆನಯ್ಯ ನಿಮ್ಮ ಧರ್ಮ, ನಿಮ್ಮ ಧರ್ಮ. ॥೨೪॥

ಮತ್ತಂ, ಮರುಳುಶಂಕರದೇವರ ನಿಲವ ಚನ್ನಬಸವರಾಜ ದೇವರು ಪ್ರಭುದೇವರಿಗೆ ಬಿನ್ನೈಸಿದ ವಚನ ॥

ತುದಿಮೊದಲಿಲ್ಲದ ಘನವ ನೋಡಾ. ಒಳಹೊರಗಿಲ್ಲದ ಅನುವ ನೋಡಾ. ಗುರುಲಿಂಗಜಂಗಮ ತಾನೆಯಾಗಿ, ಮತ್ತೆ ತಾನೆಂಬುದೇನು ಇಲ್ಲದೆ ಇಪ್ಪ ಪರಿಯ ನೋಡಾ! ತನ್ನ ತಾ ನಿರ್ದೇಶವ ಮಾಡಿಕೊಂಡು ನಿಜಪದವನೈ

ದಿಪ್ಪ ಪರಿಯ ನೋಡಾ! ಕೂಡಲಸಂಗಮದೇವರಲ್ಲಿ ಪರಮ ಪ್ರಸಾದಿಯಾಗಿಪ್ಪ ಮರುಳುಶಂಕರದೇವರ ನಿಲವ ನೋಡಾ ಪ್ರಭುವೆ. ॥೨೫॥

ಇದಕ್ಕೆ ಪ್ರಭುದೇವರು ಪರಮ ಪ್ರಸಾದಿಯಾಗಿಪ್ಪ ಮರುಳುಶಂಕರದೇವರ ನಿಲವ ಬಸವರಾಜದೇವರಿಂದೆ ಕಂಡೆನೆಂದು ಸಿದ್ಧರಾಮಯ್ಯದೇವರೊಡನೆ ನಿರೂಪಿಸಿದ ಪ್ರಸ್ತಾವದ ವಚನ. ॥

ಅಂಗವಿಡಿದಂಗಿ ಎಂಬೆನೆ? ಆರನೊಳಕೊಂಡನುಪಮಾನ ನೋಡಾ? ಮೂರರ ಹೊಲಿಗೆಯ ಬಿಚ್ಚಿ ಎಂಟಾತ್ರ ಹಂಗಳ ತನ್ನಿಚ್ಚೆಯೊಳ್ನಿಲಿಸಿದ ನಿಜಸುಖಿಯ ನೋಡಾ! ತತ್ವ ಮೂವತ್ತಾರ ನಿಂರಿ ಅತ್ತತ್ತಲೆ ತೋರ್ಪ ಅಗಮ್ಯನ ನೋಡಾ! ನಮ್ಮ ಗುಹೇಶ್ವರನ ಶರಣ ಅಲ್ಲಯ್ಯನ ಇರವನೊಳಕೊಂಡ ಪರಮ ಪ್ರಸಾದಿ ಮರುಳುಶಂಕರದೇವರ ನಿಲವ ಬಸವಣ್ಣನಿಂದೆ ಕಂಡೆ ನೋಡಾ ಸಿದ್ಧರಾಮಯ್ಯ. ॥೨೬॥

ಹೀಗೆಂದು ಸಿದ್ಧರಾಮಯ್ಯದೇವರೊಡನೆ ಪ್ರಭುದೇವರು ನಿರೂಪಿಸುತ್ತಿರಲು, ಅದಕ್ಕೆ ಬಸವರಾಜದೇವರು ಸಿದ್ಧರಾಮಯ್ಯದೇವರಿಂದೆ ಪ್ರಭುದೇವರ ಕಂಡೆ. ಪ್ರಭುದೇವರಿಂದೆ ಮರುಳುಶಂಕರದೇವರ ಕಂಡೆನೆಂದು ಕೊಂಡಾಡುವ ಪ್ರಸ್ತಾವದ ವಚನ. ॥

ಸತ್ಯಮುಕ್ತಿಯ ಕಳೆಯ ನೋಡಾ. ನಿತ್ಯ ತತ್ವದ ಇರವನೋಡಾ! ಮೂರೊಂದಾದ ಆರೂಢನ ನೋಡಾ. ಕೂಡಲ ಸಂಗಮದೇವರಲ್ಲಿ ತನ್ಗತವಾಗಿಪ್ಪ ಮರುಳುಶಂಕರ ದೇವರ ನಿಲವ ಪ್ರಭು ಸಿದ್ಧರಾಮಯ್ಯ ದೇವರಿಂದ ಕಂಡು ಬದುಕಿದೆನು ಬದುಕಿದೆನು. ॥೨೭॥

ಇಂತು ಬಸವರಾಜದೇವರು ಮರುಳುಶಂಕರದೇವರ ನಿಲವ ಪ್ರಭು ಸಿದ್ಧರಾಮಯ್ಯ ದೇವರಿಂದೆ ಕಂಡು ಬದುಕಿದೆನೆಂದು ಸ್ತುತಿಸುತ್ತಿರಲು, ಇದಕ್ಕೆ ಸಿದ್ಧರಾಮಯ್ಯದೇವರು ಮರುಳುಶಂಕರದೇವರ ನಿಲವ ಪ್ರಭು ಬಸವಣ್ಣನಿಂದ ಕಂಡೆನೆಂದು, ಸ್ತುತಿಸಿದ ವಚನ. ॥

ಆದಿಯ ಮೂರ್ತಿಯಲ್ಲ, ಅನಾದಿಯ ಬಚ್ಚಬರಿಯ ಶೂನ್ಯವಲ್ಲ. ಅಂಗವಿದ್ದು ಅಂಗವಿಲ್ಲ. ಸಂಗ ಘನಪದವಲ್ಲಿ ವೇದ್ಯವಾದ ಮರುಳುಶಂಕರದೇವರ ನಿಲವ ಪ್ರಭು ಬಸವಣ್ಣನಿಂದೆ ಕಂಡು ಬದುಕಿದೆನು ಕಾಣಾ ಕಪಿಲಸಿದ್ಧಮಲ್ಲಿಕಾರ್ಜುನ. ॥೨೮॥

ಹೀಗೆಂದು ಸಿದ್ಧರಾಮಯ್ಯದೇವರು ನಿರೂಪಿಸಲು, ಮತ್ತಂ, ಬಸವರಾಜ ದೇವರು ಹಡಪದಪ್ಪಣ್ಣಗಳಿಂದೆ ಪ್ರಭು ಸಿದ್ಧರಾಮಯ್ಯ ದೇವರುಗಳ ನಿಲವ ಕಂಡೆ. ಮತ್ತಂ, ಪ್ರಭು ಸಿದ್ಧರಾಮಯ್ಯ ದೇವರಿಂದೆ ಮರುಳುಶಂಕರ ದೇವರ ಇರವ ಕಂಡೆನ್ನ ಜನ್ಮ ಸಫಲವಾಯಿತ್ತೆಂದು ಸ್ತುತಿಸಿದ ಪ್ರಸ್ಥಾವದ ವಚನ. ॥

ಏನೆಂದುಪಮಿಸುವೆನಯ್ಯ! ತನ್ನಿಂದ ತೋರದೆ ಗುರುಮುಖ ದಿಂದ ತೋರಿದ ತನ್ನ ನಿಲವ ನಿರೂಪನು ಶಬ್ದ ಮುಗ್ಧವಾಗಿದ್ದೆಡೆಯುನಿ ದಿರಿಂಗೆ ತೋರದೆ ಇರವೆ ಪರವಾಗಿರ್ದ ಅಜಡನು ಇನನುದಯ ಕಾಲಕ್ಕೆ ಕುಕ್ಕು ಟಧ್ವನಿದೋರುವಂತೆ ಘನಮಹಿಮರ ದರುಶನದಿಂದೆ ಸತ್ತೃಣಮವೆ ತಾನಾಗಿ ನುಡಿದ ಮೂಲಿಗನು. ಕೂಡಲಸಂಗಮದೇವರಲ್ಲಿ ಬೆರಸಿ ಬೇರಿಲ್ಲದಿಪ್ಪ ಮರುಳುಶಂಕರದೇವರ ನಿಲವ ಪ್ರಭು ಸಿದ್ಧರಾಮಯ್ಯದೇವರು ಹಡ ಪದಪ್ಪಣ್ಣನಿಂದ ಕಂಡು, ಎನ್ನ ಜನ್ಮ ಸಫಲವಾಯಿತ್ತಯ್ಯ. ॥೨೯॥

ಹೀಗೆಂದು ಬಸವರಾಜದೇವರು ಮರುಳುಶಂಕರದೇವರ ಕೊಂಡಾ ಡುತ್ತಿರಲು ಇದಕ್ಕೆ ಹಡಪದಪ್ಪಣ್ಣಗಳು ಪ್ರಭುದೇವರಿಂದೆ ಬಸವಣ್ಣನಿಂದೆ ಮರುಳುಶಂಕರ ದೇವರ ಇರವ ಕಂಡು, ಬದುಕಿದೆನೆಂದು ಕೊಂಡಾಡಿದ ಪ್ರಸ್ಥಾವದ ವಚನ. ॥

ಯುಗಜುಗಂಗಳ ಅಳಿವು ಶಿವನರಿಯದೆ ಹಗಲಿರುಳೆಂಬ ನೆನಹಿನಲು ಅರಿಯದೆ ಲಿಂಗದಲ್ಲಿ ಪರವಶನಾಗಿರ್ದ ಪರಮ ಪರಿಣಾಮಿ ಏನೆಂದು ಪಮಿಸುವೆನಯ್ಯ! ಆಹಾ ಎನ್ನ ಮುಕ್ತಿಯ ಮುಕುರದ ಇರವ ನೋಡಾ. ಆಹಾ ಎನ್ನ ಸತ್ಯದ ಸ್ವಾನುಭಾವದ ಕಳೆಯ ನೋಡಾ. ಆಹಾ ಅಷ್ಟಮ ದಂಗಳ ಹಂಗನುಳಿದು ನಿಷ್ಠೆ ನಿಬ್ಬೆರಗಾಗಿ ನಿಂದ ಚಿತ್ಸುಖಿಯ ನೋಡಾ! ಬಸವಪ್ರಿಯ ಕೂಡಲ ಚನ್ನಸಂಗಮದೇವಯ್ಯ ಪರಮ ಪ್ರಸಾದಿ ಮರುಳು ಶಂಕರದೇವರ ನಿಲವ ಪ್ರಭು ಬಸವಣ್ಣನಿಂದ ಕಂಡು ಬದುಕಿದೆನು ಬದುಕಿದೆನು. ॥೩೦॥

ಹೀಗೆಂದು ಹಡಪದಪ್ಪಣ್ಣಗಳು ಮರುಳಶಂಕರದೇವರ ಇರವ ಕೊಂಡಾ ಡುತ್ತಿರಲು, ಅದಕ್ಕೆ ಮಡಿವಾಳಯ್ಯಗಳು ಪರಮ ಪರಿತೋಷರಾಗಿ ಮರು ಳುಶಂಕರದೇವರ ನಿಲವ ಬಸವಣ್ಣನಿಂದೆ ಕಂಡು ಬದುಕಿದೆನೆಂದು ಕೊಂಡಾಡುವ ಪ್ರಸ್ಥಾವದ ವಚನ. ॥

ಮೂರನೊಳಕೊಂಡ ಆರ ಮೀರಿ ನಿಂದ ಘನವನೇನೆಂಬೆನಯ್ಯ? ನುಡಿವರೆ ವಾಚಾತೀತ, ನೋಡುವರೆ ಕಂಗಳೆರಡ ಇದವಯ್ಯ! ಮಹದ ಬೆಳಗೆ ತಾನಾಗಿ ನಿಂದ ಮರುಳುಶಂಕರದೇವರ ನಿಲವ ಬಸವಣ್ಣನಿಂದ ಕಂಡು ಬದುಕಿದೆನು ಕಾಣಾ ಕಲಿದೇವರ ದೇವಾ. ॥೩೧॥

ಹೀಗೆಂದು ಮರುಳುಶಂಕರದೇವರ ನಿಲವ ಮಡಿವಾಳಯ್ಯಗಳು ಕೊಂಡಾಡುತ್ತಿರಲು, ಅಲ್ಲಿ ಬಸವರಾಜದೇವರು ಮಡಿವಾಳಯ್ಯಗಳಿಂದ ಮರುಳುಶಂಕರದೇವರ ಇರವ ಕಂಡು ಬದುಕಿದೆನೆಂದು ಕಿನ್ನರ ಬ್ರಹ್ಮಯ್ಯಗಳ ಕೂಡೆ ನಿರೂಪಿಸಿದ ಪ್ರಸ್ತಾವದ ವಚನ. ॥

ಎನ್ನ ವಚನದ ರಚನೆಯ ಮೆಚ್ಚ. ಅಡಿಗಡಿಗೆನ್ನ ಮನದ ಮೈಲಿಗೆಯ ತೊಳೆದು ಹೋದ. ಪ್ರಾಣವ ಮರಳಿ ತಂದು ರಕ್ಷಿಸಿದ. ಕೂಡಲಸಂಗಮದೇವಯ್ಯ ಮಡಿವಾಳಯ್ಯಗಳ ಕರುಣದಿಂದೆ ಮರುಳುಶಂಕರದೇವರ ನಿಲವ ಕಂಡು ಬದುಕಿದೆನು ಕಾಣಾ ಕಿನ್ನರ ಬ್ರಹ್ಮಯ್ಯ. ॥೩೨॥

ಹೀಗೆಂದು ಬಸವರಾಜದೇವರು ನಿರೂಪಿಸಲು, ಅದಕ್ಕೆ ಕಿನ್ನರಬ್ರಹ್ಮಯ್ಯಗಳು ಬಸವರಾಜದೇವರ ನುಡಿಯನೊಳಕೊಂಡು ಮರುಳುಶಂಕರದೇವರ ಕೊಂಡಾಡಿದ ಪ್ರಸ್ತಾವದ ವಚನ. ॥

ಆಕಾರವೆಂಬೆನೆ? ನಿರಾಕಾರವಾಗಿದೆ. ನಿರಾಕಾರವೆಂಬೆನೆ? ಅತ್ರತ್ರ ತೋರುತ್ತದೆ. ತನ್ನನಳಿದು ನಿಜ ಉಳಿದು ಮಹಾಲಿಂಗ ತ್ರಿಪುರಾಂತಕನ ನಿಲವ ಕಂಡು, ಒಳಕೊಂಡ ಮರುಳುಶಂಕರದೇವರ ಮೂರ್ತಿಯನು ನಿನ್ನಿಂದ ಕಂಡು ಬದುಕಿದೆನು ಕಾಣಾ ಸಂಗನಬಸವಣ್ಣಾ. ॥೩೩॥

ಮತ್ತಂ, ಬಸವರಾಜದೇವರಿಂದೆ ಮರುಳುಶಂಕರದೇವರ ನಿಲವ ಕಂಡೆನೆಂದು ಕಿನ್ನರಬ್ರಹ್ಮಯ್ಯಗಳು ನಿರೂಪಿಸಲು, ಅದಕ್ಕೆ ಬಸವರಾಜದೇವರು ಕಿನ್ನರಬ್ರಹ್ಮಯ್ಯಗಳಿಂದೆ ಮರುಳುಶಂಕರದೇವರ ನಿಲವ ಕಂಡು ಬದುಕಿದೆನೆಂದು ಸ್ತುತಿಸಿದ ಪ್ರಸ್ತಾವದ ವಚನ. ॥

ನಾನಾ ಯುಗಂಗಳಲ್ಲಿ ಬಂದಲ್ಲಿ ಇಂತಪ್ಪ ನಿಲವ ಕಂಡುದಿಲ್ಲವಯ್ಯ! ಅಂಗಮನ ಭಾವಕರಣಂಗಳ ಮಹಾಮ, ಕೂಡಲ ಸಂಗಮದೇವರ ನಿಲವನೊಳಕೊಂಡ ಮರುಳುಶಂಕರದೇವರ ನಿಲವ ನಿಮ್ಮಿಂದ ಕಂಡು ಬದುಕಿದೆನು ಕಾಣಾ ಕಿನ್ನರಬ್ರಹ್ಮಯ್ಯ. ॥೩೪॥

ಹೀಗೆಂದು ಎಲ್ಲ ಗಣಂಗಳು ಮರುಳುಶಂಕರದೇವರ ಸ್ತುತಿಸುತ್ತಿರಲು, ಅಲ್ಲಿ ಮರುಳುಶಂಕರದೇವರು ತಮ್ಮ ಸ್ತುತಿಸಿದ ಗಣಂಗಳ ಒಂದೇ ವಚನದಲ್ಲಿ ಕೊಂಡಾಡಿದ ಪ್ರಸ್ಥಾವದ ವಚನ ॥

ಎನ್ನ ಜ್ಞಾನಾತ್ಮ ಚೇತನನಯ್ಯ ಪ್ರಭುದೇವರು. ಎನ್ನ ಪರಮಾತ್ಮ ಚೇತನನಯ್ಯ ಸಿದ್ಧರಾಮಯ್ಯದೇವರು. ಎನ್ನ ಚಿನ್ಮಯಾತ್ಮ ಚೇತನನಯ್ಯ ಸಂಗನಬಸವಣ್ಣನು. ಎನ್ನ ನಿರ್ಮಲಾತ್ಮ ಚೇತನನಯ್ಯ ಷಡಕ್ಷರ ಬ್ರಹ್ಮಿ ಚನ್ನಬಸವಣ್ಣನು. ಎನ್ನ ಮಹದಾತ್ಮ ಚೇತನನಯ್ಯ ಬಸವಣ್ಣನ ನಿಜಸುಖಿ ಅಪ್ಪಣ್ಣನು. ಎನ್ನ ಜೀವಾತ್ಮ ಚೇತನನಯ್ಯ ಮಡಿವಾಳ ಮಾಚಯ್ಯನು. ಎನ್ನರಿವಿನ ಚೇತನಾತ್ಮಕನಯ್ಯ ಕಿನ್ನರಯ್ಯನು. ಇಂತಪ್ಪ ಪ್ರಮಥರ ಕರುಣದಿಂದೆ ಶುದ್ಧ ಸಿದ್ಧ ಪ್ರಸಿದ್ಧ ಪ್ರಭುವೆ ಚನ್ನಮಲ್ಲಿಕಾರ್ಜುನ ದೇವಯ್ಯ ಬದುಕಿದೆನು ಕಾಣಾ ನಿಮ್ಮ ಧರ್ಮ ನಿಮ್ಮ ಧರ್ಮ. ॥೩೫॥

ಮತ್ತಂ, ಸರ್ಪನ ಹೆಡೆಯ ಮೇಲಿಪ್ಪ ಇಪ್ಪತ್ತೇಳು ಲೋಕವ ಕಂಡೆ. ಇಪ್ಪತ್ತೇಳು ಲೋಕದೊಳಿರ್ಪ ಎಪ್ಪತ್ತೇಳು ಕರ್ಪುರದ ಗಿರಿಯ ಕಂಡೆ. ಎಪ್ಪತ್ತೇಳು ಕರ್ಪುರದ ಗಿರಿಯ ಮೇಲಿಪ್ಪ ಎಪ್ಪತ್ತೇಳು ಉರಿಯ ಕಂಭವ ಕಂಡೆ. ಎಪ್ಪತ್ತೇಳು ಉರಿಯ ಕಂಭದ ಮೇಲಿರ್ಪ ಎಪ್ಪತ್ತೇಳು ಅರಗಿನ ಪುತ್ಥಳಿಯ ಕಂಡೆ. ಆ ಎಪ್ಪತ್ತೇಳು ಅರಗಿನ ಪುತ್ಥಳಿ ಕರಗಿ ಹೋದವು. ಎಪ್ಪತ್ತೇಳು ಕರ್ಪುರದ ಗಿರಿ ಉರಿದು ಪೋದವು. ಎಪ್ಪತ್ತೇಳು ಲೋಕ ಹಾಳಾದವು. ಆ ಸರ್ಪ ಬೆಂದು ಸತ್ತು ಹೋಯಿತು. ಇನ್ನ ನಿಷ್ಪತ್ತಿ ನಿರಾಳವೆಂಬ ನಿಜ ಒಳಕೊಂಡ ಬಳಿಕ ನಾನೆತ್ತ ಹೋದೆನಂದರಿಯೆನಯ್ಯ. ಶುದ್ಧ ಸಿದ್ಧ ಪ್ರಸಿದ್ಧ ಪ್ರಸನ್ನ ಪ್ರಭುವೆ ಶಾಂತ ಚನ್ನಮಲ್ಲಿಕಾರ್ಜುನ ದೇವಯ್ಯ ನಿಮ್ಮರ್ಪಣದ ಪರಿಯ ನೀವೆ ಬಲ್ಲಿರಲ್ಲದೆ ನಾನೆತ್ತ ಬಲ್ಲೆನಯ್ಯ ನಿಮ್ಮ ಧರ್ಮ ನಿಮ್ಮ ಧರ್ಮ. ॥೩೬॥

ಮತ್ತಂ, ಮರುಳುಶಂಕರದೇವರ ಐಕ್ಯ ॥

ಸಂಸಾರವೆಂಬ ಸಾಗರವ ದಾಂಟುವರೆ ಆರುಹೆಂಬ ಹರಿಗೋಲನಿಕ್ಕಿ ಜ್ಞಾನವೆಂಬ ಅಂಬಿಗ ಇಹರು ಗೋಲೊಳಗೆ ಕುಳಿರ್ದು ಸುಜ್ಞಾನವೆಂಬ ಸಟ್ಟುಗವ ಪಿಡಿದು ಮಹಾಜ್ಞಾನವೆಂಬ ಗಾತಗಳೆಯ ಪಿಡಿದು, ನಾನೀ ಹೊಳೆಯಂ ಕಂಡು ಅಂಬಿಗನ ಕೇಳಿದರೆ ನಾ ನಿನ್ನ ಹಾಯಿಸಿಕೊಟ್ಟೆಹೆನೆಂದನು. ನಾನು ನಿನ್ನ ನಂಬಿ ಹರಿಗೋಲನೇರಿದೆನು. ಕಾಣಾ ಅಂಬಿಗರಣ್ಣಾ, ಇಂದು ನಾನು ಹರಿಗೋಲಲ್ಲಿ ಕುಳ್ಳಿರ್ದು ನಡುಹೊಳೆಯಲ್ಲಿ ಹೋಗ

ಲಿಕೆ ಕಾಮವೆಂಬ ಕೊರಡು ಅಡ್ಡ ಬಿದ್ದಿತ್ತು. ಕ್ರೋಧವೆಂಬ ಸುಳುಹಿನೊಳಗೆ ಸಿಲ್ಕಿತ್ತು. ಅಹಂಕಾರವೆಂಬ ಮೀನ ಬಂದು ನಿಂದಿತ್ತು. ಮಾಯೆ ಎಂಬ ಮೊಸಳೆ ಬಾಯ ಬಿಡುತ್ತಿದ್ದಿತ್ತು. ಮೋಹವೆಂಬ ನೊರೆ ತೆರೆ ಹೆಚ್ಚಿ ಬರುತ್ತಿದ್ದಿತ್ತು. ಲೋಭವೆಂಬ ಕಾಡ್ಗಡಲಿಗಳ ದೊಯ್ಯುತ್ತಿದ್ದಿತ್ತು. ಮದವೆಂಬ ಮರಹು ನೂಕುತ್ತಿದ್ದಿತ್ತು. ಮತ್ಸರವೆಂಬ ಗಾಳಿ ತಲೆ ಕೆಳಗು ಮಾಡುತ್ತಿದ್ದಿತ್ತು. ಇವೆಲ್ಲವ ಪರಿಹರಿಸಿ ಎನ್ನ ಹೊಳೆಯ ದಾಂಟಿಸಿದನು ಅಂಬಿಗರಣ್ಣನು. ಈ ಹೊಳೆಯ ದಾಂಟಿಸಿದ ಕೂಲಿಯನೆನ್ನ ಬೇಡಿದರೆ ಕೂಲಿಯ ಕೊಡಲೇನು ಇಲ್ಲ ಎಂದರೆ ಕೈಸೆರೆಯಾಗಿ ಎನ್ನೊಳದೊಯ್ದನಯ್ಯ! ಅರುವೆಯ ಕೊಟ್ಟ ಕೂಲಿಗೆ ಕರುವ ಕಾಯಿಸಿಕೊಂಡನಯ್ಯ! ಅರಿಯದೆ ಹರುಗೋಲನೇರಿ ತೊರೆ ದಾಂಟಿವ ಕೂಲಿಗೆ ಕರುವ ಕಾದೆ ಕಾಣಾ ಶುದ್ಧ ಸಿದ್ಧ ಪ್ರಸಿದ್ಧ ಪ್ರಸನ್ನ ಪ್ರಭುವೆ ಶಾಂತ ಮಲ್ಲಿಕಾರ್ಜುನ ದೇವಯ್ಯ, ನಿಮ್ಮ ನಂಬಿ ನಾನು ಕೆಟ್ಟೆ ನಾನು ಬಟ್ಟಬಯಲಾದೆನಯ್ಯ, ನಿಮ್ಮ ಧರ್ಮ ನಿಮ್ಮ ಧರ್ಮ. ॥೩೭॥

ಮತ್ತಂ, ಮರುಳುಶಂಕರದೇವರು ತಮ್ಮ ಐಕ್ಯದಲ್ಲಿ ಪ್ರಭುದೇವರ ಸ್ತೋತ್ರಮಂ ಮಾಡಿದ ಪ್ರಸ್ತಾವದ ವಚನ. ॥

ನಿಸ್ಸಂಗತ್ವಂ ನಿರಾಭಾರಿ। ನಿಸ್ಸೀಮಂ ನಿರುಪಾಧಿಕಂ॥ ನಿರ್ಲೇಹಂ ನಿರ್ಮಳಂ ನಿತ್ಯಂ। ಸತ್ಯಜಂಗಮ ಲಕ್ಷಣಂ॥ ಇಂತೆಂದುದಾಗಿ, ಶುದ್ಧ, ಸಿದ್ಧ, ಪ್ರಸಿದ್ಧ ಪ್ರಸನ್ನ ಪ್ರಭುವೆ ಶಾಂತ ಚನ್ನಮಲ್ಲಿಕಾರ್ಜುನ ದೇವಯ್ಯ, ನಿಮ್ಮ ಘನಕ್ಕೆ ಘನವಾದ ಪ್ರಭುದೇವರ ಘನವ ನೀವೆ ಬಲ್ಲಿರಿ. ನಾನೆತ್ತ ಬಲ್ಲೆನಯ್ಯ ನಿಮ್ಮ ಧರ್ಮ, ನಿಮ್ಮ ಧರ್ಮ. ॥೩೮॥

ಮತ್ತಂ, ಮರುಳುಶಂಕರದೇವರ ಐಕ್ಯ॥ ॥ಸಾಕ್ಷಿ॥ ಮಹಾಲಿಂಗಂ ತ್ರಯೋರ್ಲಿಂಗಂ। ತ್ರಿವಿಧಂ ಷಡ್ವಿಧೋರ್ಮುಖಂ॥ ತ್ರಿವಿಧೇಕ ಮುಖೋ ಲಿಂಗಂ। ಮಹಾಲಿಂಗಂತುದರ್ಶನಂ॥ ಇಂತೆಂದುದಾಗಿ, ಒಂದು ಮೂರು ಮಾಡಿಕೊಂಡನಯ್ಯ ನಮ್ಮ ಬಸವಣ್ಣನು. ಮೂರು ಆರ ಮಾಡಿಕೊಂಡನಯ್ಯ ನಮ್ಮ ಬಸವಣ್ಣನು. ಆರ ಮೂರ ಮಾಡಿಕೊಂಡನಯ್ಯ ನಮ್ಮ ಬಸವಣ್ಣನು. ಮೂರ ಒಂದ ಮಾಡಿಕೊಂಡನಯ್ಯ ನಮ್ಮ ಬಸವಣ್ಣನು! ಇಂತಪ್ಪ ಸರ್ವಾವಧಾನಿಯಯ್ಯ ನಮ್ಮ ಬಸವಣ್ಣನು. ಇಂತಪ್ಪ ಸರ್ವಸಂಗ ಪರಿತ್ಯಾಗಿಯಯ್ಯ ನಮ್ಮ ಬಸವಣ್ಣನು. ಇಂತಪ್ಪ ಸರ್ವ ಕರಣ ನಿರ್ಮೂಲನಯ್ಯ ನಮ್ಮ ಬಸವಣ್ಣನು. ಇಂತಪ್ಪ ಕಾರುಣ್ಯ ಪ್ರಸಾದಿ

ಯಯ್ಯ ನಮ್ಮ ಬಸವಣ್ಣನು. ಇಂತಪ್ಪ ಸರ್ವಾಂಗಲಿಂಗಿಯಯ್ಯ ನಮ್ಮ ಬಸವಣ್ಣನು. ಇಂತಪ್ಪ ಸರ್ವನಿರ್ವಾಣಿಯಯ್ಯ ನಮ್ಮ ಬಸವಣ್ಣನು. ಇಂತಪ್ಪ ಬಸವಣ್ಣನ ಮಹಿಮೆಯ ನೀವೆ ಬಲ್ಲಿರಿ. ಅಸಂಖ್ಯಾತ ಮಹಾ ಪುರಾತನರು ಪ್ರಭುದೇವರು ಮುಖ್ಯವಾದ ನಿಲವಿನ ಶ್ರೀ ಚರಣಕ್ಕೆ ನಾನು ಶರಣಾರ್ಥಿ ಶರಣಾರ್ಥಿ ಎಂದು ಶಬ್ದಮುಗ್ಧವಾಗಿ ಉರಿಉಂಡ ಕರ್ಪುರದಂತೆ ನಿಮ್ಮ ಶ್ರೀಚರಣವನೈದಿದೆನಯ್ಯ. ಶುದ್ಧ ಸಿದ್ಧ ಪ್ರಸಿದ್ಧ ಪ್ರಸನ್ನ ಪ್ರಭುವೆ ಶಾಂತ ಮಲ್ಲಿಕಾರ್ಜುನದೇವಯ್ಯ, ನಿಮ್ಮ ಬಸವಣ್ಣನ ಪ್ರಸಾದವ ಕೊಂಡು ನಾನು ಬದುಕಿದೆನು. ಬಸವಣ್ಣನ ಮುಂದೆ ಬಯಲಾಗಿ ಹೋದೆನಯ್ಯ ನಿಮ್ಮ ಧರ್ಮ, ನಿಮ್ಮ ಧರ್ಮ. ॥೩೯॥

ಇಂತು ಮರುಳುಶಂಕರದೇವರು ನಿರ್ವಯಲಾಗಲು, ಚನ್ನಬಸವ ರಾಜದೇವರು ಕೊಂಡಾಡಿದ ಪ್ರಸ್ಥಾವದ ವಚನ. ॥

ಮಾಡಬಾರದ ಭಕ್ತಿಯನೆ ಮಾಡಿ, ನೋಡಬಾರದ ನೋಟವನೆ ನೋಡಿ, ಕೂಡಬಾರದ ಕೂಟವನೆ ಕೂಡಿ, ಸ್ತುತಿಸುವರೆ ಸ್ತುತಿಗೆ ಬಾರದೆ ಮುಟ್ಟುವರಿಗೆ ಮುಟ್ಟಬಾರದೆ, ಒಟ್ಟಬಯಲಾಗಿ ಹೋದ ಮರುಳುಶಂಕ ರದೇವರ ಮಹಾತ್ಮೆಗೆ ನಮೋ ನಮೋ ಎಂದು ಬದುಕಿದೆನು ಕಾಣಾ ಕೂಡಲ ಚನ್ನಸಂಗಮದೇವಾ. ॥೪೦॥

ಇಂತು ಚನ್ನಬಸವರಾಜದೇವರು ಮರುಳುಶಂಕರದೇವರು ನಿರ್ವಯ ಲನೈದಿದಲ್ಲಿ ಕೊಂಡಾಡುತ್ತಿರಲು, ಆ ಪ್ರಸ್ಥಾವದೊಳು ಪ್ರಭುದೇವರು ಬಸವರಾಜದೇವರೊಡನೆ ನಿರೂಪಿಸಿದ ಪ್ರಸ್ಥಾವದ ವಚನ. ॥

ಕಾಮನ ಕಣ್ಣ ಮುಳ್ಳ ಕಳೆದು, ಭೂಮಿಯ ತೈಲದ ಸೀಮೆಯ ಕೆಡಿಸಿ, ಹೋಮವನುರುಹಿ, ದಕ್ಷನ ತಲೆಯ ನರಿದ ನಿಸ್ಸೀಮ ಶರಣರ ನಿಲವನರಿಯಬಹುದೆ? ಅನುಪಮ ಸಾಧ್ಯ ಉಪಮೆಗೆ ಕಡೆ ಮುಟ್ಟರು. ಗುಹೇಶ್ವರನ ಶರಣರೆಂತಹರೆಂಬುದ ಕಂಡಾ ಸಂಗನಬಸವಣ್ಣಾ? ॥೪೧॥

ಹೀಗೆಂದು ಪ್ರಭುದೇವರು ನಿರೂಪಿಸಲು, ಅದಕ್ಕೆ ಬಸವರಾಜದೇ ವರು ನಿರಾಕಾರವಾಗಿರ್ದ ಪ್ರಣಮವನು ನಿರವಯವನೈದುವದು ಸಾಮ್ಯ ವಲ್ಲದೆ ಕಾಯವು ಜಡವು ನಿರವಯುವಹ ಭೇದವೆಂತೆಂದು ಪ್ರಭುದೇವರು ಬೆಸಗೊಂಬ ಪ್ರಸ್ಥಾವದ ವಚನ. ॥

ಲಿಂಗದಲ್ಲಿ ಅರ್ಪಿತವಾದ ಸುಖವು ಲಿಂಗದಲ್ಲಿ ಲಿಯ್ಯವಾಯಿತ್ತೆಂದರೆ ಅಂಗವ ಲಿಂಗದಲ್ಲಿ ನಿಕ್ಷೇಪಿಸಿಹೆನೆಂಬ ಕಾರಣವೇಕಯ್ಯ? ಶರಣಂಗೆ

ಪ್ರಾಣಲಿಂಗವಲ್ಲಿ ಸಮನಿಸಿ ನಿರವಯುವಾಗಬಹುದಲ್ಲವೆ, ಕರ್ಮದಿಂದ ಕಾಯುವ ಸವೆಸಿ ಸ್ವಯವಪ್ಪ ಪರಿ ಎಂತು ಹೇಳಯ್ಯ? ಕೂಡಲಸಂಗಮ ದೇವಯ್ಯ ನಿಮ್ಮ ಶರಣರು ಕಾಯವಿಡಿದಿರ್ದು ನಿರ್ಮಾಯರಾಗಿಪ್ಪದೆ ಹೇಳಯ್ಯ ನಿಮ್ಮ ಧರ್ಮ ನಿಮ್ಮ ಧರ್ಮ. ॥೪೨॥

ನಿಮ್ಮ ಶರಣರು ಶರೀರವಿರ್ದು ನಿಜದಲ್ಲಿ ನಿಂದ ಭೇದವ ನಿರೂಪಿಸಿ ಎಂತು ಬಸವರಾಜದೇವರು ಬಿನ್ನಹಂ ಮಾಡಲು, ಇದಕ್ಕೆ ಪ್ರಭುದೇವರು ಮರುಳುಶಂಕರದೇವರೆಂಬ ಶರಣರ ಮಹಾತ್ಮೆಯಂ ನಿರೂಪಿಸಿದ ಪ್ರಸ್ತಾವದ ವಚನ ॥

### ಪದಂಗಳು॥ ರಾಗ. ಬಹುಳಿ

ಕರ್ಮಕಾಯನು ಅಲ್ಲ. ಬ್ರಹ್ಮಮೂರುತಿ ಅಲ್ಲ. ಪರಬ್ರಹ್ಮನನು ನುಡಿವಲ್ಲಿ ತಾನಿಲ್ಲದ ನಿರ್ಮೋಹಿ ॥ಪಲ್ಲ॥ ಮಾತಾಪಿತರುಗಳುದುರಜಾತಜನಿತನು ಅಲ್ಲ. ಶ್ವೇತ ಪೀತ ಕಪೋತ ಷಡುವರ್ಣರಹಿತ । ನವಮಾಸ ತುಂಬಿದ ಮೂರುತಿಯು ತಾನಲ್ಲ । ಅವಿರಳ ಲಿಂಗದ ಕಳೆಯ ಬೆಳಗು ತಾ ಶರಣಾ ॥೧॥ ನಡೆಯು ಕಲಿವಲ್ಲಿ ನೋಡಿಳೆಯ ಹಂಗಿಗನಲ್ಲ । ನುಡಿಯು ಸಡಗರದಲಾದ ಬಿಂದು ತಾನಲ್ಲ ॥ ಪದುಮ ಪರಿಮಳಕೆರಗುವ ಭ್ರಮರತಾನಲ್ಲ। ಭವದ ಕುಳವನು ಗೆದ್ದ ನಿಭ್ರಾಂತ ಶರಣಾ ॥೨॥ ಜಾಗ್ರ ಸ್ವಪ್ನಸುಷುಪ್ತಿಯಾಗು ಅನುಮಿಷನಲ್ಲ। ಆಗಮ ಕುಳದಲಾದ ಭೋಗಿ ತಾನಲ್ಲ ॥ ತೇಜಸ್ಸುರಂಜನೆಯುಗಣಿತ ಗುಣಿತನು ಅಲ್ಲ। ಸಹಜ ನಿತ್ಯನು ತಾನ ಭೇದ್ಯ ಶರಣಾ ॥೩॥ ಬಿಂದುಕಳೆ ಸುಖದ ಸಂಪರ್ಕದವ ತಾನಲ್ಲ । ಒಂದು ಛಂದದಲಿ ಕಂದಮೂಲವನು ಗೆಲಿದ ॥ ಸಂದಳಿದ ಸ್ವಯ ಸುಖವನೊಂದು ಮಾಡುತಲಿತ್ರಿ । ಬಂಧ ಭೇದವ ಗೆಲಿದ ನಿಷ್ಕಾಮಿ ಶರಣಾ. ॥೪॥ ಚಂದ್ರಧರನು ಅಲ್ಲ, ಚಂದ್ರ ಪೂರಿತನಲ್ಲ, ಇಂದ್ರ ಚಾಪದ ಪರಿಪ್ರಭವ ತಾನಲ್ಲ। ಭೃಂಗನುಂಗಿದ ರುಚಿಯನೊಂದು ಪಾಡಿದ ಗುಹೇಶ್ವರನೆಂಬ ಲಿಂಗದ ಹಂಗಳಿದ ಶರಣಾ. ॥೫॥

ಇಂತು ಪ್ರಭುದೇವರು ಮರುಳುಶಂಕರದೇವರ ಶರಣತ್ವದ ಮಹಾತ್ಮೆಯ ನಿರೂಪಿಸಿದ ಪ್ರಸ್ತಾವದ ವಚನದಲ್ಲಿ ಬಸವರಾಜದೇವರು ಬಿನ್ನೈಸಿದ ಪ್ರಸ್ತಾವದ ವಚನ. ॥

ಅಯ್ಯಾ ನಿಮ್ಮ ಶರಣರು ಪರಮ ಸುಖಿಗಳಯ್ಯಾ. ಅಯ್ಯಾ ನಿಮ್ಮ ಶರಣರು ಕಾಯವೆಂಬ ಕರ್ಮಕ್ಕೆ ಹೊದ್ದದ ನಿಃಕಾಮಿಗಳಯ್ಯಾ. ಅಯ್ಯಾ ನಿಮ್ಮ ಶರಣರು ಮನದಲ್ಲಿ ನಿರ್ಲೇಪ ಜ್ಞಾನಿಗಳಯ್ಯಾ! ಕೂಡಲಸಂಗಮದೇವಯ್ಯಾ ನಿಮ್ಮ ಶರಣರ ಘನವನೆನಗೆ ಹೇಳಲು ನಾನು ಕೇಳಲಮ್ಮದೆ ನಮೋ ನಮೋ ಎನುತಿರ್ದೆನು ಕಾಣಾ ಪ್ರಭುವೆ. ॥೪೮॥

ಮತ್ತಂ, ಅಯ್ಯಾ ನಿಮ್ಮ ಶರಣರ ನಿಲವ ಸ್ವರ್ಗ ಮರ್ತ್ಯ ಪಾತಾಳದೊಳಗೆ ಬಲ್ಲವರಿಲ್ಲವಯ್ಯಾ! ಅಘಟಿತಘಟಿತರು ಅಖಂಡಿತ ಮಹಿಮರು. ನಿಜದಲ್ಲಿ ನಿರ್ಲೇಪ ಭಾವಕರು. ಕೂಡಲ ಸಂಗಮದೇವ ನಿಮ್ಮ ಶರಣರ ನಿಲವನರಿವಡೆ ನಾನೇತರವನಯ್ಯಾ? ॥೪೯॥

ಇಂತು ಮರುಳುಶಂಕರ ದೇವರ ಘನವನು ಪ್ರಭುದೇವರು ಬಸವ ರಾಜದೇವರು ಆಶ್ಚರ್ಯಂಗೊಂಡು ಕೊಂಡಾಡುತ್ತಿರಲು, ಅಲ್ಲಿ ಚಿಕ್ಕದಣ್ಣಾಯಕರು, ಬಿನ್ನೈಸಿದ ಪ್ರಸ್ಥಾವದ ವಚನ. ॥

ಕಾಯವಳಿದರೇನು? ಕಾಯ ಉಳಿದರೇನು? ಕಾಯ ಬಯಲಾದರೇನು? ಮನ ಮನ ಲಯುವಾಗಿ ಘನಕ್ಕೆ ಘನವಾದ ಶರಣರ ಕಂಡಡೆ ಕೂಡಲ ಚನ್ನಸಂಗನೆಂದು ಶಬುದ ಮುಗುದವಾಗಿರಬೇಕಲ್ಲದೆ ಚೋದ್ಯಕ್ಕೆ ಕಾರಣವೇನು ಹೇಳಾ ಸಂಗನಬಸವಣ್ಣಾ? ॥೫೦॥

ಮತ್ತಂ, ಆದಿಯಲ್ಲಿ ಹುಟ್ಟಿತ್ತಲ್ಲ. ಅನಾದಿಯಲ್ಲಿ. ಬೆಳೆಯಿತ್ತಲ್ಲ, ಮೂರ್ತಿಯಲ್ಲಿ ನಿಂದುದಲ್ಲ. ಆ ಮೂರ್ತಿಯಲಿ ಭಾವಿಯಲ್ಲ. ಅರವಿನೊಳಗೆ ಅರಿದುದಲ್ಲ.. ಮರಹಿನೊಳಗೆ ಮರೆದುದಲ್ಲ. ಎಂತಿರ್ದಂತೆ ಪರಬ್ರಹ್ಮ ನೋಡಾ. ಮನನುನಲಿಯ್ಯವಾಗಿ ಘನಕ್ಕೆ ಘನ ಒಂದಾದರೆ ಮತ್ತೆ ಮನಕ್ಕೆ ವಿಸ್ಮಯುವ ಮಾಡಲುಂಟೆ? ಕೂಡಲ ಚನ್ನಸಂಗನ ಶರಣರು ಕಾಯವೆಂಬ ಕಂಥೆಯು ಕಳೆಯದೆ ಬಯಲಾದರೆ ನಿಜವೆಂದು ಪರಿಣಾಮಿಸಬೇಕಲ್ಲದೆ ಅಂತಿಂತೆನಲುಂಟೆ ಸಂಗನಬಸವಣ್ಣಾ? ॥೫೧॥

ಇಂತೀ ಶ್ರೀಮತ್ಸಕಲಗಣ ಪುರಾತನರೊಳ್ ಪ್ರಭುದೇವರು ಮಹಾನುಭಾವ ಸಂಗೋಷ್ಠಿಯಂ ಮಾಡಿದ ಶೂನ್ಯಸಂಪಾದನೆಯೊಳ್ ಮರುಳುಶಂಕರದೇವರ ಸಂಪಾದನೆಗಂ ಷಷ್ಠಮೋಪದೇಶ ಸಮಾಪ್ತ ಮಂಗಳ ಮಹಾ. ॥ ಶ್ರೀ. ಶ್ರೀ. ಶ್ರೀ.

# ಬಸವೇಶ್ವರನ ಸಂಪಾದನೆ.

## (ಸಪ್ತಮೋಪದೇಶ.)

ಕಂದ॥ ಆದಿಅನಾದಿಯ ಭೇದವ। ನಾದರದಿಂ ತೋರಿ ಜಂಗಮ ಪ್ರಾಣತ್ವದ। ಹಾದಿಯನರುಹಿಸಿ ಪ್ರಭುವರ ಮೇದಿನಿಯೊಳ್ ಬಸವರಾಜ ಗುಸುರ್ದುದ ಪೇಳ್ವೆಂ॥

ಅದೆಂತೆಂದೊಡಃ ಪ್ರಭುದೇವರು ಮರುಳುಶಂಕರದೇವರಿಗೆ ನಿರವಯಲ ನಿಜಮಂ ಅರುಹಲು ಆ ಮರುಳುಶಂಕರದೇವರು ನಿರವಯಲನೈದಲು, ಅಲ್ಲಿ ಚನ್ನಬಸವರಾಜದೇವರು ಮಡಿವಾಳಯ್ಯಗಳು ಹಡಪದಪ್ಪಣ್ಣಗಳು ಸೊಡ್ಡಳ ಬಾಚರಸರು ಕಿನ್ನರ ಬ್ರಹ್ಮಯ್ಯಗಳು ಮುಖ್ಯವಾದ ಸಮಸ್ತ ಪುರಾತನರೆಲ್ಲ ಆಶ್ಚರ್ಯಂಗೊಂಡು ಆ ಮರುಳುಶಂಕರದೇವರ ಘನವ ಕೊಂಡಾಡುತ್ತಿರಲು, ಆ ಮಹಾಗಣತಿಂಥಿಣಿಯ ಬಸವರಾಜದೇವರು ನೋಡಿ, ಹೃದಯಕಮಲವಲರಿ ಹಾರೈಸಿ ಪೂಸೈಸಿ ಪರಮಾನಂದದಿಂ ಕುಣಿದಾಡುತ್ತಿರ್ದ ಪ್ರಸ್ತಾವದ ವಚನ. ॥

ಸಸಿಯ ಮೇಲೆ ಸಾಗರವು ಪರಿಪಂತಾಯಿತ್ತಯ್ಯ ಎನ್ನ ಭಕ್ತಿ. ಆನಂದದಿಂ ಕುಣಿಕುಣಿದಾಡುವೆ. ಆನಂದದಿಂ ನಲಿನಲಿದಾಡುವೆ. ಕೂಡಲ ಸಂಗನ ಶರಣರು ಬಂದರೆ ಉಬ್ಬಿ ಕೊಬ್ಬಿ ನಲಿನಲಿದಾಡುವೆ. ॥೧॥

ಮತ್ತಂ, ಅಯ್ಯ ನಿಮ್ಮ ಶರಣರ ಸಂಗಸುಖವನೇನೆಂದುಪಮಿಸುವೆನಯ್ಯ? ನಿಮ್ಮ ಶರಣರ ಕೂಡೆ ಸಮಗೋಷ್ಠಿಯ ಮಾಡುವದನುಪಮಿಸಲಮ್ಮೆನಯ್ಯ. ಕೂಡಲಸಂಗ ನಿಮ್ಮ ಪ್ರಮಥರೆಲ್ಲರು ನೆರೆದ ಗಣತಿಂಥಿಣಿಯೊಳಗೆನ್ನನೇನೆಂದರಿಯದೆ ಅಗಲದಂತಿರಿಸಯ್ಯ! ನಾ ನಿಮ್ಮ ಧರ್ಮದ ಕವಿಲೆ. ॥೨॥

ಮತ್ತಂ, ಅಯ್ಯ ನಿಮ್ಮ ಮಹಾನುಭಾವಿಗಳ ಸಂಗದಿಂದೆನ್ನ ತನು ಶುದ್ಧವಾಯಿತ್ತು. ಮನ ಶುದ್ಧವಾಯಿತ್ತು. ಎನ್ನ ಸರ್ವಾಂಗ ಶುದ್ಧವಾಯಿತ್ತು. ವಾರಿಕಲ್ಲು ಪುತ್ಥಳಿಯನಪ್ಪಿಕೊಂಡಂತಾಯಿತ್ತು. ಕೂಡಲ ಸಂಗಮದೇವ ನಿಮ್ಮ ಶರಣ ಪ್ರಭುದೇವರ ಕೃಪೆಯಿಂದ ಎನಗೊದವಿದ ಘನವನೇನೆಂದುಪಮಿಸುವೆನು? ॥೩॥

ಹೀಗೆಂದು ಬಸವರಾಜದೇವರು ಬಿನ್ನೈಸಲು, ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ಥಾವದ ವಚನ. ॥

ಕಾಯಗೊಂಡು ಹುಟ್ಟಿದವರು ದೇವರಾದಡಾಗಲಿ, ಇವರಾದಡಾಗಲಿ, ಮಾಯೆಯು ಸಾಧಿಸಿ ಗೆಲುವುದರಿದು ನೋಡಾ. ಮನದ ತಮಂಧವ ಗೆಲಿದು ನೆನೆದು ಸುಖಿಯಾದಿಹೆನೆಂಬವರ ಬೆಂಬತ್ತಿ ಕಾಡಿತ್ತು ಕರ್ಮ. ಗುಹೇಶ್ವರಲಿಂಗವ ಕಿರಿಕಿರಿದಾಗಿ ನೆನೆದರೆ, ಹಿರಿಹಿರಿದಾಗಿ ಕಾಡುವದು ನೋಡಾ ಮರಹು. ಸಂಗನಬಸವಣ್ಣ ನೀ ನೆನೆದ ನೆನಹು ಅದರಂತಹದಲ್ಲ ನೋಡಾ. ॥೪॥

ಹೀಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಬಸವರಾಜದೇವರು ಬಿನ್ನೈಸಿದ ಪ್ರಸ್ಥಾವದ ವಚನ. ॥

ಕರಿ ಘನ ಅಂಕುಶ ಕಿರಿದೆನ್ನಬಹುದೆ ಅಯ್ಯ? ಗಿರಿ ಘನ ವಜ್ರ ಕಿರಿದೆನ್ನಬಹುದೆ ಅಯ್ಯ? ತಮಂಧ ಘನ ಜ್ಯೋತಿ ಕಿರಿದೆನ್ನಬಹುದೆ ಅಯ್ಯ? ಮರಹು ಘನ ನಿಮ್ಮ ನೆನಹು ಕಿರಿದೆನ್ನಬಹುದೆ ಅಯ್ಯ? ಕೂಡಲಸಂಗಮದೇವ ನಿಮ್ಮ ಕೃಪೆಯು ಘನವ ನೀವೆ ಬಲ್ಲಿರಿ. ॥೫॥

ನಿಮ್ಮ ಸ್ಮರಣೆಯು ಘನದ ಮುಂದೆ ಮಾಯೆ ನಿಲಲರಿಯದು; ನಿಮ್ಮ ನೆನಹು ಮೀರುವ ಘನವಿಲ್ಲೆಂದು ಬಸವರಾಜದೇವರು ಬಿನ್ನೈಸಲು, ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ಥಾವದ ವಚನ. ॥

ನೆನೆದಿಹೆನೆಂದರೆ ಮನಕ್ಕೆ ನಿಲುಕದು. ಅರಿದಿಹೆನೆಂದರೆ ಕುರುಹಿಗೆ ಬಾರದು. ಕಂಡಿಹೆನೆಂದರೆ ಮೂರ್ತಿ ಅಲ್ಲ. ತನುವಿನೊಳಗಿಲ್ಲ, ಮನದೊಳಗಿಲ್ಲದ ಘನವು ನಿಮ್ಮ ಮನಕ್ಕೆ ವೇದ್ಯವಾದ ಪರಿ ಎಂತಯ್ಯ? ಗುಹೇಶ್ವರನೆಂಬ ಲಿಂಗವು ಜಗದ ಕಣ್ಣಿಂಗೆ ಕತ್ತಲೆಯ ಕವಿಸಿ ತನ್ನ ತಪ್ಪಿಸಿಕೊಂಡಿಪ್ಪ ಭೇದ ನಿನ್ನೊಳಗಡಗಿದ ಪರಿ ಎಂತು ಹೇಳಾ ಸಂಗನಬಸವಣ್ಣಾ? ॥೬॥

ವಾಙ್ಮನಾತೀತವಾದ ವಸ್ತು ನಿನ್ನ ಮನದೊಳಗಡಗಿದ ಪರಿ ಎಂತೆಂದು ಪ್ರಭುದೇವರು ಬೆಸಗೊಳಲು, ಅಲ್ಲಿ ಬಸವರಾಜದೇವರು ಬಿನ್ನೈಸಿದ ಪ್ರಸ್ಥಾವದ ವಚನ. ॥

ಜಗವಸುತ್ತಿಪ್ಪುದು ನಿಮ್ಮ ಮಾಯೆಯಯ್ಯ. ನಿಮ್ಮ ಸುತ್ತಿಪ್ಪುದು ಎನ್ನ ಮನ ನೋಡಯ್ಯ. ನೀನು ಜಗಕ್ಕೆ ಬಲ್ಲಿದನು. ನಿನಗೆ ನಾನು ಬಲ್ಲಿ

ದನು ಕಂಡಯ್ಯ. ಕರಿಯು ಕನ್ನಡಿಯೊಳಡಗಿದಂತೆ, ಎನ್ನೊಳಗಡಗಿದೆ ಕೂಡಲಸಂಗಮದೇವಾ. ॥೭॥

ನೀನು ಮಹಾ ಘನ ಪರತತ್ವವಾದುದೇನು? ಎನ್ನ ಸೂಕ್ಷ್ಮವಪ್ಪ ಅಂತರಂಗದೊಳಗೆ ಅಡಗಿದ್ದಿರೆಂದು ಬಸವರಾಜದೇವರು ಬಿನ್ನೈಸಲು ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ಥಾವದ ವಚನ. ॥

ಅಂತರಂಗದಲ್ಲಿ ಅಡಗಿತ್ತೆಂದರೆ ಭಾವಕ್ಕೆ ಪೂಜ್ಯವಿಲ್ಲ. ಬಹಿರಂಗದಲ್ಲಿ ಅಡಗಿತ್ತೆಂದರೆ ಕ್ರಿಯಾಬದ್ಧನಲ್ಲ. ಅರುಹಿನೊಳಗಡಗಿತ್ತೆಂದರೆ ಮತಿಗೆ ಹವಣಿಲ್ಲ. ಭಾವ ನಿರ್ಭಾವ ನಿಃಶೂನ್ಯವನು ಕಾಂಬ ಪರಿ ಎಂತು ಹೇಳಾ? ಕಂಡು ತನ್ನೊಳಗಿಂಬಿಟ್ಟುಕೊಂಬ ಪರಿ ಎಂತು ಹೇಳಾ? ಗುಹೇಶ್ವರನೆಂಬ ಲಿಂಗವನರಿದು ಕೂಡಿ ಸುಖಿಯಹ ಪರಿ ಎಂತು ಹೇಳಾ ಸಂಗನಬಸವಣ್ಣಾ? ॥೮॥

ಹೀಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಬಸವರಾಜದೇವರು ಬಿನ್ನೈಸಿದ ಪ್ರಸ್ಥಾವದ ವಚನ. ॥

ಎನ್ನ ತನುಮನವೆಂಬೆರಡನು ಗುರು ಕಳೆದು ಏಕವ ಮಾಡಿದನಾಗಿ ಎನ್ನಂತರಂಗ ಬಹಿರಂಗವೆಂಬೆರಡು ನಿಮ್ಮವು ನೋಡಾ! ನಿಮ್ಮಂತರಂಗದೊಳಗೆ ನಿಮ್ಮನಿಂಬಿಟ್ಟುಕೊಂಬೆ. ನಿಮ್ಮ ಬಹಿರಂಗದಲ್ಲಿ ನಿಮ್ಮ ನೀವಾಗಿ ಪೂಜಿಸುವೆನು. ನಿಮ್ಮ ಅರಿವಿನಿಂದ ನಿಮ್ಮನೆ ಅರಿವೆನು ಕಾಣಾ ಕೂಡಲಸಂಗಮದೇವಾ. ॥೯॥

ಇಂತು ಬಸವರಾಜದೇವರು ಬಿನ್ನೈಸಲು ಪ್ರಭುದೇವರು ನಿರೂಪಿಸಿದ ಪ್ರಸ್ಥಾವದ ವಚನ. ॥

ಸಂಗದಿಂದಾಯಿತ್ತು ತನು. ಆ ತನುವಿನಿಂದಾಯಿತ್ತು ಮರವೆ. ಆ ಮರವೆಯಿಂದಾಯಿತ್ತು ನೋಡಾ ನಾ ನೀನೆಂಬುದು. ನೀನೆಂಬ ಬಹಿರಂಗವಂತಿರಲಿ. ನಾನೆಂಬ ಅಂತರಂಗವಂತಿರಲಿ. ಉಭಯ ಲಾಭವಲ್ಲದೆ ನಿನ್ನಿಂದ ನೀನರಿದಿಹೆನೆಂಬುದು ವಿಪರೀತ ಭಾವ. ಈ ಅರಿವು ಮರವೆಯಾಟದ ಭ್ರಾಂತು ಬಿಡದು. ಗುಹೇಶ್ವರ ಲಿಂಗವು ನಿನ್ನಲ್ಲಿ ನಿಂತ ಪರಿ ಎಂತು ಹೇಳಾ ಸಂಗನಬಸವಣ್ಣಾ? ॥೧೦॥

ಹೀಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಬಸವರಾಜದೇವರು ಬಿನ್ನೈಸಿದ ಪ್ರಸ್ಥಾವದ ವಚನ. ॥

ಮರುಳು ತಲೆ ಹುರುಳು ತಲೆ ನೀನೆ ದೇವಾ. ಹೆಂಗಸು ಗಂಡುಸು
ನೀನೆ ದೇವಾ. ಎಮ್ಮಕ್ಕನ ಗಂಡ ನೀನೆ ದೇವಾ, ಕೂಡಲ ಸಂಗಮದೇವ
ಭ್ರಾಂತಳಿದ ಭಾವವು ನೆಲೆಗೊಂಡಿತ್ತಾಗಿ. ॥೧೧॥

ಇನ್ನರಿವು ಮರವೆಯು ಎನ್ನ ಶಕ್ತಿ ಶಿವಾತ್ಮ ತತ್ವವು ನೀವೆ ಅಲ್ಲದೆ
ಅನ್ಯತ್ರವಿಲ್ಲ. ಎನ್ನ ಸುಜ್ಞಾನ ಶಕ್ತಿಯಲ್ಲಿ ಲಿಂಗೋಪಭೋಗಿಯಾಗಿ ನೀನಲ್ಲ
ದನ್ಯವಿಲ್ಲ. ಎನ್ನ ಭ್ರಾಂತಳಿದ ಭಾವವು ನೀವಲ್ಲದೆ ಇಲ್ಲವೆಂದು ಬಸವ
ರಾಜದೇವರು ಬಿನ್ನೈಸಲು, ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ತಾ
ವದ ವಚನ. ॥

ಅಜ್ಞಾನ ಸುಜ್ಞಾನಗಳೆರಡರಿವನೆಂದರೆ ಶಿವಜ್ಞಾನಿಗಳು ಮೆಚ್ಚುವರೆ?
ಶಿವಶಕ್ತಿಗಳೆರಡು ನೀನೆ ಎಂದರೆ ಮಹಾನುಭಾವಿಗಳು ಪರಿಣಾಮಿಸುವರೆ?
ತನ್ನ ತಾನಾರೆಂಬುದನರಿಯದೆ ಅನ್ಯವಿಲ್ಲವು. ಜೊಮ್ಮವೆಂಬ ಈ ಕರ್ಮದ
ನುಡಿಯ ಮೆಚ್ಚುವರೆ ನಮ್ಮ ಗುಹೇಶ್ವರ ಲಿಂಗವು? ॥೧೨॥

ಹೀಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಬಸವರಾಜ
ದೇವರು ಬಿನ್ನೈಸಿದ ಪ್ರಸ್ತಾವದ ವಚನ. ॥

ಅರಿವು ವಿಡಿದು, ಅರಿವ ನರಿದು. ಅರಿವೆ ನೀನೆಂಬ ಭ್ರಾಂತು ಎನ
ಗಿಲ್ಲವಯ್ಯಾ! ಮರಹು ವಿಡಿದು ಮರಹ ಮರೆದು, ಮರಹು ನೀನೆಂಬ
ಮರಹಿನವ ನಾನಲ್ಲವಯ್ಯಾ. ದೇಹ ಪ್ರಾಣಂಗಳ ಹಿಂಗಿ ದೇಹವಿಡಿದು ದೇಹ
ನಿಮ್ಮದೆಂಬ ಭ್ರಾಂತು ಸೂತಕಿ ನಾನಲ್ಲಯ್ಯಾ! ನಿನ್ನ ಅರಿದ ಅರಿವ ಭಿನ್ನ
ವಿಟ್ಟು ಕಂಡೆನಾದರೆ ನಿಮ್ಮಾಣೆ ಕಾಣಾ ಕೂಡಲಸಂಗಮದೇವಾ. ॥೧೩॥

ಈ ವಚನದ ತಾತ್ಪರ್ಯವ ಕೇಳಿದ ಪ್ರಭುದೇವರು ದೇವಭಕ್ತ
ನೆಂಬ ನಾಮಂಗಳೆರಡು ನಿಮ್ಮಲ್ಲಿ ತೋರುತ್ತ ಇದ್ದಾವೆ. ಇವು ಅಡಗಿದ
ಪರಿ ಹೇಗೆಂದು ಬೆಸಗೊಂಬ ಪ್ರಸ್ತಾವದ ವಚನ. ॥

ಕಾಯವಿಡಿದು ಲಿಂಗವಿದೆ. ಲಿಂಗವಿಡಿದು ಕಾಯವಿದೆ. ಅರಿವುವಿ
ಡಿದು ವಚನವಿದೆ. ವಚನವಿಡಿದು ತೋರುವ ಅರಿವಿದೆ. ಲಿಂಗಾಂಗವೆ
ರಡು ನಿಮ್ಮಲ್ಲಿ ಐಕ್ಯವಾದ ಪರಿ ಎಂತುಟು ಹೇಳಾ? ಸ್ವರವಿಡಿದು ಶಬ್ದ
ಸಮರಸವಾದ ಪರಿ ಎಂತು ಹೇಳಾ? ದೇವ ಭಕ್ತನೆಂಬ ನಾಮ ಸೀಮೆ
ಯಡಗಿ ಗುಹೇಶ್ವರ ಲಿಂಗದಲ್ಲಿ ತದ್ಗತವಾಗಿರ್ದ ಪರಿ ಎಂತು ಹೇಳಾ
ಸಂಗನಬಸವಣ್ಣಾ? ॥೧೪॥

ಹೀಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಬಸವರಾಜದೇವರು ಬಿನ್ನೈಸಿದ ಪ್ರಸ್ತಾವದ ವಚನ. ॥

ಘನ ಗಂಭೀರ ಮಹಘನದೊಳಗೆ ಘನಕ್ಕೆ ಘನವಾಗಿರ್ದೆನಯ್ಯಾ! ಕೂಡಲ ಸಂಗಯ್ಯನೆಂಬ ಬೆಳಗಿನೊಳಗೆ ಬೆಳಗಾಗಿರ್ದು, ಶಬ್ದಮುಗ್ಧ ವಾಗಿರ್ದುದನೇನೆಂಬೆನಯ್ಯಾ. ॥೧೫॥

ಹೀಗೆಂದು ಬಸವರಾಜದೇವರು ಬಿನ್ನೈಸಲು, ಇದಕ್ಕೆ ಪ್ರಭುದೇವರು ಪ್ರಸನ್ನರಾಗಿ ಆ ಬಸವಣ್ಣನ ಸ್ತೋತ್ರಮಂ ಮಾಡುವ ಪ್ರಸ್ತಾವದ ವಚನ. ॥

ಆದಿಯ ಲಿಂಗವ ತೋರಿದ ಅನುಮಿಷನ ಕಂಡೆನಯ್ಯಾ ಇಂದು. ಕೃತಯುಗದ ಸ್ಕಂದನೆಂಬ ಗಣೇಶ್ವರನ ಕಂಡೆನಯ್ಯಾ ಇಂದು. ತ್ರೇತಾಯುಗದ ನೀಲಲೋಹಿತನೆಂಬ ಗಣೇಶ್ವರನ ಕಂಡೆನಯ್ಯಾ ಇಂದು. ದ್ವಾಪರಯುಗದ ವೃಷಭನೆಂಬ ಗಣೇಶ್ವರನ ಕಂಡೆನಯ್ಯಾ ಇಂದು. ಕಲಿಯುಗದಲ್ಲಿ ಅನುಮಿಷನೆಂಬ ಗಣೇಶ್ವರನ ಕಂಡೆನಯ್ಯಾ ಇಂದು. ಎನ್ನ ಕಂಡವರನು ಇಂದು ಕಂಡೆ ಕಾಣಾ ಗುಹೇಶ್ವರಾ. ॥೧೬॥

ಇಂತು ಪ್ರಭುದೇವರು ಬಸವರಾಜದೇವರ ಸ್ತೋತ್ರಮಂ ಮಾಡಲು ಆ ಬಸವರಾಜದೇವರು ಆ ಪ್ರಭುದೇವರ ಸ್ತೋತ್ರಮಂ ಮಾಡುವ ಪ್ರಸ್ತಾವದ ವಚನ. ॥

ಮರುಗದ ಗಿಡುವಿನಂತೆ, ಹುಟ್ಟುತ್ತವೆ ಪರಿಮಳ. ಎರಪಿನ ಬಣ್ಣ ದೊರೆಗೆಡಸಿದ ಪರಿಯ ನೋಡಾ! ಹರನ ಪ್ರೇರಣೆಯೊಳಗೆ ಹಿರಿದೊಂದು ವಾರುಧಿ, ವಾರುಧಿಯೊಳಗಣ ಕಮಲ ಬಾಡಿ, ಕಮಲದೊಳಗೆ ಸುಳಿವ ಭ್ರಮರನ ಪಕ್ಕವ ಮುರಿದು ಉಳಿವರೆ ನಿರಂಜನವಾಯಿತ್ತು ನೋಡಾ! ಹರಿಗೊಯಿದ ಮಿಂಚಿನ ಗೊಂಚಲ ನೆರೆ ಓತು ಇಂದು ಕೋಟಿ ಪ್ರಳಯ ಕಾಂತಿಯನೊಳಕೊಂಡಂತೆ ಕೂಡಲಸಂಗಮದೇವರ ನೆರೆ ಓತು ಪ್ರಭುದೇವರ ಶ್ರೀಪಾದಪದ್ಮದಲ್ಲಿ ಭೃಂಗನಾಗಿ ಬದುಕಿದೆನು. ॥೧೭॥

ಹೀಗೆಂದು ಬಸವರಾಜದೇವರು ಸ್ತೋತ್ರಮಂ ಮಾಡುತ್ತಿರಲು, ಇದಕ್ಕೆ ಪ್ರಭುದೇವರು ಆ ಬಸವರಾಜದೇವರ ಕೊಂಡಾಡಿ ನಿರೂಪಿಸಿದ ಪ್ರಸ್ತಾವದ ವಚನ. ॥

ಆಯಿತ್ತು ಬಸವ ನಿನ್ನಿಂದ ಗುರುಸ್ವಾಯತವೆನಗೆ. ಆಯಿತ್ತು ಬಸವ ನಿನ್ನಿಂದ ಲಿಂಗಸ್ವಾಯತವೆನಗೆ. ಆಯಿತ್ತು ಬಸವ ನಿನ್ನಿಂದ ಜಂಗಮ

ಸ್ವಾಯತ್ತವೆನಗೆ. ಆಯಿತ್ತು ಬಸವ ನಿನ್ನಿಂದ ಪ್ರಸಾದ ಸ್ವಾಯತವೆನಗೆ. ಇಂತೀ ಚತುರ್ವಿಧ ಸ್ವಾಯತವನು ನೀನೆ ಮಾಡಿದೆಯಾಗಿ, ನಮ್ಮ ಗುಹೇಶ್ವರಲಿಂಗಕ್ಕೆ ವಿಳಾಸವಾದೆ ಎಲೈ ಸಂಗನಬಸವಣ್ಣಾ. ॥೧೮॥

ಇಂತು ಪ್ರಭುದೇವರು ಬಸವರಾಜದೇವರಿಂದೆ ಸರ್ವಸ್ವಾಯತವ ಪಡೆದು, ಕೃತಾರ್ಥನಾದೆನೆಂದು ಆ ಬಸವರಾಜದೇವರೊಡನೆ ನಿರೂಪವ ಕೊಡಲು, ಇದಕ್ಕೆ ಬಸವರಾಜದೇವರು ನಾನು ನಿಮ್ಮಿಂದ ಸರ್ವವನು ಅರಿದೆನೆಂದು ಬಿನ್ನಹಂ ಮಾಡುವ ಪ್ರಸ್ಥಾವದ ವಚನ. ॥

ಅಯ್ಯ ನಿಮ್ಮ ಮುಟ್ಟಿದ ಗುಣದಿಂದಲಾನು ಸಂಗನಬಸವಣ್ಣನಾಗಿ ಗುಹೇಶ್ವರನ ಶರಣನ ಮಹಾ ಬಸಿರೊಳಗೆ ಕಂದನಾಗಿರ್ದೆ ಕಾಣಾ ಕೂಡಲಸಂಗಮದೇವ. ॥೧೯॥

ಹೀಗೆಂದು ಬಸವರಾಜದೇವರು ಬಿನ್ನೈಸಲು, ಇದಕ್ಕೆ ಪ್ರಭುದೇವರು ಗುರುಲಿಂಗಜಂಗಮಪ್ರಸಾದವೆಂಬ ಮಹಾಘನವನು ಎನಗೆ ಕರತಳಾಮಳಕವ ಮಾಡಿ ನೀವೆ ತೋರಿಸಿಕೊಟ್ಟಿವೆಂದು ನಿರೂಪಿಸಿದ ಪ್ರಸ್ಥಾವದ ವಚನ. ॥

ಗುರು ಒಂದೇ ಬಸಿರು, ಲಿಂಗ ಒಂದೇ ಬಸಿರು, ಜಂಗಮ ಒಂದೇ ಬಸಿರು, ಪ್ರಸಾದ ಒಂದೇ ಬಸಿರು. ಇವನಾರಯ್ಯ! ಅಮಳೋಕ್ಯವ ಮಾಡಿ ತೋರಿದವರು ಇವನಾರಯ್ಯ? ಪ್ರಜ್ವಲಿತವ ಮಾಡಿ ಬೇರೆ ಬೇರೆ ಕರತಳಾಮಳಕವ ಮಾಡಿ ತೋರಿದವರು ಪೂರ್ವಾಚಾರಿ ಭಕ್ತಿಭಂಡಾರಿ ಬಸವಣ್ಣ ನೀನೆ ಗುಹೇಶ್ವರ ಲಿಂಗವ ತೋರಿದೆಯಾಗಿ ಲೋಕಾದಿಲೋಕವಲ್ಲವು ಕಿಂಚಿತ್ತು. ॥೨೦॥

ಹೀಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಬಸವರಾಜದೇವರು ಬಿನ್ನೈಸಿದ ಪ್ರಸ್ಥಾವದ ವಚನ. ॥

ಎನ್ನ ಅಂತರಂಗದೊಳಗೆ ಅರಿವಾಗಿ, ಎನ್ನ ಬಹಿರಂಗದೊಳಗೆ ಆಚಾರವಾಗಿ, ನೀನೆಡೆಗೊಂಡು ಎನ್ನ ಮನದೊಳಗೆ ಘನ ನೆನಹಾಗಿ ಮೂರ್ತಿಗೊಂಡು, ಗುರುಸ್ಥಲ ಲಿಂಗಸ್ಥಲ ಜಂಗಮಸ್ಥಲ ಪ್ರಸಾದಿಸ್ಥಲವೆಂಬ ಚತುರ್ವಿಧವನು ಎನಗೆ ಸ್ವಾಯತವ ಮಾಡಿ, ತೋರಿ ಪ್ರಾಣಲಿಂಗವೆಂಬ ಹಾದಿಯ ಸೆರಗ ತೋರಿಸಿ ಎಲ್ಲ ಅಸಂಖ್ಯಾತರನು ಪಾವನವ ಮಾಡಿದಿರಾಗಿ ಕೂಡಲಸಂಗಮದೇವ ನಿಮ್ಮಿಂದ ಸಕಲ ಸನುಮತವ ನಾನರಿದೆನಲ್ಲದೆ, ಎನ್ನಿಂದ ನೀನಾದೆನೆಂಬುದ ನಿಮ್ಮ ಪ್ರಮಥರು ಮೆಚ್ಚರು ನೋಡಯ್ಯ. ॥೨೧॥

ಇದಕ್ಕೆ ಪ್ರಭುದೇವರು ಕೊಟ್ಟ ಪ್ರತ್ಯುತ್ತರ. ॥

ಆದಿಯ ಲಿಂಗ ನಿನ್ನಿಂದ ಎನಗಾಯಿತ್ತು. ಅನಾದಿಯ ಜ್ಞಾನ ನಿನ್ನ ನೆನೆದಡೆನಗಾಯಿತ್ತು. ನಿನ್ನ ಕೃಪೆಯಿಂದ ಪ್ರಾಣಲಿಂಗವೆಂದರಿದೆನೆಂಬುದ ನಿಮ್ಮ ಪ್ರಮಥರೆ ಬಲ್ಲರು. ಗುಹೇಶ್ವರ ಸಾಕ್ಷಿಯಾಗಿ, ಸಂಗನಬಸವಣ್ಣ ನಿಮ್ಮ ಪ್ರಸಾದದ ಶಿಸು ನಾನು ನೋಡಯ್ಯ. ॥೨೨॥

ಹೀಗೆಂದು ಪ್ರಭುದೇವರು ನಿರೂಪಿಸಲು, ಅದಕ್ಕೆ ಬಸವರಾಜದೇವರು ಬಿನ್ನೈಸಿದ ಪ್ರಸ್ಥಾವದ ವಚನ. ॥

ಆದಿಯ ಭಕ್ತ, ಅನಾದಿಯ ಜಂಗಮ, ಆದಿಶಕ್ತಿ ಅನಾದಿಶಿವನು ನೋಡಾ! ಎನ್ನ ಆದಿಯ ಪಿಂಡಕ್ಕೆ ನೀನೆ ಆಧಾರವಾಗಿ ತೋರಿದರೆ ನಿಮ್ಮ ಹೃದಯ ಕಮಲದಲ್ಲಿ ನಿಮ್ಮ ಕಂಡೆನು. ಆ ಕಾಂಬ ಜ್ಞಾನವೆ ಜಂಗಮ. ಜಂಗಮವ ಹಿಡಿದಲ್ಲದೆ ಲಿಂಗವ ಕಾಣಬಾರದು. ಆ ಜಂಗಮವ ಹಿಡಿದಲ್ಲದೆ ಗುರುವ ಕಾಣಬಾರದು. ಆ ಜಂಗಮವ ಹಿಡಿವಲ್ಲದೆ ಪ್ರಸಾದವ ಕಾಣಬಾರದು. ಕಾಯ ಭಕ್ತ ಪ್ರಾಣವೆ ಜಂಗಮ ಎಂಬ ವಚನವ ತಿಳಿಯಲು. ಎನ್ನ ಪ್ರಾಣ ನೀವಲ್ಲದೆ ಮತ್ತಾರು ಹೇಳಯ್ಯ? ಇದುಕಾರಣ ನಿಮ್ಮ ಘನವ ಕಿರಿದು ಮಾಡಿ, ಎನ್ನನೊಂದು ಘನವ ಮಾಡಿ ನುಡಿವಿರಿ ಕೂಡಲ ಸಂಗಮದೇವಾ. ॥೨೩॥

ಹೀಗೆಂದು ಬಸವರಾಜದೇವರು ಬಿನ್ನೈಸಲು, ಇದಕ್ಕೆ ಪ್ರಭುದೇವರ ಪ್ರತ್ಯುತ್ತರ. ॥

ಆದಿ ಜಂಗಮ ಅನಾದಿ ಭಕ್ತನೆಂಬುದನಾರು ಬಲ್ಲರು ಹೇಳಾ ಬಸವಣ್ಣ? ನಿತ್ಯ ನಿರಾಕಾರ ಘನವು ಶಕ್ತಿ ಇಲ್ಲದೆ ಇದ್ದರೆ ಆಗಳೆ ಬಯಲಹುದೆಂದು ನೀನು ಘನ ಚೈತನ್ಯವೆಂಬ ಕಾಯವ ಧರಿಸಿದರೆ, ಆ ಬಯಲು ಪರಬ್ರಹ್ಮವೆಂಬ ನಾಮವನೈದಿತ್ತು ನೋಡಾ! ಮಹಾಘನವು ತನ್ನ ವಿನೋದದಿಂದ ಸಾಕಾರವನೈದಿದರೆ ಧರ್ಮವೆಂಬ ಕಾಯವ ಧರಿಸಿ, ಆ ಮೂರ್ತಿಗೆ ಆಧಾರವಾದಿಯಾಗಿ ಜಗದಕರ್ತ ಶಿವನೆಂಬ ನಾಮನಾಯಿತ್ತಲ್ಲ ಬಸವಣ್ಣ! ನಿನ್ನಿಂದ ಜಂಗಮವೆ ಲಿಂಗವೆಂದು ನೀ ಭಾವಿಸಲಾಗಿ ನಿನ್ನ ಸನ್ನಿಧಿಯಿಂದ ಪ್ರತಿನಿಧಿಯಾಯಿತ್ತು ನೋಡಾ ಬಸವಣ್ಣ! ಲಿಂಗವನು ನೀನು ಹಿಡಿದು ಪೂಜಿಸಲಾಗಿ ಹೆಸರುವಡೆಯಿತ್ತು ನೋಡಾ ಬಸವಣ್ಣ! ಪ್ರಸಾದವ ನೀನು ಕೊಂಡು ಪಥವ ತೋರಿದೆಯಾಗಿ, ಪ್ರಸಾದವು ನಿನ್ನಿಂದ ಹೆಸರಾಯಿತ್ತು ನೋಡಾ ಬಸವಣ್ಣ! ಇದುಕಾರಣ ನೀನೆ ಅನಾದಿಭಕ್ತ,

ನಾನೆ ಅನಾದಿಯೆಂದತ್ತತ್ತ. ನೀನು ಮಾಡಲಾಗಿ ಆನಾದೆನೆಂಬುದ ನಮ್ಮ ಗುಹೇಶ್ವರ ಬಲ್ಲ ಕಾಣಾ ಸಂಗನಬಸವಣ್ಣ. ॥೨೪॥

ಹೀಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಬಸವರಾಜ ದೇವರು ಬಿನ್ನೈಸಿದ ಪ್ರಸ್ಥಾವಸ ವಚನ. ॥

ಜಂಗಮವೆ ಜ್ಞಾನರೂಪು, ಭಕ್ತನೆ ಆಚಾರರೂಪೆಂಬುದು ತಪ್ಪದು ನೋಡಾ ಅಯ್ಯ! ನಾನು ನಿಮ್ಮಲ್ಲಿ ಆಚಾರಿಯಾದಡೇನಯ್ಯ ಜ್ಞಾನವಿಲ್ಲದನ್ನಕ್ಕರ? ತಲೆ ಇಲ್ಲದ ಮುಂಡದಂತೆ. ಜ್ಞಾನ ಉದಯವಾಗದ ಮುನ್ನವೆ, ತಲೆದೋರುವ ಆಚಾರ ಉಂಟೆ ಜಗದೊಳಗೆ? ಜ್ಞಾನದಿಂದೆ ಆಚಾರ, ಜ್ಞಾನದಿಂದೆ ಅನುಭಾವ, ಜ್ಞಾನದಿಂದೆ ಪ್ರಸಾದವಲ್ಲದೆ, ಜ್ಞಾನವನುಳಿದು ತೋರುವ ಘನವ ಕಾಣೆನು. ಎನ್ನ ಆಚಾರಕ್ಕೆ ನೀನು ಜ್ಞಾನರೂಪಾದ ಕಾರಣ ಸಂಗನಬಸವಣ್ಣನೆಂಬ ಪೆಸರುವಡೆದೆನು. ಅನಾದಿಪರಶಿವನು ನೀನೆಯಾಗಿ, ಘನಚೈತನ್ಯಾತ್ಮಕನೆಂಬ ಮಹಾಜ್ಞಾನವು ನೀನೆಯಾದೆಯಲ್ಲದೆ, ನಾನೆತ್ತ ಶಿವತತ್ವವೆತ್ತವಯ್ಯ ಕೂಡಲಸಂಗಮದೇವರು ಸಾಕ್ಷಿಯಾಗಿ. ನಾನು ಪ್ರಭುದೇವ ತೊತ್ತಿನ ಮಗನೆಂಬುದ ಮೂರುಲೋಕವೆಲ್ಲವು ಬಲ್ಲದು ಕಾಣಾ ಪ್ರಭುವೆ. ॥೨೫॥

ಹೀಗೆಂದು ಬಸವರಾಜದೇವರು ಬಿನ್ನೈಸಲು, ಇದಕ್ಕೆ ಪ್ರಭುದೇವರು ಪ್ರಸನ್ನರಾಗಿ ನಿರೂಪಿಸಿದ ಪ್ರಸ್ಥಾವದ ವಚನ. ॥

ತನು ದಾಸೋಹ. ಅವಯವಂಗಳೆಲ್ಲವು ಆಚಾರ. ಮನಪವನ ಪ್ರಾಣವೆಂಬುದೆಲ್ಲ ಅರುಹಿನ ಮೂರ್ತಿ ನೋಡಾ! ಒಳಗು ಹೊರಗು ಹೊರಗೊಳಗೆಂಬುದನರಿಯುವ ಸತ್ಯಸದಾಚಾರಿ ನೀನು. ನಿನ್ನಳವಲರಿಯಲಾನೇತರವನಯ್ಯ? ಎನ್ನಂತರಂಗದಲ್ಲಿ ಅರಿವುಂಟಾದರೇನು? ಎನ್ನ ಕಾಯದಲ್ಲಿ ಭಕ್ತಿ ಸ್ವಾಯತವಿಲ್ಲ. ಆಚಾರವೆಂಬುದತ್ತಲಿಲ್ಲ. ಸರ್ವಾಚಾರ ಸಂಪನ್ನ ನಿನ್ನಳವ ನಾನೆತ್ತ ಬಲ್ಲೆನಯ್ಯ ಗುಹೇಶ್ವರ ಸಾಕ್ಷಿಯಾಗಿ? ನಿನ್ನ ಮಹಾಮನೆಯ ಕಾವಲ ಬಂಟ ನಾನೆಂಬುದ ನಿಮ್ಮ ಪ್ರಮಥರೆಲ್ಲರು ಬಲ್ಲರು ಕಾಣಾ ಸಂಗನಬಸವಣ್ಣಾ ॥೨೬॥

ಹೀಗೆಂದು ಪ್ರಭುದೇವರು ನಿರೂಪಿಸಲು ಇದಕ್ಕೆ ಬಸವರಾಜದೇವರು ಬಿನ್ನೈಸಿದ ಪ್ರಸ್ಥಾವದ ವಚನ.॥

ನಿಮ್ಮ ಕಂಡು ಕೈಮುಗಿದು ನಿಮಗೆ ಭಕ್ತನಾದೆನಲ್ಲದೆ ನಿಮ್ಮ ಕಾಣದಲೆ ಭಕ್ತಿಯುಂಟೆ ಅಯ್ಯ? ನಿಮ್ಮ ಮುಟ್ಟಿ ಪೂಜಿಸಿ, ಆಚಾರಿಯಾದೆ

ನಲ್ಲದೆ ನಿಮ್ಮ ಮುಟ್ಟಿಹೊಡೆ ನನಗೆ ಆಚಾರವೆಲ್ಲಿಯದಯ್ಯ. ನಿಮ್ಮ ಘನವನು ಮನದಲ್ಲಿ ನೆನೆದು ಧರಿಸಿದ ಕಾರಣ ಜ್ಞಾನೋದಯವಾಯಿತ್ತಲ್ಲದೆ, ನೀವಿಲ್ಲದಡೆ ಎನಗೆ ಜ್ಞಾನವೆಲ್ಲಿಹುದಯ್ಯ? ಇಂತು ಆವ ಮುಖದಲ್ಲಿಯು ಎನ್ನನಾಗು ಮಾಡಲೆಂದು ನೀನು ಮುಂದುಗೊಂಡಿರ್ದ ಕಾರಣ ನಿನ್ನ ಸನ್ನಿಧಿಯಲಾನು ಸದಾಚಾರಿಯಾದಡೆ ನಿಮಗಾನು ಸರಿಯೆ? ಕೂಡಲ ಸಂಗಮದೇವ ಜಂಗಮಮುಖದಿಂದ ಸಂಗನಬಸವಣ್ಣ ಬದುಕಿದನೆಂಬುದ ಮೂರು ಲೋಕವೆಲ್ಲವು ಬಲ್ಲದು ಕಾಣಾ ಪ್ರಭುವೆ. ॥೨೭॥

ಹೀಗೆಂದು ಬಸವರಾಜದೇವರು ಬಿನ್ನೈಸಲು, ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ಥಾವದ ವಚನ. ॥

ಬಸವಣ್ಣ ನಿನ್ನ ಕಂಡು ಕಂಡು ಎನ್ನ ತನು ಬಯಲಾಯಿತ್ತು. ಬಸವಣ್ಣ ನಿನ್ನ ಮುಟ್ಟಿ ಮುಟ್ಟಿ ಎನ್ನ ಕ್ರಿಯೆ ಬಯಲಾಯಿತ್ತು. ಬಸವಣ್ಣ ನಿನ್ನ ನೆನೆದು ನೆನೆದು ಎನ್ನ ಮನ ಬಯಲಾಯಿತ್ತು. ಬಸವಣ್ಣ ನಿನ್ನ ಮಹಾನುಭಾವವ ಕೇಳಿಕೇಳಿ ಎನ್ನ ಭವಂ ನಾಸ್ತಿಯಾಯಿತ್ತು. ನಮ್ಮ ಗುಹೇಶ್ವರ ಲಿಂಗದಲ್ಲಿ ನೀನು ಅಜಾತನೆಂಬುದ ನೆಲೆಮಾಡಿ ಭವಪಾಶಂಗಳ ಹರಿದಿಪ್ಪೆಯಾಗಿ, ನಿನ್ನ ಸಂಗದಿಂದಲಾನು ಬದುಕಿದೆನು. ॥೨೮॥

ಹೀಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಬಸರಾಜದೇವರು ಬಿನ್ನೈಸಿದ ಪ್ರಸ್ಥಾವದ ವಚನ. ॥

ಜನನವಿಲ್ಲದ ಜನಿತನು ನೀನು ನೋಡಯ್ಯ. ಜನಿಯಿಸಿ ಸಂಸಾರವನರಿಯದ ನಿರ್ವಿಕಾರಿ ನೀನು ನೋಡಯ್ಯ. ಭವಬಂಧನಗಳಿಲ್ಲದ ನಿತ್ಯನಿಜತತ್ವವು ನೀನು ನೋಡಯ್ಯ. ನಿನ್ನ ಚರಣಸೇವೆಯ ಮಾಡಿ, ಎನ್ನ ಭವವ ಹರಿಯಲೆಂದಿಪ್ಪೆನಲ್ಲದೆ ನಿಮ್ಮ ಘನವೆಂತೆಂದು ಅರಿಯೆ ನೋಡಯ್ಯ. ಕೂಡಲಸಂಗಮದೇವ ನೀನು ಕೊಂಡಾಡಲಾನು ಪ್ರಾಪ್ತನೆ ಹೇಳಾ ಪ್ರಭುವೆ. ॥೨೯॥

ಹೀಗೆಂದು ಬಸವರಾಜದೇವರು ಬಿನ್ನೈಸಲು, ಅದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ಥಾವದ ವಚನ. ॥

ಆಚಾರವಂಗಲೇಪವಾಗಿ, ಕಾಯಮುಕ್ತನು ನೀನು ನೋಡಯ್ಯ. ಅರಿವು ಅಂತರಂಗದಲ್ಲಿ ಭರಿತವಾಗಿಪ್ಪುದಾಗಿ ಮನೋಮುಕ್ತನು ನೀನು ನೋಡಯ್ಯ. ಅರ್ಪಿತ ಪರಿಣಾಮದಲ್ಲಿ ಅವಿರಳವಾಗಿಪ್ಪುದಾಗಿ, ಸರ್ವಾಂಗ ಲಿಂಗೈಕ್ಯ ನೋಡಾ. ಮುಕ್ತನಲ್ಲೆಂಬ ಬಳಕೆಯ ಮಾತಂತಿರಲಿ ಬಯಲ

ಭ್ರಮೆಯನೆ ಕಳೆದು ಭವದ ಬಟ್ಟೆಯ ಹರಿದಿಪ್ಪುದ ನಮ್ಮ ಗುಹೇಶ್ವರ ಲಿಂಗ ಬಲ್ಲನು. ನೀನು ಮರೆಯಾಗಿ, ನುಡಿವರೆ ಸಂಗನಬಸವಣ್ಣ? ॥೩೦॥

ನೀನು ಭವಬಂಧನಂಗಳ ಹರಿದು, ನಿರ್ಭಯನಾಗಿಪ್ಪ ಮಾತು ಸತ್ಯವೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ. ॥

ಜ್ಞಾನದ ಬಲದಿಂದ ಅಜ್ಞಾನ ಕೆಡುವುದು ನೋಡಯ್ಯ! ಜ್ಯೋತಿಯ ಬಲದಿಂದೆ ಕತ್ತಲೆ ಕೆಡುವುದು ನೋಡಯ್ಯ! ಸತ್ಯದ ಬಲದಿಂದ ಅಸತ್ಯ ಕೆಡುವುದು ನೋಡಯ್ಯ! ಪರುಷದ ಬಲದಿಂದ ಅವಲೋಹ ಕೆಡುವುದು ನೋಡಯ್ಯ! ಕೂಡಲಸಂಗಮದೇವಯ್ಯ ನಿಮ್ಮ ಅನುಭಾವದಿಂದೆನ್ನ ಭವ ಕೆಟ್ಟುದಲ್ಲೆನಬಹುದೆ ಪ್ರಭುವೆ? ॥೩೧॥

ಹೀಗೆಂದು ಬಸವರಾಜದೇವರು ಬಿನ್ನೈಸಲು, ಇದಕ್ಕೆ ಬಸವ ನಿನ್ನ ಮಹಾತ್ಮೆಯನು ನಾಲ್ಕು ಯುಗದಿಂದ ಬಲ್ಲೆನಾಗಿಯು ಆಚಾರ ಸ್ವಾಯತವಾಗಿರ್ದ ಈ ಅವತಾರದಲ್ಲಿ ನಿಮ್ಮ ಮಹಿಮೆಯನರಿಯದೆ ಇದ್ದೆನೆಂದು ಪ್ರಭುದೇವರು ನಿರೂಪಿಸಿದ ಪ್ರಸ್ತಾವದ ವಚನ. ॥

ಕೃತಯುಗದಲ್ಲಿ ನೀನು ಸಂದನೆಂಬ ಗಣೇಶ್ವರನಾಗಿರ್ದುದ ಬಲ್ಲೆ. ತ್ರೇತಾಯುಗದಲ್ಲಿ ನೀನು ನೀಲಲೋಹಿತನೆಂಬ ಗಣೇಶ್ವರನಾಗಿರ್ದುದ ಬಲ್ಲೆನು. ದ್ವಾಪರದಲ್ಲಿ ನೀನು ವೃಷಭನೆಂಬ ಗಣೇಶ್ವರನಾಗಿರ್ದುದ ಬಲ್ಲೆನು. ಕಲಿಯುಗದಲ್ಲಿ ನೀನು ಬಸವನೆಂಬ ಗಣೇಶ್ವರನಾಗಿರ್ದು ಸರ್ವಾಚಾರಸಂಪನ್ನನಾಗಿ ಭಕ್ತಿಜ್ಞಾನವ ಕಂದೆರವೆಯ ಮಾಡಿ ಶಿವಾಚಾರದ ಘನವ ಬೆಳವಿಗೆಯ ಮಾಡಿ, ಶಿವಭಕ್ತಿಧ್ವಜವನೆತ್ತಿಸಿ, ಮರ್ತ್ಯಲೋಕದೊಳಗೆ ಹರಹಿದ ಭೇದವ ಭೇದಿಸಿ ನೋಡಿ ಆನು ಅರಿದೆ. ಗುಹೇಶ್ವರ ಸಾಕ್ಷಿಯಾಗಿ ನಿಮ್ಮ ಮಹಾತ್ಮೆಗೆ ನಮೋ ನಮೋ ಎಂಬೆ ಕಾಣಾ ಸಂಗನಬಸವಣ್ಣಾ. ॥೩೨॥

ಮರ್ತ್ಯಲೋಕದಲ್ಲಿ ಬಂದವತರಿಸಿ ಶಿವಾಚಾರದ ಘನವನು ಪ್ರತಿಷ್ಠಿಸಿ ತೋರಿ ಜಗದೊಳಗೆ ಮೆರೆವಲ್ಲಿ ನಿಮ್ಮ ಮಹಾತ್ಮೆಯನರಿಯೆನೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಬಸವರಾಜದೇವರು ಬಿನ್ನೈಸಿದ ಪ್ರಸ್ತಾವದ ವಚನ.

ಕಕ್ಷೆ, ಕರಸ್ಥಲ, ಉತ್ತಮಾಂಗ, ಉರ, ಸೆಜ್ಜೆ, ಅಂಗಸೋಂಕು, ಅವಳೋಕ್ಯವೆಂಬುದ ನಾನು ಮನದಲ್ಲಿ ಅರಿಯದಂದು, ಭಾವ ನಿರ್ಭಾವವೆಂ

ಬುಪಸರಿಪು, ಆಯುತ ಸ್ವಾಯತವ ಮಾಡಲ್ಕೆ ಬಂದ ಪದಾರ್ಥವು ಲಿಂಗ ಮುಖದಲ್ಲಿ ಅರ್ಪಿತವಾಗವೆಂದು, ಜಂಗಮಮುಖದಲ್ಲಿ ಬಂದ ಪದಾರ್ಥ ವಲ್ಲದೆ ಅರ್ಪಿತವಾಗದೆಂದು ಆ ಜಂಗಮವ ನನ್ನ ಮನದಲ್ಲಿ ನೆನೆದು ಕೊಂಡು ಆ ಜಂಗಮದ ದಾಸೋಹಕ್ಕೆ ಎನ್ನ ಮನವು ವೇದ್ಯವಾದಲ್ಲಿ ಅಂಗದ ಮೇಲೆ ಲಿಂಗ ಉಳ್ಳುದೆಲ್ಲವು ಸಂಗಮನಾಥನೆಂದರಿದಲ್ಲಿ ಲಿಂಗವು ಹುಸಿ, ಜಂಗಮವು ಹುಸಿ, ಎಂಬ ಪರವಾದಿ ಬಿಜ್ಜಳನು ಸಂಪಾದಿಸು ವಲ್ಲಿ ಅವರನು ಆದಿಗಣೇಶ್ವರನೆಂದರಿಯದೆ ತರ್ಕಿಸುವಲ್ಲಿ ಅವನೆನ್ನ ಭಕ್ತಿಗೆ ಒರೆಗಲ್ಲಾದಲ್ಲಿ ಆತನು ಭಕ್ತಿಯ ಪಥವಲ್ಲೆಂಬುದ ನಾನಹುದೆಂಬುದ ಈ ಎರಡನು ನೀನು ಸೂತ್ರಧಾರಿಯಾಗಿ ಆಡಿಸುವಲ್ಲಿ ಶಿವಭಕ್ತಿಯ ಮುಖ ಮುಸುಕ ತೆಗೆದಲ್ಲಿ ಮೂವತ್ತಾರು ಕೊಂಡೆಯವ ಪರಿಹರಿಸಿ ಎಂಬತ್ತೆಂಟು ಪವಾಡವ ಮೆರೆದಲ್ಲಿ ಮುನ್ನೂರರುವತ್ತು ಸತ್ತ ಪ್ರಾಣವನೆತ್ತುವಲ್ಲಿ ಅಂದು ನೀನೇನಾಗಿರ್ದೆ ಹೇಳಾ ಕೂಡಲಸಂಗಮದೇವಾ? ॥೩೩॥

ಹೀಗೆಂದು ಬಸವರಾಜದೇವರು ತಮ್ಮ ಪೂರ್ವಾಪರ ಸಂಬಂಧದ ವೃತ್ತಾಂತಮಂ ಬಿನ್ನಪಂಗೈಯ್ಯಲು, ಪ್ರಭುದೇವರು ತಮ್ಮ ಪೂರ್ವಾಪರ ಸಂಗತ್ಯಮಂ ಬಸವಣ್ಣನಿಂದರಿದೆನೆಂದು ಪರಿಣಾಮಿಸಿ ನಿರೂಪಿಸಿದ ಪ್ರಸ್ತಾವದ ವಚನ. ॥

ಆದಿ ಗುರುಸ್ಥಲ, ಲಿಂಗಸ್ಥಲ, ಜಂಗಮಸ್ಥಲ, ಪ್ರಸಾದಿಸ್ಥಲ, ಪಾದೋದಕಸ್ಥಲಂಗಳನಾರು ಬಲ್ಲರಯ್ಯ! ಆದಿಯ ತೋರಿಸಿದ, ಅನಾದಿಯನರುಪಿದ, ನಾದಬಿಂದು ಕಳೆಗಳ ಭೇದಮಂ ಭೇದಿಸಿ ತೋರಿದ, ಹುಟ್ಟುವದ ಮುಟ್ಟದೆ ತೋರಿದ, ಹುಟ್ಟದೆ ಇದ್ದುದ ಮುಟ್ಟಿ ತೋರಿದ, ಎನ್ನ ಅಂತರಂಗವನು ಮಾಡಿ ನಿಜಲಿಂಗವ ನೆಲೆಗೊಳಿಸಿದ, ಗುಹೇಶ್ವರನ ಶರಣ ಸಂಗನಬಸವಣ್ಣನಿಂದ ಸಕಲ ಸನುಮತವನರಿದೆನಯ್ಯ. ॥೩೪॥

ಮತ್ತಂ, ॥ಸ್ತೋತ್ರ॥ ಭವಕರಿಕೆ ಮೂರ್ತಿಯಾರಾಧನೆ ನರಕ ಬೀಜ, ಲಿಂಗಾರಾಧನೆ ಭವಕ್ಕೆ ಬೀಜ, ಲಿಂಗಸ್ವಾಯತ ಜಂಗಮವೆ ಪ್ರಾಣಲಿಂಗ. ಇದು ಕಾರಣ ಗುಹೇಶ್ವರ ಸಂಗನಬಸವಣ್ಣನ ಮರೆಹೊಕ್ಕು ಬದುಕಿದೆನು. ॥೩೫॥

ಹೀಗೆಂದು ಪ್ರಭುದೇವರು ಬಸವರಾಜದೇವರ ಸ್ತೋತ್ರಮಂ ಮಾಡಲು, ಆ ಬಸವರಾಜದೇವರು ಪ್ರಭುದೇವರೊಡನೆ ನಿಮ್ಮಿಂದಲಾನು ಸಕಲ ಸನುಮತವನರಿದೆನೆಂದು ಬಿನ್ನಪಂಗೈವ ಪ್ರಸ್ತಾವದ ವಚನ. ॥

ಲಿಂಗ ಜಂಗಮ ಜಂಗಮ ಲಿಂಗದೆಂಬುದನು ಎನಗೆ ತೋರಿದವ ರಾರಯ್ಯ? ಲಿಂಗವ ಪೂಜಿಸಿದರೆ ಭವ ಹರಿಯದೆಂದು ಜಂಗಮ ಮುಖ ಲಿಂಗವಾಗಿ ಬಂದು ಶಿಕ್ಷಿಸಿ ರಕ್ಷಿಸಿ, ಎನ್ನ ಆದಿ ಅನಾದಿಯ ತೋರಿ ಪ್ರಾಣ ಲಿಂಗ ಜಂಗಮವೆಂದು ಎನಗೆ ಪ್ರತಿಷ್ಠಿಸಿ ತೋರಿದಿರಾಗಿ, ಕೂಡಲಸಂಗ ಮದೇವ ನಿಮ್ಮಿಂದಲಾನು ಬದುಕಿದೆನು ಕಾಣಾ ಪ್ರಭುವೆ. ॥೩೬॥

ಇಂತೀ ಶ್ರೀಮತ್ಸಕಲಗಣ ಪುರಾತರೊಳ್ ಪ್ರಭುದೇವರು ಮಹಾ ನುಭಾವ ಸದ್ಗೋಷ್ಠಿಯಂ ಮಾಡಿದ ಶೂನ್ಯಸಂಪಾದನೆಯೊಳ್ ಪ್ರಭುದೇವ ಬಸವರಾಜದೇವರ ಸಂಪಾದನೆಗಂ ಸಪ್ತಮೋಪದೇಶ ಸಮಾಪ್ತ ಮಂಗ ಳಮಹಾ ಶ್ರೀ.



# ಚನ್ನಬಸವರಾಜದೇವರ ಸಂಪಾದನೆ.

## (ಅಷ್ಟವರ್ಣೋಪದೇಶ.)

ಕಂದ॥ ಆಚಾರ ಭಕ್ತಿ ಅರಿವಿನ । ಸೂಚನೆಯಂ ಪ್ರಾಣಲಿಂಗ ಸಮರಸಮಂ ಪ್ರಭು॥ ವಾ ಚನ್ನಬಸವರಾಜಗೆ ಸೂಚಿಸಿದುದ ಪೇಳ್ವೆ ಶರಣಜನ ರಹುವೆನಲು. ॥

ಅದೆಂತೆಂದೊಡಾ ಪ್ರಭುದೇವರು ಬಸವರಾಜದೇವರು ತಮ್ಮೊಳು ತಾವು ಮಹಾನುಭಾವ ಸದ್ಗೋಷ್ಠಿಯಂ ಮಾಡುತ್ತಿಪ್ಪ ಪ್ರಸ್ಥಾವದೊಳು ಚಿಕ್ಕದಣ್ಣಾಯಕರು ಆ ಪ್ರಭುದೇವರ ಬಸವರಾಜದೇವರ ಸಮರಸಭಾವಮಂ ಪರೀಕ್ಷಿಸಿ ನೋಡುವ ಪ್ರಸ್ಥಾವದ ವಚನ. ॥

ಒಂದರೊಂದರ ಸಂಬಂಧ ಮತ್ತೊಂದಕ್ಕಳವಡದು. ಕಂಡನೋಳಗಣ ಸ್ವಪ್ನ ಮುಂದುದೋರುವುದೆ? ಚಂದ್ರಕಾಂತದ ಸಿಲೆಯಲ್ಲಿ ರತ್ನವ ಕಂಡೆನೆಂಬ ಅಹಂಕಾರ ನಿನಗೇಕೆ? ಶರಣಕಯ್ಯ ಕುರುಹಳಿಯದು ಚಾಯ ನೋರೆ ಮಿಗೆ ಉರಿವುತ್ತಿದೆ ಕೂಡಲ ಚನ್ನಸಂಗಯ್ಯನಲ್ಲಿ ಬಸವನು ಪ್ರಭುವು ಇಬ್ಬರು ಮರುಳಾದರು. ॥೧॥

ಮತ್ತಂ, ಉಂಟೆಂಬುದ ಬಸವಣ್ಣ ಕೊಂಡ. ಇಲ್ಲೆಂಬುದನಲ್ಲಮ ಕೊಂಡ. ಇನ್ನಾರನಹುದೆಂಬೆನು? ಇನ್ನಾರನಲ್ಲೆಂಬೆನು? ಇವರಿಬ್ಬರು ಛಲಕ್ಕೆ ಸಂಪನ್ನರಲ್ಲದೆ ಲಿಂಗಸಂಪನ್ನರ ಕಾಣೆ ಕೂಡಲಚನ್ನಸಂಗಮದೇವಾ. ॥೨॥

ಹೀಗೆಂದು ಚಿಕ್ಕದಣ್ಣಾಯಕರು ಪರೀಕ್ಷಿಸಿ ನೋಡಲು ಇದಕ್ಕೆ ಪ್ರಭುದೇವರು ಚಿಕ್ಕದಣ್ಣಾಯಕರೊಡನೆ ನಿರೂಪಿಸಿದ ಪ್ರಸ್ಥಾವದ ವಚನ. ॥

ಅಂಗಸಂಸಾರ ಲಿಂಗದಲ್ಲಿ ಅರತು, ಕಾಯವೆಂಬ ಸಂಬಂಧ ಸಂಶಯವನಳಿದು, ನಿಸ್ಸಂದೇಹಿಯಾಗಿಪ್ಪನು ನೋಡಾ ಬಸವಣ್ಣನು. ಪ್ರಾಣಭಾವವೆಂಬ ಶಂಕೆ ತಲೆದೋರದೆ ನಿಶ್ಶಂಕ ನಿಜೈಕ್ಯನಾಗಿಪ್ಪ ನೋಡಾ ಬಸವಣ್ಣನು. ಆ ಬಸವಣ್ಣನ ಅಂತರಂಗದಲ್ಲಿ ನಿಶ್ಚಿಂತ ನಿವಾಸಿಯಾಗಿರ್ದೆನು. ಆ ಬಸವಣ್ಣನ ಬಹಿರಂಗದಲ್ಲಿ ನಿರಾಲಂಬ ಜ್ಞಾನಿಯಾಗಿದ್ದೆನಾನು. ಬಸವಣ್ಣನೊಳಗೆ ಅಳಿದುದೇನು? ಬಸವಣ್ಣನೆನ್ನ ಅಂತರಂಗದೊಳಗೆ ನಿಜನಿವಾಸಿಯಾಗಿಪ್ಪನು. ಒಂದಕ್ಕೊಂದು ಬಿಚ್ಚಿ ಬೇರು ಮಾಡಬಾರದು

ನೋಡಾ. ಗುಹೇಶ್ವರನ ಶರಣ ಸಂಗನಬಸವಣ್ಣ ಪ್ರಭುವೆಂಬರು ಭಾವ ಭ್ರಾಂತಿಯುಳಿದು ನಿಭ್ರಾಂತಿ ಎಡೆಗೊಂಡಿತ್ತು ನೋಡಾ ಚನ್ನಬಸವಣ್ಣಾ ॥೩॥

ಹೀಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಚಿಕ್ಕದಣ್ಣಾಯಕರು ಬಿನ್ನೈಸಿದ ವಚನ. ॥

ಭಕ್ತಜಂಗಮದ ಸಕೀಲ ಸಂಬಂಧವೆಂತಿಪ್ಪುದುನಾರು ಬಲ್ಲರಯ್ಯ? ಅದು ಉಪಮಾತೀತ. ಭಕ್ತನೊಳಗೆ ಜಂಗಮವಡಗಿದಡೆ ಭಕ್ತನಾಗಿ ಕ್ರಿಯಾ ನಿಷ್ಪತ್ತಿಯಲ್ಲಿ ಸಮರಸ ಸುಖಿಯಾಗಿಪ್ಪನು ನೋಡಯ್ಯ. ಜಂಗಮದೊಳಗೆ ಭಕ್ತನಡಗಿದಡೆ ಕರ್ತೃ ಭೃತ್ಯಭಾವವಳಿದು ಸಂಬಂಧ ಸಂಶಯ ತಲೆದೋರದೆ ಅರಿವರತು ಮರಹು ನಷ್ಟವಾಗಿ ಸ್ವತಂತ್ರ ಶಿವಾಚಾರಿಯಾಗಿರಬೇಕು ನೋಡಯ್ಯ. ಈ ಉಭಯ ಭಾವದ ಸಂಗ ಪರಿಣಾಮವ ಕಂಡು ಕೂಡಲ ಚನ್ನಸಂಗಯ್ಯನಲ್ಲಿ ಬಸವಪ್ರಭುದೇವರ ಶ್ರೀಪಾದಕ್ಕೆ ನಮೋ ನಮೋ ಎಂದು ಬದುಕಿದೆನು. ॥೪॥

ಮತ್ತಂ, ಎನ್ನರಿವಿನ ಕಣ್ಣಿನ ಕತ್ತಲೆಯ ಕಳೆಯ ಬಲ್ಲರೆ ಸಂಗನ ಬಸವಣ್ಣನಲ್ಲದೆ ಮತ್ತಾರನು ಕಾಣೆನು. ಎನ್ನ ಭಾವ ನಿರ್ಭಾವದಲ್ಲಿ ನಿಲಿಸಿ ನಿಃಶೂನ್ಯವ ಮಾಡಿ, ಪರಮಸುಖವೊಳಿರಿಸುವರೆ ಅಲ್ಲಮಪ್ರಭುದೇವರಲ್ಲದೆ ಮತ್ತಾರನು ಕಾಣೆನು. ಕೂಡಲಚನ್ನಸಂಗಮದೇವರಲ್ಲಿ ಬಸವಪ್ರಭುದೇವರ ಶ್ರೀಪಾದಕ್ಕೆ ಶರಣೆಂದು ಬದುಕಿದೆನು. ॥೫॥

ಇಂತು ಚಿಕ್ಕದಣ್ಣಾಯಕರು ಬಸವರಾಜದೇವರನು ಪ್ರಭುದೇವರನು ಸ್ತೋತ್ರಮಂ ಮಾಡಲು. ಆ ಪ್ರಭುದೇವರು ಬಸವರಾಜದೇವರನು ಚನ್ನಬಸವರಾಜದೇವರನು ಸ್ತೋತ್ರಮಂ ಮಾಡಿದ ಪ್ರಸ್ತಾವದ ವಚನ. ॥

ಬಸವಣ್ಣ ಎಂಬಲ್ಲಿ ಎನ್ನ ಕಾಯ ಬಯಲಾಯಿತ್ತು. ಚನ್ನಬಸವಣ್ಣ ಎಂಬಲ್ಲಿ ಎನ್ನ ಪ್ರಾಣ ಬಯಲಾಯಿತ್ತು. ಈ ಉಭಯ ಸ್ಥಲದ ನಿರ್ಣಯದ ನಿಷ್ಪತ್ತಿ ಗುಹೇಶ್ವರಲಿಂಗ ಸಾಕ್ಷಿಯಾಗಿ, ಚನ್ನಬಸವಣ್ಣನಿಂದ ಸಾಧ್ಯವಾಯಿತ್ತು ಕಾಣಾ ಸಂಗನಬಸವಣ್ಣಾ. ॥೬॥

ಹೀಗೆಂದು ಚಿಕ್ಕದಣ್ಣಾಯಕರ ಸ್ತೋತ್ರಮಂ ಮಾಡಲು, ಬಸವರಾಜದೇವರು ಪ್ರಭುದೇವರನು ಚಿಕ್ಕದಣ್ಣಾಯಕರನು ಸ್ತೋತ್ರಮಂ ಮಾಡುವ ಪ್ರಸ್ತಾವದ ವಚನ. ॥

ಅಂಗದ ಮೇಲೆ ಲಿಂಗಸ್ವಾಯತವಾಗಿ, ಲಿಂಗಾರ್ಚನೆಯ ಮಾಡಿ ದರೆ ಭವ ಹಿಂಗದೆಂದು ಪ್ರಾಣದ ಮೇಲೆ ಲಿಂಗಸ್ವಾಯತವ ಮಾಡಿ, ಎನ್ನಂತರಂಗವ ಶುದ್ಧವ ಮಾಡಿ ಲಿಂಗೈಕ್ಯದ ಹೊಲಬ ತೋರಿದನಯ್ಯ ಚನ್ನಬಸವಣ್ಣನು. ಕಾಯದ ಕಳವಳ ದಾಸೋಹ ಮುಖದಲ್ಲಿ ಅಲ್ಲದೆ ಹರಿಯದೆಂದು ಜಂಗಮಮುಖ ಲಿಂಗವಾಗಿ ಬಂದು ಎನ್ನ ರಕ್ಷಿಸಿ, ಶಿಕ್ಷಿಸಿ, ಎನ್ನ ಸಂಸಾರದ ಪ್ರಕೃತಿಯ ಹರಿದನಯ್ಯ ಪ್ರಭುದೇವರು. ಕೂಡಲಸಂಗ ಮದೇವರಲ್ಲಿ ಪ್ರಭುದೇವರ ಚನ್ನಬಸವಣ್ಣನ ಕರುಣದಿಂದಲಾನು ಬದು ಕಿದೆನು. ॥೭॥

ಮತ್ತಂ, ಬಸವರಾಜದೇವರು ಚಿಕ್ಕವಣ್ಣಾಯಕರ ಸ್ತೋತ್ರಮಂ ಮಾಡುವ ಪ್ರಸ್ಥಾವದ ವಚನ. ॥

ಭೂಮಿಯ ಸಾರಾಯದಲೊಂದು ತರು ಬೆಳೆಯಿತ್ತು. ನವರಸ ಫಲವನಿತ್ತಿತ್ತು ನೋಡಾ! ಏನೆಂದರಿಯದೆ ಎಂತೆಂದರಿಯದೆ ಮರು ಳಾದೆನು ನಾನು. ಮಾರಾರಿಯ ಬಲೆಯಲ್ಲಿ ಸಿಲುಕಿದೆನಯ್ಯ. ಕೂಡಲಸಂಗ ಮದೇವಯ್ಯ ಚನ್ನಬಸವಣ್ಣನಿಂದಲಾನು ಬದುಕಿದೆನು. ॥೮॥

ಮತ್ತಂ, ಪ್ರಭುದೇವರು ಚನ್ನಬಸವರಾಜದೇವರ ಸ್ತೋತ್ರಮಂ ಮಾಡಿದ ಪ್ರಸ್ಥಾವದ ವಚನ. ॥

ಬೆಳಗುವ ಜ್ಯೋತಿಯ ತಿರುಳಿನಂತೆ, ಹೊಳೆವ ಕಂಗಳ ಕಾಂತಿ ಯೊಳ ಹೊರಗೆನ್ನದೆ ಅಳವಟ್ಟ ಶಿವಯೋಗಿಯ ಕಂಡೆ ನೋಡಾ. ನಿಜ ಉಂಡ ನಿರ್ಮಳದ ಘನವ ಕಂಡು ಬೆರಗಾದೆ ನಾನು. ಗುಹೇಶ್ವರಲಿಂಗ ದಲ್ಲಿ ಚನ್ನಬಸವಣ್ಣನಿಂದಲಾನು ಬದುಕಿದೆನು. ॥೯॥

ಚನ್ನಬಸವರಾಜದೇವರೊಡನೆ ಬಸವರಾಜದೇವರು ಪ್ರಭುದೇವರ ಕೊಂಡಾಡಿದ ಪ್ರಸ್ಥಾವದ ವಚನ. ॥

ಕಂಗಳಲ್ಲಿ ಕರಸ್ಥಲದ ನೋಟ. ಅಂಗವಿಕಾರವೆಂಬುದನರಿಯ ನೋಡಾ! ಮನದ ಕೊನೆಯ ಮೊನೆಯ ಮೇಲಣ ಅನುಭಾವ ಗಮನ ಗೆಟ್ಟ ಭಾವ ನಿರ್ಭಾವವೆಂಬುದನರಿಯ ನೋಡಾ! ಕೂಡಲಸಂಗಮದೇ ವರಲ್ಲಿ ಪ್ರಭುದೇವರಿಂದಲಾನು ಬದುಕಿದೆನು ಕಾಣಾ ಚನ್ನಬಸವಣ್ಣಾ. ॥೧೦॥

ಇದಕ್ಕೆ ಪ್ರಭುದೇವರು ಚನ್ನಬಸವರಾಜದೇವರೊಡನೆ ಬಸವರಾಜ ದೇವರ ಸ್ತೋತ್ರಮಂ ಮಾಡಿದ ಪ್ರಸ್ಥಾವದ ವಚನ. ॥

ಅಂಗದಲ್ಲಳವಟ್ಟ ಲಿಂಗೈಕ್ಯನ ಸಂಗವನಾರಿಗೆಯೂ ಕಾಣಬಾರದು ನೋಡಾ. ಪ್ರಾಣದ ಕೊನೆಯ ಮೇಲೆ ಭಾವ ಸೂತಕದ ಹೊದಿಕೆಯ ಕಳೆದು ನಿರ್ಭಾವ ನಿಸ್ಸೂತಕಿಯಾಗಿಪ್ಪ ನಿಜಲಿಂಗಸಮಾಧಿಯ ಘನವು ಆರಿಗೆಯು ಕಾಣಬಾರದು ನೋಡಾ! ಗುಹೇಶ್ವರ ಲಿಂಗದಲ್ಲಿ ಸಂಗನಬಸವಣ್ಣನ ನಿಲವ ಕಂಡು ನಾನು ಬದುಕಿದೆನು ಕಾಣಾ ಚನ್ನಬಸವಣ್ಣಾ. ॥೧೧॥

ಹೀಗೆಂದು ಪ್ರಭುದೇವರು ಚನ್ನಬಸವರಾಜದೇವರೊಡನೆ ಬಸವರಾಜದೇವರ ಮಹಾತ್ಮೆಯಂ ಕೊಂಡಾಡಲು, ಆ ಚನ್ನಬಸವರಾಜದೇವರು ಪ್ರಭುದೇವರೊಡನೆ ಆ ಬಸವರಾಜದೇವರ ಮಹಾತ್ಮೆಯಂ ಕೊಂಡಾಡ ಬಿನ್ನಪಂಗೈದ ಪ್ರಸ್ತಾವದ ವಚನ. ॥

ಹರನಟ್ಟಿದಾಗ್ರದ ಜೆಸನ ಗುರು ನಿರೂಪವೆಂದು ಕೈಕೊಂಡು ಕರುಣಿ ಬಸವಣ್ಣ ಕೈಲಾಸದಿಂದ ಗುರುಲಿಂಗಜಂಗಮಕ್ಕೆ ಭಕ್ತಿಯ ಮಾಡಬೇಕೆಂದು ಏಳನೂರೆಪ್ಪತ್ತು ಅಮರಗಣಂಗಳು ಸಹಿತ ಮರ್ತ್ಯಲೋಕಕ್ಕೈತಂದನಯ್ಯ. ಶಿವಸಮಯಕಾಧಾರನಾದನಯ್ಯ ಲೋಕಾದಿಲೋಕಂಗಳಿಗೆ ಪರಮಗುರುವಾದನಯ್ಯ ಬಸವಣ್ಣನು. ಜಡರುಗಳ ಮನದ ಕತ್ತಲೆಯ ಕಳೆಯಬೇಕೆಂದು ಕಟ್ಟಿತ್ತು ಕಲ್ಯಾಣಪಟ್ಟಣದಲ್ಲಿ ಮಹಾಮಂಟಪವು. ಪರಮನಟ್ಟಿದ ಓಲೆ ಬಂದಿಳಿಯಿತ್ತು. ಬಿಜ್ಜಳನ ಸಿಂಹಾಸನದಲ್ಲಿ ಅದನು ತಂದು ಓದಿಸಿವರೆ ಸೃಷ್ಟಿಯ ಸೇನಬೋವರಿಗೆ ತಿಳಿಯದು. ಛಪ್ಪನ್ನ ದೇಶದ ಭಾಷೆಯ ಲಿಪಿಯು ಮುನ್ನವೆ ಅಲ್ಲ. ಇದನೋದಿದವರಿಗೆ ಆನೆ, ಸೇನೆ, ಕುದುರೆ, ಭಾಂಡಾರ, ಅರುವತ್ತಾರು ಕರಣಿಕರಿಗೆ ಮುಖ್ಯನ ಮಾಡುವೆನೆಂದು ಬಿಜ್ಜಳ ಭಾಷೆಗೊಡುತ್ತಿರಲು, ಹರ ನಿರೂಪನ ಸಿರದ ಮೇಲಿಟ್ಟು ಶಿವಶರಣೆಂದು ಬಸವಣ್ಣ ಮೆಟ್ಟಿ ನೋಡಿ, ತೆಗೆಸಿದನಯ್ಯ ಅರುವತ್ತಾರುಕೋಟಿ ವಸ್ತುವ. ಅರಮನೆಗೆ ರಾಜ್ಯಕ್ಕೆ ಒಡೆಯನಾಗಿ ಹರಗಣಂಗಳಿಗೆ ಗತಿ ಮತಿ ಚೈತನ್ಯನಾಗಿ ಕೂಡಲ ಚನ್ನಸಂಗಯ್ಯನಲ್ಲಿ ಅಂಡಜದೊಳಗಿರ್ದು ಶಿವನ ಭಂಡಾರಿಯಾದನಯ್ಯ ಎನ್ನ ತಂದೆ ಪೂರ್ವಾಚಾರಿ ಸಂಗನಬಸವಣ್ಣನು. ॥೧೨॥

ಭಕ್ತಿಯ ಕುಳಸ್ಥಳವನು ಮರ್ತ್ಯಲೋಕದಲ್ಲಿ ಹರಹಲೆಂದು ಬಂದನಯ್ಯ ಬಸವಣ್ಣನು. ಆಚಾರ ಶಿವಾಚಾರದ ಮುಂದಣ ಕನ್ನಡವ ಕಳೆದು, ಕರತಳಾಮಳಕವ ಮಾಡಿದನಯ್ಯ ಬಸವಣ್ಣನು. ಪರವಾದಿ ಬಿಜ್ಜಳನು ಒರೆಗಲ್ಲ ಹಿಡಿದು ಶಿವಭಕ್ತಿಯ ಸಂಪಾದನೆಯ ಮಾಡುವಲ್ಲಿ

ಮೂವತ್ತಾರು ಕೋಡಿಯರ ಪರಿಹರಿಸಿ, ಶಿವಾಚಾರದ ಧ್ವಜವನೆತ್ತಿಸಿದ ನಯ್ಯ ಬಸವಣ್ಣನು. ಕೂಡಲಚನ್ನಸಂಗಮದೇವರಲ್ಲಿ ಬಸವಣ್ಣನ ನಿಲವ ಹೊಗಳುವರೆ ಎನ್ನಳವಲ್ಲ ನಿನ್ನಳವಲ್ಲ ಕೇಳಾ ಪ್ರಭುವೆ. ॥೧೩॥

ಆ ಪ್ರಸ್ಥಾವದೊಳು ಹಾಡಿ ಹೊಗಳುವ ಪದಂಗಳು ॥

**ರಾಗ ಅಹರಿ.**

ಅಚಾರ ದುಂದುಭಿಯು ನಾನೇನೆಂದುಪಮಿಸುವೆ ಬೆಳಗಿನೊಳಗೆ ತೊಳಗಿ ಬೆಳಗುತಲಿರ್ದುದು ಆಚಾರ. ॥ಪಲ್ಲ॥ ಅರಿವಿನಾಚರಣೆಯ ತೆರನ ಹೇಳುತಲಿರ್ದುದು ॥ ಭೇದಾದಿಬೇದವ ಮಹಾಘನದಾಚಾರ. ॥೧॥ ಸ್ಫಟಿಕದ ಗಿರಿಯು ತಟವಲ್ಲಿರ್ದರೆ, ಘಟ ಹೊಳೆದುದು, ಒಳಹೊರಗೆನ್ನದೆ. ॥೨॥ ಪರುಷದ ಗಿರಿಯು ಕಡೆಯಲೆಂದು ಹೋದರೆ, ಹಿಡಿದುಳಿ ಕೊಡತಿ ಪರುಷವಾದ ಬಳಿಕ ಮತ್ತಾಚಾರಾ. ॥೩॥ ಮಾಣಿಕವ ಹಿಡಿದವನ ಕೈಯ್ಯ ಸಿಕೆ ಹತ್ತುವದೆ, ಲಿಂಗಜಂಗಮ ಪ್ರಸಾದವೆಂದರಿದಾಚಾರ. ॥೪॥ ಸಂಪಿಗೆಯ ಪುಷ್ಪದಲ್ಲಿ ಕಂಪುಂಡ ಭ್ರಮರನಂತೆ, ಕೂಡಲ ಚನ್ನಸಂಗನಲ್ಲಿ ಶರಣಬಸವಣ್ಣಂಗಾಚಾರ. ॥೫॥

ಮತ್ತಂ, ॥ಸ್ತೋತ್ರ॥ ನಚ್ಚುಬಚ್ಚದೆ ಮನದಲ್ಲಿ ಅಚ್ಚೊತ್ತಿದಂತಿದ್ದಿತ್ತು. ಲಿಂಗವೆನ್ನದು, ಜಂಗಮವೆನ್ನದು, ಪ್ರಸಾದವೆನ್ನದು, ಅದು ತನ್ನಲ್ಲಿ ತಾನಾಗಿ ತಾನೆ ಭರಿತನು. ಕೂಡಲಚನ್ನಸಂಗಯ್ಯ ನಿಮ್ಮ ಶರಣ ಬಸವಣ್ಣನ ನಿಲವನುಪಮಿಸಬಾರದು. ॥೧೯॥

ಇಂತು ಚಿಕ್ಕದಣ್ಣಾಯಕರು ಪ್ರಭುದೇವರೊಡನೆ ಬಸವರಾಜದೇವರ ಮಹಾತ್ಮೆಯನು ಸ್ತೋತ್ರ ಮುಖದಿಂದ ಕೊಂಡಾಡಲು, ಆ ಪ್ರಭುದೇವರು ಚನ್ನಬಸವರಾಜದೇವರೊಡನೆ ಆ ಬಸವರಾಜದೇವರ ಮಹಾತ್ಮೆಯಂ ಕೊಂಡಾಡುತ್ತ ಹೇಳಿದ ಪ್ರಸ್ಥಾವದ ವಚನ. ॥

ಆದಿ ಅನಾದಿ ಎಂಬೆರಡರ ಮೂಲವನೆತ್ತಿ ಆದಿಲಿಂಗ ಅನಾದಿಜಂಗಮವೆಂಬ ಭೇದವ ವಿವರಿಸಿ ತೋರಿದನಯ್ಯ ಬಸವಣ್ಣನು. ಕಾಯದ ಜೀವದ ಸಂಬಂಧವ ಮಾಡಿ ತೋರಿದನಯ್ಯ ಬಸವಣ್ಣನು. ಎನ್ನ ಆದಿ ಅನಾದಿಯನು ಬಸವಣ್ಣನಿಂದ ತಿಳಿದು ನಮ್ಮ ಗುಹೇಶ್ವರಲಿಂಗದಲ್ಲಿ ಸುಖಿಯಾದೆನು ಕೇಳಾ ಚನ್ನಬಸವಣ್ಣಾ. ॥೨೦॥

ಆದಿಲಿಂಗ, ಅನಾದಿಜಂಗಮವೆಂಬ ಭೇದವನು ಎನಗೆ ಬಸವಣ್ಣ ತೋರಿಸಿ ಕೃತಾರ್ಥನ ಮಾಡಿದನೆಂದು ಪ್ರಭುದೇವರು ಚನ್ನಬಸವರಾಜ ದೇವರೊಡನೆ ನಿರೂಪಿಸಲು ಆ ಚನ್ನಬಸವರಾಜದೇವರು ಪ್ರಭುದೇವರೊಡನೆ ನಿನಗೆ ಆದಿ ಅನಾದಿಗತೀತವಾದ ಲಿಂಗವೆಂತು ಸಾಧ್ಯವಾಯಿತ್ತೆಂದು ಕೇಳುವ ಪ್ರಸ್ಥಾವದ ವಚನ. ||

ಆದಿಯಲ್ಲಿ ಬಂದುದಲ್ಲ. ಅನಾದಿಬಿಂದುವಿನಲ್ಲಿ ಆದುದಲ್ಲ. ನಾದವನು ಕಳೆನುಂಗಿ, ಕಳೆಯ ನಾದವು ನುಂಗಿ, ಹೊಳೆವ ಲಿಂಗ ನಿನಗೆಂತು ಸಾಧ್ಯವಾಯಿತ್ತು ಹೇಳಾ? ಅಪ್ಪಣೆ ಇಲ್ಲದ ಅಪ್ಪಣೆ ಸಲುವುದೇ ಜಗದೊಳಗೆ? ಇದುಕಾರಣ ಕೂಡಲ ಚನ್ನಸಂಗಮದೇವರಲ್ಲಿ ಆದಿ ಸೋಂಕು ನಿನಗೆಂತು ಸಾಧ್ಯವಾಯಿತ್ತು ಹೇಳಾ ಪ್ರಭುವೆ? ||೨೧||

ಹೀಗೆಂದು ಚಿಕ್ಕದಣ್ಣಾಯಕರು ಬೆಸಗೊಳಲು, ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ಥಾವದ ವಚನ. ||

ಆದಿ ಅನಾದಿಗೆ ಭೇದ ಉಂಟೆ? ಆದಿ ಲಿಂಗ ಅನಾದಿ ಶರಣನೆಂಬುದ ತನ್ನಿಂದ ತಾ ಮಾಡಲಾಯಿತ್ತು. ಧರೆ ಆಕಾಶ ಭುವನ ಭವನಂಗಳು ಹುಟ್ಟದ ಮುನ್ನ ಅನಾದಿ ಪರಶಿವನು ತಾನೆ ತನ್ನ ಲೀಲೆಗೆ ಸಾಕಾರವ ಧರಿಸಿದಡೆ ಸಾಕಾರವೆ ಈ ಸಾಕಾರವಾಯಿತ್ತು. ಎನ್ನ ಸಾಕಾರದ ಆದಿಯನು ಎನ್ನ ನಿರಾಕಾರದ ಆದಿಯನು ಬಸವಣ್ಣ ಬಲ್ಲನಾಗಿ ಗುಹೇಶ್ವರ ಲಿಂಗದ ಘನವು ಬಸವಣ್ಣನಿಂದ ಎನಗೆ ಸಾಧ್ಯವಾಯಿತ್ತು ಕಾಣಾ ಚನ್ನಬಸವಣ್ಣಾ. ||೨೨||

ಅನಾದಿ ಪರಶಿವ ತತ್ವದ ಘನವು ಸಾಧ್ಯವಾದ ಭೇದವನು ಪ್ರಭುದೇವರು ನಿರೂಪಿಸಲು, ಅದಕ್ಕೆ ಚಿಕ್ಕದಣ್ಣಾಯಕರು ಪರಿಣಾಮಿಸಿ, ಆ ಪ್ರಭುದೇವರು ಸ್ತುತಿಸಿದ ವಚನ. ||

ಆಯತವಿಲ್ಲದ ಅನುಭಾವ. ಸ್ವಾಯತವಿಲ್ಲದ ಸಮಾಧಾನ. ಸನ್ನಿಹಿತವಿಲ್ಲದ ಸಂಬಂಧವನೇನನೆನಬಹುದಯ್ಯ? ಘನ ಮನವ ಭೇದಿಸಿ ಆದಿ ಅನಾದಿಯನೊಳಕೊಂಡ ಆಧಾರವಿಲ್ಲದ ನಿಲವು ಸಾಧ್ಯವಾಯಿತ್ತು ನೋಡಾ! ಕೂಡಲ ಚನ್ನಸಂಗಮದೇವರ ಶರಣ ಪ್ರಭುದೇವರು ಅಜಾತನೆಂಬ ಭೇದವೆನಗೆ ತಿಳಿಯಿತ್ತು. ||೨೩||

ಇಂತು ಪ್ರಭುದೇವರು ಅಜಾತ ಪರಶಿವನೆಂದರಿದ ಚನ್ನಬಸವಣ್ಣನು ಮತ್ತಂ ಪ್ರಭುದೇವರಿಂದ ಸಮಸ್ತ ತತ್ವಂಗಳೆಲ್ಲ ಉತ್ಪತ್ಯವಾದವೆಂಬ ಭೇದವನರಿದು ಸ್ತುತಿಸುತ್ತಿರ್ದ ಪ್ರಸ್ಥಾವದ ವಚನ. ॥

ಬಯಲ ಮೂರ್ತಿಯಾಗಿ ನಿಂದನೊಬ್ಬ ಶರಣ. ಆತನ ವಿದ್ಯಾಬುದ್ಧಿಯಿಂದ ಹುಟ್ಟಿದಾತ ಬ್ರಹ್ಮ. ಆತನ ಶಾಂತಿಸೈರಣೆಯಿಂದ ಹುಟ್ಟಿದಾತ ವಿಷ್ಣು. ಆತನ ಕೋಪಕ್ರೋಧದಿಂದ ಹುಟ್ಟಿದಾತ ರುದ್ರ. ಈ ಮೂರು ಸೀಶವಂತಿರಲಿ. ಈ ತತ್ವತ್ರಯಂಗಳಿಗೆ ತಾನೆ ಕಾರಣವಾಗಿಪ್ಪ ಶರಣನ ನಿಲವನರಿದು, ಶರಣೆನುತಿರ್ದೆನು ಕೂಡಲಚನ್ನಸಂಗಮದೇವಾ. ॥೨೪॥

ಇಂತು ಚಿಕ್ಕದಣ್ಣಾಯಕರು ಪ್ರಭುದೇವರ ಮೂಲ ಸಂಭೂತಿತತ್ವವನು ಆತನ ಮಹಾಘನವನು ವಿವೇಕದಿಂದರಿದು ಸ್ತುತಿಸುತ್ತಿರಲು, ಆ ಪ್ರಭುದೇವರು ಚಿಕ್ಕದಣ್ಣಾಯಕರ ಪೂರ್ವಾಪರ ಸಂಬಂಧವನರಿತೆನೆಂದು ಸ್ತುತಿಸುತ್ತಿರ್ದ ಪ್ರಸ್ಥಾವದ ವಚನ. ॥

ಅಯ್ಯಾ, ತತ್ವಾದಿ ತತ್ವಂಗಳಿಲ್ಲದಂದು, ಪ್ರಕೃತಿ ಪುರುಷರಿಲ್ಲದಂದು, ಜೀವಪರಮರೆಂಬ ಭಾವ ಲೀಲೆದೋರದಂದು, ಏನೇನು ಇಲ್ಲದಂದು, ಬಯಲು ಬಲಿದು ಒಂದು ಬಿಂದುವಾಯಿತ್ತು ನೋಡಾ! ಆ ಬಿಂದು ಅಕ್ಷರತ್ರಯದ ಗದ್ದುಗೆಯಲ್ಲಿ ಕುಳ್ಳಿರಲು, ಓಂಕಾರ ಉತ್ಪತ್ಯವಾಯಿತ್ತು. ಆ ನಾದದಲ್ಲಿ ಮೂರ್ತಿಗೊಂಡನೊಬ್ಬ ಶರಣ. ಆ ಶರಣನಿಂದಾಯಿತ್ತು ಪ್ರಕೃತಿ. ಆ ಪ್ರಕೃತಿಯಿಂದಾಯಿತ್ತು ಲೋಕ. ಲೋಕ ಲೌಕಿಕವನತಿಗಳೆದು ನಿಜದಲ್ಲಿ ನಿವಾಸಿಯಾಗಿಪ್ಪ ಗುಹೇಶ್ವರನ ಶರಣ ಚನ್ನಬಸವಣ್ಣನ ಘನವನು ಬಸವಣ್ಣನ ಕೃಪೆಯಿಂದರಿದು, ನಮೋ ನಮೋ ಎನುತಿರ್ದೆನು. ॥೨೫॥

ಇಂತು ಬಸವರಾಜದೇವರ ಕೃಪೆಯಿಂದ ಚನ್ನಬಸವರಾಜದೇವರ ನಿಜವನರಿದೆನೆಂದು ಪ್ರಭುದೇವರು ನಿರೂಪಿಸುತ್ತಿರಲು, ಆ ಚನ್ನಬಸವರಾಜದೇವರು ಪ್ರಭುದೇವರೊಡನೆ ಬಸವರಾಜದೇವರ ಘನವನು ಎನಗೆ ತೋರಿಸಿಕೊಡು ಎಂದು ಬಿನ್ನೈಸುತ್ತಿರ್ದ ಪ್ರಸ್ಥಾವದ ವಚನ. ॥

ನಿರಾಲಂಬದಲ್ಲಿ ನಿಜಲಿಂಗ ನಾನೆಂಬ ಮಹದಂಕಾರವೆ ಸಂಸಾರವಾಗಿ ಬಂದು ಬಳಲುವ ಭ್ರಾಂತಿ ಇನ್ನಾರಿಗೆ ತೀರುವುದಯ್ಯ, ಇನ್ನಾರು ಪರಿಹರಿಸುವರಯ್ಯ ಬಸವಣ್ಣನಲ್ಲದೆ? ಇದುಕಾರಣ ಕೂಡಲ ಚನ್ನ

ಸಂಗಮದೇವ ಬಸವಣ್ಣನ ಶ್ರೀಪಾದದ ಘನವನೊಮ್ಮೆ ಅರುಹಾ ಪ್ರಭುವೆ. ॥೨೬॥

ಎನಗಿಲ್ಲದ ಘನವನೇರಿಸಿ ನುಡಿದರೆ ಅದು ನಿಮ್ಮ ಲೀಲೆ. ನಾನದ ಬೇಕೆನ್ನೆ, ಬೇಡವೆನ್ನೆ. ಅದಂತಿರಲಿ. ನಿಮ್ಮ ಶ್ರೀಪಾದದ ಕೃಪೆಯಿಂದೆ ನಿಮ್ಮ ನಿಲವ ನರಿದೆನು ಕೂಡಲ ಚನ್ನಸಂಗಮದೇವ ಎನಗೊಮ್ಮೆ ಬಸವಣ್ಣನ ಪರಿಯನರುಹಾ ಪ್ರಭುವೆ. ॥೨೭॥

ಬಸವಣ್ಣನ ಘನವನರುಹೆಂದು ಚಿಕ್ಕದಣ್ಣಾಯಕರು ಪ್ರಭುದೇವರ ಬೆಸಗೊಳಲು ಆ ಪ್ರಭುದೇವರು ಮರಳಿ ಚಿಕ್ಕದಣ್ಣಾಯಕರ ಬೆಸಗೊಂಬ ಪ್ರಸ್ಥಾವದ ವಚನ. ॥

ಅದ್ವೈತವೆಂಬ ಶಿಸುವೆನ್ನ ಕರಸ್ಥಲವ ಸೋಂಕಲೊಡನೆ ಎನ್ನ ತನ್ನಂತೆ ಮಾಡಿತ್ತಾಗಿ, ಎನ್ನ ನಾನೆಂಬ ವಿಚಾರವು ಅರತು ಹೋಯಿತ್ತು ಕೇಳಾ. ಮತ್ತೆ ಅನ್ಯ ವಿಚಾರವನೆಂತು ಅರಿಯೆ. ಎನ್ನ ಪೂರ್ವಾಪರ ನಿಮ್ಮಿಂದ ಅರಿಯಲೆಂದು ಬಂದು ನಿಮ್ಮ ಮರೆಹೊಕ್ಕೆನಾಗಿ ಸಂಗನಬಸವಣ್ಣನ ಮಹಿಮೆಯ ನಾನೆತ್ತ ಬಲ್ಲೆನು? ಗುಹೇಶ್ವರ ಸಾಕ್ಷಿಯಾಗಿ ಸಂಗನಬಸವಣ್ಣ ನಿನ್ನಂತರಂಗದೊಳಗೆ ಬೆಳಗುತ್ತೈದಾನೆ. ಎನಗೊಮ್ಮೆ ಬಸವಣ್ಣನ ಘನವ ತಿಳುಹಿಕೊಡಾ ಚನ್ನಬಸವಣ್ಣಾ. ॥೨೮॥

ಮತ್ತಂ, ಆದಿಯ ತೋರಿದೆ. ಅನಾದಿಯನರುಹಿದೆ. ಇಹವ ಕೆಡಿಸಿದೆ. ಪರವ ನಿಲಿಸಿದೆ. ಕಾಯ ಪ್ರಸಾದ, ಭಾವ ಪ್ರಸಾದ, ಜ್ಞಾನ ಪ್ರಸಾದವ ನೇಕವ ಮಾಡಿ ತೋರಿದೆ. ಪರವನೊಳಕೊಂಡು ಪರಿಣಾಮದಲ್ಲಿರಿಸಿದೆ. ಗುಹೇಶ್ವರನ ಶರಣ ಸಂಗನಬಸವಣ್ಣನ ಪೂರ್ವಾಪರವ ಹೇಳಿ ಎನ್ನನು ಳುಹಿಕೊಳ್ಳಾ ಚನ್ನಬಸವಣ್ಣಾ. ॥೨೯॥

ಇಂತು ಬಸವರಾಜದೇವರ ನಿಲವನರುಹೆಂದು ಪ್ರಭುದೇವರು ಬೆಸಗೊಳ್ಳಲು, ಅದಕ್ಕೆ ಚಿಕ್ಕದಣ್ಣಾಯಕರು ಪ್ರಭುದೇವರೊಡನೆ ಬಸವರಾಜದೇವರ ಪೂರ್ವಾಪರ ಸಂಬಂಧಮಂ ಸುಜ್ಞಾನ ದೃಷ್ಟಿಯಿಂದೀಕ್ಷಿಸಿ, ಬಿನ್ನೈಸುತ್ತಿರ್ದ ಪ್ರಸ್ಥಾವದ ವಚನ. ॥

ಒಂದು ಒಂದು ಇಲ್ಲದಂದು, ನಂದಿವಾಹನರಿಲ್ಲದಂದು, ಹಿಂದೆ ಹದಿನಾಲ್ಕು ಭುವನಂಗಳಿಲ್ಲದಂದು, ಅಂದಾರು ಲಿಂಗವ ಕಂಡವರಿಲ್ಲ. ಅಂದು ಲಿಂಗವಕಂಡು ಹೇಳಿದರೆ ಆತನೆ ಅದ್ವೈತಿ ಎಂಬೆ. ಅಂದು ಕೂಡಲ

ಚನ್ನಸಂಗಯ್ಯನಲ್ಲಿ ಬಸವಣ್ಣನೊಬ್ಬನೆ ಉಭಯವಾಗಿರ್ದನು ಕೇಳಾ ಪ್ರಭುವೆ. ॥೩೦॥

ಮತ್ತಂ, ಕೃತಯುಗದಲ್ಲಿ ದೇವರು ದೇವಾಸುರನ ಕೊಲ್ಲುವಲ್ಲಿ ಪ್ರಮಥನೆಂಬ ಗಣೇಶ್ವರನಾಗಿರ್ದನು. ಗಜಾಸುರನ ಚರ್ಮವ ಬಿಚ್ಚಿ ಅಜಾರಿಸಿ ಹೋದೆವಲ್ಲಿ ಉಗ್ರನೆಂಬ ಗಣೇಶ್ವರನಾಗಿರ್ದನು. ಆ ಸುರರ ಶಿರೋಮಾಲೆಯ ಕೊರಳಲ್ಲಿ ಉರದಲ್ಲಿ ಹಾರವಾಗಿ ಧರಿಸಿ ಜಗಕ್ಕೆ ಜೂಬಾಗಿಪ್ಪಲ್ಲಿ ಶಂಕೆ ಇಲ್ಲದೆ ನಿಃಶಂಕನೆಂಬ ಗಣೇಶ್ವರನಾಗಿರ್ದನು. ಸಮಸ್ತ ದೇವರಿಗೆ ಕರುಣಾಮೃತವ ಸುರಿದು, ಸುಖವನಿತ್ತು ರಕ್ಷಿಸುವಲ್ಲಿ ಶಂಕರನೆಂಬ ಗಣೇಶ್ವರನಾಗಿರ್ದನು. ಜಾಲಂಧರನೆಂಬ ಅಸುರನ ಕೊಲುವಲ್ಲಿ ಜಾಣರಿಗೆ ಜಾಣನಾಗಿ ವಿಚಿತ್ರನೆಂಬ ಗಣೇಶ್ವರನಾಗಿರ್ದನು. ತ್ರೇತಾಯುಗದಲ್ಲಿ ಕಾಳಾಂಧರದೊಳಗೆ ಶಿವನು ನಿಜಮಂದಿರವಾಗಿಪ್ಪಲ್ಲಿ ಕಾಲಾಗ್ನಿರುದ್ರನೆಂಬ ಗಣೇಶ್ವರನಾಗಿರ್ದನು. ಪಿತಾಸುರನೆಂಬ ದೈತ್ಯನ ಕೊಂದು ರಕ್ಷಿಸುವಲ್ಲಿ ಮಾತಾಪಿತನೆಂಬ ಗಣೇಶ್ವರನಾಗಿರ್ದನು. ತಾಳಾಸುರನೆಂಬ ದೈತ್ಯನ ಕೊಂದು, ಜಗವ ರಕ್ಷಿಸಿ, ಸೃಷ್ಟಿಯ ಕಲ್ಪಿಸಿ, ಬ್ರಹ್ಮಾಂಡ ಭಾರಮಂಧರಿಸುವಲ್ಲಿ, ತಾಳಮೇಳನೆಂಬ ಗಣೇಶ್ವರನಾಗಿರ್ದನು. ಜಗತ್ಪ್ರಳಯದಲ್ಲಿ ಜಗನ್ನಾಥನು ಅಳಿಯದೆ ಇಪ್ಪಲ್ಲಿ ಜನನಮರಣ ವರ್ಜಿತನೆಂಬ ಗಣೇಶ್ವರನಾಗಿರ್ದನು. ಜಗವೆಲ್ಲ ಶೂನ್ಯವೆಂದರೆ ನಾನೆ ಹುಟ್ಟಿಸಿದೆನೆಂದು ಆದಿಗಣನಾಥನೆಂಬ ಗಣೇಶ್ವರನಾಗಿರ್ದನು. ಸುರಾಸುರರ ಅಹಂಕಾರದಲ್ಲಿ ಹೆಚ್ಚಿ ಮೇರೆದಪ್ಪಿದಲ್ಲಿ ಗೂಳಿಯಾಗಿ ಹೋಗಿ ಎಲ್ಲರ ತೊತ್ತಳದುಳಿದು ಒಕ್ಕಲಿಕ್ಕಿ ಮಿಕ್ಕಿಮೀರಿ ನಂದಿಮಹಂಕಾಳನೆಂಬ ಗಣೇಶ್ವರನಾಗಿರ್ದನು. ಉರಿಗಣ್ಣ ತೆರೆವರೆ ಉರಿವವು ಲೋಕಂಗಳೆಂದು, ಜಗವ ಹಿಂದಿಕ್ಕಿಕೊಂಡು ವಂದ್ಯನೆಂಬ ಗಣೇಶ್ವರನಾಗಿರ್ದನು. ಉಮೆಯ ಕಲ್ಯಾಣದಲ್ಲಿ ಕಾಲಲೋಚನನೆಂಬ ಗಣೇಶ್ವರನಾಗಿರ್ದನು. ಅಂಧಕಾಸುರನ ಕೊಲುವಲ್ಲಿ ನೀಲಲೋಹಿತನೆಂಬ ಗಣೇಶ್ವರನಾಗಿರ್ದನಯ್ಯ. ತ್ರಿಪುರದಹನವ ಮಾಡುವಲ್ಲಿ ಸ್ಕಂದನೆಂಬ ಗಣೇಶ್ವರನಾಗಿರ್ದನಯ್ಯ. ಬ್ರಹ್ಮಕಪಾಲ ವಿಷ್ಣು ಕಂಕಾಳವನಿಕ್ಕುವಲ್ಲಿ ನೀಲಕಂಠನೆಂಬ ಗಣೇಶ್ವರನಾಗಿರ್ದನು. ದ್ವಾಪರವಲ್ಲಿ ಲಿಂಗ ಪ್ರಾಣಸಂಯೋಗವಾಗಿ ವೃಷಭನೆಂಬ ಗಣೇಶ್ವರನಾಗಿರ್ದನು. ಇಂತು ನಾಲ್ಕು ಯುಗ ಹದಿನೆಂಟು ಜುಗಂಗಳಂ ಮಡಿವಲ್ಲಿ ಹುಟ್ಟುವಲ್ಲಿ ನಂದಿಕೇಶ್ವರನೆಂಬ ಗಣೇಶ್ವರನಾಗಿರ್ದನಯ್ಯ!

ಕಲಿಯುಗದಲ್ಲಿ ಗುರುಲಿಂಗಜಂಗಮಪಾದೋದಕದ ಪೂರ್ವಾಶ್ರಯವ ಕಳೆದು, ಲಿಂಗವಾಗಿ, ಕುಳಸ್ಥಳವನರಿತ ಮಹಂತ ಕೂಡಲಚೆನ್ನಸಂಗನ ಮಹಾಮನೆಯಲ್ಲಿ ಸರ್ವಾಚಾರ ಸಂಪನ್ನ ಬಸವಣ್ಣನೆಂಬ ಗಣೇಶ್ವರನಾಗಿರ್ದನು ಕೇಳಾ ಪ್ರಭುವೆ. ॥೨೧॥

ಇಂತು ಚಿಕ್ಕದಣ್ಣಾಯಕರು ಬಸವರಾಜದೇವರ ಪೂರ್ವಾಪರ ಸಂಗತ್ಯಮಂ ಬಿನ್ನೈಸಲು, ಆ ಪ್ರಭುದೇವರು ಚಿಕ್ಕದಣ್ಣಾಯಕರರಿವ ಕೊಂಡಾಡುವ ಪ್ರಸ್ಥಾವದ ವಚನ. ॥

ಅಂದದೀತನ ಮಾತ ಅಂದಂದಿಗೆ ಅರಿಯಬಾರದು. ಹಿಂದೆ ಹೋದ ಯುಗ ಪ್ರಳಯಂಗಳ ಬಲ್ಲವರಾರಯ್ಯ! ಮುಂದೆ ಬಪ್ಪ ಯುಗಪ್ರಳಯಂಗಳ ಬಲ್ಲವರಾರಯ್ಯ! ಬಸವಣ್ಣನು ಆದಿಯಲ್ಲಿ ಲಿಂಗ ಶರಣನೆಂಬುದ ಭೇದಿಸಿ, ನೋಡಿ ಅರಿವರಿನ್ನಾರಯ್ಯ! ಲಿಂಗಜಂಗಮಪ್ರಸಾದದ ಮಹಾತ್ಮೆಗೆ ಬಸವಣ್ಣನೆ ಆದಿಯಾದನೆಂಬುದನರಿವ ಸ್ವಯಂಭು ಜ್ಞಾನ ಗುಹೇಶ್ವರಲಿಂಗದಲ್ಲಿ ಚೆನ್ನಬಸವಣ್ಣನೊಬ್ಬನೆ. ॥೩೨॥

ಬಸವಣ್ಣನೆ ಆದಿ ಶರಣ. ಆತನ ಮಹಿಮೆಯನರಿಯದ ನಿಮ್ಮ ಜ್ಞಾನಕ್ಕೆ ಪ್ರತಿ ಇಲ್ಲವೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಚೆನ್ನ ಬಸವರಾಜದೇವರು ಬಸವಣ್ಣನೆ ಆದಿ ಶರಣನೆಂದು ನುಡಿಯಲಾಗದೆಂದು ಪ್ರಭುದೇವರೊಡನೆ ಬಿನ್ನೈಸುವ ಪ್ರಸ್ಥಾವದ ವಚನ. ॥

ಆದಿ ಬಸವಣ್ಣನು ಅನಾದಿ ಲಿಂಗವೆಂಬುದು ತಾ ಹುಸಿ ಹುಸಿ. ಈ ನುಡಿಯ ಕೇಳಲಾಗದು. ಆದಿ ಲಿಂಗ ಅನಾದಿ ಬಸವಣ್ಣನು. ಲಿಂಗವು ಬಸವಣ್ಣನುದರದಲ್ಲಿ ಹುಟ್ಟಿತ್ತು. ಜಂಗಮವು ಬಸವಣ್ಣನ ಉದರದಲ್ಲಿ ಹುಟ್ಟಿತ್ತು. ಪ್ರಸಾದವು ಬಸವವಣ್ಣನನುಕರಿಸಲಾಯಿತ್ತು. ಈ ತ್ರಿವಿಧಕ್ಕೆ ಬಸವಣ್ಣನೆ ಕಾರಣನೆಂದರಿದೆನಯ್ಯ ಕೂಡಲ ಚೆನ್ನಸಂಗಮದೇವಾ. ॥೩೩॥

ಹೀಗೆಂದು ಚಿಕ್ಕದಣ್ಣಾಯಕರು ಬಿನ್ನೈಸಲು, ಅದಕ್ಕೆ ಪ್ರಭುದೇವರು ನಿರೂಪಿಸಿದ ಪ್ರತ್ಯುತ್ತರ. ॥

ಕಾಯವಿಡಿದು ಹುಟ್ಟಿದಾತ ಕಾಲಾಗ್ನಿ ರುದ್ರನಾದರಾಗಲಿ, ಕಾಯವಿಡಿದು ಹುಟ್ಟಿದಾತ ಕಾಮಸಂಹಾರನಾಗಲಿ, ಕಾಯವಿಡಿದು ಹುಟ್ಟಿದಾತ ಅನಾದಿ ಪರಮೇಶ್ವರನಾಗಲಿ, ಅರಿವು ಸಾಧ್ಯವಾಗದು. ಅವರಿಗೆಯು ಗುಹೇ

ಶ್ವರಲಿಂಗದಲ್ಲಿ ನೀನು ಕಾಯವಿಡಿದು ಕಲ್ಪಿತವ ಹೊದ್ದನೆಂಬುದ ಕಾಣ ಬಂದಿತ್ತು ನೋಡಾ ಚನ್ನಬಸವಣ್ಣಾ. ॥೨೪॥

ಇಂತು ಶರೀರವಿಡಿದು ದಿವ್ಯಜ್ಞಾನಿ ನೀನೊಬ್ಬನೆಂದು ಪ್ರಭುದೇವರು ನಿರೂಪಿಸಲು, ಅದಕ್ಕೆ ಚಿಕ್ಕದಣ್ಣಾಯಕರು ಕಾಯವಿಡಿದು ನಿಮ್ಮ ಕಂಡೆನೆಂದು ಬಿನ್ನೈಸಿದ ಪ್ರಸ್ತಾವದ ವಚನ. ॥

ಕಾಯದಿಂದ ಲಿಂಗ ದರ್ಶನ, ಕಾಯದಿಂದ ಜಂಗಮ ದರ್ಶನ, ಕಾಯದಿಂದ ಪ್ರಸಾದ ಸಂಪತ್ತು. ಕೂಡಲಚನ್ನಸಂಗಯ್ಯ ಕಾಯದಿಂದ ನಿಮ್ಮ ಕಂಡೆನು. ॥೨೫॥

ಇಂತು ಶರೀರವಿಡಿದು, ನಿಮ್ಮ ಕಂಡೆನೆಂದು ಬಿನ್ನೈಸಲು ಇದಕ್ಕೆ ಪ್ರಭುದೇವರು ಆಚಾರ ಅಂಗವಾಗಿಪ್ಪಡೆ ನೀವಲ್ಲದೆ, ಮತ್ತಾರು ಇಲ್ಲವೆಂದು ಚಿಕ್ಕದಣ್ಣಾಯಕರ ಕೊಂಡಾಡಿದ ವಚನ. ॥

ಅಂಗವಿಡಿದು, ಅಂಗ ಅನಂಗವೆಂಬೆರಡನು ಹೊದ್ದದ ಮಹಿಮನ ನೋಡಾ. ಅಂಗವೆ ಆಚಾರವಾಗಿರ ಬಲ್ಲ, ಆಚಾರವೆ ಅಂಗವಾಗಿರ ಬಲ್ಲನಾಗಿ, ಅಂಗವಿಲ್ಲದ ಪ್ರತಿಮನ ನೋಡಾ. ಆಚಾರ ಸ್ವಾಯತ್ತ, ಆಚಾರವೆ ಪ್ರಾಣ. ಗುಹೇಶ್ವರ ಲಿಂಗದಲ್ಲಿ ನಿನ್ನ ಆಚಾರದ ಭಿಕ್ಷವನಿಕ್ಕು ಚನ್ನಬಸವಣ್ಣಾ. ॥೨೬॥

ನೀನು ಸದಾಚಾರವೆ ಸರ್ವಾಂಗವಾಗಿಪ್ಪೆಯಾಗಿ, ಎನಗೆ ನಿನ್ನ ಸರ್ವಾಚಾರ ಸಂಪತ್ತಿನ ಕಾರುಣ್ಯ ಪ್ರಸಾದವನಿಕ್ಕೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಚಿಕ್ಕದಣ್ಣಾಯಕರು ಆಚಾರವೆಂಬುದು ಸಂಗನ ಬಸವಣ್ಣಂಗುಂಟಲ್ಲದೆ ಎನಗೆಲ್ಲಿಯದೆಂದು ಬಿನ್ನೈಸುವ ಪ್ರಸ್ತಾವದ ವಚನ.

ಗುರುಲಿಂಗದಲ್ಲಿ ಅಂಗವಾಗಿ ಆಚಾರಲಿಂಗ ಪ್ರಸಾದಿಯಾದ. ಆಚಾರ ಲಿಂಗದಲ್ಲಿ ಅವಧಾನಿಯಾಗಿ ಸರ್ವಾಚಾರ ಸಂಪನ್ನನಾದ. ಸರ್ವಾಚಾರ ಸಂಪತ್ತಿನಲ್ಲಿ ಲಿಂಗೈಕ್ಯನಾಗಿಪ್ಪನು. ಕೂಡಲಚನ್ನಸಂಗಯ್ಯನಲ್ಲಿ ಸಂಗನ ಬಸವಣ್ಣನು ಆಚಾರದ ಬಲ್ಲನಲ್ಲದೆ ನಾನೆತ್ತ ಬಲ್ಲೆನಯ್ಯ. ॥೨೭॥

ಮತ್ತಂ, ಆಚಾರವೆಂಬುದು ಅಗೋಚರ ನೋಡಯ್ಯ. ಮಾಡಿದಲ್ಲದೆ ಇಲ್ಲ. ಒಡಲು ಹಿಡಿದರೆ ಹಿಡಿಯಲಿಲ್ಲವಯ್ಯ. ಮಾಟಕೂಟವೆಂಬ

ವಿಷವ ಕಳೆದಿಪ್ಪ ಕೂಡಲಚನ್ನಸಂಗಯ್ಯನ ಕೈಯಲ್ಲಿ ಆಚಾರದನುವ ಸಂಗನಬಸವಣ್ಣ ಬಲ್ಲ ನೋಡಾ ಪ್ರಭುವೆ. ॥೩೮॥

ಆಚಾರದನುವ ಬಸವಣ್ಣ ಬಲ್ಲನೆಂದು, ಚಿಕ್ಕದಣ್ಣಾಯಕರು ಬಿನ್ನೈಸಲು, ಆ ಬಸವಣ್ಣನಾಚಾರವೆಂತಿಪ್ಪುದೆಂದು ಪ್ರಭುದೇವರು ಚಿಕ್ಕದಣ್ಣಾಯಕರ ಬೆಸಗೊಂಬ ಪ್ರಸ್ಥಾವದ ವಚನ. ॥

ಆಯತ ಸ್ವಾಯತ ಸನ್ನಿಹಿತನಾಗಿ, ಆರಾಧ್ಯ ಲಿಂಗದಲ್ಲಿ ಅನುಭಾವಿಯಾಗಿಪ್ಪನು. ಜಂಗಮಲಿಂಗಪ್ರಾಣಿಯಾಗಿ ಪ್ರಾಣ ನಿಃಪ್ರಾಣವಾಗಿಪ್ಪ ಗುಹೇಶ್ವರಲಿಂಗದಲ್ಲಿ ಸಂಗನಬಸವಣ್ಣನ ಆಚಾರದ ಪರಿ ನಿನಗಲ್ಲದೆ ಅರಿಯಬಾರದು. ಎನಗೊಮ್ಮೆ ತಿಳುಹಿಕೊಡಾ ಸಂಗನಬಸವಣ್ಣಾ. ॥೩೯॥

ಇಂತು ಬಸವರಾಜದೇವರ ಆಚಾರದನುವನು ಎನಗೊಮ್ಮೆ ತಿಳುಹಿಕೊಡೆಂದು ಪ್ರಭುದೇವರು ನಿರೂಪಿಸಲು, ಚಿಕ್ಕದಣ್ಣಾಯಕರು ಬಸವರಾಜದೇವರ ಸದಾಚಾರ ವರ್ತನೆಯ ಪ್ರಭುದೇವರೊಡನೆ ಬಿನ್ನೈಸಿದ ಪ್ರಸ್ಥಾವದ ವಚನ. ॥

ಆಚಾರವಂಗ ಸಂಬಂಧವಾದಲ್ಲಿ ಶ್ರೀಗುರು ಸನ್ನಿಹಿತ. ಅರಿವು ಮನ ಲಿಂಗ ಸಂಬಂಧವಾದಲ್ಲಿ ಶಿವಲಿಂಗ ಸನ್ನಿಹಿತ. ಈ ಉಭಯಸನ್ನಿಹಿತವಾದಲ್ಲಿ ಜಂಗಮಲಿಂಗ ಸನ್ನಿಹಿತ. ಇದುಕಾರಣ ಕೂಡಲಚನ್ನಸಂಗ ನಿನ್ನಲ್ಲಿ ತ್ರಿವಿಧ ಸಂಪನ್ನ ಶರಣ ಸಂಗನಬಸವಣ್ಣನು. ॥೪೦॥

ಗುರುವಿನಲ್ಲಿ ಸದಾಚಾರಿ, ಲಿಂಗದಲ್ಲಿ ಶಿವಾಚಾರಿ, ಜಂಗಮದಲ್ಲಿ ಸಮಯಾಚಾರಿ, ಪ್ರಸಾದದಲ್ಲಿ ಬ್ರಹ್ಮಚಾರಿ, ಆಚಾರದಲ್ಲಿ ಸುವಿಚಾರಿ, ಕೂಡಲಚನ್ನಸಂಗ ನಿಮ್ಮ ಶರಣ ಬಸವಣ್ಣನು. ॥೪೧॥

ಮತ್ತಂ, ಮರಕ್ಕೆ ಬಿತ್ತುಹುಟ್ಟಿವರೇನಯ್ಯ? ಬಿತ್ತಿಂಗೆ ಮರ ಹುಟ್ಟಿದರೇನಯ್ಯ? ಮರದ ಬೆಳಸಿನ ಫಲದ ಪರಿಯ ಬೆಸಗೊಳ್ಳಲಿಲ್ಲ. ಸಸಿ ಪಲ್ಲವಿಸಿ ತ್ರಿವಿಧವಾಯಿತ್ತು. ಕೂಡಲಚನ್ನಸಂಗ ನಿಮ್ಮ ಶರಣಬಸವಣ್ಣಂಗೆ. ॥೪೨॥

ಇಂತು ಚನ್ನಬಸವರಾಜದೇವರು ಸಂಗನಬಸವಣ್ಣನ ಸರ್ವಾಚಾರ ಸಂಪತ್ತು ಕೊಂಡಾಡಿ, ಪ್ರಭುದೇವರಿಗೆ ಬಿನ್ನೈಸಲು, ಆ ಪ್ರಭುದೇವರು ಬಸವರಾಜದೇವರು ಮಾಡುವ ದಾಸೋಹವನು ಮಥನಿಸಿ ನೋಡುವ ಪ್ರಸ್ಥಾವದ ವಚನ. ॥

ಲಿಂಗದಲ್ಲಿ ಅಂಗವಾಗಿ, ಅಂಗವಿರಹಿತನಾಗಿ ಫಲವೇನಯ್ಯ? ಜಂಗಮದಲ್ಲಿ ಸನ್ನಿಹಿತನಾಗಿ ದಾಸೋಹವ ಮಾಡಿ ಫಲವೇನಯ್ಯ? ನೀ ನಾನೆಂಬಭಾವವುಳ್ಳನ್ನಕ್ಕರ ಜಂಗಮದಲ್ಲಿ ಸಮಯಾಚಾರಿಯಾಗಿಪ್ಪನ್ನಕ್ಕರ, ಮಾಡುವ ಭಕ್ತಿಗೆ ಭಿನ್ನವದೆ. ಗುಹೇಶ್ವರಲಿಂಗದಲ್ಲಿ ಸಂಗನಬಸವಣ್ಣಂಗೆ ಆಚಾರಣೆ ತಿಳಿಯದು ನೋಡಾ ಚನ್ನಬಸವಣ್ಣಾ! ॥೪೩॥

ಇಂತು ಪ್ರಭುದೇವರು ಬಸವರಾಜದೇವರಿಗೆ ವರ್ತನೆ ತಿಳಿಯದೆಂದು ನಿರೂಪಿಸಲು, ಚಿಕ್ಕದಣ್ಣಾಯಕರು ಆ ಬಸವರಾಜದೇವರ ವರ್ತನೆಯ ನಿಲವನು ಪ್ರಭುದೇವರೊಡನೆ ಬಿನ್ನೈಸುತಿರ್ದ ಪ್ರಸ್ತಾವದ ವಚನ.॥

ಸಂಗವಿಡಿದಡೆ ಸಂಗವಿಡಿದು ನೋಡದಿರಯ್ಯ! ಶರಣಸಂಗ ಸೂತಕಿಯಲ್ಲ. ಲಿಂಗ ಪರಿಚಿತನ ಸಂಗವಂತನೆನ್ನದಿರಯ್ಯ! ಶರಣ ಮನಬಂದಂತೆ ಮಾಡುವ ಅರಸಿ ಸಕಲಾಗಮಾಚಾರ್ಯನಪ್ಪ ಅಹುದಾಗದೆಂಬುದಿಲ್ಲ ನೋಡಯ್ಯ. ಕೂಡಲಚನ್ನಸಂಗ ನಿಮ್ಮ ಶರಣ ಬಸವಣ್ಣನು ಸಂಗಿಯಲ್ಲ ನಿಸ್ಸಂಗಿಯಲ್ಲ. ॥೪೪॥

ಆನೆಂಬುದಿಲ್ಲವಯ್ಯ ಲಿಂಗವೆಂಬ ಮಹಂತಂಗೆ. ಅಳಿಯನುಳಿಯ ನೋಡಾ. ಮಿಂಚಿನ ಗೊಂಚಲಂತೆ ಹಿಂದೆ ರೂಪಾಗಿ ತೋರುತ್ತಿರ್ಪುದು. ಶರಣನೊಡಲುಗೊಂಡಡೆ ಸಾಮಾನ್ಯನೆ? ಪ್ರಕೃತಿಗುಣ ಭಿನ್ನಭಾವಿಯಲ್ಲ. ಕೂಡಲಚನ್ನಸಂಗ ನಿಮ್ಮ ಶರಣಬಸವಣ್ಣನ ಪರಿ ಬೇರೆ. ॥೪೫॥

ಮತ್ತಂ, ಅನಾಯಾಸದಿಂದ ಮನೆಯ ಮಾಡಿ ನಿರಾಯಾಸದಿಂದ ಪರಮಸುಖಿ. ರೂಹಿಸುವಲ್ಲಿ ರೂಪಾಧಿಕ. ನೋಡುವಲ್ಲಿ ನೋಟ ಘನ. ಇಂತಹ ಸಹಜ ಸಂಗಿಯ ನಿಲವಿನ ಪರಿ. ಉದರದೊಳಗಣ ಬಿಂಬ ಉದಯ ರತ್ನಸಂಚದಂತೆ ಕೂಡಲಚನ್ನಸಂಗ ನಿಮ್ಮ ಶರಣನ ಪರಿ ಬೇರೆ. ॥೪೬॥

ಮತ್ತಂ, ಶರಣನು ದೃಷ್ಟಾದೃಷ್ಟವನರಿಯನು. ಸಾವಯವ ನಿರವಯವನೇನೆಂದು ವಿವರಿಸಿ ನುಡಿಯನು. ತಾನು ಸ್ವತಂತ್ರನಾಗಿ ಭಾವರಹಿತನು. ವಿಕೃತ ವೇಷದಿಂದ ಸುಕೃತವ ಜೋಡಿಸುವನಲ್ಲ. ಪ್ರಕೃತಿಗುಣವಿಡಿದು ಮೂರ್ತಿಯಾದ ಉಪಜೀವಿಕನಲ್ಲ. ಕೂಡಲಚನ್ನಸಂಗ ನಿಮ್ಮ ಶರಣ ಸಾರಾಯಸನುಮತನು. ॥೪೭॥

ದೇಹಿಯಲ್ಲ ನಿರ್ದೇಹಿಯಲ್ಲ. ಬೋಧಕನಲ್ಲ ನಿರ್ಬೋಧಕನಲ್ಲ, ಕಾಮಿಯಲ್ಲ ನಿಃಕಾಮಿಯಲ್ಲ. ಆಸೆವಿಡಿದು ಬಂದ ಅನುಮಿಷನಲ್ಲ. ಅವ

ಗುಣವಿಲ್ಲದ ನಿರ್ಗುಣಿ ನೋಡಯ್ಯ ಕೂಡಲಚನ್ನಸಂಗ ನಿಮ್ಮ ಶರಣ ನೋಡಯ್ಯ. ॥೪೮॥

ಮೂರ್ತನಲ್ಲ, ಅಮೂರ್ತನಲ್ಲ. ಲಿಂಗದಲ್ಲಿ ಪ್ರಾಣಸಂಚಿತ, ಪ್ರಾಣದಲ್ಲಿ ಪ್ರಸಾರ ಸಂವರಣೆ, ಪ್ರಸಾದದಲ್ಲಿ ಕಾಯಾಶ್ರಿತನು. ಲೋಕಲೌಕಿಕ ಪ್ರಕಾರದುದಯನಲ್ಲ ಕೂಡಲಚನ್ನಸಂಗ ನಿಮ್ಮ ಶರಣನು. ॥೪೯॥

ಮತ್ತಂ, ಶರಣ ದೃಷ್ಟಾದೃಷ್ಟ ಕಾಣಯ್ಯ. ಮುಟ್ಟದ ಮುಟ್ಟುವನು ಕಾಣಯ್ಯ. ಆಗಿನ ಆಗು ಕಾಣಯ್ಯ. ಭೇದದ ಭೇದ ಕಾಣಯ್ಯ. ಅರಿವಿನ ಅರಿವು ಕಾಣಯ್ಯ. ಲಿಂಗದಲ್ಲಿ ಹಿಂಗದ ಬಿಂದು ಕೂಡಲಚನ್ನಸಂಗ ನಿಮ್ಮಲ್ಲಿ ಬಸವಣ್ಣ ಕಾಣಯ್ಯ. ॥೫೦॥

ಮತ್ತಂ, ಸಕಳ ನಿಃಕಳನಯ್ಯ. ನಿಃಕಳ ಸಕಳನಯ್ಯ. ಸಕಳನಾಗಿ ಸಂಸಾರಿಯಲ್ಲ. ನಿಃಕಳನಾಗಿ ವೈರಾಗಿಯಲ್ಲ. ಸಂಸಾರಿಯಲ್ಲದ ಸಂಗವು. ವೈರಾಗಿಯಲ್ಲದ ನಿಃಸಂಗವು. ಉಭಯ ಸಂಗದಿಂದ ಮಹತ್ತನೈದಿಪ್ಪನಾಗಿ, ॥ ಸಾಕ್ಷಿ॥ ಸ್ಥಾವರಂ ಜಂಗಮಶ್ಚೈವ। ದ್ವಿವಿಧಂಲಿಂಗಮುಚ್ಯತೆ ॥ ಎಂದುದಾಗಿ, ಕೂಡಲಚನ್ನಸಂಗನಂತಿದ್ದಂತೆ ಇಪ್ಪನಲ್ಲದೆ ನಿಮ್ಮ ಶರಣ ಕ್ಷೀಣನಲ್ಲ. ॥೫೧॥

ಇಂತು ಚಿಕ್ಕದಣ್ಣಾಯಕರು ಬಸವರಾಜದೇವರ ನಿಲವಿನ ಮಹಾತ್ಮೆಯನು ನಾನಾವಿಧದಿಂ ಸ್ತೋತ್ರಮಂ ಮಾಡುತ್ತ ಪ್ರಭುದೇವರಿಗೆ ಬಿನ್ನಪಂಗೈಯ್ಯಲು, ಆ ಪ್ರಭುದೇವರು ಪ್ರಸನ್ನರಾಗಿ, ಚಿಕ್ಕದಣ್ಣಾಯಕರ ಕೊಂಡಾಡಿದ ಪ್ರಸ್ಥಾವದ ವಚನ. ॥

ಅಂಗವೆಂಬ ಸಂಸಾರದೊಳಗೆ ಸವದರೆಲ್ಲರು. ಶಿವನನರಿವರೆ ಮನವೆಂಬ ಸಂಕಲ್ಪದ ಕುಣಿಗೆ ಒಳಗಾದರೆಲ್ಲರು. ಮಾಯೆಯ ಹೊಡೆಗಿಚ್ಚುಗೆಲಬಲ್ಲರೆ ಗುಹೇಶ್ವರಲಿಂಗದಲ್ಲಿ ಸರ್ವಸಂದೇಹವಳಿದಿಪ್ಪ ಚನ್ನಬಸವಣ್ಣಂಗೆ ನಮೋ ನಮೋ ಎಂಬೆನು. ॥೫೨॥

ಮತ್ತಂ, ತಾನೆಂದೆನಲೊಲ್ಲದೆ ಗುರುವೆಂದು ಹಿಡಿದವನ, ಗುರುವೆಂದಲ್ಲಿ ನೀನೆಂದು ನಡೆವವನ, ನೀನೆಂದಲ್ಲಿಯೆ ಲಿಂಗಜಂಗಮದ ಸಕೀಲ ಸಂಬಂಧವ ನೆಲೆಗೊಳಿಸಿದವನ ಲಿಂಗಜಂಗಮದಲ್ಲಿ ತನ್ನ ಮರೆದು, ಕರಿಗೊಂಡ ಲಿಂಗೈಕ್ಯನ ಗುಹೇಶ್ವರಲಿಂಗದಲ್ಲಿಪ್ಪ ಚನ್ನಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು. ॥೫೩॥

ಇಂತು ಪ್ರಭುದೇವರು ಚಿಕ್ಕದಣ್ಣಾಯಕರ ಸ್ತೋತ್ರಮಂ ಮಾಡಲು ಆ ಚಿಕ್ಕದಣ್ಣಾಯಕರು ತಮ್ಮ ಸಂಸಾರ ಭ್ರಾಂತಿಯು ಪ್ರಭುದೇವರಿಂದ ತಿಳಿದು, ಕೃತಾರ್ಥನಾದೆನೆಂದು ಸ್ತೋತ್ರಮಂ ಮಾಡಿದ ಪ್ರಸ್ಥಾವದ ವಚನ. ॥

ಇಲ್ಲದ ಸಂಸಾರ ಕಣ್ಣ ಮುಂದೆ ರೂಪಾಗಿ ಕಾಡುತ್ತಿರ್ದರೆ ಸುಜ್ಞಾನ ವೆಂಬ ಅಂಜನವ ನಚ್ಚಿ ಸಕಲ ಭ್ರಮೆ ಎಂಬ ಕತ್ತಲೆಯ ಕಳೆದು, ನಿಜಲಿಂಗಸಂಬಂಧವ ನೆಲೆಗೊಳಿಸಿ ನಿತ್ಯದಲ್ಲಿ ಅಜ್ಯೋತಿದನಾಗಿ ಕೂಡಲ ಚನ್ನಸಂಗಯ್ಯನಲ್ಲಿ ಪ್ರಭುದೇವರ ಶ್ರೀಪಾದಕ್ಕೆ ನಮೋ ನಮೋ ಎಂಬೆನು. ॥೫೪॥

ಹೀಗೆಂದು ಸ್ತೋತ್ರಂಗೈದು ಬಿನ್ನಪಂ ಮಾಡಲು, ಮರಳಿ ಪ್ರಭು ದೇವರು ಚಿಕ್ಕದಣ್ಣಾಯಕರ ಕೊಂಡಾಡಿದ ಪ್ರಸ್ಥಾವದ ವಚನ. ॥

ನರಲೋಕದ ನರರುಗಳೆಲ್ಲರು ನರಸಂಸಾರಕ್ಕೊಳಗಾದರು. ಸುರ ಲೋಕದ ಸುರರುಗಳೆಲ್ಲರು ಸುರಸಂಸಾರಕ್ಕೊಳಗಾದರು. ಮುನಿಲೋ ಕದ ಮುನಿಗಳೆಲ್ಲರು ತಪೋಸಂಸಾರಕ್ಕೊಳಗಾದರು. ಜಂಗಮವ ಪೂಜಿ ಸುವರೆಲ್ಲರು ಸಾಯುಜ್ಯಸಂಸಾರಕ್ಕೊಳಗಾದರು. ರುದ್ರಲೋಕದ ರುದ್ರ ಗಣಂಗಳೆಲ್ಲರು ರುದ್ರಪದವೆಂಬ ಸಂಸಾರಕ್ಕೊಳಗಾದರು. ಲಿಂಗವ ಧರಿ ಸಿದವರೆಲ್ಲರು ಲಿಂಗಸಂಸಾರಕ್ಕೊಳಗಾದರು. ಪಾದೋದಕ ಪ್ರಸಾದ ಸಂಬಂಧಿಗಳೆಲ್ಲರು ಪ್ರಸಾದಸಂಸಾರಕ್ಕೊಳಗಾದರು. ಗುಹೇಶ್ವರಲಿಂಗ ದಲ್ಲಿ ಸರ್ವಸಂಸಾರ ವಿರಹಿತನು ಚನ್ನಬಸವಣ್ಣಂಗೆ ನಮೋ ನಮೋ ಎಂಬೆನು. ॥೫೫॥

ಇಂತು ಪ್ರಭುದೇವರು ಸ್ತೋತ್ರಮಂ ಮಾಡಲು, ಚಿಕ್ಕದಣ್ಣಾಯ ಕರು ತಾವು ಪ್ರಭುದೇವರ ಬೆರಸಿ ಕೃತಾರ್ಥರಾದೆವೆಂಬ ಭಾವವು ತೋರಿ ಆ ಪ್ರಭುದೇವರ ಕೊಂಡಾಡಿದ ಪ್ರಸ್ಥಾವದ ವಚನ.

ಎನ್ನ ಸಂಸಾರ ಸೂತಕವ ತೊಡೆದು ನಿಜಲಿಂಗದಲ್ಲಿ ನಿರಹಂಕಾರ ವೆಂಬ ಘನವ ತೋರಿದನಯ್ಯ ಒಬ್ಬ ಶರಣನು. ಎನ್ನ ಗಾರುವಿಲ್ಲವೆಂದು ಪ್ರಭುದೇವರೆಂಬ ಒಬ್ಬ ಶರಣನ ಕೃತಾರ್ಥನ ಮಾಡಿ, ಎನ್ನ ಕಣ್ಣಮುಂದೆ ಸುಳಿದನಯ್ಯ ಒಬ್ಬ ಶರಣನು. ಆ ಶರಣನ ಕೃಪೆಯಿಂದ ಪ್ರಭುದೇವ ರೆಂಬ ಘನವ ಕಂಡು ಮನ ಲೀಯವಾಗಿ, ಘನಘನ ಒಂದಾದ ಕಾರಣ

ಕೂಡಲಚನ್ನಸಂಗಯ್ಯನಲ್ಲಿ ಅಲ್ಲಯ್ಯನೆಂಬ ಮಹಿಮಗೆ ನಮೋ ನಮೋ ಎನುತಿರ್ದೆನು. ॥೫೬॥

ಇಂತು ಚಿಕ್ಕದಣ್ಣಾಯಕರು ತಮಗು ಪ್ರಭುವಿಗು ಒಂದೆ ಸಾಂಪ್ರದಾಯದಲ್ಲಿ ನಿಜಪದವು ಸಾಧ್ಯವಾಯಿತ್ತೆಂದು, ಬಿನ್ನಪಂಗೆಯ್ಯಲು, ಇದಕ್ಕೆ ಪ್ರಭುದೇವರು ಚಿಕ್ಕದಣ್ಣಾಯಕರೊಡನೆ ಇಬ್ಬರಿಗು ಒಂದೆ ಠಾವಿನಲ್ಲಿ ಸಾಂಪ್ರದಾಯದಲ್ಲಿ ನಿಜಃವಳವಟ್ಟ ಪರಿ ಎಂತೆಂದು ಬೆಸಗೊಂಬ ಪ್ರಸ್ಥಾವದ ವಚನ. ॥

ತಿಂಬ ಗಂಜಿಯ ಮೇಲೆ ಉಗುರು ಬಿದ್ದಂತಾಯಿತ್ತು. ಅರಸುವ ಬಳ್ಳಿ ಕಾಲ ಸುತ್ತಿದಂತಾಯಿತ್ತು. ನಾನು ಬಯಸುವ ಬಯಕೆ, ತಾರ್ಕಣ್ಯ ಬಂದಿತ್ತು. ಗುಹೇಶ್ವರಲಿಂಗದಲ್ಲಿ ಎನಗು ನಿನಗು ಒಂದಾದ ಪರಿ ಎಂತು. ಹೇಳಾ ಚನ್ನಬಸವಣ್ಣಾ? ॥೫೭॥

ಹೀಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಚಿಕ್ಕದಣ್ಣಾಯಕರು ಬಿನ್ನೈಸಿದ ಪ್ರಸ್ಥಾವದ ವಚನ. ॥

ಕಾಯ ಒಂದು ಪ್ರಾಣ ಒಂದು ಭಾವ ಒಂದು ಒಂದಲ್ಲದೆ ಎರಡುಂಟೆ? ಗುರು ಒಂದು ಲಿಂಗ ಒಂದು ಉಪದೇಶ ಒಂದು. ಕೂಡಲಚನ್ನಸಂಗಯ್ಯನಲ್ಲಿ ಶರಣ ಬಸವಣ್ಣನ ಗರುಡಿಯಲ್ಲಿ ಇಬ್ಬರಿಗೆಯು ಅಭ್ಯಾಸ ಒಂದೆ ಕಾಣಾ ಪ್ರಭುವೆ. ॥೫೮॥

ಹೀಗೆಂದು ಚಿಕ್ಕದಣ್ಣಾಯಕರು ಬಿನ್ನಪಂಗೈಯ್ಯಲು, ಆ ಪ್ರಭುದೇವರು ಬಸವಣ್ಣಂಗೆ ನಾವಿಬ್ಬರು ಶಿಷ್ಯರಾದೆವೆಂಬುದ ಬೆಸಗೊಂಬ ಪ್ರಸ್ಥಾವದ ವಚನ. ॥

ಒಂದ ನಾಡ ಹೋದಲ್ಲಿ ಮತ್ತೊಂದಾಯಿತ್ತೆಂಬ ಮಾತು ದಿಟವಾಯಿತ್ತು ನೋಡಯ್ಯ. ನಿಮ್ಮ ಒಡತಣ ಅನುಭಾವದಿಂದ ಗುರುಮುಖ ಸಾಧ್ಯವಾದುದಯ್ಯ. ಗುಹೇಶ್ವರಲಿಂಗದಲ್ಲಿ, ನನಗು ನಿನಗು ಉಪದೇಶ ಒಂದಾದ ಭೇದವ ಹೇಳಾ ಚನ್ನಬಸವಣ್ಣಾ? ॥೫೯॥

ಹೀಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಚಿಕ್ಕದಣ್ಣಾಯಕರು ಇಬ್ಬರಿಗೆಯು ಸಾಂಪ್ರದಾಯ ಒಂದಾದ ಭೇದವ ಬಿನ್ನೈಸುವ ಪ್ರಸ್ಥಾವದ ವಚನ. ॥

ಅಂಗ ಸಂಸಾರ ವಿರಹದೊಳು ಸವೆದು ಲಿಂಗವು ಲಿಂಗವನವ ಗ್ರಹಿಸಿಕೊಂಡು ಮೃತ್ಯುಕ ಪಂಜರದೊಳಗೆ ಭುಜಂಗ ತಲೆ ಎತ್ತಿ ನೋಡಲು, ಥಳಥಳನೆ ಹೊಳೆವ ಮಾಣಿಕ್ಯದ ಬೆಳಗುಗಳೆಸೆಯೆ ಸದ್ಯೋಜಾತನ ಜಟಾಮಕುಟವಸುತ್ತಿರ್ದ ಫಣೀಂದ್ರನಲ್ಲದೆ ಮತ್ತಾರು ಅಲ್ಲವೆಂದು, ಶಿಖರವ ಮೊದಲುಗೊಂಡು ಆಗುಳಿಸಲು, ಸುತ್ತಿರ್ದ ಫಣಿಸೂತ್ರವ ಕಂಡು ಚಕ್ಕನೆ ಕವವ ತೆರೆಯಲು, ದೃಷ್ಟಿ ದೃಷ್ಟವಾದನುಮಿಷನ ಕರಸ್ಥಲವ ಕಂಡು, ದೃಷ್ಟ ತನದಲ್ಲಿ ಲಿಂಗವ ತೆಗೆದುಕೊಂಡರೆ, ಸಂದು ಕಳಸಂಗಳು ತಪ್ಪಿ ಅಸ್ಥಿಗಳು ಬಳಬಳನುದುರಲು, ಆತನ ಬೆರಗು ನಿಮ್ಮ ಹೊಡೆದು ಖ್ಯಾತಿಯಾಯಿತ್ತು ನೋಡಯ್ಯ. ಅಲ್ಲಮಪ್ರಭುವೆಂಬ ನಾಮ ನಿನಗೆ ಭಕ್ತಿದಳದುಳದಿಂದೆ ಬಂದಿಕಾರನಾಗಿ ಬಂದು ಹೊಕ್ಕಡೆ ಬದನೆಯ ಕಾಯುಗಳು ಬಾಣಲಿಂಗವಾಗವೆ ನಮ್ಮ ಬಸವಣ್ಣನ ದೃಷ್ಟಿ ತಾಗಲು? ಇದುಕಾರಣ ಕೂಡಲಚನ್ನಸಂಗನಲ್ಲಿ ಅನುಮಿಷ ಪ್ರಭುವಿಂಗೆ ಬಸವಣ್ಣ ಗುರುವಾದ ಕಾರಣ ನಾನು ನಿನಗೆ ಚಿಕ್ಕ ತಮ್ಮ ಕೇಳಾ ಪ್ರಭುವೆ. ॥೬೦॥

ಅನುಮಿಷಂಗೆ ಲಿಂಗವ ಕೊಟ್ಟಾತ ಬಸವಣ್ಣ. ಆ ಲಿಂಗ ನಿನಗೆ ಸೇರಿತ್ತಾಗಿ ಬಸವಣ್ಣನ ಸಾಂಪ್ರದಾಯವ ಕಂದನು ನೋಡಾ ನೀನು. ಭಕ್ತಿ ದಳದುಳದಿಂದ ಚನ್ನಸಂಗಮನಾಥನೆಂಬ ಲಿಂಗವನವಗ್ರಹಿಸಿಕೊಂಡೆನಾಗಿ, ಬಸವಣ್ಣನ ಸಾಂಪ್ರದಾಯದ ಕಂದನು ನೋಡಾ ನಾನು. ಇಂತೀ ಇಬ್ಬರಿಗೆಯೂ ಒಂದೆ ಕುಳ ಸ್ಥಳವಾದ ಕಾರಣ ಕೂಡಲ ಚನ್ನಸಂಗಯ್ಯನಲ್ಲಿ ಬಸವಣ್ಣನ ಮಹಮನೆಯ ಪ್ರಸಾದ ಇಬ್ಬರಿಗೆಯೂ ಒಂದೆ ಕಾಣಾ ಪ್ರಭುವೆ. ॥೬೧॥

ಹೀಗೆಂದು ಚಿಕ್ಕದಣ್ಣಾಯಕರು ಬಿನ್ನೈಸಲು, ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರತ್ಯುತ್ತರ. ॥

ಕಿರಿಯರಾದಡೇನು? ಹಿರಿಯರಾದಡೇನು? ಅರಿವಿಂಗೆ ಹಿರಿದು ಕಿರಿದುಂಟೆ? ಆದಿ ಅನಾದಿ ಇಲ್ಲದಂದು ಅಜಾಂಡ ಬ್ರಹ್ಮಾಂಡ ಕೋಟಿಗಳು ದಯವಾಗದಂದು, ಗುಹೇಶ್ವರ ಲಿಂಗದಲ್ಲಿ ನೀನೊಬ್ಬನೆ ಮಹಾಜ್ಞಾನಿ ಎಂಬುದ ಕಾಣಬಂದಿತ್ತು ಕಾಣಾ ಚನ್ನಬಸವಣ್ಣಾ. ॥೬೨॥

ಇದಕ್ಕೆ ಚಿಕ್ಕದಣ್ಣಾಯಕರ ಪ್ರತ್ಯುತ್ತರ. ॥

ಹಾಲುಂಡ ಸವಿಯ ಮೇಲುಂಡ ಪಂಕ್ತಿಯ ಹೇಳಬಹುದಲ್ಲದೆ ಸುಖ ಸೋಂಕಿನ ಸ್ವಾನುಭಾವವ ಹೇಳಬಾರದು ಕೇಳಬಾರದು. ಇಂಬಿನ ಸೋಂಕು ಸಂಬಂಧವಳಿದ ಬಳಿಕ ಉಪಚಾರ ಉಂಟೆ ಕೂಡಲ ಚನ್ನ

ಸಂಗಯ್ಯನ ಅನುಹಿಂಪಲಿ ಅರಿದೆನಲ್ಲದೆ ಎನಗೆ ಬೇರೆ ಸ್ವತಂತ್ರವಿಲ್ಲ ಕೇಳಯ್ಯಾ. ॥೬೩॥

ನಾನು ನಿಮ್ಮ ಹಿಡಿದು ಅರಿದೆನಲ್ಲದೆ, ಸ್ವತಂತ್ರ ಜ್ಞಾನಿಯಲ್ಲವೆಂಬು ಚಿಕ್ಕದಣ್ಣಾಯಕರು ಬಿನ್ನಪಂಗೈಯ್ಯಲು, ಇದಕ್ಕೆ ಪ್ರಭುದೇವರು ನಿರೂಪಿಸಿವ ಪ್ರತ್ಯುತ್ತರ. ॥

ಲಿಂಗವಿಡಿದು ಅರಿದರಿವು ಅರಿವಲ್ಲ, ಗುರುವಿಡಿದು ಅರಿದರಿವು ಅರಿವಲ್ಲ. ಗುರುವಿಡಿದು ಲಿಂಗ ಉಂಟೆಂದು ಕಲ್ಪಿತ ತನ್ನಿಂದ ತಾನಹುದಲ್ಲದೆ ಗುಹೇಶ್ವರಲಿಂಗದಲ್ಲಿ ಹಂಗು ಹರಿಯದನಕ್ಕರ ತಾನಾಗಬಾರದು ಕಾಣಾ ಚೆನ್ನಬಸವಣ್ಣ. ॥೬೪॥

ಹೀಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಚಿಕ್ಕದಣ್ಣಾಯಕರ ಪ್ರತ್ಯುತ್ತರ. ॥

ಗುರುವಿಲ್ಲದ ಲಿಂಗ ನಿನಗೆಲ್ಲಿಯದಯ್ಯಾ. ಕೊಂದೆ ನಿಮ್ಮಯ್ಯನಕೊಂಡೆ. ಲಿಂಗವನು ಅಂದು ನಿನಗೆ ಅನುಮಿಷ ಗುರುವಾದುದನರಿಯಾ ಕೂಡಲ ಚೆನ್ನಸಂಗಯ್ಯನಲ್ಲಿ ಮೂರುಲೋಕವರಿಯೆ ಅಲ್ಲಮ ಪ್ರತಗೇಡಿ. ॥೬೫॥

ಅನುಮಿಷನ ಕೊಂದು ಲಿಂಗವಕೊಂಡೆ ಕಾರಣ ನೀನು ಗುರುದ್ರೋಹಿ ಎಂದು ಚಿಕ್ಕದಣ್ಣಾಯಕರು ನುಡಿಯಲು, ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರತ್ಯುತ್ತರ. ॥

ಗುರುವಿನ ಪ್ರಾಣಲಿಂಗದಲ್ಲಿ ಲಿಯ್ಯವಾದ ಬಳಿಕ ಆ ಲಿಂಗವೆನ್ನ ಕರಸ್ಥಲಕ್ಕೆ ಬಂದಿತ್ತು ನೋಡಾ. ಇದ್ದಾನೆ ನೋಡಾ ಎನ್ನ ಗುರುವು ಅನುಮಿಷನೆನ್ನ ಕರಸ್ಥಲದಲ್ಲಿ ಇದ್ದಾನೆ ನೋಡಾ ಎನ್ನ ಗುರುವು ಅನುಮಿಷನೆನ್ನ ಜ್ಞಾನದೊಳಗೆ ಇದ್ದಾನೆ ನೋಡಾ! ಎನ್ನ ಗುರುವಿನ ಗುರುವು ಬಸವಣ್ಣನೆನ್ನ ಕಂಗಳ ಮುಂದೆ ಗುಹೇಶ್ವರ ಸಾಕ್ಷಿಯಾಗಿ ಎನ್ನ ಮೇಲೆ ಗುರುದ್ರೋಹವಿಲ್ಲ ಕಾಣಾ ಚೆನ್ನಬಸವಣ್ಣ. ॥೬೬॥

ಹೀಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಚಿಕ್ಕದಣ್ಣಾಯಕರು ಬಿನ್ನೈಸಿದ ಪ್ರತ್ಯುತ್ತರ. ॥

ನೋಡುವದೊಂದು ನುಡಿಸಿಕೊಂಬುವದೊಂದು ಎನ್ನಲ್ಲಿ ನಿನ್ನಲ್ಲಿ ಎರಡುಂಟಲಾ. ಕರಸ್ಥಲವಲ್ಲಿ ಒಂದು, ಮನಸ್ಥಲವಲ್ಲಿ ಒಂದು, ಇನ್ನು

ನಿನ್ನಲ್ಲಿ ಎರಡುಂಟೆಲಾ ಕೂಡಲಚನ್ನಸಂಗಯ್ಯನಲ್ಲಿ ಗುಹೇಶ್ವರನೆಂಬ ಲಿಂಗವು ನಿನಗೆಂತು ಸಾಧ್ಯವಾಯಿತ್ತು ಹೇಳಾ ಪ್ರಭುವೆ? ॥೬೭॥

ಹೀಗೆಂದು ಚಿಕ್ಕದಣ್ಣಾಯಕರು ಬಿನ್ನೈಸಲು, ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರತ್ಯುತ್ತರ. ॥

ಕರಸ್ಥಲದ ಲಿಂಗ ಮನಸ್ಥಲಕ್ಕೆ ವೇದ್ಯನಾಗಿ, ಮನಸ್ಥಲದ ಲಿಂಗ ಮಹಾಸ್ಥಲಕ್ಕೆ ವೇದ್ಯವಾಗಿ, ಮಹಾಸ್ಥಲವೆನ್ನ ಸರ್ವಾಂಗವೇದ್ಯವಾದ ಬಳಿಕ ಇನ್ನು ಭಿನ್ನಭಾವಕ್ಕೆ ತೆರಹುಂಟೆ ಹೇಳಾ? ಗುಹೇಶ್ವರನೆಂಬ ಪ್ರಾಣಲಿಂಗವು ಬೆರಸಿ ಸಮಧಾತುವಾದ ಬಳಿಕ ಎರಡೆಂಬುದಿಲ್ಲ ನೋಡಾ ಚನ್ನಬಸವಣ್ಣಾ. ॥೬೮॥

ಮತ್ತಂ, ಲಿಂಗ ಪ್ರಾಣ, ಪ್ರಾಣ ಲಿಂಗವಾಯಿತ್ತು. ಅಂಗ ಲಿಂಗ, ಲಿಂಗ ಅಂಗವಾಯಿತ್ತು. ಗುಹೇಶ್ವರ ಲಿಂಗದಲ್ಲಿ ಸರ್ವಾಂಗ ಪ್ರಾಣಲಿಂಗವಾಯಿತ್ತು ಕೇಳಾ ಚನ್ನಬಸವಣ್ಣ. ॥೬೯॥

ಆ ಪ್ರಸ್ತಾವದೊಳು ಪ್ರಭುದೇವರು ಪ್ರಾಣಲಿಂಗ ಸಂಬಂಧದ ಭೇದಮಂ ನಿರೂಪಿಸಿದ ಪದಂಗಳು.

### ರಾಗ- ಮಧು ಮಾಧವಿ

ನುಡಿಯು ಗಡದಣ ಬೆಳಗು ಮರುತ ಪರಿಮಳದಂತೆ ಭಾವವಿಲ್ಲದ ಬಯಲು ಪರವು ತಾನೆ ಅರಿವು ಕುರುಹಿನ ಮರಹು ತೆರಹಿಲ್ಲದಾ ಘನವು ನಿಂದ ನಿಜ ಪದದಿಂದ ಪ್ರಭೆಯಾದುದು ॥ಪಲ್ಲ॥ ಎಳೆಯ ಮಾಣಿಕದಂತೆ ಹೊಳೆವ ಜ್ಞಾನದ ಜ್ಯೋತಿ, ನವನಾಳದೊಳು ಪ್ರಾಣಲಿಂಗ ಭರಿತ ॥ ಪಿಂಡ ಬ್ರಹ್ಮಾಂಡವನು ಮೀರಿತೋರುವ ವಚನ ಗಗನದುದಯದ ಮೇಲೆ ಘನಕೆ ಗಮನಾ. ॥೧॥ ಆಕಾಶದಿಂದತ್ತಲಾರು ಬಲ್ಲವರಿಲ್ಲ ಪಾತಾಳದ ಪ್ರಮಾಣ ಕಾಂಬರಾರು? ಆತುಮನ ಹಿಡಿದು ಪರಮಾತುಮನ ಪರಿಭಾವನಾಂತು ನೋಡುವ ನೋಟ ಘನಕೆ ಗಮನಾ. ॥೨॥ ಇರುಳು ಮನವನೆ ನುಂಗಿ ಹಗಲು ಘನವನೆ ನುಂಗಿ, ಮಾತು ಮಥವನೆ ನುಂಗಿದಾತ ಭರಿತಾ ನೀತಿ ನಿಜ ನಿಂದಲ್ಲಿ ನಿಜದ ನಿರ್ಮಳ ಜ್ಯೋತಿ ಪ್ರಾಣಲಿಂಗದ ಘನ ಪ್ರಮಾಣಿಲ್ಲವೊ ॥೩॥ ಆರು ದರುಶನವೊಡೆಯನಂತರಂಗದ ಲಿಪ್ಪನಾರಿಗಾದರು ಗಗನ ಭುವನ ಒಂದೆ ಹೃದಯ ಕಮಲದ ಬೆಳಗು ಪರಬ್ರಹ್ಮನಲ್ಲಿಯೆ ತುಂಬಿ, ಪರಿಣಾಮ ಪರಮಪದವಿಯ ತೋರಿತು. ॥೪॥ ಧರೆಗೆ ನಿಷ್ಕ್ರಿಯು ಇಲ್ಲ.

ಉಪಯಕ್ಕೆ ಕನಸಿಲ್ಲ ಅಗ್ನಿ ಕಳವಳಕೆ ಒಳಗಾಗದೆಂತೋ ಸುಳಿವ ಪವನನು ತಾನು ತಾಮಸಕ್ಕೊಳಗಾಗ ಬಯಲಿಂಗೆ ಭ್ರಮೆಯುಂಟೆ ಗುಹೇಶ್ವರಾ. ॥೨೫॥

ಹೀಗೆಂದು ಪ್ರಭುದೇವರು ತಮ್ಮ ಪ್ರಾಣಲಿಂಗದ ನಿರ್ಣಯಮಂ ನಿರೂಪಿಸಲು, ಇದಕ್ಕೆ ಚನ್ನಬಸವದೇವರು ಬಿನ್ನೈಸಿದ ಪ್ರತ್ಯುತ್ತರ. ॥

ಮುಟ್ಟಿದ ಮುನ್ನ ಗುರು ಉಂಟು ಲಿಂಗ ಉಂಟು ಜಂಗಮ ಉಂಟು ಪ್ರಸಾದ ಉಂಟು. ಮುಟ್ಟಿದ ಬಳಿಕ ಗುರುವಿಲ್ಲ, ಲಿಂಗವಿಲ್ಲ, ಜಂಗಮ ವಿಲ್ಲ, ಪ್ರಸಾದವಿಲ್ಲ. ಕೂಡಲ ಚನ್ನಸಂಗಯ್ಯನಲ್ಲಿ ಸ್ವಯವಿಲ್ಲದೆ ಪರವಿಲ್ಲ ವೆಂಬುದು ನಿಮ್ಮಲ್ಲಿ ಕಾಣ ಬಂದಿತ್ತು ಕಾಣಾ ಪ್ರಭುವೆ. ॥೭೫॥

ಹೀಗೆಂದು ಚಿಕ್ಕದಣ್ಣಾಯಕರು ಬಿನ್ನೈಸಲು, ಪ್ರಭುದೇವರು ನಿರೂ ಪಿಸಿದ ಪ್ರತ್ಯುತ್ತರ. ॥

ಮನ ಮನ ಬೆರಿಸಿದನುಭಾವ ಘನಕ್ಕೆ ಘನ ಒಂದಾಯಿತ್ತು ನೋಡಾ! ಅದು ತನ್ನಲ್ಲಿ ತಾನು ತೃಪ್ತಿಯಾದ ನಿಜವು ನಿರ್ಣಯದ ಮೇಲೆ ನಿರ್ಧರವಾಯಿತ್ತು ನೋಡಾ! ಗುಹೇಶ್ವರಲಿಂಗದಲ್ಲಿ ಚನ್ನಬಸವಣ್ಣನಿಂದೆ ಸುಖಿಯಾದೆನು. ॥೭೬॥

ಹೀಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಚನ್ನಬಸವರಾಜ ದೇವರು ಪ್ರಭುದೇವರ ಸ್ತೋತ್ರಮಂ ಮಾಡಿ ತಮ್ಮ ಪರಿಣಾಮವ ಹೇಳಿದ ಪ್ರಸ್ತಾವದ ವಚನ. ॥

ಅರುಹಿನ ತೃಪ್ತಿಗೆ ಅನುಭಾವದಾಶ್ರಯ. ಲಿಂಗದ ಅನುಭಾವದಿಂದೆ ನಿಮ್ಮ ಕಂಡೆನು. ನಿಮ್ಮ ಕಂಡೆನ್ನ ಮರೆದೆ ಕಾಣಾ ಪ್ರಭುವೆ ಕೂಡಲ ಚನ್ನಸಂಗಮದೇವಾ. ॥೭೭॥

ನಿಮ್ಮ ಸಂಗದಿಂದಲಾನು ಲಿಂಗೈಕ್ಯವಾದೆನೆಂದು, ಚಿಕ್ಕದಣ್ಣಾಯ ಕರು ಬಿನ್ನೈಸಲು, ಇದಕ್ಕೆ ಪ್ರಭುದೇವರು ನಿಮ್ಮಿಂದ ಲಿಂಗೈಕ್ಯರಾದೆ ವೆಂದು ನಿರೂಪಿಸಿದ ಪ್ರಸ್ತಾವದ ವಚನ. ॥

ನಚ್ಚು ಮಚ್ಚಿನ ಲಿಂಗವಗ್ರಹಿಸುವಲ್ಲಿ ಮಚ್ಚು ಒಳಕೊಂಡಿತ್ತು ನೋಡಾ! ಕರ್ಪುರದ ಕರಡಿಗೆಯ ಗಾಸಿ ಮಾಡಿದಂತಾಯಿತ್ತು ನೋಡಾ! ಲಿಂಗಾನುಭಾವಿಗಳ ಸಂಗದಿಂದೆ ಕಂದೆರದು ಗುಹೇಶ್ವರಲಿಂಗದಲ್ಲಿ ಲೀಯ ವಾದೆನು ಕಾಣಾ ಚನ್ನಬಸವಣ್ಣಾ. ॥೭೮॥

ಅನುಭಾವಿಗಳ ಸಂಗದಿಂದೆ ಕೃತಾರ್ಥನಾದೆನೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಚಿಕ್ಕದಣ್ಣಾಯಕರು ಪ್ರಭುದೇವರ ಬಸವರಾಜ ದೇವರ ಸಂಗಸುಖವ ಕೊಂಡಾಡಿದ ಪ್ರಸ್ತಾವದ ವಚನ. ॥

ಸಮ ಸುಖ ಸಂಧಾನವಿಲ್ಲದ ಸಂಗವ ನೋಡಾ. ತಾನು ವಿರೋಧ ವಿಲ್ಲದ ಸಂಗವ ನೋಡಾ. ಅವಾಗಲೂ ಅನುಭಾವವಿಲ್ಲದ ಸಂಗವ ನೊಡಾ. ಕೂಡಲಚನ್ನಸಂಗಯ್ಯನಲ್ಲಿ ಲಿಂಗ ಲೀಯವಾದ ಸಂಗವ ನೋಡಾ. ॥೭೯॥

ಹೀಗೆಂದು ಚಿಕ್ಕದಣ್ಣಾಯಕರು ಪ್ರಭುದೇವರನು ಬಸವರಾಜದೇವರನು ಸಮರಸಭಾವದಿಂದ ಕೊಂಡಾಡಲು, ಆ ಬಸವರಾಜದೇವರು ಚಿಕ್ಕದಣ್ಣಾಯಕರೊಪನೆ ನಾನು ನೀನು ಶರಣ ಸಂಗಕ್ಕೆ ಸಮವೇದಿಯಲ್ಲ ವೆಂದು ಭೀತಿಯಿಂದ ನುಡಿದ ಪ್ರಸ್ತಾವದ ವಚನ. ॥

ಅಯ್ಯ, ನಿಮ್ಮ ಶರಣರೆನ್ನ ಪಾವನವ ಮಾಡಿ, ತಿಳುಹಿ ತಮ್ಮಂತೆ ಎನ್ನ ಮಾಡಿದ ಬಳಿಕ ನಾನು ಅವರು ಮಾಡಿದಂತೆ ಆದೆನಯ್ಯಾ. ನಾನೊಬ್ಬನು ನಿಮ್ಮ ಶರಣರ ಬಳಿಬಳಿಯವನು. ಕೂಡಲಸಂಗನ ಶರಣರು ಮುಚ್ಚಿ ಎನಗೊಲಿದರೆ ನಾನು ಬದುಕಿದೆನಲ್ಲದೆ ಸಮರಸ ಸಂಗಕ್ಕೆ ಸರಿಯೆ ಹೇಳಾ ಚನ್ನಬಸವಣ್ಣಾ? ॥೮೦॥

ಇದಕ್ಕೆ ಚನ್ನಬಸವರಾಜದೇವರ ಪ್ರತ್ಯುತ್ತರ. ॥

ತೆರಹಿಲ್ಲದ ಘನವು ಮನದೊಳಗೆ ನಿಂದು ನೆಲೆಗೊಂಡ ಬಳಿಕ ಆ ಘನವ ತೆರೆಯ ಮರೆಯಲಡಗಿಸಿಹೆನೆಂದರೆ ಅಡಗುವದೆ? ಹಿಮಗಿರಿಯ ಕದ್ದು ಭೂಮಿಯಲಡಗಿಸಿಹೆನೆಂದರೆ ಆ ಕಳವು ಸಿಕ್ಕದೆ ಮಾಣ್ಬುದೆ? ಕೂಡಲಚನ್ನಸಂಗನ ಶರಣ ಪ್ರಭುವಿನಲ್ಲಿ ಬೆರಸಿದ ಸುಖವ ಮರಸಿಹೆನೆಂದರೆ ನಿನ್ನಳವೆ ಹೇಳಾ ಸಂಗನಬಸವಣ್ಣಾ? ॥೮೧॥

ಹೀಗೆಂದು ಚನ್ನಬಸವರಾಜದೇವರು ನಿರೂಪಿಸಲು, ಇದಕ್ಕೆ ಬಸವರಾಜದೇವರು ನಿರೂಪಿಸಿದ ಪ್ರತ್ಯುತ್ತರ. ॥

ಸಮ ರತಿ ಸಮ ಸಂಧಾನದ ಸಂಗಸುಖವು ನಿನ್ನಿಂದಲೆನಗೆ ಸಾಧ್ಯವಾಯಿತ್ತಲ್ಲದೆ ಎನಗೆ ತೋರಿದವರಾರು ಹೇಳಾ ಲಿಂಗೈಕ್ಯದ ಹೊಲಬ? ಕೂಡಲಸಂಗಮದೇವರ ಶರಣ ಪ್ರಭುದೇವರಲ್ಲಿ ನೀನೆನ್ನ ನಿರಿಸದನ್ನಕ್ಕ ನಾನು ಬಲ್ಲೆನೆ ಹೇಳಾ ಚನ್ನಬಸವಣ್ಣಾ? ॥೮೨॥

ಹೀಗೆಂದು ಬಸವರಾಜದೇವರು ನಿರೂಪಿಸಲು, ಇದಕ್ಕೆ ಚಿಕ್ಕದಣ್ಣಾಯಕರು ಬಿನ್ನೈಸಿದ ಪ್ರಸ್ತಾವದ ವಚನ. ॥

ಧರೆ ಆಕಾಶವಿಲ್ಲದಂದು, ಅನಲ ಪವನ ಜಲ ಕೂರ್ಮರಿಲ್ಲದಂದು, ಚಂದ್ರಸೂರ್ಯರೆಂಬವರು ಕಳೆದೋರದಂದು, ಆತ್ಮಸ್ಥಲ ಅನುಭಾವಕ್ಕೆ ಬಾರದಂದು ನಿತ್ಯ ನಿಜಲಿಂಗವ ಬಲ್ಲವರಾರಯ್ಯ ನೀವಲ್ಲದೆ? ಮಹಾಘ

ನಕ್ಕೆ ಘನವಾಹನವಾಗಿ ಆಗಮ್ಯಸ್ಥಲದಲ್ಲಿ ನಿಂದು ಭರಿತರಾಗಿರ ಬಲ್ಲವರಾರಯ್ಯ ನೀವಲ್ಲದೆ? ನಿಮ್ಮ ಒಕ್ಕುಮಿಕ್ಕ ಶೇಷಪ್ರಸಾದದ ಕಾರುಣ್ಯದ ಶಿಶುವಾಗಿ ಒಡಲೊಳಗೆ ಇದ್ದಲ್ಲಿ ವಿಭೂತಿ ಪಟ್ಟವ ಕಟ್ಟಿ ಹಸ್ತಮಸ್ತಕ ಸಂಯೋಗವ ಮಾಡಿ, ಎನ್ನ ನುಳುಹಿದವರಾರಯ್ಯ ನೀವಲ್ಲದೆ? ಕೂಡಲಚನ್ನಸಂಗಮದೇವರ ಸಾಕ್ಷಿಯಾಗಿ, ನಾನು ನಿಮ್ಮ ಕರುಣದ ಕಂದನೆಂಬುದ ಮೂರು ಲೋಕವೆಲ್ಲ ಬಲ್ಲದು ಕಾಣಾ ಸಂಗನಬಸವಣ್ಣಾ. ॥೮೩॥

ಹೀಗೆಂದು ಚಿಕ್ಕದಣ್ಣಾಯಕರು ಬಿನ್ನೈಸಲು, ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ.

ಕೃತಯುಗ, ತ್ರೇತಾಯುಗ, ದ್ವಾಪರಯುಗ, ಕಲಿಯುಗಂಗಳು ಭವರಾಟಳದಲ್ಲಿ ತಿರುಗುತ್ತಿಪ್ಪಲ್ಲಿ ಅನಂತ ಕೋಟಾನುಕೋಟಿ ಯುಗಂಗಳು ಮಡಿದು ಹೋದವು. ಅನಂತ ಜಲಪ್ರಳಯಂಗಳು ಸರಿಸರಿದು ಹೋದವು. ಹದಿನಾಲ್ಕು ಲೋಕಂಗಳೆಂಬ ಅನಂತಕೋಟಿ ಬ್ರಹ್ಮಾಂಡಂಗಳೆಲ್ಲ ಲಯವಾಗಿ ಹೋದವು. ಇದರೊಳಗೆ ಆವ ಲೋಕದಲ್ಲಿ ಆವ ಯುಗದಲ್ಲಿ ಪ್ರಾಣ ಲಿಂಗ ಲಿಂಗಪ್ರಾಣವೆಂಬ ಭೇದವನರುಹಿದವರಾರು ಹೇಳಾ? ಗಂಗೆ ಗೌರೀವಲ್ಲಭರು ಮೊದಲಾದ ಅನಂತಕೋಟಿ ರುದ್ರಾದಿಗಳೆಲ್ಲರು ಪ್ರಾಣಲಿಂಗ ಸಂಬಂಧದ ಹೊಲಬನರಿಯದೆ ಅಣಿಮಾಡಿ ಚತುರ್ವಿಧ ಫಲಪ್ರಾಪ್ತಕ್ಕೆ ಒಳಗಾದರು. ಶಿವಾಚಾರದ ವಿಚಾರವನರಿಯದೆ, ಜಗವು ಕೆಟ್ಟಿಹುದೆಂದು ಪರಮ ಪುರುಷಾರ್ಥ ಕಾರಣವಾಗಿ, ಮರ್ತ್ಯಲೋಕದಲ್ಲಿ ಅವತರಿಸಿ ಗುರು ಲಿಂಗ ಜಂಗಮ ಪಾದೋದಕ ಪ್ರಸಾದವೆಂಬ ಪಂಚಾಚಾರವ ನೆಲೆಗೊಳಿಸಿ ಷಟ್ಸ್ಥಲವೆಂಬ ಮಹಾನುಭಾವಮಂ ಕರತಳಾಮಳಕವಾಗಿ ಸ್ಥಲಗೊಳಿಸಿ ಪ್ರಾಣ ಲಿಂಗ, ಲಿಂಗ ಪ್ರಾಣವೆಂಬ ಭೇದವನೆನಗೆ ತಿಳುಹಿ ಎನ್ನ ಭ್ರಾಂತಿಸೂತಕವ ಬಿಡಿಸಿ, ಲಿಂಗೈಕ್ಯವೆಂಬುದನೆನಗೆ ತೋರಿದೆಯಾಗಿ, ನಿನ್ನಿಂದಲಾನು ಸಂಗನಬಸವಣ್ಣನೆಂಬ ಹೆಸರು ವಡೆದೆನು ಕೂಡಲಸಂಗಮದೇವರು ಸಾಕ್ಷಿಯಾಗಿ, ಎನಗೆ ನೀನು ಪರಮಾರಾಧ್ಯ ಕಾಣಾ ಚನ್ನಬಸವಣ್ಣಾ. ॥೮೪॥

ಇತಿ ಶ್ರೀಮತ್ಸಕಲಗಣ ಪುರಾತನರೊಳ್ ಪ್ರಭುದೇವರು ಮಹಾನುಭಾವ ಸದ್ಗೋಷ್ಠಿಯಂ ಮಾಡಿದ ಶೂನ್ಯಸಂಪಾದನೆಯೊಳ್ ಪ್ರಭುದೇವರ ಚನ್ನಬಸವರಾಜದೇವರು ಸಂಪಾದನೆಗಂ ಅಷ್ಟಮೋಪದೇಶ ಸಮಾಪ್ತ. ಮಂಗಳ ಮಹಾ ಶ್ರೀ.

# ಮಡಿವಾಳಯ್ಯಗಳ ಸಂಪಾದನೆ.

## ನವಮೋಪದೇಶ.

---

ಕಂದ॥ ಗುರುಹರಚರ ಸಾಹಿತ್ಯದ। ನಿರುಗೆಯ ಸುಜ್ಞಾನದಿರವ ಘನ ಲಿಂಗೈಕ್ಯವ ॥ ಪರಮ ಪ್ರಭುಃ ಮಡಿವಾಳಯ್ಯಂ । ಗೊರೆಮದ ನಾಂ ಪೇಳ್ವೆ ಶರಣ ಜನರಿಂಗೊಲವಿಂ ॥

ಅದೆಂತೆಂದೊಡಾ ಬಸವರಾಜದೇವರು ಚಿಕ್ಕದಣ್ಣಾಯಕರೊಡನೆ ಸ್ವಾನುಭಾವ ಸಂಗೋಷ್ಠಿಯಂ ಮಾಡುತ್ತಿರಲು, ಆ ಪ್ರಭುದೇವರು ಚನ್ನಬಸವರಾಜದೇವರ ಕೊಂಡಾಡವ ಪ್ರಸ್ಥಾವದ ವಚನ. ॥

ತನುವ ಗುರುವಿಂಗರ್ಪಿಸಿ, ಮನವ ಲಿಂಗಕ್ಕರ್ಪಿಸಿ, ಭಾವವ ಜಂಗಮಕ್ಕರ್ಪಿಸಿ, ನಿಜವ ತೃಪ್ತಿಯಲರ್ಪಿಸಿ, ಘನವನರಿವಿಂಗರ್ಪಿಸಿ, ಅರ್ಪಿತವೆ ಅನರ್ಪಿತವಾಗಿ, ಅನರ್ಪಿತವೆ ಅರ್ಪಿತವಾಗಿ ಅರ್ಪಿತ ಅನರ್ಪಿತಂಗಳಳಿದು, ನಿತ್ಯ ಪ್ರಸಾದಿಯಾಗಿ, ಪ್ರಸಾದದ ಹಾದಿಯನೆಲ್ಲರಿಗೆ ತೋರಿ ಮಹಾ ಪ್ರಸಾದದ ಬೆಳವಿಗೆಯ ಮಾಡಿದನು ಗುಹೇಶ್ವರನ ಶರಣ ಸಂಗನಬಸವಣ್ಣನು. ॥೧॥

ಹೀಗೆಂದು ಪ್ರಭುದೇವರು ಚಿಕ್ಕದಣ್ಣಾಯಕರ ಸ್ತೋತ್ರಮಂ ಮಾಡುತ್ತಿರಲು, ಆ ಚಿಕ್ಕದಣ್ಣಾಯಕರು ಎನ್ನ ಶಿವಜ್ಞಾನದ ಕಂದೆರವಿಯು ಎನ್ನ ಮಹಾ ಪ್ರಸಾದಿತ್ವವು ಮಡಿವಳ ಮಾಚಿ ತಂದೆಯಿಂದಲು ಸಂಗನಬಸವಣ್ಣನಿಂದಲು ಆಯಿತ್ತೆಂದು ಬಿನ್ನಹಂ ಮಾಡುವ ಪ್ರಸ್ಥಾವದ ವಚನ. ॥

ನಿರವಯವಾದರೆ ಭಕ್ತಿ ತನುವಿನ ಸ್ವಾಯತವಾಯಿತ್ತು. ಮಹಾ ಪ್ರಸಾದವಾದಡೆ ಸಂಗನಬಸವಣ್ಣನ ಕರಸ್ಥಲದಲ್ಲಿ ಮೂರ್ತಿಯಾಯಿತ್ತು! ಮಹಾ ಪ್ರಸಾದವ ನಾನೆತ್ತ ಬಲ್ಲೆನಯ್ಯ! ಮಡಿವಾಳ ತೋರಲಿಕೆ ಅರಿವು ಕಂದೆರವಾದುದ ಕಂಡೆನು. ಬಸವಣ್ಣನಿಂದ ಭಕ್ತಿಯ ಮುಸುಕು ಕಂದೆರವಾಯಿತ್ತ ಕಂಡೆನು. ಕೂಡಲಚನ್ನಸಂಗಮದೇವಯ್ಯ ಮಡಿವಾಳನು ಬಸವಣ್ಣನು ಪದಾರ್ಥವನಾರೋಗಿಸಿ ಕೊಡುತ್ತ ಕರುಣಿಸಿದ ಪ್ರಸಾದಿಯಾನು ಕಾಣಾ ಪ್ರಭುವೇ. ॥೨॥

ಮತ್ತಂ, ಅನಾಥ ಮಹೇಶ್ವರನೆಂಬಾತಂಗೆ ಪ್ರಸಾದಿ ಸ್ಥಲದ ಪ್ರಸಾದಾಶ್ರಮದ ಭವಿತ್ವದ ನಿಃಕರಿಸಿ, ಪ್ರಸಾದವನು ನೆಲೆಗೊಳಿಸಿ ಅನ್ಯಥಾ

ಪವನ ಆಧಾರ ಆಶ್ರಮವ ನಿಃಕರಿಸಿ ದ್ವಿಜಪ್ರಜತ್ರಜವೆಂಬ ಡಿಂಬವ ಮರ್ತ್ಯಕ್ಕೆ ಕಳುಹಿದಿರಿ. ಬಸವಣ್ಣನನು ಮಡಿವಾಳನನು ಒಡನೆ ಕಳುಹಿದಿರಿ. ಕನ್ನಡಿಯಾಗಿ ಛನಕ್ಕೆ ಬಾರದಂತೆ ಭಾವವ ನಿಲಿಸಿದಿರಿ. ಬಳಿಕ ಲಿಂಗಸ್ಥಲ ಜಂಗಮಸ್ಥಲ ಪ್ರಸಾದಿಸ್ಥಲ ನಿರ್ಧರವಾದವು. ಚಿರಕಾಲದಲ್ಲಿ ಮಹಾ ಸುನಾದ ಗಣ ಸಂಪೂರ್ಣನಾಗಿಪ್ಪನಯ್ಯ ಕೂಡಲಚನ್ನಸಂಗ ನಿಮ್ಮ ಶರಣ ಬಸವಣ್ಣನು. ॥೩॥

ಹೀಗೆಂದು ಚಿಕ್ಕದಣ್ಣಾಯಕರು ನಿರೂಪಿಸಲು, ಇವಕ್ಕೆ ಮಡಿವಾಳ ತಂದೆಗಳು ಚನ್ನಬಸವಣ್ಣನ ಸ್ತುತಿಸುವ ಪ್ರಸ್ಥಾವದ ವಚನ. ॥

ಅಂಗವೆ ಲಿಂಗವಾಗಿ, ಲಿಂಗವೆ ಪ್ರಾಣವಾಗಿ, ಜಂಗಮವೆ ಸಂಗವಾಗಿ, ಸಂಗವೆ ಸುಸಂಗವಾಗಿ, ಪ್ರಾಣವೆ ಪ್ರಸಾದವಾಗಿ, ಪ್ರಸಾದವೆ ಪ್ರಾಣವಾಗಿ, ಇಂತೀ ತ್ರಿವಿಧದಲ್ಲಿ ಸಂಪನ್ನನಾದ ಸಮತಾ ಪ್ರಸಾದಿ, ಸನ್ನಿಹಿತ ಪ್ರಸಾದಿ, ಸಮಾಧಾನ ಪ್ರಸಾದಿ, ಕಲಿದೇವಯ್ಯ ಚನ್ನಬಸವಣ್ಣನ ಪ್ರಸಾದವ ಕೊಂಡು ನಾನು ಬದುಕಿದೆನು ಕಾಣಾ ಪ್ರಭುವೆ. ॥೪॥

ಹೀಗೆಂದು ಮಡಿವಾಳ ಮಾಚಿ ತಂದೆಗಳು ಪ್ರಭುದೇವರೊಡನೆ ಬಿನ್ನಪಂಗೆಯ್ಯಲು, ಆ ಪ್ರಭುದೇವರು ಮಡಿವಾಳ ತಂದೆಗಳ ಒರೆದು ನೋಡುವ ಪ್ರಸ್ಥಾವದ ವಚನ. ॥

ಎಂತಯ್ಯ ನೊಸಲಲ್ಲಿ ಕಣ್ಣು? ಮನವಲ್ಲಿ ವಿರಸ ನುಡಿವುದೆಲ್ಲವು ಭಕ್ತಿರಸಜ್ಞಾನವೆಂತು ಹೇಳಾ? ನಿರಹಂಕಾರವೆಂತು ಹೇಳಾ? ಅರುಹಿನ ಕುರುಹಿನ ಮರವೆ ಮಾತಿನೊಳಗಿದೆ. ನಿನ್ನಿಂದ ನಿಜಪದವೆಂತು ಸಾಧ್ಯವಪ್ಪುದು ಹೇಳಾ? ಕುರುಹಳಿದು ಕುರುಹನರಿಯ ಬಲ್ಲರೆ ಗುಹೇಶ್ವರಲಿಂಗವಲ್ಲಿ ಉಭಯಗೆಟ್ಟಲ್ಲದೆ, ಪ್ರಸಾದವಿಲ್ಲ ಕಾಣಾ ಮಡಿವಾಳ ಮಾಚಯ್ಯ.॥೫॥

ಹೀಗೆಂದು ಪ್ರಭುದೇವರು ಮಡಿವಾಳ ತಂದೆಗಳ ಸ್ಥಿತಿಗತಿಯನೊರೆದು ನೋಡಲು, ಇದಕ್ಕೆ ಮಡಿವಾಳ ತಂದೆಗಳು ತಮ್ಮ ಪೂರ್ವಾಪರ ಸಂಬಂಧದ ವೃತ್ತಾಂತವಂ ಪ್ರಭುದೇವರಿಗೆ ಬಿನ್ನಹಂ ಮಾಡುವ ಪ್ರಸ್ಥಾವದ ವಚನ. ॥

ಎನ್ನ ಆದಿಯನೆತ್ತುವೆನೆ? ಅದ ನೀನೆ ಬಲ್ಲೆ. ಘನ ಗಂಭೀರದಲ್ಲಿ ಹುಟ್ಟಿದನೆಂಬುದ ಎನ್ನನಾದಿಯನೆತ್ತಿ ಹೇಳಿ ತೋರುವೆನೆ? ಅದ ನೀನೆ ಬಲ್ಲೆ ಎನಗೆ ಕಾಯವಿಲ್ಲೆಂಬುದನು. ಬಸವಣ್ಣನ ಕಾರಣ ಮರ್ತ್ಯಕ್ಕೆ ಬಂದರೆ ಒಡಲುಪಾಧಿ ಎಂಬುದಿಲ್ಲ ನೋಡಾ! ಒಡಲೆ ಬಸವಣ್ಣ ಪ್ರಾಣವೆ

ಚನ್ನಬಸವಣ್ಣ. ಎನ್ನ ಮಹಾಜ್ಞಾನವೆ ನೀವು ನೋಡಾ! ಇಂತು ಎರಡಿಲ್ಲದಿಪ್ಪಲ್ಲಿ ನುಡಿಯಡಗಿದ ಪರಿಯ ನಿಮ್ಮ ಶರಣಬಸವಣ್ಣ ಬಲ್ಲ ಕಾಣಾ ಕಲಿದೇವರದೇವಯ್ಯ. ॥೬॥

ಇಂತು ಮಡಿವಾಳ ತಂದೆಗಳು ತಮ್ಮ ಪೂರ್ವಾಪರ ಸಂಬಂಧದ ವೃತ್ತಾಂತಮಂ ಬಿನ್ನಪಂಗೆಯ್ಯಲು ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ತಾವದ ವಚನ. ॥

ಗುರುವಿದು, ಲಿಂಗವಿದು, ಜಂಗಮವಿದು, ಎಂಬ ಭೇದವ ಏಕವ ಮಾಡಿ ನಿನಗೆ ತೋರಿದವರಾರು ಹೇಳಾ? ಆದಿ ಅನಾದಿಯನು ಒಂದ ಮಾಡುವ ಭಾವ ನಿರ್ಭಾವವನರುಹಿದವರಾರು ಹೇಳಾ? ದೀಕ್ಷೆ ಶಿಕ್ಷೆ ಸ್ವಾನುಭಾವದ ಪರಿಯ ತೋರಿ ನಿಜವಲ್ಲಿ ನಿಲಿಸಿದವರಾರು ಹೇಳಾ? ಗುಹೇಶ್ವರ ಲಿಂಗದಲ್ಲಿ ನಿನ್ನ ಆಯತವ ಹೇಳಾ ಮಡಿವಾಳಮಾಚಯ್ಯ. ॥೭॥

ಹೀಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಮಡಿವಾಳ ತಂದೆಗಳು ಬಿನ್ನೈಸಿದ ಪ್ರತ್ಯುತ್ತರ.

ಗುರು ಸ್ವಾಯತವಾಯಿತ್ತು. ಎಂಟು ಭಾವ ಸ್ವಾಯತವಾಯಿತ್ತು. ಹದಿನಾರು ತೆರನ ಭಕ್ತಿ ಸ್ವಾಯತವಾಯಿತ್ತು. ಅಷ್ಟವಿಧಾರ್ಚನೆ ಸ್ವಾಯತವಾಯಿತ್ತು. ತ್ರಿವಿಧದ ಅರಿವು ಸ್ವಾಯತವಾಯಿತ್ತು. ಮಹಾಲಿಂಗದ ನಿಲವು ಮಹಾಜಂಗಮದ ನಿಲವು ಸ್ವಾಯತವಾಯಿತ್ತು. ಶುದ್ಧಪ್ರಸಾದ ತನುಸ್ವಾಯತವಾಯಿತ್ತು. ಸಿದ್ಧಪ್ರಸಾದ ಚೈತನ್ಯ ಸ್ವಾಯತವಾಯಿತ್ತು. ಪ್ರಸಿದ್ಧ ಪ್ರಸಾದ ಮನಸ್ವಾಯತವಾಯಿತ್ತು. ವಾಮಭಾಗದಲ್ಲಿ ಮಹವು ಉದಯವಾಯಿತ್ತು. ಶಿವಾಚಾರದಲ್ಲಿ ನಿರವಯ ಉದಯವಾಯಿತ್ತು. ನಿಜಸ್ಥಾನ ಕರದಲ್ಲಿ ನಿಂದಿತ್ತು. ಕ್ಷೀರಕ ಸ್ಥಾನದಲ್ಲಿ ಸಾರಾಯವಾಯಿತ್ತು. ಅನುಭಾವದಲ್ಲಿ ಘನಗಮನವೆನಿಸಿತ್ತು. ಸ್ವಾನುಭಾವದಲ್ಲಿ ನಿಮ್ಮ ಬಸವಣ್ಣಂಗೆ ಶರಣೆಂದಿತ್ತು. ನೆಮ್ಮುಗೆವಿಡಿದು ಬಸವಣ್ಣನ ಪ್ರಸಾದವ ಕೊಂಡಿತ್ತು. ನಿಮ್ಮ ಬಸವಣ್ಣನ ಪ್ರಸಾದದಿಂದೆ ಇಂತಹ ಘನವು ಸ್ವಾಯತವಾಯಿತ್ತು. ನೀವು ಬಸವಣ್ಣನಿಂದಾದಿರಾಗಿ ಬಸವಣ್ಣಂಗೆ ನಮೋ ಎಂಬೆನು ಕಾಣಾ ಕಲಿದೇವರದೇವಾ ॥೮॥

ಮತ್ತಂ, ಒಬ್ಬಳು ಆದಿ ಯುಗದಲ್ಲಿ ಮಾಯಾಂಗನೆ ಹಲವು ಬಣ್ಣದ ವಸ್ತ್ರವನುಟ್ಟುಕೊಂಡು ಹೆಡಗೆ ತುಂಬಿದ ದೇವರ ಹೊತ್ತುಕೊಂಡು, ಓ ದೇವರ ಕೊಳ್ಳಿರಯ್ಯ ಓ ದೇವರ ಕೊಳ್ಳಿರಯ್ಯ, ಎಂದಳು. ಎಂದರೆ

ಆ ದೇವರನಾರು ಕೊಂಬವರಿಲ್ಲ. ನಾ ಒಂದರುವೆಯ ಕೊಟ್ಟು ಆ ದೇವರ ಕೊಂಡು ಎನ್ನ ಹೆತ್ತ ತಂದೆ ಬಸವಣ್ಣನ ಪ್ರಸಾದದಿಂದೆ ಬದುಕಿದೆನು ಕಾಣಾ ಕಲಿದೇವರದೇವಾ ॥೯॥

ಎಲ್ಲ ಭಕ್ತಿಯ ಭೇದವನು ಎಲ್ಲ ಕೂಟದ ಭೇದವನು ಎಲ್ಲ ಶೀಲದ ಭೇದವನು ನಾನು ನಿಮಗೆ ಬಿನ್ನೈಸುವೆನು ಕೇಳಯ್ಯ! ನೀನು ಕರ್ತನಾಗಿ ನಾನು ಭೃತ್ಯನಾಗಿ ಅವಧರಿಸಯ್ಯ ಎಲ್ಲ ಭೇದಂಗಳನು ಬಸವಣ್ಣ ಮಾಡಿದನು. ಆದಿ ಅನಾದಿಯ ಬಸವಣ್ಣ ಮಾಡಿದನು. ಸಾಧ್ಯ ಅಸಾಧ್ಯದ ಬಸವಣ್ಣ ಮಾಡಿದನು. ಲಿಂಗವನು ಜಂಗಮವನು ಬಸವಣ್ಣನೆ ಮಾಡಿದನು. ಎನ್ನ ಸರ್ವಸ್ವಾಯತವನು ಬಸವಣ್ಣ ಮಾಡಿದ ಕಾರಣ ಆ ಬಸವಣ್ಣನ ನೆನೆದು ಬದುಕಿದೆನು ಕಾಣಾ ಕಲಿದೇವರದೇವಾ ॥೧೦॥

ಮತ್ತಂ, ಮಡಿವಾಳಯ್ಯಗಳು ಬಸವರಾಜದೇವರ ತೋರಿ ಬಿನ್ನಪಂಗೈಯ್ವ ಪ್ರಸ್ಥಾವದ ವಚನ ॥

ಶಿವ ತಾನೀತ ಮರ್ತ್ಯಲೋಕವ ಪಾವನವ ಮಾಡಲು, ಗುರು ತಾನೀತ ಎನ್ನ ಭವರೋಗವ ಛೇದಿಸಲು, ಭಕ್ತ ತಾನೀತನೆನಗೆ ವಿಸ್ತಾರವಾಗಿ ಭಕ್ತಿಯ ಭೇದವ ತೋರಲು ಜಂಗಮ ತಾನೀತ ಅನಾದಿ ಸಂಸಿದ್ಧ ಘನ ಮಹಿಮನಾಗಿ ಲಿಂಗವು ತಾನೀತನೆನಗೆ ಪ್ರಾಣಲಿಂಗ ತಾನಾಗಿ ಎನ್ನ ವಿಸ್ತಾರವು ತಾನೀತನೆನ್ನ ನಿಲುಕಡೆಯು ತಾನಾಗಿ ಎನಗೆ ಸರ್ವಸ್ವಾಯತವ ಮಾಡಿದ ಮಹಿಮನೀತ ಕಾಣಾ ಕಲಿದೇವರದೇವಯ್ಯ ನಿಮ್ಮ ಶರಣಬಸವಣ್ಣನು ॥೧೧॥

ಮತ್ತಂ, ಅರಿವನಾರಡಿಗೊಂಡಿತ್ತು. ಮರಹು ಮರಹನಾರಡಿಗೊಂಡಿತ್ತು ಮಾಯೆ. ಮಾಯೆಯನಾರಡಿಗೊಂಡಿತ್ತು ಕರ್ಮ. ಕರ್ಮವನಾರಡಿಗೊಂಡಿತ್ತು ತನು. ತನುವನಾರಡಿಗೊಂಡಿತ್ತು ಸಂಸಾರ ಮರಹು ಮುಂದುವಹುದೆಂದರಿನು ಅರಿವ ಜಲಿಮಾಡಿ ಅರಿವ ಕೊಟ್ಟು ಗುರುವಿನ ಕೈಯಲ್ಲಿ ಲಿಂಗವ ಕೊಂಡೆ ನೋಡಯ್ಯ! ನಾನು ಎನ್ನರಿವನಾಯತದಲ್ಲಿ ನಿಲಿಸಿ ನಿಜಸ್ವಾಯತವ ಮಾಡಿದನು ಕಲಿದೇವರದೇವ ನಿಮ್ಮ ಶರಣಬಸವಣ್ಣನು ॥೧೨॥

ಹೀಗೆಂದು ಮಡಿವಾಳ ತಂದೆಗಳು ಬಿನ್ನಪಂಗೆಯ್ಯಲು, ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ಥಾವದ ವಚನ. ॥

ಅರಿವು ಉದಯವಾದಲ್ಲದೆ ಮರಹು ನಷ್ಟವಾಗದು. ಮರಹು ನಷ್ಟವಾದಲ್ಲದೆ ಅರಿವು ಸ್ವಾಯತವಾಗದು. ಅರಿವು ಸ್ವಾಯತವಾಗಿ ದೊರೆಕೊಂಡ ಬಳಿಕ ಗುರುವಾರು, ಲಿಂಗವಾರು, ಆವುದು ಘನ, ಆವುದು ಕಿರಿದು ಹೇಳಾ? ಗುಹೇಶ್ವರಲಿಂಗದಲ್ಲಿ ಅರಿವು ಮರೆದ., ಉಪದೇಶವ ಹಡೆದಡೆ ಮುಂದೆ ನಿಜವೆಂತು ಸಾಧ್ಯವಪ್ಪುದು ಹೇಳಾ ಮಡಿವಾಳಮಾಚಯ್ಯಾ? ॥೧೩॥

ಹೀಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಮಡಿವಾಳ ತಂದೆಗಳು ಬಿನ್ನೈಸಿದ ಪ್ರತ್ಯುತ್ತರ. ॥

ಅರಿದಲ್ಲದೆ ಗುರುವ ಕಾಣಬಾರದು. ಅರಿದಲ್ಲದೆ ಲಿಂಗವ ಕಾಣಬಾರದು. ಅರಿದಲ್ಲದೆ ಜಂಗಮುವ ಕಾಣಬಾರದು. ಇಂತೀ ತ್ರಿವಿಧವು ಬಸವಣ್ಣನ ಕೃಪೆಯಿಂದಲೆನಗೆ ಸಾಧ್ಯವಾಯಿತ್ತಾಗಿ, ಭಿನ್ನವಿಲ್ಲ ಕಾಣಾ ಕಲಿದೇವರದೇವಾ ॥೧೪॥

ಇದಕ್ಕೆ ಪ್ರಭುದೇವರ ನಿರೂಪ.

ಗುರು ಸ್ವಾಯತವಾಯಿತ್ತು, ಲಿಂಗಸ್ವಾಯತವಾಯಿತ್ತು, ಜಂಗಮು ಸ್ವಾಯತವಾಯಿತ್ತು, ಬಸವಣ್ಣನಿಂದಲೆಂದರೆ ತನುವಿಲ್ಲದಿರಬೇಕು. ಮನವಿಲ್ಲದಿರಬೇಕು. ಅರಿವರಿತು ಮರಹು ನಷ್ಟವಾಗಿರಬೇಕು. ಗುಹೇಶ್ವರಲಿಂಗದಲ್ಲಿ ನಿರ್ಲೇಪಿಯಾದಲ್ಲದಿಲ್ಲ ಕಾಣಾ ಮಡಿವಾಳಮಾಚಯ್ಯ ॥೧೫॥

ಹೀಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಮಡಿವಾಳಯ್ಯ ತಂದೆಗಳ ಪ್ರತ್ಯುತ್ತರ. ॥

ತನುವಿನಲ್ಲಿ ಹೊರೆ ಇಲ್ಲ. ಮನದಲ್ಲಿ ವ್ಯಾಕುಳವಿಲ್ಲ. ಭಾವದಲ್ಲಿ ಬಯಕೆ ಇಲ್ಲ. ಅರಿವಿನಲ್ಲಿ ವಿಚಾರವಿಲ್ಲ. ನಿಜದಲ್ಲಿ ಅವಧಾನವಿಲ್ಲ. ನಿರ್ಲೇಪಸಂಗದಲ್ಲಿ ಬಿಜ್ಜಿಬೇರಾಗಲಿಲ್ಲ. ಕಲಿದೇವರದೇವ ನಿಮ್ಮಲ್ಲಿ ಬೆರಿಸಿ, ಬೇರಾಗದಿರ್ದೆನು ॥೧೬॥

ಹೀಗೆಂದು ಮಡಿವಾಳ ತಂದೆಗಳು ಬಿನ್ನಪಂಗೈಯ್ಯಲು, ಇದಕ್ಕೆ ಪ್ರಭುದೇವರು ಕೊಟ್ಟ ಪ್ರತ್ಯುತ್ತರ. ॥

ತನುವಿನಲ್ಲಿಪ್ಪ ಲೋಭ. ಮನವ ಕದ್ದು ಮಾತನಾಡಿದರೆ ಆ ತನುವೆ ಮನ ರೂಪಾಗಿ ಕಾಣಬರುತ್ತಿದೆ. ಆ ಮನದಲ್ಲಿ ಬಯಕೆ ಸಮರತಿಯಾಗದಾಗಿ, ಕಾಯದ ಕರುಳು ಲೋಭದ ಬಯಕೆಯೊಳಗದೆ. ಅರಿವೆನೆಂದು

ಬರು ಮಾತನಾಡಿದರೆ ನಮ್ಮ ಗುಹೇಶ್ವರಲಿಂಗವು ಮೆಚ್ಚ ನೋಡಾ ಮಡಿವಾಳಮಾಚಯ್ಯ ॥೧೭॥

ಹೀಗೆಂದು ಪ್ರಭುದೇವರು ನಿರೂಪಿಸಲು, ಆದಕ್ಕೆ ಮಡಿವಾಳತಂದೆಗಳು ಬಿನ್ನೈಸಿದ ಪ್ರತ್ಯುತ್ತರ. ॥

ಕಾಯದ ಕರಸ್ಥಲದಲ್ಲಿ ಗುರುಸ್ವಾಯತವ ಮಾಡಿದೆನು. ಕ್ರೋಧದ ನಯನದಲ್ಲಿ ಜಂಗಮಸ್ವಾಯತವ ಮಾಡಿದೆನು. ಲೋಭವಿಲ್ಲದೆ ಪ್ರಸಾದವ ಗ್ರಹಿಸಿದೆನು. ಇಂತೀ ತ್ರಿವಿಧದಲ್ಲಿ ಶುದ್ಧನಾದೆನು ಕಾಣಾ ಕಲಿದೇವರದೇವ ನಿಮ್ಮಾಜ್ಞೆ ॥೧೮॥

ಮತ್ತಂ, ಎನ್ನ ಅಷ್ಟವಿಧಾರ್ಚನೆ ಶುದ್ಧವಾಯಿತ್ತಯ್ಯ ನೀವು ಮೂರ್ತಿಲಿಂಗವಾದ ಕಾರಣ. ಎನ್ನ ತನು ಮನ ಶುದ್ಧವಾಯಿತ್ತಯ್ಯ, ನೀವು ಜಂಗಮವಾದ ಕಾರಣ. ಎನ್ನ ಆಪ್ಯಾಯನ ಶುದ್ಧವಾಯಿತ್ತಯ್ಯ, ನಿಮ್ಮ ಪ್ರಸಾದವ ಕೊಂಡೆನಾಗಿ. ಎನ್ನ ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರಂಗಳಳಿದವಯ್ಯ, ನೀವು ಜ್ಞಾನಲಿಂಗವಾದ ಕಾರಣ. ಇಂತೀ ಸರ್ವಾಂಗದಲ್ಲಿ ಸನ್ನಿಹಿತನಾದೆನು ಕಾಣಾ ಕಲಿದೇವರದೇವಾ ॥೧೯॥

ಹೀಗೆಂದು ಮಡಿವಾಳ ತಂದೆಗಳು ಬಿನ್ನೈಸಲು, ಇದಕ್ಕೆ ಪ್ರಭುದೇವರು ಆ ಮಡಿವಾಳತಂದೆಗಳ ಸಮರಸಭಾವವನೊರೆದು ನೋಡುವ ಪ್ರಸ್ಥಾವದ ವಚನ. ॥

ತನುಗುಣ ನಾಸ್ತಿಯಾಗಿ, ಮನಗುಣನಾಸ್ತಿ. ಧನಗುಣ ನಾಸ್ತಿಯಾದಡೇನು? ಭಾವನಾಸ್ತಿಯಾಗಬೇಕು. ಭಾವ ನಾಸ್ತಿಯಾದಲ್ಲದೆ ಅರಿವು ನೆಲೆಗೊಳ್ಳದು. ಅರಿವು ನೆಲೆಗೊಂಡಲ್ಲಿ ಕುರುಹಿಂಗೆ ಹೊರಗು. ಕುರುಹಳಿದು ಕೂಡುವ ಪರಮ ಸುಖವು ಗುಹೇಶ್ವರ ಲಿಂಗದಲ್ಲಿ ನಿನಗೆ ಸಾಧ್ಯವಾದ ಪರಿಯ ಹೇಳಾ ಮಡಿವಾಳ ಮಾಚಯ್ಯ. ॥೨೦॥

ಹೀಗೆಂದು ಪ್ರಭುದೇವರು ಮಡಿವಾಳ ತಂದೆಗಳ ಒಳಗನೊರೆದು ನೋಡಲು, ಮರಳಿ ಆ ಮಡಿವಾಳ ತಂದೆಗಳು ಬಿನ್ನೈಸಿದ ಪ್ರತ್ಯುತ್ತರ. ॥

ಅಲೀಯ್ಯವಾಗಿ ಬಂದ ಪರಿಯ ಅಕಾರ ಉಕಾರ ಮಕಾರಂಗಳು ಸೋಂಕದಿರ್ದ ಪರಿಯ ನಿರ್ಲೇಪ ಸ್ಥಲವಾಧಾರವಾದ ಪರಿಯ ನಿಮ್ಮ ಶರಣ ಬಸವಣ್ಣ ಬಲ್ಲನು ಬೆಸಗೊಳ್ಳಾ ಕಲಿದೇವರದೇವಾ. ॥೨೧॥

ಎನ್ನ ಅಂತಸ್ಥಿತಿ ಗತಿಯ ಬಸವಣ್ಣ ಬಲ್ಲನಾಗಿ, ಆತನಿಂದಲಿನ್ನು ಪರಿಯ ವಿಚಾರಿಸಿ ನೋಡಿ ಎಂದು ಮಡಿವಾಳ ತಂದೆಗಳು ಬಿನ್ನೈಸಲು, ಇದಕ್ಕೆ ಪ್ರಭುದೇವರು ಬಸವರಾಜದೇವರ ಬೆಸಗೊಂಬ ಪ್ರಸ್ತಾವದ ವಚನ.॥

ಮನ ಮನ ಬೆರಸಿ ಸಮರತಿಯ ಸಂಗದಲ್ಲಿ ಸುಖಿಗಳಾಗಿಪ್ಪ ಶರಣರ ಸಂಗಸುಖವನಾ ಶರಣರೆ ಬಲ್ಲರಲ್ಲದೆ ಕೆಲದಲ್ಲಿ ಇದ್ದವರಿಗೆ ಅರಿಯಬಹುದೆ? ನಿಜಗುಣ ಭರಿತರು ಶಿವಶರಣರ ನಿಲವ ಕಂಡಿಹೆನೆಂದರೆ ಕಾಣಬಹುದೆ? ಗುಹೇಶ್ವರಲಿಂಗದಲ್ಲಿ ಮಡಿವಾಳಮಾಚಯ್ಯನ ಪರಿಯ ನೀನೆ ಬಲ್ಲೆ. ಎನಗೊಪ್ಪ ಹೇಳಾ ಸಂಗನ ಬಸವಣ್ಣಾ. ॥೨೬॥

ಹೀಗೆಂದು ಪ್ರಭುದೇವರು ಬೆಸಗೊಳಲು, ಬಸವರಾಜದೇವರು ಮರಳಿ ಪ್ರಭುದೇವರೊಡನೆ ಬಿನ್ನಹಂಗೈದ ಪ್ರಸ್ತಾವದ ವಚನ. ॥

ಎನ್ನ ಕಾಯದ ಕತ್ತಲೆಯ ಕಳೆಯಲರಿಯೆನು. ಎನ್ನ ಜೀವದ ನಿಲವ ಗೆಲಲರಿಯೆನು. ಎನ್ನ ಭಾವದ ಸೂತಕವ ಕಳೆಯಲರಿಯೆನು. ನಾನೆಂತು ಬಲ್ಲೆನಯ್ಯಾ ನಿಮ್ಮ ಘನ ಮಹಿಮರ ನಿಲವ? ಕೂಡಲ ಸಂಗಮದೇವ ನಿಮ್ಮ ಶರಣರ ಮಡಿವಾಳಮಾಚಿ ತಂದೆಯ ಘನವ ನೀವೆ ಬಲ್ಲಿರಿ. ॥೨೭॥

ಮತ್ತಂ, ಆದುದನರಿಯೆ. ಹೋದುದನರಿಯೆ. ಬಂದುದನರಿಯೆ. ನಿಂದುದನರಿಯೆ. ಒಳಗನರಿಯೆ. ಹೊರಗನರಿಯೆ. ಇಹವನರಿಯೆ. ಪರವನರಿಯೆ. ಭಾವವನರಿಯೆ. ನಿರ್ಭಾವವನರಿಯೆ. ಶೂನ್ಯವನರಿಯೆ. ನಿಃಶೂನ್ಯವನರಿಯೆ. ಕೂಡಲ ಸಂಗಮದೇವಯ್ಯಾ ಇವೆಲ್ಲವ ಮಾಡಿ ಕೂಡದಾತ ಮಡಿವಾಳ ಬಲ್ಲನಾಗಿ ನಾನೇನೆಂದರಿಯೆನಯ್ಯಾ. ॥೨೮॥

ಮತ್ತಂ, ಅಯ್ಯಾ ನಾನು ದಾಸೋಹವ ಮಾಡುವೆನಲ್ಲದೆ ಸಮಯವನರಿಯೆನಯ್ಯಾ. ನಾನು ಭಕ್ತಿಯ ಮಾಡುವೆನಲ್ಲದೆ ಭಾವವನರಿಯೆ. ಸ್ಥಳಕುಳವ ವಿಚಾರಿಸಿದರೆ, ಎನ್ನಲ್ಲೇನು ಹುರುಳಿಲ್ಲ. ನಿಮ್ಮ ಶರಣರ ಸೋಂಕಿನಲ್ಲಿ ಶುದ್ಧನಾದೆನು ಕಾಣಾ. ಕೂಡಲ ಸಂಗಮದೇವರು ಸಾಕ್ಷಿಯಾಗಿ ಮಡಿವಾಳ ಮಾಚಿ ತಂದೆಗಳ ಶ್ರೀಪಾದಕ್ಕೆ ನಮೋ ನಮೋ ಎಂದು ಬದುಕಿದೆನು. ॥೨೯॥

ಹೀಗೆಂದು ಬಸವರಾಜದೇವರು ಬಿನ್ನೈಸಲು, ಪ್ರಭುದೇವರು ಆ ಬಸವರಾಜದೇವರ ಪರಿಯ ಹೇಳೆಂದು ಮಡಿವಾಳ ತಂದೆಗಳ ಬೆಸಗೊಂಬ ಪ್ರಸ್ತಾವದ ವಚನ. ॥

ಯುಕ್ತಿಯು ಕೇಳಿದರೆ ಭಕ್ತಿಯು ತೋರಿದ. ಭಕ್ತಿಯು ಕೇಳಿದರೆ, ಯುಕ್ತಿಯು ತೋರಿದ. ನಿತ್ಯವ ಬೆಸಗೊಂಡರೆ ಅತ್ತತ್ತಲೋಸರಿಸಿದ. ಗುಹೇಶ್ವರನ ಶರಣ ಬಸವಣ್ಣ ಮರೆಗೆ ಮರೆಯನೊಡ್ಡಿ ಜಾರಿದನು. ಬಸವಣ್ಣನ ಪರಿ ಎಂತು ಹೇಳಾ ಮಡಿವಾಳಮಾಚಯ್ಯ? ॥೨೬॥

ಹೀಗೆಂದು ಪ್ರಭುದೇವರು ಬೆಸಗೊಳ್ಳಲು, ಆ ಮಡಿವಾಳ ತಂದೆಗಳು ಬಸವರಾಜದೇವರ ಮಹಾತ್ಮೆಯನು ಬಿನ್ನಹಂಗೆಯ್ದ ಪ್ರಸ್ಥಾವದ ವಚನ.॥

ಪ್ರಥಮಕಾಲದಲ್ಲಿ ದೇವಗಣ ಮಹಾಗಣ ಕಿನ್ನರಗಣ ಆಳಾಪಗಣ ಸಹಿತ ಸಂಗನಬಸವಣ್ಣನು ಗಣಪ್ರಸಾದಿಯಾಗಿ ಮರ್ತ್ಯಲೋಕಕ್ಕೆ ಮಹವ ತಂದು ಶಿವಗಣಂಗಳ ಮಾಡಿದಾತ ಬಸವಣ್ಣನು. ಸ್ವರೂಪು ಸಾರಾಯವನು ಪದಾರ್ಥವೆಂದಾತ ಬಸವಣ್ಣನು. ಕಲಿದೇವಯ್ಯ ನಿಮ್ಮ ಶರಣನಿಂತಹ ಮಹಿಮನು. ॥೨೭॥

ಮತ್ತಂ, ಎಲ್ಲ ವರ್ಣನೆಗಳು ಸ್ಥಾಪ್ಯದೊಳಗು. ಎಲ್ಲ ವಚನಂಗಳು ತಾಪದೊಳಗು. ಎಲ್ಲ ಸ್ತೋತ್ರಂಗಳು ಕ್ರೋಧದೊಳಗು. ಎಲ್ಲ ಅರಿವು ಮಥನದೊಳಗು. ಎಲ್ಲ ಮೂರ್ತಿಗಳು ಪ್ರಳಯದೊಳಗು. ಎಲ್ಲ ಗೀತಂಗಳು ಸಂವಾದದೊಳಗು. ಲಿಂಗಾನುಭಾವಿ ಇವನೊಂದುವನು ಮನದೊಳು ನೆನೆಯನೇನೆಂದು ಅರಿಯ. ಸ್ವತಂತ್ರ ನಿತ್ಯನಾಗಿ ಭಕ್ತಿ ದಾಸೋಹವ ನಿಮ್ಮಲ್ಲಿ ಬಸವಣ್ಣನಳವಡಿಸಿಕೊಂಡನು. ನಿಮ್ಮ ಬಸವಣ್ಣನಿಂತಹ ಸ್ವತಂತ್ರನಯ್ಯ ಕಲಿದೇವರದೇವಾ. ॥೨೮॥

ಮತ್ತಂ, ಆದಿ ಅನಾದಿ ಸಾಧ್ಯ ಅಸಾಧ್ಯಂಗಳಿಲ್ಲದಂದು, ಸ್ಥೂಲ ಸೂಕ್ಷ್ಮಂಗಳೆಂಬ ಮೂರ್ತಿಗಳಿಲ್ಲದಂದು, ಸಾಕಾರ ನಿರಾಕಾರವೆಂಬ ವಾಕ್ಕು ಹುಟ್ಟದಂದು, ಶಂಕರ ಶಶಿಧರ ಈಶ್ವರನೆಂಬ ಗಣಾಧೀಶ್ವರರಿಲ್ಲದಂದು, ಉಮೆಯ ಕಲ್ಯಾಣವಿಲ್ಲದಂದು, ಶಿವರತಿ ಮಹಾರತಿ ಬಸವಣ್ಣನಿಂದಾಯಿತ್ತು. ಸರ್ವ ವಿಸ್ತೀರ್ಣವ ನಿರಾಕರಿಸಿ ಶಿವಲಿಂಗಾರ್ಚನೆಯ ತೋರಿದ. ನಿತ್ಯ ಲಿಂಗಾರ್ಚನೆಯಲ್ಲಿ ಪ್ರಸಾದ ಧ್ಯಾನ, ಜಂಗಮಾರ್ಚನೆಯಲ್ಲಿ ಪ್ರಸಾದಭೋಗವೆಂಬುದನು ಸಂಗನಬಸವಣ್ಣನಲ್ಲದೆ ಮತ್ತಾರು ಅರಿಯರು. ಭಕ್ತಿಯ ಕುಳಸ್ಥಳವನರಿಯದೆ, ಎಲ್ಲರು ಎಂದಂತೆ ಎಂಬರು. ಬಂದಲ್ಲಿಯೆ ಬಂದರು. ಇದ ನಿಃಕರಿಸಿ ಜಂಗಮವೇ ಲಿಂಗವೆಂದು ಸಂಗಸಾಹಿತ್ಯವಾದನು. ಬಸವಣ್ಣನಿಂತಹ ನಿತ್ಯನಯ್ಯ ಕಲಿದೇವರದೇವಯ್ಯ. ॥೨೯॥

ಮತ್ತಂ, ಆಕಾರ ನಿರಾಕಾರವೆನುತಿಹರೆಲ್ಲರು. ಆಕಾರವೆನ್ನ. ನಿರಾಕಾರವೆನ್ನ. ಲಿಂಗಜಂಗಮ ಪ್ರಸಾದ ತನ್ಗತನಾದ ನಿಮ್ಮ ಬಸವಣ್ಣನಿಂತಹ ಸ್ವತಂತ್ರನಯ್ಯ ಕಲಿದೇವರದೇವಾ. ॥೩೦॥

ಮತ್ತಂ, ಬಸವಣ್ಣನ ನಡೆ ಪರುಷ. ಬಸವಣ್ಣನ ನುಡಿ ಪರುಷ. ಬಸವಣ್ಣನ ದೃಷ್ಟಿ ಪರುಷ. ಬಸವಣ್ಣನ ಹಸ್ತ ಪರುಷ. ಬಸವಣ್ಣನ ಭಾವ ಪರುಷ. ಬಸವಣ್ಣನ ಮನ ಪರುಷ. ತನುಮನಧನವ ವೇಧಿಸಿಪಾತ ಬಸವಣ್ಣನು. ಬಸವಣ್ಣನ ನೆನೆವುದೇ ಲಿಂಗಾರ್ಚನೆ. ಬಸವಣ್ಣನ ನೆನೆವುದೆ ಪರತತ್ವ. ಬಸವಣ್ಣನ ನೆನೆವುದೆ ಕಲ್ಯಾಣವೆನಗೆ. ಕಲಿದೇವರದೇವಯ್ಯ ನಿಮ್ಮ ಶರಣ ಬಸವಣ್ಣನಿಂತಹ ಮಹಿಮ ನೋಡಯ್ಯ. ॥೩೧॥

ಇಂತು ಮಡಿವಾಳ ತಂದೆಗಳು ಪ್ರಭುದೇವರೊಡನೆ ಬಸವರಾಜದೇವರ ಮಹಾತ್ಮೆಯನು ಕೊಂಡಾಡಲು, ಇದಕ್ಕೆ ಪ್ರಭುದೇವರು ಪ್ರಸನ್ನರಾಗಿ, ಬಸವರಾಜದೇವರೊಡನೆ ಮಡಿವಾಳತಂದೆಗಳ ಕೊಂಡಾಡಿದ ಪ್ರಸ್ಥಾವದ ವಚನ. ॥

ವಾರಿಕಲ್ಲ ಪುತ್ಥಳಿಯನಪ್ಪಿಕೊಂಡಂತಾಯಿತ್ತು. ಅಗ್ನಿಯ ಮುಸುಕ ತೆಗೆದ ಕರ್ಪುರದಂತಾಯಿತ್ತು. ಕತ್ತಲೆಯೊಳಗೆ ಬೆಳಗು ಹೊಕ್ಕಂತಾಯಿತ್ತು. ಗುಹೇಶ್ವರನ ಶರಣ ಮಡಿವಾಳ ಮಾಚಿತಂದೆಯ ಕೃಪೆಯಿಂದ ಬಸವಣ್ಣ ನಿನ್ನನು ಮಡಿವಾಳನನು ನಿನ್ನಿಂದ ಕಂಡೆನಯ್ಯ. ॥೩೨॥

ಮತ್ತಂ, ಅಷ್ಟತನುವಿನ ಘಟ್ಟಿಯ ಕರಗಿಸಿ, ಕಟ್ಟಗ್ರ ಕಾಮ ಕ್ರೋಧ ಲೋಭ, ಮೋಹ, ಮದ, ಮತ್ಸರಂಗಳೆಂಬವನು ಸುಟ್ಟುರುಹಿ, ತನುವಿನ ಅವಲೋಹವ ಕೆಡಿಸಿ, ಮನದ ಸಂಚಲವ ನಿಲಿಸಿ, ಸಕಲ ಕರಣಂಗಳ ಅರಿವಿಂಗಾಹುತಿಯನಿಕ್ಕಿ, ಸುಜ್ಞಾನ ಪ್ರಭೆಯನುಟ್ಟು, ಸುಜ್ಞಾನಪ್ರಭೆಯ ಹೊದೆದು, ಸುಜ್ಞಾನ ಪ್ರಭೆಯ ಸುತ್ತಿ, ಸುಜ್ಞಾನ ಪ್ರಭೆಯ ಹಾಸಿ, ಮಹಾಜ್ಞಾನದಲ್ಲಿ ನಿರ್ಭಾವ ಸಂಪನ್ನನಾದ ಮಡಿವಾಳನ ಮಡಿಯ ಪ್ರಸಾದವ ನಾನು ಹೊದೆದ ಕಾರಣ ನಿರ್ಮಳನಾದೆನು, ನಿಜೈಕ್ಯನಾದೆನು, ನಿಶ್ಚಿಂತನಾದೆನು. ಇದು ಕಾರಣ ಗುಹೇಶ್ವರಲಿಂಗದಲ್ಲಿ ತೆರಹಿಲ್ಲದಿರ್ದ ಮಡಿವಾಳನ ಪ್ರಸಾದದಿಂದ ನಿಮ್ಮ ಘನವನರಿದು ಬದುಕಿದೆನು ಕಾಣಾ ಸಂಗನಬಸವಣ್ಣಾ ॥೩೩॥

ಹೀಗೆಂದು ಪ್ರಭುದೇವರು ಮಡಿವಾಳಮಾಚಿತಂದೆಗಳ ಸ್ತುತಿಸಿ ಬಸವರಾಜದೇವರೊಡನೆ ನಿರೂಪಿಸಲು, ಆ ಮಡಿವಾಳ ಮಾಚಿ ತಂದೆಗಳು

ಪ್ರಭುದೇವರೊಡನೆ ಬಸವರಾಜದೇವರಿಂದ ನಿಮ್ಮ ಪ್ರಸಾದದ ನಿಲವ ಕಂಡೆನೆಂದು ಬಿನ್ನೈಸಿದ ಪ್ರಸ್ಥಾವದ ವಚನ. ॥

ಅಯ್ಯ ನಿಮ್ಮ ಪ್ರಸಾದದ ಮಹಿಮೆಯನೇನೆಂಬೆನಯ್ಯ! ವೇದಂಗಳರಿಯವು. ಶಾಸ್ತ್ರಂಗಳರಿಯವು. ಛಲವ ಸಾಧಿಸಿ ತನುವ ದಂಡಣೆಯ ಮಾಡಿ ಸಕಲ ಭೋಗಂಗಳ ಬಿಟ್ಟು ಸುಖದುಃಖವನನುಭವಿಸಿ ತಪ್ಪಿಲ್ಲದೆ ನಡೆದರೆ ಹಡೆವರಯ್ಯ ಒಚ್ಚಿ ಸ್ವರ್ಗದ ಭೋಗವನು. ಒಂದುವನು ಬಿಡಲಿಲ್ಲ. ಸಂದೇಹ ಮಾತ್ರವಿಲ್ಲ. ಆಗ ಬಿತ್ತಿ ಆಗ ಬೆಳೆವಂತೆ, ರೋಗಿ ಬಯಸಿತ್ತ ವೈದ್ಯ ಕೊಡುವಂತೆ, ಪಾಪದಂತಾದುದು ಪುಣ್ಯವನೆ ಮಾಡುವುದು. ಆತ ಉಂಡು ಉಪವಾಸಿ, ಬಳಸಿ ಬ್ರಹ್ಮಚಾರಿ ಎನಿಸುವ. ಹಿಡಿ ತಡೆ ಇಲ್ಲ. ನಡೆದುದೆ ಬಟ್ಟೆಯಾದ ಕಾರಣ ಪ್ರಸಾದದಿಂವತಃಪರವಿಲ್ಲ. ಪ್ರಸಾದಿಯಿಂದ ಮುಕ್ತರಿಲ್ಲ. ಇಂತಪ್ಪ ಪ್ರಸಾದವನು ನಿಮ್ಮ ಶರಣ ಬಸವಣ್ಣ ತೋರಿದನಾಗಿ ಎನ್ನ ಭವಂ ನಾಸ್ತಿಯಾಯಿತ್ತು ಕಾಣಾ ಪ್ರಭುವೇ ಕಲಿದೇವರದೇವಾ ॥೩೪॥

ಇಂತು ಮಡಿವಾಳ ತಂದೆಗಳು ಪ್ರಭುದೇವರೊಡನೆ ಬಸವರಾಜದೇವರ ಕೊಂಡಾಡಿ ಬಿನ್ನೈಸಲು ಆ ಬಸವರಾಜದೇವರು ಮಡಿವಾಳ ತಂದೆಗಳ ಸ್ತುತಿಸಿದ ಪ್ರಸ್ಥಾವದ ವಚನ. ॥

ಕೋಟಿ ರುದ್ರರು ಮಡಿದರು. ಅನಂತಕೋಟಿ ಬ್ರಹ್ಮ ವಿಷ್ಣುಗಳು ಮಡಿದರು. ನರ ಸುರ ಗರುಡ ಗಂಧರ್ವರು ಮಡಿದರು. ಅವರ ಮಡಿಯೊಳಗೆ ತಾನಾಗದೆ ತಾನೊಂದು ಹೊಸ ಬಿಳಿದು ಮಡಿಯ ಮಾಡಿ, ಎನಗೆ ಹೊದಕೊಟ್ಟು ಎನ್ನ ಬದುಕಿಸಿಕೊಂಡಾತ ಮಡಿವಾಳ ಕಾಣಾ ಕೂಡಲಸಂಗಮದೇವಾ. ॥೩೫॥

ಇಂತು ಬಸವರಾಜದೇವರು ಮಡಿವಾಳ ತಂದೆಗಳ ಸ್ತುತಿಸುತ್ತಿರಲು, ಆ ಮಡಿವಾಳಮಾಚಿ ತಂದೆಗಳು ಬಸವರಾಜದೇವರೊಡನೆ ಪ್ರಭುದೇವರ ಕೊಂಡಾಡಿದ ಪ್ರಸ್ಥಾವದ ವಚನ. ॥

ಅಂಗಯ್ಯ ಲಿಂಗ ಕಂಗಳ ನೋಟದಲ್ಲಿ ಅರತು ಲಿಂಗೈಕ್ಯನ ಮನದರಿವು ಸಿಭಾರ್ವದಲ್ಲಿ ಅರತು ಲಿಂಗೈಕ್ಯದ ಸರ್ವಾಂಗ ನಿಷ್ಠೆ ನಿರ್ಣಯವಾದ ಲಿಂಗೈಕ್ಯ ನಿಜವನುಂಡು ತೃಪ್ತನಾದ ಲಿಂಗೈಕ್ಯ ಮಹವನವಗ್ರಹಿಸದ ಘನವೇದ್ಯನಾದ ಲಿಂಗೈಕ್ಯ ಕಲಿದೇವರದೇವ ಪ್ರಭುವೆಂಬ ಲಿಂಗೈಕ್ಯನ ಶ್ರೀಪಾದದಲ್ಲಿ ಮಗ್ನನಾಗಿರ್ದೆನು. ॥೩೬॥

ಮತ್ತಂ, ಗುರುವಾಗಿ ಉಪದೇಶವ ತೋರಿದನೀತ, ಲಿಂಗವಾಗಿ ಮನವನಿಂಬುಗೊಂಡಾತನೀತ, ಜಂಗಮವಾಗಿ ಅರ್ಥ ಪ್ರಾಣಾಭಿಮಾನದ ದರ್ಪವ ಕೆಡಿಸಿದನೀತ, ಪ್ರಸಾದವಾಗಿ ಎನ್ನ ಸರ್ವಾಂಗ ವನವಗ್ರಹಿಸಿದನೀತ, ಪಾದೋದಕವಾಗಿ ಎನ್ನ ಒಳಹೊರಗೆ ತೊಳೆದಾತನೀತ, ಕಲಿದೇವರ ದೇವ ಬಸವಣ್ಣ ತೋರಿದನಾಗಿ ಪ್ರಭುವೆಂಬ ಮಹಿಮನ ಸಂಗದಿಂದೆ ಬದುಕಿದೆನು. ॥೨೭॥

ಹೀಗೆಂದು ಮಡಿವಾಳ ತಂದೆಗಳು ಪ್ರಭುದೇವರ ಸ್ತುತಿಯಿಸಿ, ಬಸವರಾಜದೇವರೊಡನೆ ಬಿನ್ನೈಸಲು, ಆ ಬಸವರಾಜದೇವರು ಪ್ರಭುದೇವರೊಡನೆ ಮಡಿವಾಳ ತಂದೆಗಳ ಸ್ತುತಿಸಿದ ಪ್ರಸ್ತಾವದ ವಚನ. ॥

ಎನ್ನ ಕಾಯವ ಶುದ್ಧವ ಮಾಡಿದಾತ ಮಡಿವಾಳ. ಎನ್ನ ಮನದ ನಿರ್ಮಳವ ಮಾಡಿದಾತ ಮಡಿವಾಳ. ಎನ್ನಂತರಂಗವ ಬೆಳಗಿದಾತ ಮಡಿವಾಳ. ಎನ್ನ ಬಹಿರಂಗವ ಬಿಡಿಸಿದಾತ ಮಡಿವಾಳ. ಕೂಡಲಸಂಗಮದೇವ ಎನ್ನ ನಿಮಗೆ ಯೋಗ್ಯನ ಮಾಡಿದಾತ ಮಡಿವಾಳ. ॥೨೮॥

ಮತ್ತಂ, ಸೂತ್ರಧಾರಿಯು ಮನದ ಮೈಲಿಗೆಯ ಕಳೆಯ ಬಂದನಯ್ಯಾ ಮಡಿವಾಳನು. ಎನ್ನ ಕಾಯದ ಮೈಲಿಗೆಯ ತಂದು ತನ್ನ ಮುಂದೆ ಇರಿಸಿದರೆ ಸಮತೆ ಎಂಬ ಕೂಪ ತೋಹಿನಲ್ಲಿ ಅದ್ದಿ ಅಟ್ಟಿ ಹಿಳಿದನಯ್ಯಾ. ಅವಗುಣವೆಂಬ ಪಂಚೇಂದ್ರಿಯ ವರ್ಗಂಗಳ ಜ್ಞಾನವೆಂಬ ನಿರ್ಮಳ ಜಲದಲ್ಲಿ ಅಲುಬಿ ಸೆಳೆದನಯ್ಯಾ. ರವಿ, ಶಶಿ, ಶಿಖಿಯ ತೇಜದಲ್ಲಿ ಆರಿಸಿದನು. ಚತುರ್ದಶ ಷೋಡಶವೆಂಬ ಗಳಿಗೆಯಂ ಮಾಡಿದನು. ಸದಾಧ್ಯಾನವೆಂಬ ಅಡೆಯ ಮೇಲಿರಿಸಿ ಸಮಗುಣವೆಂಬ ಕೊಡತಿಯಲ್ಲಿ ಘಟ್ಟಿಸಿದನು. ಹರಿಯಿತ್ತಯ್ಯಾ ಸೆರಗು ಮೂರಾಗಿ. ಆ ಮೂರರುವೆಯ ಕೊಟ್ಟನಯ್ಯಾ ಎನ್ನ ಕೈಯಲ್ಲಿ. ಆ ಅರುವೆಯ ಗುರುವಿಗೊಂದ ಕೊಟ್ಟೆನು. ಲಿಂಗಕ್ಕೊಂದ ಕೊಟ್ಟೆನು. ಜಂಗಮಕ್ಕೊಂದ ಕೊಟ್ಟೆನು. ಎನಗೆ ಕೊಟ್ಟ ಮೂರರುವೆಯನು ಒಂದು ಮಾಡಿ ಹೊದೆದುಕೊಂಡು ನಿಶ್ಚಿಂತವಾಗಿ ಮಡಿವಾಳನ ಕೃಪೆಯಿಂದಲಾನು ಬದುಕಿದೆನಯ್ಯಾ ಕೂಡಲಸಂಗಮದೇವಾ. ॥೨೯॥

ಮತ್ತಂ, ಮಡಿವಾಳ, ಮಡಿವಾಳನೆಂಬರು. ಮಡಿವಾಳನೆಂಬುದ ನಾರು ಅರಿಯರು. ಎನ್ನ ಮಲತ್ರಯದಲ್ಲಿ ಹೊದಕುಳಿಗೊಂಬ ಮನದ ಮೈಲಿಗೆಯ ತಂದು ನಾನು ತನ್ನ ಮನೆಗೆ ಕೊಂಡು ಹೋಗಿ ಹಾಯಿಕಿ

ಜಠರ ಕೈಮುಟ್ಟಿದರೆ ಆಗದೆಂದು ತನ್ನ ಪಾದದೊಳಗೆ ಮೆಟ್ಟಿ ಅಲುಬಿ ಸಳೆದನಯ್ಯಾ. ತನ್ನ ನಿರ್ಮಲವ ಕೊಟ್ಟನೆನಗೆ. ಆ ಕೊಟ್ಟ ಬೀಳುಡಿಗೆಯು ಹೊದೆದು ಕೊಂಡೆನಾಗಿ, ಆ ಮಡಿವಾಳ ಮಾಚಿ ತಂದೆಯ ಕೃಪೆಯಿಂದ ಲಾನು ಬದುಕಿದೆನಯ್ಯಾ ಕೂಡಲಸಂಗಮದೇವಾ. ॥೪೦॥

ಹೀಗೆಂದು ಬಸವರಾಜದೇವರು ಮಡಿವಾಳ ಮಾಚಿ ತಂದೆಗಳ ಹೊಗಳಲು, ಆ ಮಡಿವಾಳ ತಂದೆಗಳು ಮರಳಿ ಆ ಬಸವರಾಜದೇವರ ಕೊಂಡಾಡುವ ಪ್ರಸ್ಥಾವದ ವಚನ. ॥

ಬಿಂದುವ ಹರಿದು, ನಾದವನತಿಗಳೆದು, ಕಳೆಯ ಬೆಳಗ ಸಾಧಿಸಿ, ಅಸಾಧ್ಯ ಸಾಧಕನಾದೆಯಲ್ಲ ಬಸವಣ್ಣ. ಕಾಯವ ಹೊದ್ದದೆ ಮಾಯೆಯ ಸೋಂಕದೆ ನಿರಾಳನಾಗಿ ನಿಂದೆಯಲ್ಲ ಬಸವಣ್ಣ. ನಿನ್ನ ನಾನವಗ್ರಹಿಸಿ ಎನ್ನ ನೀನವಗ್ರಹಿಸಿ ಸಂದುಭೇದವಿಲ್ಲದಿರ್ದಲ್ಲಿ ಹೊಗಳಲಿಂಬುಂಟೆ ಬಸವಣ್ಣ? ಕಲಿದೇವರ ದೇವನು ಕಾಯಗೊಂಡಿಪ್ಪುದ ನಿನ್ನಿಂದಲಾನು ಕಂಡೆ ನೋಡಾ ಸಂಗನಬಸವಣ್ಣಾ. ॥೪೧॥

ಹೀಗೆಂದು ಮಡಿವಾಳ ತಂದೆಗಳು ಬಸವರಾಜದೇವರ ಕೊಂಡಾಡುತ್ತಿರಲು, ಆದಕ್ಕೆ ಪ್ರಭುದೇವರು ಬಸವಣ್ಣನ ಕೃಪೆಯಿಂದ ನಿಮ್ಮ ಘನವನರಿದೆನೆಂದು ಮಡಿವಾಳ ತಂದೆಗಳ ಕೊಂಡಾಡುವ ಪ್ರಸ್ಥಾವದ ವಚನ. ॥

ಆದಿಯ ಕಂಡೆ. ಅನಾದಿಯ ಕಂಡೆ. ಘನವ ಕಂಡೆ. ಮನವ ಕಂಡೆ. ಅನುವ ಕಂಡೆ. ಆಯತ ಸ್ವಾಯತ ಸನ್ನಿಹಿತವ ಕಂಡೆ. ಗುಹೇಶ್ವರಲಿಂಗದಲ್ಲಿ ಬಸವಣ್ಣನ ಕೃಪೆಯಿಂದ ನಿನ್ನ ಕಂಡೆ ಕಾಣಾ ಮಡಿವಾಳಮಾಚಯ್ಯಾ. ॥೪೨॥

ಹೀಗೆಂದು ಪ್ರಭುದೇವರು ಮಡಿವಾಳತಂದೆಗಳ ಸ್ತೋತ್ರಮಂ ಮಾಡಲು, ಆ ಮಡಿವಾಳ ತಂದೆಗಳು ಬಸವಣ್ಣನ ಕೃಪೆಯಿಂದ ನಿನ್ನ ಕಂಡು ಬದುಕಿದೆನೆಂದು ಆ ಪ್ರಭುದೇವರ ಸ್ತೋತ್ರಮಂ ಮಾಡಿದ ಪ್ರಸ್ಥಾವದ ವಚನ. ॥

ಎಲೆ ಕಲಿದೇವರದೇವಯ್ಯ, ಆದಿಯ ಕುಳವು ಅನಾದಿಯ ಕುಳವು ನಿಮ್ಮ ಜಂಗಮ ಮೂರ್ತಿಯಲ್ಲಿ ನಿಂದಿತ್ತು. ಮೂಲ ಶುದ್ಧದ ಮುಕ್ತಾಯು ನಿಮ್ಮ ಜಂಗಮ ಮೂರ್ತಿಯಲ್ಲಿ ನಿಂದಿತ್ತು. ಉಭಯ ಕುಳ ಕಿರಣ ಶಕ್ತಿ ನಿಮ್ಮ ಜಂಗಮ ಮೂರ್ತಿಯಲ್ಲಿ ನಿಂದಿತ್ತು. ಭಾವ ನಿರ್ಭಾವ ನಿಮ್ಮ ಜಂಗಮ ಮೂರ್ತಿಯಲ್ಲಿ ನಿಂದಿತ್ತು. ಆದಿ ಅನಾದಿಯು ನಿಮ್ಮ ಜಂಗಮ

ಮೂರ್ತಿಯಲ್ಲಿಯೆ ನಿಂದಿತ್ತು. ಸಾಧ್ಯ ಅಸಾಧ್ಯವು ನಿಮ್ಮ ಜಂಗಮ ಮೂರ್ತಿಯಲ್ಲಿ ನಿಂದಿತ್ತು. ಅರ್ಥ ಪ್ರಾಣಾಭಿಮಾನ ನಿಮ್ಮ ಜಂಗಮ ಮೂರ್ತಿಯಲ್ಲಿ ನಿಂದಿತ್ತು. ಅಂಗ ಲಿಂಗ ಸಂಗ ನಿಮ್ಮ ಜಂಗಮ ಮೂರ್ತಿಯಲ್ಲಿ ನಿಂದಿತ್ತು. ಅಷ್ಟದಳ ಕಮಲದ ಸಪ್ತಕರ್ಣಿಕೆಯರು ನಿಮ್ಮ ಜಂಗಮಮೂರ್ತಿಯಲ್ಲಿ ನಿಂದವು. ಎನ್ನ ನಡೆಗೆಟ್ಟಿತ್ತು ನಿಮ್ಮ ಜಂಗಮ ಮೂರ್ತಿಯಿಂದ. ಎನ್ನ ನುಡಿಗೆಟ್ಟಿತ್ತು ನಿಮ್ಮ ಜಂಗಮ ಮೂರ್ತಿಯಿಂದ. ಎನ್ನ ನೋಟ ಕೆಟ್ಟಿತ್ತು ನಿಮ್ಮ ಜಂಗಮಮೂರ್ತಿಯಿಂದ. ಎನ್ನ ಮಾಟ ಸಮಾಪ್ತಿಯಾಯಿತ್ತು ನಿಮ್ಮ ಜಂಗಮ ಮೂರ್ತಿಯಿಂದ. ನಿಮ್ಮ ಪ್ರಸಾದದಿಂದ ತನುವಾಯಿತ್ತು ಬಸವಣ್ಣ ತೋರಿದ ಕಾರಣ. ನಿಮ್ಮ ಜಂಗಮಮೂರ್ತಿಯ ಕಂಡು ಬದುಕಿದೆನು ಕಾಣಾ ಕಲಿದೇವರದೇವಾ. ॥೪೩॥

ಹೀಗೆಂಬ ಮಡಿವಾಳ ತಂದೆಗಳು ಬಸವರಾಜದೇವರ ಮುಖದಿಂದೆ ನಿಮ್ಮ ಮಹಾತ್ಮೆಯನರಿದು ಕೃತಾರ್ಥನಾದೆನೆಂದು ಪ್ರಭುದೇವರೊಡನೆ ಬಿನ್ನೈಸುತ್ತಿರಲು, ಇದಕ್ಕೆ ಬಸವರಾಜದೇವರು ಪ್ರಭುದೇವರೊಡನೆ ನಾನು ಮಡಿವಾಳ ತಂದೆಯ ಸಮರಸ ಭಾವದೊಳಿರ್ದೆನೆಂದು ಬಿನ್ನೈಸುವ ಪ್ರಸ್ಥಾವದ ವಚನ. ॥

ಕಲ್ಪಿತವ ಕಳೆದ. ಅಕಲ್ಪಿತವ ತಿಳುಹಿದ. ಮನವ ಮಾಣಿಸಿ, ಘನವ ನೆಲೆಗೊಳಿಸಿದ. ತನುವ ಕೆಡಿಸಿ ಮನಸ್ಥಾಪ್ಯವ ಮಾಡಿದ. ಅಂತರಂಗದಲ್ಲಿ ಮಹಾಜ್ಞಾನವ ತುಂಬಿದ. ಬಹಿರಂಗದಲ್ಲಿ ಸದಾಚಾರವ ನೆಲೆಗೊಳಿಸಿದ. ನಿಮ್ಮ ನಿಲವನೆನಗೆ ಒರೆದೊರೆದು ಹೇಳಿ ತೋರಿಸಿ, ಎನ್ನ ನಿಮ್ಮ ಶ್ರೀಪಾದಕ್ಕೆ ಯೋಗ್ಯನ ಮಾಡಿದ ಕೂಡಲಸಂಗಮದೇವಯ್ಯ ನಿಮ್ಮ ಮಹಾಮನೆಯಲ್ಲಿ ಮಡಿವಾಳನು ನಾನು ಕೂಡಿ ಸುಖದಲ್ಲಿ ಇದ್ದೆವಯ್ಯ. ॥೪೪॥

ಹೀಗೆಂದು ಬಸವರಾಜದೇವರು ಪ್ರಭುದೇವರೊಡನೆ ಮಡಿವಾಳ ತಂದೆಗಳ ತಮ್ಮ ಸಮರಸ ಸ್ವಾನುಭಾವಮಂ ಬಿನ್ನೈಸಲು, ಮಡಿವಾಳ ತಂದೆಗಳು ತಮ್ಮ ಬಸವರಾಜದೇವರ ಸಮರಸಭಾವಮಂ ಬಿನ್ನೈಸುತ್ತಿರ್ದ ಪ್ರಸ್ಥಾವದ ವಚನ. ॥

ಹೋಗಬಾರದು ಕಲ್ಯಾಣವನಾರಾವಡೆಯು. ಹೊಕ್ಕಡೇನು, ಕಲ್ಯಾಣದ ಸ್ಥಾನಮಾನಂಗಳನರಿಯಬಾರದು. ಕಲ್ಯಾಣದ ಕಡೆಯ ಕಾಣಬಾರದು. ಕಲ್ಯಾಣದೊಳಗೆ ಹೊಕ್ಕಿಹೆವೆಂದು ಕಲ್ಯಾಣ ಚಾರಿತ್ರನಾದೆವೆಂದು ದೇವದಾನವ ಮಾನವರೆಲ್ಲರು ಭಾವಿಸುತ್ತಿರ್ದರು ನೋಡಾ! ಕಲ್ಯಾಣ

ವನು ಅನಂತ ಮೂರ್ತಿಗಳು ಅನಂತ ಸ್ಥೂಲಮೂರ್ತಿಗಳು ಅನಂತ ಸೂಕ್ಷ್ಮ ಮೂರ್ತಿಗಳು, ಅನಂತ ಮಂತ್ರ ಧ್ಯಾನಮೂರ್ತಿಗಳು ಪುಣ್ಯಕ್ಕೆ ಅಭಿಲಾಷೆಯ ಮಾಡುವರು. ಪೂಜಕರು, ಯೋಗಿಗಳು, ಭೋಗಿಗಳು, ದ್ವೈತರು, ಅದ್ವೈತರು, ಕಾಮಿಗಳು, ನಿಃಕಾಮಿಗಳು, ಆಶ್ರಿತರು, ಅದೆಂತು ಕಲ್ಯಾಣವ ಹೊಗಬಹುದಯ್ಯ? ಅದೆಂತು ಕಲ್ಯಾಣವ ಕಾಣಬಹುದಯ್ಯ! ಕಲ್ಯಾಣವನು ಲಿಂಗವೃಷ್ಟಂಗಲ್ಲದೆ, ಲಿಂಗವೇದ್ಯಂಗಲ್ಲದೆ ಲಿಂಗಗಂಭೀರಂಗಲ್ಲದೆ, ಪ್ರಸಾದಕುಳಾನ್ವಯಂಗಲ್ಲದೆ, ಆಸೆಗೆಡೆಗುಡದಿಪ್ಪುದೆ ಕಲ್ಯಾಣ? ಸರ್ವಾಂಗವನಳಿದು, ಕುಲಮದ ತಲೆದೊರದೆ, ಭಕ್ತಿ ನಿತ್ಯವಾದುದೇ ಕಲ್ಯಾಣ. ಈ ಕಲ್ಯಾಣವೆಂಬ ಮಹಾಘನದೊಳಗೆ ಬಸವಣ್ಣನು ನಾನು ಕೂಡಿ ಹದುಳದೊಳಿರ್ದೆವು ಕಾಣಾ ಕಲಿದೇವರದೇವಾ. ॥೪೫॥

ಹೀಗೆಂದು ಮಡಿವಾಳ ತಂದೆಗಳು ಬಿನ್ನೈಸಲು, ಇದಕ್ಕೆ ಪ್ರಭುದೇವರು ಬಸವರಾಜದೇವರೊಡನೆ ಹೇಳಿ ಮಡಿವಾಳತಂದೆಗಳ ಸ್ತೋತ್ರಮಂ ಮಾಡುವ ಪ್ರಸ್ಥಾವದ ವಚನ. ॥

ಒಂದ ಮಾಡಹೋದರೆ ಮತ್ತೊಂದಾಯಿತ್ತೆಂಬುದು ಎನಗಾಯಿತ್ತು ನೋಡಾ! ಮಡಿವಾಳನ ಪರಿಯನೊರೆದು ನೋಡಿದರೆ ನಿನ್ನ ಪೂರ್ವಾಪರವೆ ಎನಗರಿಯ ಬಂದಿತ್ತು ನೋಡಾ! ನಿನ್ನ ಪೂರ್ವಾಪರ ಸಂಗವ ಮಾಡ ಬಂದರೆ ಎನ್ನ ಪೂರ್ವಾಪರವೆನಗರಿಯ ಬಂದಿತ್ತು ನೋಡಾ. ಮಹಾಜ್ಞಾನಿಗಳ ಸಂಗದಿಂದೆ ಉಭಯಸಂಗ ಸಿದ್ಧಿ ಎಂಬುದು ದಿಟವಾಯಿತ್ತು ನೋಡಾ ಬಸವಣ್ಣ. ಗುಹೇಶ್ವರನ ಶರಣ ಮಡಿವಾಳನ ಪಾದಕ್ಕೆ ನಮೋ ನಮೋ ಎನುತಿರ್ದೆನು. ॥೪೬॥

ಹೀಗೆಂದು ಪ್ರಭುದೇವರು ಬಸವರಾಜದೇವರೊಡನೆ ಮಡಿವಾಳತಂದೆಗಳ ಮಹಾತ್ಮೆಯನು ನಿನ್ನಿಂದ ಕಂಡೆನೆಂದು ಕೊಂಡಾಡಿ ಹೇಳುತ್ತಿರಲು, ಇದಕ್ಕೆ ಬಸವರಾಜದೇವರು ಮಡಿವಾಳ ತಂದೆಗಳ ಶ್ರೀಪಾದದ ಘನವನು ಚನ್ನಬಸವಣ್ಣ ತೋರಿದನಾಗಿ ಅರಿದು ಸುಖಿಯಾದೆನೆಂದು ಬಿನ್ನೈಸುವ ಪ್ರಸ್ಥಾವದ ವಚನ. ॥

ಅಯ್ಯ ಎನ್ನ ಕಾಯದಲ್ಲಿ ಮಡಿವಾಳನ ತೋರಿದ. ಅಯ್ಯ ಎನ್ನ ಮನದಲ್ಲಿ ತನ್ನ ನಿಲವ ತೋರಿದ. ಎನ್ನ ಅರಿವಿನಲ್ಲಿ ನಿಮ್ಮ ತೋರಿದ. ಇಂತೀ ತ್ರಿವಿಧ ಸ್ವಾಯತವನು ಎನ್ನ ಸರ್ವಾಂಗದಲ್ಲಿ ಪ್ರತಿಷ್ಠಿಸಿ ತೋರಿದ. ಕೂಡಲ

ಸಂಗಮದೇವಯ್ಯ ಚನ್ನಬಸವಣ್ಣನ ಕರುಣದಿಂದೆ ಮಡಿವಾಳನೆಂಬ ಪರುಷ ಸಾಧ್ಯವಾಯಿತ್ತಯ್ಯ ಎನಗೆ. ॥೪೭॥

ಹೀಗೆಂದು ಬಸವರಾಜದೇವರು ನಿರೂಪಿಸಲು, ಇದಕ್ಕೆ ಚಿಕ್ಕದಣ್ಣಾಯಕರು ಆ ಬಸವರಾಜದೇವರಿಗೆ ಕೊಟ್ಟ ಪ್ರತ್ಯುತ್ತರ. ॥

ನಾನೊಂದ ತೋರಲರಿಯೆನು. ನಾನೊಂದ ಹೇಳಲರಿಯೆನು. ನಾನೊಂದ ಸ್ಥಲವಿಡಲರಿಯೆನು. ನಾನೊಂದ ಕುಳವಿಡಲರಿಯೆನು. ಕೂಡಲ ಸಂಗಮದೇವರಲ್ಲಿ ಮಡಿವಾಳನ ನಿಲವ ನಾನೆತ್ತ ಬಲ್ಲೆನು ಹೇಳಾ ಸಂಗನ ಬಸವಣ್ಣಾ? ॥೪೮॥

ಹೀಗೆಂದು ಚಿಕ್ಕದಣ್ಣಾಯಕರು ಮಡಿವಾಳ ತಂದೆಗಳ ಮಹಾತ್ಮೆಯಂ ಕೊಂಡಾಡುತ್ತಿರಲು, ಇದಕ್ಕೆ ಮಡಿವಾಳ ತಂದೆಗಳು ಬಸವರಾಜದೇವರ ಸ್ತೋತ್ರಮಂ ಮಾಡುವ ಪ್ರಸ್ಥಾವದ ವಚನ.

ಅಹುದಹುದು. ಇಂತಿರಬೇಡವೆ ನಿರಹಂಕಾರ? ಮಹಾಜ್ಞಾನಕ್ಕೆ ನಿರಹಂಕಾರವೇ ಶೃಂಗಾರ. ನಿರಹಂಕಾರಕ್ಕೆ ಭಕ್ತಿಯೆ ಶೃಂಗಾರ. ಆ ಭಕ್ತಿಗೆ ಬಸವಣ್ಣನೆ ಶೃಂಗಾರ. ಆ ಬಸವಣ್ಣಂಗೆ ಚನ್ನಬಸವಣ್ಣನೆ ಶೃಂಗಾರ. ಕಲಿದೇವರದೇವ ಎನಗೆಯು ನಿನಗೆಯು ಚನ್ನಬಸವಣ್ಣನೆ ಶೃಂಗಾರ. ॥೪೯॥

ಹೀಗೆಂದು ಮಡಿವಾಳ ತಂದೆಗಳು ಚಿಕ್ಕದಣ್ಣಾಯಕರ ಮಹಾತ್ಮೆಯ ಪೊಗಳಲು, ಆ ಚಿಕ್ಕದಣ್ಣಾಯಕರು ಮಡಿವಾಳ ತಂದೆಗಳ ಸ್ತೋತ್ರಮಂ ಮಾಡುವ ಪ್ರಸ್ಥಾವದ ವಚನ. ॥

ಅಘಟಿತ ಘಟಿತವೆಂಬ ಮಹಾಘನವ ಸಾಧಿಸುವರೆ ಮಡಿವಾಳನ ಕೃಪೆಯಾಗದನಕ್ಕ ಎಂತರಿಯ ಬಹುದು ನಿಜಲಿಂಗೈಕ್ಯವನು? ಎನ್ನ ಆರೂಢಿಯ ಅರುಹಿಂಗೆ ನೀನೆ ಶೃಂಗಾರ. ಕೂಡಲ ಚನ್ನಸಂಗಮದೇವರಲ್ಲಿ ಮಡಿವಾಳನ ಕೆಯ್ಯ ಸ್ವಾಯತವಾದೆನು ಕಾಣಾ ಪ್ರಭುವೆ. ॥೫೦॥

ಹೀಗೆಂದು ಚಿಕ್ಕದಣ್ಣಾಯಕರು ನಿರೂಪಿಸಲು, ಇದಕ್ಕೆ ಮಡಿವಾಳ ತಂದೆಗಳು ಚಿಕ್ಕದಣ್ಣಾಯಕರ ಕೃಪೆಯು ಎನಗೆ ಸಾಧ್ಯವ ಮಾಡಿಕೊಡಿ ಎಂದು ಪ್ರಭುದೇವರನುಪಾವಸ್ಥೆಯಂ ಮಾಡುವ ಪ್ರಸ್ಥಾವದ ವಚನ. ॥

ಒಂದು ಕೈಯ್ಯ ಬಯಲನೆನಗೆ ಕೊಟ್ಟನು. ಒಂದು ಕೈಯ್ಯ ಬಯಲನೆನಗೆ ಚನ್ನಬಸವಣ್ಣಂಗೆ ಕೊಟ್ಟನು. ನೀವು ಬಂದಿಹರೆಂದು

ಎಂಟುಸಾವಿರ ವರುಷ ಒಗೆದೊಗೆದು ಬಿಳಿದು ಮಾಡುತ್ತಿದ್ದೆನು. ಒಂದು ಬಿಳಿದು ಬಸವಣ್ಣ ನಿನ್ನ ಲಿಂಗಕ್ಕೆ ಕೊಡೆಂದು ಕೊಟ್ಟರೆ ಲಿಂಗಕ್ಕೆ ಕೊಡ ಲೊಲ್ಲದೆ ತಲೆಗೆ ಸುತ್ತಿಕೊಂಡನು. ಮಡಿಯ ಕೂಲಿಯ ಬೇಡಹೋದರೆ ಬಿಳಿದ ಹರಿದು, ಎನ್ನ ಮೇಲೆ ಬಿಸಾಟನು. ನೀನುಟ್ಟ ಬಿಳಿದೊಡಿ ಗೆಯ ಚನ್ನಬಸವಣ್ಣನ ಕೈಯ್ಯಲ್ಲಿ ನಿರಾಳವನೆನಗೆ ಕೊಡಿಸಾ ಪ್ರಭುವೇ ಕಲಿದೇವರದೇವಾ. ॥೫೧॥

ಹೀಗೆಂದು ಮಡಿವಾಳ ತಂದೆಗಳು ನಿರೂಪಿಸಲು, ಇದಕ್ಕೆ ಚಿಕ್ಕದ ಣ್ಣಾಯಕರು, ಮಡಿವಾಳ ತಂದೆಗಳೊಡನೆ ನುಡಿದ ಪ್ರತ್ಯುತ್ತರ. ॥

ನರಸುರಾದಿಗಳೆಲ್ಲರು ನಿಮ್ಮ ಹೊಳೆಯಲ್ಲಿದ್ದರು. ಮನುಮುನಿ ಯತಿ ವ್ರತಿಗಳೆಲ್ಲರು ನಿಮ್ಮ ತೋಹಿನೊಳಗಿದ್ದರು. ಗಂಗೆ ವಾಳುಕರೆಲ್ಲರು ನಿಮ್ಮ ಮಡಿಯೊಳಡಗಿದರು. ಗಂಗೆ ಗೌರೀವಲ್ಲಭರೆಲ್ಲರು ಚತುರ್ಮುಖ ಪಂಚಮುಖ ಷಣ್ಮುಖ ದಶಮುಖರೆಲ್ಲರು ನಿಮ್ಮ ಮಡಿಯ ಗಳಿಗೆಯೊ ಳರ್ದಿದರು. ಲೋಕಾದಿಲೋಕವೆಲ್ಲವು ನಿಮ್ಮ ಕುಕ್ಷಿಯೊಳಗು. ಕೂಡಲ ಚನ್ನಸಂಗಮದೇವರು ಸಾಕ್ಷಿಯಾಗಿ ನಿಮ್ಮ ನಿರಾಳ ಪ್ರಸಾದದಿಂದ ನಿರವ ಯಲ ಹಾದಿಯ ಕಂಡೆನಲ್ಲದೆ, ನಿಮ್ಮಿಂದಲಾನು ಘನವೆ ಮಡಿವಾಳ ಮಾಚಯ್ಯ? ॥೫೨॥

ಹೀಗೆಂದು ಚನ್ನಬಸವರಾಜದೇವರು ನಿರೂಪಿಸಲು, ಇದಕ್ಕೆ ಮಡಿ ವಾಳ ತಂದೆಗಳು ಆ ಬಸವರಾಜದೇವರನು ಚನ್ನಬಸವರಾಜದೇವರನು ಪ್ರಭುದೇವರನು ಸ್ತೋತ್ರವಂ ಮಾಡಿದ ಪ್ರಸ್ಥಾವದ ವಚನ. ॥

ಎನ್ನಂಗದಾಚಾರದಲ್ಲಿ ಸಂಗನಬಸವಣ್ಣನ ಕಂಡೆನು. ಎನ್ನ ಮನದ ಅರಿವಿನಲ್ಲಿ ಚನ್ನಬಸವಣ್ಣನ ಕಂಡೆನು. ಎನ್ನ ಭಾವದ ಕೊನೆಯ ಮೊನೆಯ ಮೇಲೆ ಅಲ್ಲಮಪ್ರಭುದೇವರ ಕಂಡೆನು. ಎಲೆ ಕಲಿದೇವರ ದೇವಯ್ಯ ನಿಮ್ಮ ಶರಣರ ಘನವನು ಎನ್ನ ಸರ್ವಾಂಗದಲ್ಲಿ ಕಂಡು ನಮೋ ನಮೋ ಎನುತಿರ್ದೆನು. ॥೫೩॥

ಇಂತೀ ಶ್ರೀಮತ್ಸಕಲಗಣ ಪುರಾತನರೊಳ್ ಪ್ರಭುದೇವರು ಮಹಾ ನುಭಾವಸದ್ಗೋಷ್ಠಿಯಂ ಮಾಡಿದ ಶೂನ್ಯಸಂಪಾದನೆಯೊಳ್ ಪ್ರಭುದೇ ವರ ಮಡಿವಾಳಯ್ಯಗಳ ಸಂವಾದನೆಗಂ ನವಮೋಪದೇಶ ಸಮಾಪ್ತ. ಮಂಗಳಮಹಾ ಶ್ರೀ ಶ್ರೀ ಶ್ರೀ ಶ್ರೀ ಶ್ರೀ

---

# ಸಿದ್ಧರಾಮಯ್ಯನ ಗುರುಕರುಣ.

## (ದಶನೋಪದೇಶ.)

ಕಂದ॥ ಶಿವಯೋಗಿ ಸಿದ್ಧರಾಮಗೆ। ಅವಿರಳ ಶಿವಲಿಂಗದೀಕ್ಷೆಯಂ ಸಂತಸದಿಂ॥ ಬುವಿಯರಿಯೆ ಚನ್ನಬಸವಂ। ತವೆ ಇತ್ತುದ ಪೇಳ್ವೆ ಶರಣ ಜನ ಮುದವೆಯಿದಲ್॥

ಅದೆಂತೆಂದೊಡೆ, ಪ್ರಭುದೇವರು ಬಸವರಾಜದೇವರು ಚನ್ನಬಸವ ರಾಜದೇವರು ಮಡಿವಾಳ ಮಾಚಿ ತಂದೆಗಳು ಮುಖ್ಯವಾದ ಅಸಂಖ್ಯಾತ ಮಹಾ ಪುರಾತನರು ಮಹಾನುಭಾವ ಸದ್ಗೋಷ್ಠಿಯಂ ಮಾಡುತ್ತಿರ್ಪ ಪ್ರಸ್ತಾವದೊಳು ಪರಶಿವ ಯೋಗೀಶ್ವರನಪ್ಪ ಸಿದ್ಧರಾಮಯ್ಯದೇವರು ಪ್ರಭುದೇವರ ಕೂಡೆ ನಿಮ್ಮ ಕರಸ್ಥಲದ ಲಿಂಗದ ನಿಜವ ಬಸವರಾಜದೇವರಿಂದೆ ಹೇಳಿಸಿಹೆನೆಂದು ಕರೆದುಕೊಂಡು ಬಂದಿರಿ. ಆ ಲಿಂಗದ ನಿಜವಂ ನಿರೂಪಿಸೆಂದು ಬಿನ್ನೈಸುವ ಪ್ರಸ್ತಾವದ ವಚನ.॥

ಅಯ್ಯಾ ಕಾಯ ಲಿಂಗವೋ? ಕಾಯದಲ್ಲಿ ಸಾರಿಪ್ಪ ಲಿಂಗ ಲಿಂಗವೋ ಪ್ರಾಣ ಲಿಂಗವೊ? ಪ್ರಾಣದಲ್ಲಿ ಸಾರಿಪ್ಪ ಲಿಂಗ ಲಿಂಗವೋ? ಜ್ಞಾನ ಲಿಂಗವೋ? ಜ್ಞಾನದ ಮೊನೆಯಲ್ಲಿ ಬೆಳಗುವ ಲಿಂಗ ಲಿಂಗವೊ? ಲಿಂಗಪ್ರಾಣ ಪ್ರಾಣ ಲಿಂಗವೆಂತೆಂದರಿಯೆನು. ನಿಮ್ಮ ಕಾಯದ ಕರಸ್ಥಲವ ಸಾರಿದ ಲಿಂಗ ಪ್ರಾಣದೊಳಗೆ ವೇದ್ಯವಾದ ಪರಿಯನುಪದೇಶಿಸಿ ಕೃಪೆಯ ಮಾಡಾ ಪ್ರಭುವೆ ಕಪಿಲಸಿದ್ಧ ಮಲ್ಲಿಕಾರ್ಜುನ. ॥೧॥

ಹೀಗೆಂದು ಸಿದ್ಧರಾಮಯ್ಯ ದೇವರು ಪ್ರಭುದೇವರ ಬೆಸಗೊಳಲು, ಆ ಪ್ರಭುದೇವರು ಸಿದ್ಧರಾಮಯ್ಯ ದೇವಂಗೆ ಹೇಳೆಂದು ಬಸವರಾಜದೇವರಿಗೆ ಬೆಸಗೊಂಬ ಪ್ರಸ್ಥಾವದ ವಚನ.॥

ಒಂದೂ ಇಲ್ಲದ ಬಿಂದುವ ತಂದೆ. ಇಲ್ಲದ ಕಂದನ ಮಾತೆ ಇಲ್ಲದ ಜಾತನ, ಗಮನವಿಲ್ಲದ ಗಮ್ಯನ, ಮೂವರರಿಯದ ಮುಗ್ಧನ ತಾವ ತೋರಿಸಾ ಗುಹೇಶ್ವರಲಿಂಗದಲ್ಲಿ ಸಂಗನಬಸವಣ್ಣಾ. ॥೨॥

ಇಂತು ಪ್ರಭುದೇವರು ಮಹಾ ಘನವಪ್ಪ ಇಷ್ಟಲಿಂಗದ ನಿಲವ ಸಿದ್ಧರಾಮಯ್ಯದೇವರ ಕುರಿತು ಬಸವರಾಜದೇವರ ಬೆಸಗೊಳಲು, ಆ

ಬಸವರಾಜದೇವರು ಸಿದ್ಧರಾಮಯ್ಯದೇವರ ಅಂಗದ ಮೇಲೆ ಲಿಂಗವಿಲ್ಲದುದನರಿದು, ಪ್ರಭುದೇವರಿಗೆ ನಮಸ್ಕಾರಮಂ ಮಾಡುವ ಮುಖದಲ್ಲಿ ನಿರೂಪಿಸಿದ ಪ್ರಸ್ತಾವದ ವಚನ. ॥

ಎನ್ನ ಕಾಯದ ಕರಸ್ಥಲದಲ್ಲಿ ಅಲ್ಲಮಪ್ರಭುದೇವರ ಕಂಡೆನು. ಎನ್ನ ಮನದ ಕರಸ್ಥಲದಲ್ಲಿ ಚನ್ನಬಸವಣ್ಣನ ಕಂಡೆನು. ಎನ್ನ ಅರಿವಿನ ಕರಸ್ಥಲದಲ್ಲಿ ಮಡಿವಾಳಯ್ಯನ ಕಂಡೆನು. ಒಳಗು ಹೊರಗು ಒಳಗೆಂಬ ಭೇದವನರಿಯದೆ ಇದ್ದೆನು. ಕೂಡಲಸಂಗಮದೇವಯ್ಯ ನಿಮ್ಮ ಶರಣರು ಪಾವನವ ಮಾಡಿದ ಪರಿಣಾಮವ ಅಂತಿಂತೆನಲಮ್ಮದೆ ನಮೋ ನಮೋ ಎನುತಿರ್ದೆನು. ॥೩॥

ಹೀಗೆಂದು ಬಸವರಾಜದೇವರು ಸಿದ್ಧರಾಮಯ್ಯದೇವರಿಗೆ ಅಂಗಲಿಂಗ ಸಂಬಂಧವಿಲ್ಲದಿದ್ದರೆ ಎನ್ನ ಮನ ಒಪ್ಪದೆಂದು ಬಿನ್ನೈಸಿದ ಪ್ರಸ್ತಾವದ ವಚನ. ॥

ಸಮಯ ವಿರುದ್ಧಕಂಜಿ ವಿನಯವ ನುಡಿವೆ. ಕೊಂದರೆ ಕೊಲ್ಲು, ಕಾಯಿದರೆ ಕಾಯಿ. ಎನ್ನವರೆಂದು ಮನ ಹಿಡಿಯದು ಕೂಡಲಸಂಗಮದೇವಾ. ॥೪॥

ಹೀಗೆಂದು ಬಸವರಾಜದೇವರು ಪ್ರಭುದೇವರೊಡನೆ ಬಿನ್ನೈಸಲು, ಸಿದ್ಧರಾಮಯ್ಯದೇವರು ಆ ಪ್ರಭುದೇವರ ಕೂಡೆ ಮಡಿವಾಳನೆಂಬ ಪರಬ್ರಹ್ಮವ ಎನ್ನಂತರಂಗದಲ್ಲಿ ಕಂಡು, ಮನ ಮಗ್ನವಾಗಿಪ್ಪೆನೆಂದು ಬಿನ್ನೈಸಿದ ಪ್ರಸ್ತಾವದ ವಚನ. ॥

ಬೆಳಗು ಬೆಳಗು ಹಳಚುವಲ್ಲಿ ಕತ್ತಲೆ ಉಳಿಯಬಲ್ಲುದೆ ಅಯ್ಯ? ಶರಣರು ಶರಣರು ಮಹಾನುಭಾವ ಗೋಷ್ಠಿಯ ಮಾಡುವಲ್ಲಿ ಸಂಗವೊಳಿರ್ದವರ ಅಜ್ಞಾನವಳಿದು, ನಿಜವನೈದುವರಯ್ಯ? ನಿಮ್ಮ ಮಹಾನುಭಾವದ ಸೋಂಕಿನ ಸೆರಗಿನೊಳಗಿರ್ದು ನಾನು ಪರಮ ಸುಖಿಯಾಗಿ ಮಡಿವಾಳನ ಪಾದದಲ್ಲಿ ಮನ ಮಗ್ನನಾದೆನು ಕಾಣಾ ಪ್ರಭುವೇ ಕಪಿಲಸಿದ್ಧ ಮಲ್ಲಿಕಾರ್ಜುನ. ॥೫॥

ಇಂತೆಂದು ಸಿದ್ಧರಾಮಯ್ಯದೇವರು ನುಡಿಯಲು, ಚನ್ನಬಸವಣ್ಣ ಕೇಳಿ ಅಂಗದ ಮೇಲೆ ಲಿಂಗಸಂಬಂಧವಿಲ್ಲದವರಿಗೆ ಪ್ರಾಣಲಿಂಗಸಂಬಂಧವಿಲ್ಲವೆಂದು ನಿರೂಪಿಸಿದ ಪ್ರಸ್ತಾವದ ವಚನ. ॥

ಅಂಗದ ಮೇಲೆ ಲಿಂಗವಿಲ್ಲದನ್ನಕ್ಕರ ಪ್ರಾಣಲಿಂಗದಲ್ಲಿ ಪರಿಣಾಮವನೆಯ್ದುವ ಪರಿ ಎಂತಯ್ಯ? ಅಂಗತ್ರಯವುಳ್ಳವರು ಲಿಂಗತ್ರಯ ಸಂಪನ್ನರಾಗಬೇಕು. ಒಂದಂಗ ವಿರಹಿತರಾದವರುಂಟೆ? ಕಂಗಳ ನೋಟಕ್ಕೆ ಇಂಬಾವುದು ಹೇಳಾ? ಬಂದಂಗವ ಬಿಟ್ಟು ಒಂದಂಗವ ತೋರದಾಗಿ ಸಂದು ಭೇದವಿಲ್ಲದಿಪ್ಪ ಮಡಿವಾಳನ ನಿಲವು ಕೂಡಲ ಚನ್ನಸಂಗನಲ್ಲಿ ನಿನಗೆಂತು ಸಾಧ್ಯವಾಯಿತ್ತು ಹೇಳಾ ಸಿದ್ಧರಾಮಯ್ಯ? ॥೬೬॥

ಹೀಗೆಂದು ಚಿಕ್ಕದಣ್ಣಾಯಕರು ನಿರೂಪಿಸಲು, ಇದಕ್ಕೆ ಸಿದ್ಧರಾಮಯ್ಯದೇವರು ಕೊಟ್ಟ ಪ್ರತ್ಯುತ್ತರ. ॥

ತನು ಉಂಟೆಂಬ ಭಾವ ಮನದಲ್ಲಿಲ್ಲವಯ್ಯ! ಮನ ಉಂಟೆಂಬ ಭಾವ ಅರಿವಿನಲ್ಲಿಲ್ಲವಯ್ಯ. ಅರಿವು ಉಂಟೆಂಬ ಭಾವ ನುಡಿಯೊಳಗಿಲ್ಲವಯ್ಯ. ಇಂತೀ ತನು ಮನ ಜ್ಞಾನವೆಂಬ ತ್ರಿವಿಧವು ಏಕಾರ್ಥವಾದ ಬಳಿಕ ಆವ ತನುವಿನ ಮೇಲೆ ಸ್ವಾಯತವ ಮಾಡುವೆ? ಎನ್ನ ಕಾಯವೆ ಬಸವಣ್ಣನು. ಎನ್ನ ಪ್ರಾಣಲಿಂಗವೆ ಪ್ರಭುದೇವರು. ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ ಒಳಗು ಹೊರಗೆಂಬುದಿಲ್ಲ ಕಾಣಾ ಚನ್ನಬಸವಣ್ಣಾ. ॥೬೭॥

ಹೀಗೆಂದು ಸಿದ್ಧರಾಮಯ್ಯ ದೇವರು ಬಿನ್ನೈಸಲು, ಇದಕ್ಕೆ ಚಿಕ್ಕದಣ್ಣಾಯಕರು ಕೊಟ್ಟ ಪ್ರತ್ಯುತ್ತರ. ॥

ಅಂಗವಿಲ್ಲೆಂಬಲ್ಲಿಯೂ, ಅಂಗ ಶಂಕೆ ಬಿಡದು. ಲಿಂಗ ಉಂಟೆಂಬಲ್ಲಿಯೂ, ಲಿಂಗ ಶಂಕೆ ಬಿಡದು. ಇಲ್ಲೆಂಬುದಕ್ಕೆ ಉಂಟೆಂಬುದೆ ಮರಹು. ಉಂಟೆಂಬುದಕ್ಕೆ ಇಲ್ಲೆಂಬುದೆ ಮರಹು. ಉಂಟಿಲ್ಲವೆಂಬುದಳಿದುಳಿದಲ್ಲದೆ ಪ್ರಾಣಲಿಂಗ ಸಂಬಂಧ ಸ್ವಾಯತವಾಗದು. ಕೂಡಲ ಚನ್ನಸಂಗಯ್ಯನಲ್ಲಿ ಪ್ರಾಣಲಿಂಗ ಸಂಬಂಧ ನಿನಗೆಲ್ಲಿಯದು ಹೇಳಾ ಸಿದ್ಧರಾಮಯ್ಯ? ॥೬೮॥

ಹೀಗೆಂದು ಚಿಕ್ಕದಣ್ಣಾಯಕರು ನಿರೂಪಿಸಲು, ಇದಕ್ಕೆ ಸಿದ್ಧರಾಮಯ್ಯದೇವರು ಬಿನ್ನೈಸಿದ ಪ್ರಸ್ತಾವದ ವಚನ. ॥

ತನುವಿದ್ದು ತನುವಿಲ್ಲ. ಮನವಿದ್ದು ಮನವಿಲ್ಲ. ಭಾವವಿದ್ದು ಭಾವವಿಲ್ಲವೆಂಬುದಿಲ್ಲ. ನೀನೆಂಬುದುಂಟಾಗಿ ಭೃತ್ಯಾಚಾರವಿಲ್ಲ. ನಾನೆಂಬುದುಂಟಾಗಿ ಅಹಂಕಾರವಿಲ್ಲ. ಕಪಿಲಸಿದ್ಧ ಮಲ್ಲಿನಾಥಯ್ಯನಲ್ಲಿ ಲಿಂಗಸಂಗ ನಿರ್ಲೇಪವೆಂಬುದ ನಿದಿರಿಂಗೆ ನುಡಿದು ಹೇಳಬಾರದು ಕಾಣಾ ಚನ್ನಬಸವಣ್ಣ. ॥೬೯॥

ಹೀಗೆಂದು ಸಿದ್ಧರಾಮಯ್ಯ ದೇವರಿಗೆ ಚನ್ನಬಸವರಾಜದೇವರು ಮಥನ ಸಂಸರ್ಗಗೋಷ್ಠಿಯೊಳು ಒರೆದೊರೆದು ನೋಡುವ ಪ್ರಸ್ತಾವದೊಳು ಪ್ರಭುದೇವರು ನಿರೂಪಿಸಿದ ಪ್ರಸ್ತಾವದ ವಚನ. ॥

ನಿಮ್ಮನರಿದ ಶರಣಂಗೆ ಶಿವಪೂಜೆಯು ಮಾಡುವ ದಂದುಗವೇಕೊ? ಒಲುಮೆಯ ಕೂಟಕ್ಕೆ ಹಾಸಿಕೆಯ ಹಂಗೇಕೊ? ಜೀಟದ ಮರುಳಿಂಗೆ ಲಜ್ಜೆ ಇನ್ನೇಕೊ? ಮಿಸುನಿಯ ಚಿನ್ನಕ್ಕೆ ಒರೆಗಲ್ಲಿನ ಹಂಗೇಕೊ? ಗುಹೇಶ್ವರಲಿಂಗವು ಪ್ರಾಣವಾಗಿಪ್ಪ ಸಿದ್ಧರಾಮಯ್ಯಂಗೆ ಕುರುಹು ಮುನ್ನೇಕೊ ಚನ್ನಬಸವಣ್ಣಾ?

ಮತ್ತಂ, ಆಕಾಶವನಡರುವಂಗೆ ಅಟ್ಟುಗೋಲ ಹಂಗೇಕೊ? ಸಮುದ್ರವ ದಾಂಟುವಂಗೆ ಹರುಗೋಲ ಹಂಗೇಕೊ? ಸೀಮೆಯ ಮೀರಿದ ನಿಸ್ಸೀಮಂಗೆ ಸೀಮೆಯ ಹಂಗೇಕೊ? ಗುಹೇಶ್ವರ ಲಿಂಗದಲ್ಲಿ ನಿಸ್ಸೀಮ ಸಿದ್ಧರಾಮಯ್ಯಂಗೆ ಲಿಂಗವೆಂದೇನು ಹೇಳಾ ಚನ್ನಬಸವಣ್ಣಾ? ॥೧೧॥

ಹೀಗೆಂದು ಪ್ರಭುದೇವರು ನಿರೂಪಿಸಲು, ಇವಕ್ಕೆ ಚನ್ನಬಸವರಾಜದೇವರು ಆ ಉತ್ತರಮಂ ಖಂಡಿಸಿ ನುಡಿದ ಪ್ರಸ್ತಾವದ ವಚನ. ॥

ಆಕಾಶದಲಾಡುವ ಪಟಕ್ಕಾದರು ಮೂಲಸೂತ್ರವಿರಬೇಕು ಕಲಿಯಾದಡು ಕಜ್ಜವಿಲ್ಲದಾಗದು. ಭೂಮಿ ಇಲ್ಲದೆ ಬಂಡಿ ನಡೆವುದುಂಟೇ? ಅಂಗಕ್ಕೆ ಲಿಂಗಸಂಗವಿಲ್ಲದೆ ನಿಸ್ಸಂಗವಾಗಬಾರದು. ಕೂಡಲ ಚನ್ನಸಂಗಮದೇವರಲ್ಲಿ ಸಂಗವಿಲ್ಲದೆ ನಿಸ್ಸಂಗಿ ಎಂದು ನುಡಿಯಬಹುದೆ ಪ್ರಭುವೆ? ॥೧೨॥

ಪಟವಾಕಾಶವನಡರಿತ್ತೆಂದಡೆ ಪಟದ ಸೂತ್ರದ ಸಂಚ ಕೆಳಗಿಪ್ಪುದು ನೋಡಾ! ವ್ಯೋಮದಲ್ಲಿ ಚರಿಸುವ ಸೋಮಸೂರ್ಯರೆಂದಡೆ ಹೇಮಗಿರಿಯ ಸಂಚ ತಪ್ಪದು ನೋಡಾ. ಭೂಮಿಯನೊಲ್ಲದೆ ಗಗನಕ್ಕೆ ಹಾರಿದವಂಗೆ ಆ ವ್ಯೋಮದಲ್ಲಿ ನಿಲುವುದಕ್ಕೆ ಒಂದೆಡೆಯುಂಟೆ? ಮಣ್ಣು ಮರನನುಳಿದು ತೋರುವ ಹಣ್ಣು ರುಚಿಯುಂಟೆ? ನಮ್ಮ ಕೂಡಲ ಚನ್ನಸಂಗನ ಶರಣರೊಳಗಿರ್ದ ಸೀಮೆಯ ಮೀರಿದ ನಿಸ್ಸೀಮನು ಸಿದ್ಧರಾಮಯ್ಯನೆಂಬ ಮಾತು ಅಂತಿರಲಯ್ಯ ಪ್ರಭುವೇ. ॥೧೩॥

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ. ॥

ಕಾಯವೇ ಸಕಲ, ಪ್ರಾಣವೇ ಸಕಲ ನಿಃಕಲ, ಭಾವವೆ ನಿಃಕಲ ಲಿಂಗವಾಗಿರ್ದ, ಮತ್ತೆ ಬೇರೆ ಆಯತ ಸ್ವಾಯತ ಸನ್ನಿಹಿತವೆಂಬುದಿಲ್ಲ

ನೋಡಾ. ಶಿವಶಕ್ತಿಸಂಬಂಧವೆ ದೇಹದೇಹಿಗಳಾಗಿರ್ದ ಬಳಿಕ ಗುಹೇಶ್ವರ ಲಿಂಗದಲ್ಲಿ ಬೇರೊಂದು ಕುರುಹುವಿಡಿದು ಅರಿಯಲೇಕಯ್ಯ ಚನ್ನಬಸವಣ್ಣಾ? ॥೧೪॥

ಇದಕ್ಕೆ ಚನ್ನಬಸವರಾಜದೇವರ ಪ್ರತ್ಯುತ್ತರ. ॥

ಆಚಾರ ಅಂಗದ ಮೇಲೆ ಆಯತವಾದುದೆ ಇಷ್ಟಲಿಂಗ. ಆ ಇಷ್ಟಲಿಂಗವಿಡಿದಿಹುದೆ ಪ್ರಾಣಲಿಂಗ ಸ್ವಾಯತ. ಪ್ರಾಣಲಿಂಗ ಉದಯಿಸಿದಲ್ಲದೆ ಇಷ್ಟಲಿಂಗವ ಕಾಣಬಾರದು. ಈ ಭೇದವ ಭೇದಿಸಬಲ್ಲರೆ ಕೂಡಲ ಚನ್ನಸಂಗಯ್ಯನಲ್ಲಿ ಲಿಂಗೈಕ್ಯ ಕಾಣಾ ಪ್ರಭುವೆ. ॥೧೫॥

ಮತ್ತಂ, ತಿಳಿದುಪ್ಪ ಗಟ್ಟಿದುಪ್ಪಕ್ಕೆ ಭೇದ ಉಂಟೆ? ದೀಪಕ್ಕೆ ದೀಪ್ತಿಗೆ ಭಿನ್ನ ಉಂಟೆ? ಆತ್ಮಕ್ಕೆಯೂ ದೇಹಕ್ಕೆಯೂ ಹಂಗುಂಟೆ? ಕ್ಷೀರಕ್ಕೆಯೂ ಸ್ವಾದಕ್ಕೆಯೂ ಭಿನ್ನ ಉಂಟೆ? ಇದುಕಾರಣ ಸಾಕಾರವೆ ನಿರಾಕಾರವೆಂದರಿದು ಅಂಗಲಿಂಗಸಂಬಂಧವಿಲ್ಲದವರ ಸಂಗ ಭಂಗವೆಂದು ಕೂಡಲ ಚನ್ನಸಂಗಯ್ಯನ ಶರಣರು ಮಚ್ಚರಯ್ಯ ಪ್ರಭುವೆ. ॥೧೬॥

ಮತ್ತಂ, ಚನ್ನಬಸವರಾಜದೇವರು ಸಿದ್ಧರಾಮಯ್ಯನಿಗೆ ಅಂಗಲಿಂಗ ಸಂಬಂಧವಿಲ್ಲದಿದ್ದರೆ ನಮ್ಮ ಶರಣರು ಒಪ್ಪರೆಂದು ಮೋಳಿಗಯ್ಯಗಳು ಮುಖ್ಯವಾದ ಶರಣರ ಮುಖವ ನೋಡಿ ನಿರೂಪಿಸಿದ ಪ್ರಸ್ತಾವದ ವಚನ. ॥

ಸತಿ ಸಂಗದತಿ ಸುಖವೆಂದರಿದಡೇನು, ಗಣಸಾಕ್ಷಿಯಾಗಿ, ವಿವಾಹವಾಗದನ್ನಕ್ಕರ? ಕಣ್ಣು ಕಾಂಬುದೆಂದಡೆ, ಕತ್ತಲೆಯಲ್ಲಿ ಕಾಂಬುದೆ ದೀಪವಿಲ್ಲದನ್ನಕ್ಕರ? ಸೂರ್ಯನ ಪ್ರಕಾಶದಿಂದ ಕಂಡು ತಾವೆ ಕಂಡೆವೆಂಬ ಜಗದ ನಾಣ್ನುಡಿಯಂತಾಯಿತ್ತು. ಅಂಗವ ಬಿಟ್ಟು ಆತ್ಮನುಂಟೆ? ಶಕ್ತಿಯ ಬಿಟ್ಟು ಶಿವನುಂಟೆ? ಇದುಕಾರಣ ಸ್ಥೂಲ ಸೂಕ್ಷ್ಮ ಕಾರಣವೆಂಬ ತನುತ್ರಯವಿರಲು, ಇಷ್ಟಪ್ರಾಣಭಾವವೆಂಬ ತ್ರಿವಿಧಲಿಂಗ ಸಂಬಂಧ ಬೇಡವೆಂದಡೆ ಅಸಂಖ್ಯಾತ ಪ್ರಮಥಗಣಂಗಳೊಪ್ಪುವರೆ? ಇದುಕಾರಣ ಕೂಡಲ ಚನ್ನಸಂಗಯ್ಯನಲ್ಲಿ ಇಷ್ಟಲಿಂಗ ಸಂಬಂಧವಿಲ್ಲದವರ ಮುಖವ ನೋಡಲಾಗದಯ್ಯ ಪ್ರಭುವೆ. ॥೭॥

ಹೀಗೆಂದು ಚನ್ನಬಸವರಾಜದೇವರು ಅಸಂಖ್ಯಾತ ಮಹಾಗಣಂಗಳ ಮುಖವಂ ನೋಡಲು, ಆ ಸಮಯದಲ್ಲಿ ಮೋಳಿಗೆಯ ಮಾರಿತಂದೆಗಳು

ಮುಖ್ಯವಾದ ಏಳುನೂರೆಪ್ಪತ್ತು ಅಮರಗಣಂಗಳು ಎಲ್ಲರು ಕೇಳಿ ಕನಲಿ ನುಡಿದ ಪ್ರಸ್ಥಾವದ ವಚನಗಳು. ॥

ಆ ಸಮಯದಲ್ಲಿ ಮೋಳಿಗೆಯ್ಯಗಳ ವಚನ. ॥

ಗರಳವಿಲ್ಲದುರುಗಂಗೆ ಹಲಬರಂಜಿದವರುಂಟೆ? ಕ್ರೋಧವಿಲ್ಲದ ಬಂಟ ಗರ್ಜಿಸಿದರೆ ಅಂಜಿದವರುಂಟೆ? ಇಷ್ಟ ಬಾಹ್ಯ ದೃಷ್ಟದ ಮಾತನಾಡಿದಡೆ ನೆಟ್ಟನೆ ಪ್ರಾಣಲಿಂಗಿಯಪ್ಪನೆ? ಇದು ನಿಶ್ಚಯವಲ್ಲ ನಿಃಕಳಂಕ ಮಲ್ಲಿಕಾರ್ಜುನ. ॥೧೮॥

ಮತ್ತಂ ಸರ್ವಸ್ಥಾವರ ಮೂಲಂಗಳಿಗೆಲ್ಲಕ್ಕು ಪೃಥ್ವಿಯಾದಿ ಅಪ್ಪುವಿನ ಸಾರದಿಂದೆ ಪಲ್ಲೈಸಿ ದೃಕ್ಕಿಂಗೆ ದೃಷ್ಟವಾದ ತೆರನಂತೆ, ಇಷ್ಟದ ಪೂಜೆಯೇ ದೃಷ್ಟವಾಗಿ ಆ ದೃಷ್ಟಿಯೇ ನಿಶ್ಚಲವಾದಲ್ಲಿ ಪ್ರಾಣಲಿಂಗ ಸಂಬಂಧ ನಿಃಕಳಂಕ ಮಲ್ಲಿಕಾರ್ಜುನ ॥೧೯॥

ಮತ್ತಂ, ತಿಲದ ಮರೆಯ ತೈಲವನರದು ಕಾಂಬುವನಂತೆ, ಫಳವ ಮರೆಯ ರಸವ ಹಿಳಿದು ಕಾಂಬ ಸವಿ ರುಚಿಯಂತೆ, ತೆರೆಯ ಮರೆಯ ರೂಪ ತೆಗೆದು ಕಾಂಬಂತೆ, ಇಷ್ಟದ ಮರೆಯಲ್ಲಿರ್ದ ದೃಷ್ಟದ ಉಭಯವ ನಿಶ್ಚೈಸಿದಲ್ಲಿ ಪ್ರಾಣಲಿಂಗ ಸಂಬಂಧಿ ನಿಃಕಳಂಕ ಮಲ್ಲಿಕಾರ್ಜುನ. ॥೨೦॥

ಇದಕ್ಕೆ ದಾಸಿಮಯ್ಯಗಳ ವಚನ. ॥

ಕರಸ್ಥಲದ ಜ್ಯೋತಿಯನು. ಕರುವಿಟ್ಟಿರಕವದು. ಅದರ ನೆಲೆಯ ತಿಳಿದರೆ, ನಿಜದಾನಂದವು ಹೊಲಬುಮೋರದಿಹ ನಿಸ್ಸೀಮನ ಹೊಲಬನರಿದು ಕೂಡಿದಾತನೆ ವೃಡನು. ಕಾಣಾ ರಾಮನಾಥಾ. ॥೨೧॥

ಇದಕ್ಕೆ ಮೆರೆಮಿಂಡ ದೇವರ ವಚನ. ॥

ಮೊನೆ ಇರಿವರೆ ಕರವಲ್ಲಿ ಪಿಡಿದಲ್ಲದಾಗದು. ಮನವರಿವರೆ ಕುರುಹಿನ ನೆರುಗೆಯಲ್ಲಿ ಸಲೆ ಸಂದು ನಿಂದಲ್ಲದಾಗದು. ಕ್ರಿಯಾನುಭಾವ ಶುದ್ಧವಾದಲ್ಲದೆ, ಐಘಟದೂರ ರಾಮೇಶ್ವರ ಲಿಂಗವ ಕೂಡಬಾರದು. ॥೨೨॥

ಇದಕ್ಕೆ ಉರಿಲಿಂಗ ಪೆದ್ದಣ್ಣಗಳ ವಚನ.॥

ಸಾಕಾರವಿಡಿದು, ಅರ್ಚನೆಯ ಪೂಜನೆಯ ಮಾಡಬೇಕಲ್ಲದೆ, ನಿರಾಕಾರವ ನಂಬಲಾಗದು. ಶ್ರೀಗುರು ಪ್ರಾಣಲಿಂಗವನು ಕರಸ್ಥಲಕ್ಕೆ ಬಿಜಯಂಗೈಸಿ ಕೊಟ್ಟ ಬಳಿಕ ವಜ್ರದಲ್ಲಿ ಬಯಲನರಸಲುಂಟೆ ಉರಿಲಿಂಗ ಪೆದ್ದಿಪ್ರಿಯ ವಿಶ್ವೇಶ್ವರಾ? ॥೨೩॥

ಇದಕ್ಕೆ ರಾಯಸದ ಮಂಚಣ್ಣಗಳ ವಚನ.

ಉಂಬರೆ ಬಂದು ಬಾಯ ಮರೆದೆನೆಂದು ಮೊರೆ ಇಡುತಿಪ್ಪ ಅರಿಕೆ ಹೀನನ ತೆರನಂತಾಯಿತ್ತು. ಅರಿಕೆಯನರಿ ಎಂದು ಕುರುಹ ಕೊಟ್ಟರೆ ಆ ಕುರುಹ ಮರೆದು ಅರಿದೆನೆಂಬ ಕುರುಬನ ನೋಡಾ ಜಾಂಬೇಶ್ವರಾ. ॥೨೪॥

ಇದಕ್ಕೆ ಢಕ್ಕೆಯ ಬೊಮ್ಮಣ್ಣಗಳ ವಚನ. ॥

ನಾತ ಅಲೇಖದ ಮೇಲೆ ಕುರುಹಿಟ್ಟಲ್ಲದೆ, ನೀತಿ ಲಕ್ಷಣವ ಕಾಣ ಬಾರದು. ಚಿತ್ತ ತಾ ಪೂಜಿಸುವ ವಸ್ತುವಿನಲ್ಲಿ ಲಕ್ಷಿಸಿದಲ್ಲದೆ, ಮೇಲಣ ಲಕ್ಷಣ ಕಾಣಬಾರದು. ಕಾಂಬನ್ನಕ್ಕರ ಉಭಯದ ಆಚರಣೆ ತಾನುಳ್ಳ ನ್ನಕ್ಕರ ಕಾಲಾಂತಕ ಭೀಮೇಶ್ವರ ಲಿಂಗವ ಪೂಜಿಸಬೇಕು. ॥೨೫॥

ಇದಕ್ಕೆ ಅಮುಗಿದೇವಯ್ಯಗಳ ವಚನ. ॥

ಜ್ಞಾನದಲ್ಲಿ ಅರಿದರೇನಯ್ಯ, ಸತ್ಕ್ರಿಯಾಚಾರಿಯಾಗದನ್ನಕ್ಕರ? ನೆನೆದ ಮಾತ್ರದಲ್ಲಿ ಕಾಂಬುದೆ ಕಾರ್ಯದಲ್ಲಲ್ಲದೆ? ಕುರುಡ ಕಾಣ ಪಥವ. ಹೆಳವ ನಡೆಯಲರಿಯ. ಒಂದಿಲ್ಲದಿದ್ದರೆ ಒಂದಾಗದು. ಜ್ಞಾನವಿಲ್ಲದ ಕ್ರಿ ಜಡನು ಕ್ರಿ ಇಲ್ಲದ ಜ್ಞಾನ ಭ್ರಾಂತು. ಇದುಕಾರಣ ಸಿದ್ಧಸೋಮನಾಥನಲ್ಲಿ ಎರಡೂ ಬೇಕು. ॥೨೬॥

ಇದಕ್ಕೆ ಶಿವನಾಗಮಯ್ಯಗಳ ವಚನ. ॥

ಅಂಗದ ಮೇಲೆ ಲಿಂಗವಿದ್ದ ಬಳಿಕ ಲಿಂಗಹೀನರ ಬೆರಸಲಾಗದು. ಅಂಗದ ಮೇಲೆ ಲಿಂಗವಿದ್ದ ಬಳಿಕ ಲಿಂಗ ಮುಂತಾಗಿ ಎಲ್ಲ ಕ್ರಿಗಳನು ಗಮಿಸಬೇಕಲ್ಲದೆ ಅಂಗ ಮುಂತಾಗಿ ಗಮಿಸಬಾರದು. ಲಿಂಗಸಂಬಂಧಿ ಯಾಗಿ, ಅಂಗ ಮುಂತಾಗಿ ಇಪ್ಪವರು ಲಿಂಗಕ್ಕೆ ದೂರವಯ್ಯ ನಾಗಯ್ಯ ಪ್ರಿಯ ಚನ್ನರಾಮೇಶ್ವರಾ. ॥೨೭॥

ಇದಕ್ಕೆ ತೆಲುಗು ಜೊಮ್ಮಯ್ಯಗಳ ವಚನ. ॥

ಗುರುಕಾರುಣ್ಯವ ಪಡೆದುದಕ್ಕೆ ಚಿಹ್ನವಾವುದೆಂದರೆ, ಅಂಗದ ಮೇಲೆ ಲಿಂಗ ಸ್ವಾಯತವಾಗಿರಬೇಕು. ಅಂಗದ ಮೇಲೆ ಲಿಂಗ ಸ್ವಾಯತವಿಲ್ಲದೆ, ಬರಿದೆ ಗುರುಕಾರುಣ್ಯವಾಯಿತ್ತೆಂದಡೆ ಅದೆಂತೊ? ಲಿಂಗಹೀನವಾಗಿ ಗುರುಕಾರುಣ್ಯ ಉಂಟೆ? ಇಲ್ಲ. ಆ ಮಾತ ಕೇಳಲಾಗದು. ಇದು

ಕಾರಣ ಲಿಂಗಧಾರಣವುಳ್ಳುದೆ ಸದಾಚಾರ. ಇಲ್ಲದಿದ್ದರೆ, ಅನಾಚಾರವೆಂಬೆನಯ್ಯ ತೆಲುಗೇಶ್ವರಾ. ॥೨೮॥

ಹೀಗೆಂದು ಸಮಸ್ತ ಶರಣರೆಲ್ಲರು ವಿಡಂಬಿಸಿ ನುಡಿಯಲು, ಮರಳಿ ಚನ್ನಬಸವರಾಜದೇವರು ಅಂಗವ ಮೇಲೆ ಲಿಂಗವಿಲ್ಲದ ಸಿದ್ಧರಾಮಯ್ಯನೊಡನೆ ಬರಬಹುದೆ ಎಂದು ಪ್ರಭುದೇವರ ಕನಲಿ ಸುಡಿದ ಪ್ರಸ್ಥಾವದ ವಚನ. ॥

ನೊಸಲಲ್ಲೊಂದು ಕಣ್ಣುಳ್ಳವರಾದರು, ಅವನಂಗದ ಮೇಲೆ ಲಿಂಗ ಸ್ವಾಯತವಿಲ್ಲದಿದ್ದರೆ ಅವನ ಮನೆಯಲ್ಲಿ ಮಾಡಿದ ಪಾಕ ಶ್ವಾನನ ಮಾಂಸ ತಪ್ಪದಾಗಿ ಬಲ್ಲವರೊಲ್ಲರು. ಶಿವಭಕ್ತರಲ್ಲದವರ ಮನೆಯಲ್ಲಿ ಉಂಡರೆ ಜನ್ಮಜನ್ಮಾಂತರದಲ್ಲಿ ಶ್ವಾನನ ಯೋನಿಯಲ್ಲಿ ಬಪ್ಪುದು ತಪ್ಪದು. ಎಲೆ ಶಿವನೇ ನೀವಿಲ್ಲದವರ ಮನೆಯಲ್ಲಿ ತಿಂಬವರ ಕಂಡರೆ, ಎನ್ನ ಮನ ಸೊಗಸದಯ್ಯ ಕೂಡಲ ಚನ್ನಸಂಗಮದೇವಾ. ॥೨೯॥

ಮತ್ತಂ, ಲಿಂಗವಿಲ್ಲದೆ ನಡೆವವನ, ಲಿಂಗವಿಲ್ಲದೆ ನುಡಿವವನ, ಲಿಂಗವಿಲ್ಲದೆ ಉಗುಳ ನುಂಗಿವರೆ, ಅಂದಂದಿಂಗೆ ಕಿಲ್ಬಿಷವಯ್ಯಾ. ಏನೆಂಬೆನೇನೆಂಬೆ? ಲಿಂಗವಿಲ್ಲದೆ ನಡೆವವನ ಲಿಂಗವಿಲ್ಲದೆ ನುಡಿವವನ, ಅಂಗ ಲೌಕಿಕ ಮುಟ್ಟಲಾಗದು. ಲಿಂಗವಿಲ್ಲದೆ ನುಡಿವ ಶಬ್ದಸೂತಕವ ಕೇಳಲಾಗದು. ಲಿಂಗವಿಲ್ಲದೆ ಗಮಿಸಿದರೆ ಆ ನಡೆನುಡಿಗೊಮ್ಮೆ ವ್ರತಗೇಡಿ ಕೂಡಲ ಚನ್ನಸಂಗಮದೇವ. ॥೩॥

ಇದಕ್ಕೆ ಬಸವರಾಜದೇವರ ವಿಡಂಬನ. ॥

ಗುರು ತೋರಿದ ಲಿಂಗವು ಮನ ಸಾಹಿತ್ಯವಾಗಿರುತ್ತಿರಲು, ಪವನ ಭೇದದಿಂದೆ ಅರಿದೆನೆಂದರೆ ಅದೇ ದ್ರೋಹ. ಈಡಾ ಪಿಂಗಳ ಸುಷುಮ್ನನಾಳದಿಂದೆ ಅರಿದಿಹೆನೆಂದರೆ ಕೂಡಲಸಂಗಮದೇವರು ಮೂಗ ಕೊಯ್ಯದೆ ಬಿಡುವನೆ? ॥೩೧॥

ಇದಕ್ಕೆ ಚನ್ನಬಸವರಾಜದೇವರ ವಚನ. ॥

ಕಾಯಾನುಭಾವಿಗಳು ಕಾಯದಲ್ಲಿ ಮುಕ್ತರು. ಜೀವಾನುಭಾವಿಗಳು ಜೀವದಲ್ಲಿ ಮುಕ್ತರು. ಪ್ರಾಣಾನುಭಾವಿಗಳು ಪ್ರಾಣದಲ್ಲಿ ಮುಕ್ತರು. ಪವನಾನುಭಾವಿಗಳು ಪವನದಲ್ಲಿ ಮುಕ್ತರು. ಲಿಂಗಾನುಭಾವಿಗಳಿಗೆಂತು ಸರಿ

ಎಂಜೆ? ನಿರವಯ ಸ್ವಯಂಜ್ಯೋತಿ ಪ್ರಕಾಶನಾಗಿಪ್ಪರು ಲಿಂಗದಲ್ಲಿ ಕೂಡಲ ಚನ್ನಸಂಗಮದೇವ ನಿಮ್ಮ ಶರಣರು. ॥೩೨॥

ಇಂತು ವೇದಾಂತ, ಸಿದ್ಧಾಂತ, ದ್ವೈತ ಕ್ರಿ, ಶೈವಜ್ಞಾನದಿಂದೆ ಅರಿದು ನೋಡಿ ಲಕ್ಷನಿಟ್ಟು ಕೂಡಿಹೆನೆಂಬ ಆತ್ಮಜ್ಞಾನದಿಂದ ಶಿವತತ್ವವ ಕಾಂಬುದು ಹುಸಿ ಎಂದು ಬಸವರಾಜದೇವರು ಚನ್ನಬಸವರಾಜದೇವರು ಮೋಳಿಗೆಯ ಮಾರಿತಂದೆಗಳು ಮೊದಲಾದ ಏಳನೂರೆಪ್ಪತ್ತು ಅಮರಗಣಂಗಳು ಸಿದ್ಧರಾಮಯ್ಯನ ಅಷ್ಟಾಂಗಯೋಗಂಗಳ ಜರಿದು, ಖಂಡಿಸಿ ನಿರಸನಮಂ ಮಾಡಿ ಪ್ರಭುದೇವರೊಡನೆ ಬಿನ್ನೈಸುತ್ತಿರಲು, ಆ ಪ್ರಭುದೇವರು ಚನ್ನಬಸವಣ್ಣ ಮುಖ್ಯವಾದ ಅಸಂಖ್ಯಾತ ಗಣಂಗಳು ಅಂಗದ ಮೇಲೆ ಲಿಂಗ ವಿಲ್ಲದೆ ಒಪ್ಪರೆಂದು ಸಿದ್ಧರಾಮಯ್ಯದೇವರಿಗೆ ನಿರೂಪಿಸಿದ ಪ್ರಸ್ಥಾವದ ವಚನ. ॥

ಬೆಳಗಿನೊಳಗೊಂದು ಬೆಳಗು ದೊರೆಕೊಂಡಡೆ ಮತ್ತೊಂದು ಬೆಳಗು ಮತ್ತೆಲ್ಲಿಯದೊ? ಘನದೊಳಗೊಂದು ಘನವು ದೊರೆಕೊಂಡರೆ ಮತ್ತೊಂದು ಘನವು ಮತ್ತೆಲ್ಲಿಯದೊ? ಸಮಿಾಪದ ಮೇಲೆ ಸಮಿಾಪ ದಾಳಿವರಿದನು ಗುಹೇಶ್ವರನ ಶರಣ ಚನ್ನಬಸವಣ್ಣನು. ॥೩೩॥

ಮತ್ತಂ, ಎಳ್ಳಿಂಗೆ ಪರಿಮಳವ ಕಟ್ಟಿದಲ್ಲದೆ ಎಣ್ಣೆಂಗೆ ಪರಿಮಳ ವೇಧಿಸದು. ದೇಹದಲ್ಲಿ ಇಷ್ಟಲಿಂಗವ ಸ್ಥಾಪಿಸಿದಲ್ಲದೆ ಪ್ರಾಣಲಿಂಗ ಸಂಬಂಧವಾಗದು. ಇದುಕಾರಣ ಗುಹೇಶ್ವರಲಿಂಗದಲ್ಲಿ ಇಷ್ಟಲಿಂಗ ಸಂಬಂಧಿಯಲ್ಲದೆ ಪ್ರಾಣಲಿಂಗ ಸಂಬಂಧಿಯಾಗಬಾರದು ಕಾಣಾ ಸಿದ್ಧರಾಮಯ್ಯ. ॥೩೪॥

ಹೀಗೆಂದು ಪ್ರಭುದೇವರು ನಿರೂಪಿಸಲು, ಇವಕ್ಕೆ ಸಿದ್ಧರಾಮಯ್ಯ ದೇವರು ಜಜ್ಜನೆ ಜರಿದು, ಬಿಬ್ಬನೆ ಬಿರಿದು, ಪ್ರಾಣ ಹಮ್ಮನೆ ಹಾರಿ, ಭಯ ಪಟ್ಟು ನಡನಡುಗಿ ಪ್ರಭುದೇವರ ಪಾದಾಕ್ರಾಂತರಾಗಿ ನಿಮ್ಮ ಶರಣರ ಕರುಣದ ಕೃಪೆ ಮಾಡಾ ಪ್ರಭುವೇ ಎಂದು ಉಪಾವಸ್ಥೆಯಂ ಮಾಡುವ ಪ್ರಸ್ಥಾವದ ವಚನ. ॥

ಪುಣ್ಯ ಪಾಪಂಗಳನರಿಯದ ಮುನ್ನ ಅನೇಕ ಭವಂಗಳಲ್ಲಿ ಬಂದು ನಿಮ್ಮ ನಿಲವನರಿಯದೆ ಕೆಟ್ಟೆನಯ್ಯ! ಇನ್ನು ನಿಮ್ಮ ಶರಣುವೊಕ್ಕೆನಾಗಿ ನಾ ನಿಮ್ಮನೆಂದು ಅಗಲದಂತೆ ಮಾಡಯ್ಯ ನಿಮ್ಮ ಧರ್ಮ, ನಿಮ್ಮ ಧರ್ಮ.

ನಿಮ್ಮಲ್ಲಿ ಒಂದು ಬೇಡುವೆ. ಎನ್ನ ಕರ್ಮಬಂಧನ ಬಿಡುವಂತೆ ಮಾಡಾ ಕಪಿಲ ಸಿದ್ಧಮಲ್ಲಿಕಾರ್ಜುನ. ॥೩೫॥

ಮತ್ತಂ, ಎಂದಪ್ಪೆನಯ್ಯ ನಿಮ್ಮ ಶರಣ ಗಣಂಗಳ ಸಮೂಹದಲ್ಲಿ? ಎಂದಪ್ಪೆನಯ್ಯ ನಿಮ್ಮವರ ನಡುವೆ? ಎಂದಪ್ಪೆನಯ್ಯ ಕೀಳಲಿ ಕಾಯ್ದು? ಎಂದಪ್ಪೆನಯ್ಯ ಕಿಂಕರನಾಗಿ? ಎಂದಪ್ಪೆನಯ್ಯ ನಿಮ್ಮ ನಾಮ ಡಿಂಗರಿಗನಾಗಿ? ಎಂದಪ್ಪೆನಯ್ಯ ಶಿವನೆ ಕಪಿಲ ಸಿದ್ಧಮಲ್ಲಿಕಾರ್ಜುನ? ॥೩೬॥

ಎಂದಪ್ಪೆನಯ್ಯ ಶುದ್ಧ, ಸಿದ್ಧ, ಪ್ರಸಿದ್ಧ, ಪ್ರಸಾದ ಪ್ರಭುವೆನಿಸಿ? ಎಂದಪ್ಪನಯ್ಯ ಭಕ್ತಿ, ಜ್ಞಾನ, ವೈರಾಗ್ಯ ಸಂಪನ್ನನಾಗಿ? ಎಂದಪ್ಪೆನಯ್ಯ ತತ್ವಾತತ್ವ ತೂರ್ಯಾತೂರ್ಯ ನೀನೆಯಾಗಿ? ಎಂದಪ್ಪೆನಯ್ಯ ದೀಕ್ಷಾತ್ರಯದಲ್ಲಿ ಸಂಪನ್ನನಾಗಿ? ಎಂದಪ್ಪೆನಯ್ಯ ಲಿಂಗತ್ರಯದಲ್ಲಿ ಪ್ರಸಾದ ಸಂಪನ್ನನಾಗಿ? ಎಂದಪ್ಪೆನಯ್ಯ ಕಪಿಲ ಸಿದ್ಧಮಲ್ಲಿಕಾರ್ಜುನಯ್ಯ ನಿಮ್ಮವರ ನಡುವೆ ಓರಂತೆ? ॥೩೭॥

ಒಡೆಯರುಳ್ಳ ತೊತ್ತಾನು, ತಾಯುಳ್ಳ ಶಿಸುವಾನು. ಸ್ವತಂತ್ರವೇಕಯ್ಯ? ನಿಮ್ಮವರ ನಡುವೆ ಎನಗೆ ನಿನ್ನವರು ಎನ್ನನೊಲ್ಲದಿದ್ದ ದುಃಖವನು ಮರೆವೆನೆ ನಾನು? ನಿನ್ನವರಾಜ್ಞೆಯ ಮೀರಿದೆನಾಯಿತ್ತಾದಡೆ, ನಿನ್ನಾಣೆಯಯ್ಯ ಕಪಿಲ ಸಿದ್ಧಮಲ್ಲಿಕಾರ್ಜುನಯ್ಯ. ॥೩೮॥

ಆವಾಗಲು ನಿನ್ನ ಮಗುಗಳ ನೀನೆಂಬ ಮನವ ಅರಿಯುನ್ನತೋನ್ನತವ ಕೊಡು ಕಂಡ್ಯಾ ಎಲೆ ಅಯ್ಯ ನಿಮ್ಮ ಧರ್ಮ ನಿಮ್ಮ ಧರ್ಮವಯ್ಯ. ನಿನ್ನ ಲಾಂಛನವ ಕಂಡು ತಾತ್ಪರ್ಯವೆಂದು ನಂಬುವ ಮನಸ್ಸಿಂಗೆ ಮಂಗಳವನೀಯಯ್ಯ! ನಿನ್ನವರ ಸಹ ಲೋಕವಲ್ಲಿ ಅವರ ಕೀಳಲ ಕಾಯ್ದಿರ್ಪ ಸುಕೃತವನು ತಪ್ಪದೆ ಕುಡು ಕಪಿಲ ಸಿದ್ಧಮಲ್ಲಿಕಾರ್ಜುನಯ್ಯ ನಿಮ್ಮ ಧರ್ಮ. ॥೩೯॥

ಮತ್ತಂ, ಸಿದ್ಧರಾಮಯ್ಯದೇವರು ತಾ ಮಾಡುವ ಶೈವಯೋಗಾಭ್ಯಾಸ ಭಿನ್ನ ಕ್ರಿಗಳನು ತಾವೆ ಜರಿದುಕೊಂಡು ನುಡಿದು ಶರಣರ ಕರುಣವ ಸಾಧ್ಯವ ಮಾಡಿಕೊಡು ಎಂದು ಪ್ರಭುದೇವರಿಗೆ ಬಿನ್ನೈಸುವ ಪ್ರಸ್ಥಾವದ ವಚನ.

ಹಿಂದೆ ಬಯಸಿದೆ ಕಾಳುತನದಲ್ಲಿ. ಎನ್ನ ಮಂದಮತಿಯ ನೋಡಿರಯ್ಯ! ಕೆರೆ ಬಾವಿ ಹೂದೋಟ ಚೌಕ ಛತ್ರಂಗಳ ಮಾಡಿ, ಜೀವಂ

ಗಳ ಮೇಲೆ ಕೃಪೆಯುಂಟೆಂದು ಎನ್ನ ದಾಸಿ ಎಂಬರು. ಆನು ದಾಸಿ ಯಲ್ಲವಯ್ಯ. ನೀ ಹೇಳಿನಂತೆ ನಾ ಮಾಡಿದೆನು. ನೀ ಬರಹೇಳಿದಲ್ಲಿ ನಾ ಬಂದೆನು. ನೀನು ಇರಿಸವಂತೆ, ನಾ ಇದ್ದೆನು. ನಿನ್ನ ಇಚ್ಛಾಮಾತ್ರವ ವಿಚಾರಿದೆ ನಾಯಿತ್ತಾದಡೆ ಘಲಪದ ಜನನವ ಜಯಿಸಿದೆನಾದಡೆ ನಿಮ್ಮಾಣೆ. ಕಪಿಲ ಸಿದ್ಧಮಲ್ಲಿಕಾರ್ಜುನಯ್ಯ. ಭವಕ್ಕೆ ಬರಿಸದಿರಯ್ಯ. ॥೪೦॥

ಮತ್ತಂ, ಮಾಡಿಸಯ್ಯ ಎನಗೆ ನಿನ್ನವರ ಸಂಗವ. ಮಾಡಿಸಯ್ಯ ಎನಗೆ ನಿಮ್ಮವರಾನಂದವ. ಆಗಿಸಯ್ಯ ನಿನ್ನವರಾದಂತೆ. ನೋಡಿಸಯ್ಯ ನಿನ್ನವರ ಕೂಡೆ. ಸಂಗವನು ಮಾಡಿಸಯ್ಯ. ಎನಗೆ ಬಚ್ಚ ಬರಿಯ ಭಕ್ತಿ ಯನು ಕೊಡಿಸಯ್ಯ! ಎನಗೆ ಪಾದೋದಕ ಪ್ರಸಾದವ ನೊಚ್ಚತವ ಸರಿ ಸಯ್ಯ. ನಿಮ್ಮವರ ಕೂಡೆ ಸಿಕ್ಕಿ ಇರಿಸಯ್ಯ! ನಿನ್ನವರ ಪಾದದ ಕೆಳಗೆ ನಿತ್ಯನಾಗಿ ಬರಿಸಯ್ಯ. ಎನ್ನ ಭವಭವದಲ್ಲಿ ಕಪಿಲ ಸಿದ್ಧಮಲ್ಲಿಕಾರ್ಜು ನಯ್ಯ, ನೀನು ಇಂತು ಕೆಡಿಸಯ್ಯ ಎನ್ನ ಭವಭವದ ಹುಟ್ಟ. ॥೪೧॥

ನುಡಿಯಬಹುದು ಅದ್ವೈತವನೊಂದು ಕೋಟಿ ವೇಳೆ. ಒಮ್ಮೆ ನಡೆ ಯಬಹುದೆ ನಿರ್ಭರವಾಗಿ, ಸದ್ಭಕ್ತಿ ಆಚಾರವಾಗಿ? ನುಡಿದಂತೆ ನಡೆವ ನಡೆದಂತೆ ನುಡಿವ ಸದ್ಭಕ್ತಿ ಸದಾಚಾರ ಯುಕ್ತ ಮಹಾತ್ಮರ ಪಾದವ ಹಿಡಿದು ಬದುಕಿಸಯ್ಯ ಪ್ರಭುವೆ ಕಪಿಲ ಸಿದ್ಧಮಲ್ಲಿಕಾರ್ಜುನ. ॥೪೨॥

ಹೀಗೆಂದು ಸಿದ್ಧರಾಮಯ್ಯ ದೇವರು ಬಿನ್ನೈಸಲು, ಇದಕ್ಕೆ ಪ್ರಭು ದೇವರು ನಿನಗೆ ಅಂತರ್ಲಕ್ಷ್ಯಾನುಸಂಧಾನ ಧ್ಯಾನಯೋಗದಿಂದ ವಸ್ತುವ ಕಂಡಿಹೆನೆಂದರೆ ಸಾಧ್ಯವಾಗದು. ಎನ್ನ ಶ್ರೀಗುರುವಪ್ಪ ಅನುಮಿಷದೇವ ರಂತೆ, ಕರಸ್ಥಲದ ಲಿಂಗದಲ್ಲಿ ವಸ್ತು ನಿಶ್ಚಯವ ಕಂಡು ಬದುಕೆಂದು ನಿರೂಪಿಸಿದ ಪ್ರಸ್ತಾವದ ವಚನ. ॥

ಶೃತಿಯ ನಂಬದಿರೊ. ಶೃತಿಯ ನಂಬದಿರೊ. ಶೃತಿತತಿಗಳು ಮುನ್ನವೆ ಶಿವನಡಿಯ ಕಾಣದೆ "ಶೃತಿಚಕಿತಮಭಿಧತ್ತೆ" ಎನುತ್ತ ಮುನ್ನವೆ ಅರಸಿ ತೊಳಲಿ ಬಳಲುತ್ತೈದಾವೆ. ಶೃತಿಹೇಳಿದಂತೆ ಹರಿಹರಿದು ಬಳಲದಿರೊ. ಶೂನ್ಯಕ್ಕೆ ತಲೆವಾರನಿಕ್ಕದಿರೊ. ವಸ್ತು ಹೃದಯದಲುಂಟೆಂದು ನೆನೆಯ ದಿರೊ. ವಸ್ತು ಭ್ರೂಮಧ್ಯದಲುಂಟೆಂದು, ಭ್ರಮಿಸದಿರೊ. ವಸ್ತು ಬ್ರಹ್ಮ ರಂಧ್ರದಲ್ಲಿ ಉಂಟೆಂದು ಹೊಲಬುಗೆಡದಿರೊ. ವಸ್ತು ನಿಶ್ಚಯವ ಕಾಂಬಡೆ ಎನ್ನ ಸದ್ಗುರು ಅನುಮಿಷದೇವರಂತೆ ನಿನ್ನ ಕರಸ್ಥಲದಲ್ಲಿ ನಿಕ್ಷೇಪಿಸಿ ಕಂಡು ನಮ್ಮ ಗುಹೇಶ್ವರಲಿಂಗದಲ್ಲಿ ನಿಬ್ಬೆರಗಾಗೊ ಮರುಳೆ. ॥೪೩॥

ಮತ್ತಂ॥ ಪ್ರಭುದೇವರು ಅನುಮಿಷ ದೇವರೆಂಬ ಗುರುವಿನ ಕೃಪೆಯಿಂದ ಇಷ್ಟಲಿಂಗ ಸಂಬಂಧವ ಪಡೆದೆನಾಗಿ ಪ್ರಾಣಲಿಂಗ ಸಂಬಂಧವಾಯಿತ್ತು. ನಿನಗೆ ಇಷ್ಟಲಿಂಗ ಸಂಬಂಧವಿಲ್ಲದಿದ್ದರೆ, ಆಗದೆಂದು ನಿರೂಪಿಸಿದ ವಚನ॥

ಅಂಗಲಿಂಗ, ಪ್ರಾಣಲಿಂಗ, ಮನಲಿಂಗವಾಯಿತ್ತು ನೋಡಾ! ಅಂಗ ಲಿಂಗವಾಗಿ ನಡೆನುಡಿ ಗತಿಯನರಿಯದು. ಪ್ರಾಣ ಲಿಂಗವಾಗಿ ನವನಾಳ ಸುಳುಹನರಿಯದು. ಮನ ಲಿಂಗವಾಗಿ ನೆನಹುಗೆಟ್ಟಿತ್ತು. ಅನುಭಾವ ಲಿಂಗವಾಗಿ ವಿಚಾರವನರತಿತ್ತು. ಭಾವ ಲಿಂಗವಾಗಿ ಭಾವನೆಯಳಿದಿತ್ತು. ಸರ್ವ ಕ್ರಿಗಳೆಲ್ಲವು ಲಿಂಗವಾಗಿ, ಮಾರ್ಗಕ್ರಿ ಹೊಲಬನರಿಯದು. ಅರಿವು ಲಿಂಗವಾಗಿ ಮರಹುಗೆಟ್ಟಿತ್ತು. ಅಂತರಂಗ ಲಿಂಗವಾಗಿ ಬಹಿರಂಗವೆಂತೆಂದರಿಯದು. ಬಹಿರಂಗ ಲಿಂಗವಾಗಿ, ಅಂತರಂಗದ ಸುದ್ದಿಯನರಿಯದು. ಸರ್ವಾಂಗ ಲಿಂಗವಾಗಿ ಸರ್ವೇಂದ್ರಿಯ ಗಮನಗೆಟ್ಟಿತ್ತು. ಮಹಾಘನವಿಂಬುಗೊಂಡಿತ್ತಾಗಿ, ನೀಃಪತಿ ಕರಿಗೊಂಡಿತ್ತು. ಗುಹೇಶ್ವರಲಿಂಗದಲ್ಲಿ ಪ್ರಾಣ ಲಿಂಗ ಸಂಬಂಧ ಸ್ವಯವಾಯಿತ್ತು ನೋಡಾ ಸಿದ್ಧರಾಮಯ್ಯ ॥೪೪॥

ಹೀಗೆಂದು ಪ್ರಭುದೇವರು ಸಿದ್ಧರಾಮಯ್ಯ ದೇವರಿಗೆ ನಿರೂಪಿಸಲು ಆ ಸಮಯದಲ್ಲಿ ಅಮುಗಿದೇವಯ್ಯಗಳು ಬಿನ್ನೈಸುವ ಪ್ರಸ್ತಾವದ ವಚನ॥

ಕ್ಷುತ್ತು ಪಿಪಾಂಸೆ ಯರತಡೇನು? ಭಕ್ತನಪ್ಪನೆ? ಸ್ವೇಚ್ಛಾಗಮನಿಯಾದಡೇನು? ಭಕ್ತನಪ್ಪನೆ? ತನು ಬಯಲಾದಡೇನು? ಭಕ್ತನಪ್ಪನೆ? ಅಷ್ಟಮಹಾಸಿದ್ಧಿಯುಳ್ಳಡೇನು? ಭಕ್ತನಪ್ಪನೆ? ಚತುರ್ವಿಧಪದವ ಪಡೆದು ಕೈಲಾಸದಲ್ಲಿದ್ದಡೇನು? ಭಕ್ತನಪ್ಪನೆ? ಮಹತ್ವವ ಹಲವ ತೋರಿ ಮೆರೆದಡೇನು? ಭಕ್ತನಪ್ಪನೆ? ಅಲ್ಲಲ್ಲ. ಭಕ್ತಿಯ ಪರಿ ಎಂತೆಂದಡೆ, ಅಂಗತ್ರಯದಲ್ಲಿ ಲಿಂಗತ್ರಯ ಸಂಬಂಧವಾಗಿ ಗುರುಲಿಂಗಜಂಗಮವನಾರಾಧಿಸಿ ಲಿಂಗತ್ರಯದಲ್ಲಿ ಸಮವೇಧಿಸಿ, ಆ ತ್ರಿವಿಧ ಲಿಂಗಜಂಗಮವನಾರಾಧಿಸಿ ಪ್ರಸಾದ ಗ್ರಾಹಿಯಾದಲ್ಲದೆ ಭಕ್ತನಲ್ಲವೆಂದು ಸಿದ್ಧಸೋಮನಾಥನ ಶರಣರು ನುಡಿವರಯ್ಯ ಪ್ರಭುವೇ ॥೪೫॥

ಮತ್ತಂ॥ ಗುರುಕಾರುಣ್ಯವ ಪಡೆದು ಲಿಂಗದೊಳಗವ ಗ್ರಾಹಕನಾಗದೆ, ಅಂಗಲಿಂಗ, ಪ್ರಾಣಲಿಂಗ, ಆತ್ಮಲಿಂಗ ಸಂಬಂಧದ ವಿಚಾರವಿಲ್ಲದೆ ಬರಿಯ ಜ್ಞಾನಯೋಗವೆಂಬ ಶೂನ್ಯದನುಭಾವಿಗೆ ಗುರುಭಕ್ತಿ ಇಲ್ಲ. ಗುರುಭಕ್ತಿ ಇಲ್ಲವಾಗಿ ಲಿಂಗಭಕ್ತಿ ಇಲ್ಲ. ಲಿಂಗಭಕ್ತಿ ಇಲ್ಲನಾಗಿ ಜಂಗಮ

ಭಕ್ತಿ ಇಲ್ಲ. ಜಂಗಮಭಕ್ತಿ ಇಲ್ಲವಾಗಿ ಪ್ರಸಾದವಿಲ್ಲ. ಪ್ರಸಾದವಿಲ್ಲವಾಗಿ ಮೋಕ್ಷವಿಲ್ಲ. ಇದುಕಾರಣ ಸದ್ಗುರು ಸಿದ್ಧಸೋಮನಾಥನಲ್ಲಿ ಗುರುಕರಜಾತನಾದ ಲಿಂಗಾಂಗ ಸಂಬಂಧಿಗಳಪೂರ್ವವಯ್ಯ ಪ್ರಭುವೇ॥೪॥

ಹೀಗೆಂದು ಅಮುಗಿದೇವಯ್ಯಗಳು ಪ್ರಭುದೇವರೊಡನೆ ಬಿನ್ನೈಸಲು ಸಿದ್ಧರಾಮಯ್ಯದೇವರು ಬಸವಣ್ಣ ಮುಖ್ಯವಾದ ಅಸಂಖ್ಯಾತ ಮಹಾಗಣಂಗಳಿಂದ ಚನ್ನಬಸವೇಶ್ವರನ ಕೈಯ್ಯಿಂದ ಅನುಗ್ರಹವ ಕರುಣಿಸಿ ಕೊಡಿಸು ಎಂದು ಪ್ರಭುದೇವರಿಗೆ ಭಕ್ತಿಜ್ಞಾನಾತುರದಿಂದೆ ಬಿನ್ನೈಸುವ ಪ್ರಸ್ಥಾವದ ವಚನ॥

ಇನ ಮಂಡಲದೊಳಗೆ ಕಿರಣವಡಗಿಪ್ಪಂತೆ ಫಲವಹ ಬೀಜದಲ್ಲಿ ವೃಕ್ಷವಡಗಿಪ್ಪಂತೆ ಇಂದುಕಾಂತ ರವಿಕಾಂತದಲ್ಲಿ ಜಲಬಿಂದು ಅಗ್ನಿ ಇಪ್ಪಂತೆ ಸಂದ ಕ್ಷೀರದಲ್ಲಿ ಹೊಂದಿಹ ದಧಿ ತಕ್ರ ನವನೀತ ಘೃತವಿಪ್ಪಂತೆ ಅಂಗದ ಮೇಲೆ ಲಿಂಗ ಸಾಹಿತ್ಯವಾಗಿ ತನ್ನೊಳಗೆ ಆ ಲಿಂಗವ ಕಂಡು ಲಿಂಗದೊಳಗೆ ತನ್ನ ಕಂಡು ತನ್ನೊಳಗೆ ಸಮಸ್ತ ವಿಸ್ತಾರವೆಲ್ಲವ ಕಂಡು ಜಂಗಮುಖ ಲಿಂಗವೆಂಬ ಭೇದವನು ಲಿಂಗಕ್ಕೆ ಜಂಗಮವೆ ಪ್ರಾಣವಾಗಿಪ್ಪ ಭೇದವನು ಅಂಗದೊಳಗೆ ಲಿಂಗವೆ ಆಚಾರವಾಗಿ ಅಳವಟ್ಟ ವಿವರವನು ಲಿಂಗಾಂಗ ಸಂಬಂಧ ಸ್ಥಲಕುಳಂಗಳವಿರಳವಾಗಿ ಇದ್ದಿತ್ತೆಂಬುದನು ಕಂಗಳ ನೋಟಕ್ಕೆ ಗುರಿಯಾದ ಲಿಂಗವೆ ಅಂಗವನೊಳಕೊಂಬ ಭೇದವನು ಸಂಗನಬಸವಣ್ಣನಿಂದ ಕೃಪೆಮಾಡಿಸಿ ಎನ್ನನುಳುಹಾ ಪ್ರಭುವೆ ಕಪಿಲಸಿದ್ಧಮಲ್ಲಿಕಾರ್ಜುನದೇವಯ್ಯ ॥೪೭॥

ಹೀಗೆಂದು ಸಿದ್ಧರಾಮಯ್ಯದೇವರು ಪ್ರಭುದೇವರೊಡನೆ ಬಸವಣ್ಣ ಚನ್ನಬಸವಣ್ಣನವರಿಂದ ಲಿಂಗಧಾರಣವ ಮಾಡಿಸಿ ಎಂದು ಬಿನ್ನೈಸಲು ಆ ಪ್ರಭುದೇವರು ಚನ್ನಬಸವರಾಜದೇವರೊಡನೆ ಸಿದ್ಧರಾಮಯ್ಯ ದೇವರಿಗೆ ಲಿಂಗವ ಧರಿಸಬೇಕೆಂದು ನಿರೂಪಿಸಿದ ಪ್ರಸ್ಥಾವದ ವಚನ। ರತ್ನದೀಪ್ತಿಯಾದಡೇನು? ಬಂಧಿಸಿದ ಕುಂದಣದಲ್ಲಿ ಸಂದಿರಬೇಕು. ಸ್ವಾದುರಸ ರುಚಿಯನೀವ ಫಲವೆಂದಡೇನು ವೃಕ್ಷವಿಲ್ಲದನ್ನಕ್ಕ? ಚಿತ್ರ ಸೌಂದರ್ಯ ನೋಟಕ್ಕೆ ಸುಖವೆಂದಡೇನು ಭಿತ್ತಿಯ ಪಟಮುಖ್ಯಸ್ಥಾನವಿಲ್ಲದನ್ನಕ್ಕ? ಅಂಜನಸಿದ್ಧಿಯಿಂ ನಿಧಾನವ ಕಂಡಡೇನು, ಸಾಧನ ಕ್ರಿಯಿಂದ ಸಾಧವ ಮಾಡಿಕೊಳ್ಳದನ್ನಕ್ಕ? ಇದು ಕಾರಣ ಕಾಯದ ಕರಸ್ಥಲಕ್ಕೆ ಇಷ್ಟಲಿಂಗ

ಸಾಹಿತ್ಯವಿಲ್ಲದಿದ್ದರೆ ನಿರವಯುವಾದ ಜ್ಞಾನಯೋಗದ ಕೂಟ ಸಾಧ್ಯವಾಗದು. ಇದುಕಾರಣ ಕ್ರಿಯಾಲಿಂಗ ಸಂಬಂಧವೆ ಭಕ್ತಂಗೆ ಮತವು. ಇದೇ ಮಹಾಸೌಖ್ಯವು. ನಮ್ಮ ಗುಹೇಶ್ವರನ ಶರಣನ ಮನ ಒಪ್ಪುವಂತೆ ಸಿದ್ಧರಾಮಯ್ಯಂಗೆ ಲಿಂಗಸಾಹಿತ್ಯವ ಮಾಡಾ ಚನ್ನಬಸವಣ್ಣಾ ॥೪೮॥

ಇಂತು ಪ್ರಭುದೇವರು ಸಿದ್ಧರಾಮಯ್ಯದೇವರಿಗೆ ಉಪದೇಶವ ಮಾಡೆಂದು ಚನ್ನಬಸವರಾಜದೇವರಿಗೆ ನಿರೂಪಿಸಲು, ಆ ಚನ್ನಬಸವರಾಜದೇವರು ಸಿದ್ಧರಾಮಯ್ಯದೇವರಿಗೆ ದೀಕ್ಷೆಯಂ ಮಾಡಿದ ಪ್ರಸ್ತಾವದ ವಚನ ॥

ಆಣವಮಲ, ಮಾಯಾಮಲ, ಕಾರ್ಮಿಕಮಲವೆಂಬ ಮಲತ್ರಯಂಗಳ ಕಳೆದು, ಆಜ್ಞಾದೀಕ್ಷೆ, ಉಪಮಾದೀಕ್ಷೆ, ಸ್ವಸ್ತಿಕಾರೋಹಣ, ಕಳಶಾಭಿಷೇಕ, ವಿಭೂತಿಪಟ್ಟ, ಲಿಂಗಾಯತ, ಲಿಂಗಸ್ವಾಯತ, ಈ ಏಳನು ಕಾರ್ಯಕ್ಕೆ ಉಪದೇಶವ ಮಾಡುವುದು. ಸಮಯ, ನಿಸ್ಸಂಸಾರ, ನಿರ್ವಾಣ, ತತ್ವದೀಕ್ಷೆ, ಆಧ್ಯಾತ್ಮಿಕ, ಅನುಗ್ರಹ, ಸತ್ಯ ಶುದ್ಧ ಈ ಏಳನು ಪ್ರಾಣಕ್ಕೆ ಉಪದೇಶವ ಮಾಡುವುದು. ಏಕಾಗ್ರಚಿತ್ತ ದೃಢವ್ರತ, ಪಂಚೇಂದ್ರಿಯಾರ್ಪಿತ, ಅಹಿಂಸೆ, ಮನೋರ್ಲಯ, ಲಿಂಗನಿಜ, ಸದ್ಯೋನ್ಮುಕ್ತಿ, ಈ ಏಳನು ಮನಕ್ಕೆ ಉಪದೇಶವ ಮಾಡುವುದು. ಈ ಕ್ರಮವನರಿದು ಮಾಡುವುದು ಕೂಡಲ ಚನ್ನಸಂಗಯ್ಯನಲ್ಲಿ ಸಹಜದೀಕ್ಷೆಯಯ್ಯ. ॥೪೯॥

ಇಂತು ಚನ್ನಬಸವರಾಜದೇವರು ಕಾಯ ಪ್ರಾಣ ಮನವೆಂಬ ತ್ರಿವಿಧದಲ್ಲಿ ಇಪ್ಪತ್ತೊಂದು ದೀಕ್ಷೆಯಂ ಮಾಡಿ ತ್ರಿವಿಧ ಲಿಂಗಧಾರಣಮಂ ಸಂಬಂಧಿಸಲು, ಇದಕ್ಕೆ ಸಿದ್ಧರಾಮಯ್ಯದೇವರು ಪರಮಾನಂದ ಹರುಷವನೈದಿ ಬಿನ್ನೈಸಿದ ವಚನ. ॥

ಅಧ್ಯಾತ್ಮ ಅಧ್ಯಾತ್ಮವೆಂದೆಂಬಿರಿ. ಅಧ್ಯಾತ್ಮವಾರಿಗೆ? ಶ್ರೀ ಗುರುಸ್ವಾಮಿ ಬಹಳವಪ್ಪ ಶಿವಲಿಂಗವ ಸೂಕ್ಷ್ಮವ ಮಾಡಿ ಕರಸ್ಥಲಕ್ಕೆ ಕೊಟ್ಟ ಬಳಿಕ ಬೇರೆ ಯೋಗ ಉಂಟೆ? ತನ್ನ ಹಸ್ತನ ಮಸ್ತಕದಲ್ಲಿಟ್ಟು ವಾಯುಪ್ರಾಣಿಯಾಗಿದ್ದುದ ಕೊಂದು ಲಿಂಗಪ್ರಾಣಿಯ ಮಾಡಿದ ಬಳಿಕ ಅಕ್ಷರ ಐದರಲ್ಲಿ ಮುಕ್ತನ ಮಾಡಿದ ಬಳಿಕ ಮರಳಿ ಯೋಗ ಉಂಟೇ. ಶಿವಯೋಗವಲ್ಲದೆ? ಲಿಂಗಾರ್ಚನೆಯ ಮಾಡಿ, ಜಂಗಮ ಪ್ರಸಾದವ ಕೊಂಡ ಬಳಿಕ ಮರಳಿ ಬರಿಯ ಯೋಗಕ್ಕೆ ಒಡಂಬಡುವುವೆ ಅರಿವು? ಇಂತಪ್ಪವನ

ತಿಗಳೆದು ಶುದ್ಧ ಶಿವಯೋಗಿಯ ಮಾಡಿದಾತ ಚನ್ನಬಸವಣ್ಣ. ಆನು ಚನ್ನಬಸವಣ್ಣನ ಕರುಣದಿಂದೆ ಅಭ್ಯಾಸಯೋಗವನತಿಗಳೆದು ಶಿವಯೋಗದಲ್ಲಿ ನಿತ್ಯನಾಗಿ ಭಕ್ತ, ಮಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣೈಕ್ಯನೆಂಬ ಷಡುಸ್ಥಲಕ್ಕಧಿಕಾರಿಯಾದೆ. ನಿನ್ನವರ ಸಲುಗೆಗೆ ಸಂದೆ. ಚನ್ನಬಸವಣ್ಣನ ಕೃಪೆ ಎನ್ನನಿಂತು ಮಾಡಿತ್ತು ಕಾಣಾ ಗುರುವೆ ಕಪಿಲ ಸಿದ್ಧ ಮಲ್ಲಿಕಾರ್ಜುನ. ॥೫೦॥

ಮತ್ತಂ॥ ಹೆಸರಿಡಬಾರದ ಲಿಂಗವ ಹೆಸರಿಟ್ಟು ಎನ್ನ ಕರಸ್ಥಲಕ್ಕೆ ತಂದು ಕರತಳಾಮಳಕದಂತೆ ಮಾಡಿ, ಎನ್ನ ಕರಸ್ಥಲಕ್ಕೆ ಕ್ರಿಯಾಲಿಂಗವ ಕೊಟ್ಟು ಶ್ರೀಗುರು ಚನ್ನಬಸವಣ್ಣ ಹೆಸರಿಟ್ಟ ಲಿಂಗದ ಹೆಸರ ಹೇಳುವೆನು ಕೇಳಯ್ಯ. ಕಂಜ ಕರ್ಣಿಕೆಯ ಹಣೆಯಲ್ಲಿ ಯಾವತ್ತು ವಶವೆಂದು ಬರೆದೈದಕ್ಷರವೆ ಆತನ ಪ್ರಥಮನಾಮ. ಅವ್ವೆಯ ಕರದೊಳಿಪ್ಪ ಆರಕ್ಷರವೆ ಆತನ ದ್ವಿತೀಯನಾಮ. ಆಕೆಯ ಮಸ್ತಕದೊಳಿಪ್ಪ ಅಕ್ಷರವೆ ಆತನ ಆಚಾರ್ಯನಾಮ. ಇಂತೀ ನಾಮತ್ರಯಗಳನರಿದು, ಧ್ಯಾನಾರೂಢನಾಗಿ ಇರುವರು ಎಲ್ಲಿಗಾದರೂ ಒಬ್ಬರು. ಈ ಬಸವಣ್ಣ ಮೊದಲಾದ ಪುರಾತನರು ಆಯವ್ವೆಯ ಅನುಮತದಿಂದೆ ಲಿಂಗಾರ್ಚನೆಯಂ ಮಾಡಿ ನಿತ್ಯ ನಿಜವಾಸಿಗಳಾದರು. ಆ ಶರಣರ ಅನುಮತದ ಕುರುಹಿನ ಉಪದೇಶವ ಕೇಳಿ ಎನಗಿನ್ನಾವುದು ಹದನಯ್ಯ ಎಂಬ ಚಿಂತೆಯ ಬಿಟ್ಟು ಕಪಿಲ ಸಿದ್ಧಮಲ್ಲಿಕಾರ್ಜುನಯ್ಯನ ಕೈಯ್ಯಲ್ಲಿ ಪಿಡಿದೆನು. ॥೫೧॥

ಮತ್ತಂ॥ ಆದಿ ಆಧಾರವಿಲ್ಲದಂದಿನ ಸಾದಾಖ್ಯ ದೇಹವಿಲ್ಲದಂದಿನ, ಸೀಮೆಸಂಬಂಧಗಳಿಲ್ಲದಂದಿನ, ಅನಾದಿ ಸಂಸಿದ್ಧನ ಆಗು ಮಾಡಿ ಹೆಸರಿಟ್ಟು ಕರಸ್ಥಲಕ್ಕೆ ತಂದು ಕೊಟ್ಟ ಗುರು ಚನ್ನಬಸವಣ್ಣನಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ॥೫೨॥

ಮತ್ತಂ॥ ಇಹಲೋಕ ಪರಲೋಕವೆಂಬ ಸಂದಳಿಯಿತ್ತಯ್ಯ ಗುರುಪಿನ ಹಸ್ತದಲ್ಲಿ ಸತ್ತು ಪಂಚಾಕ್ಷರಿಯಿಂದೆತ್ತಿದ ಕಾರಣದಲ್ಲಿ ನಿತ್ಯವು ಲಿಂಗಾರ್ಚನೆಯ ಮಾಡುವ ಕಾರಣದಲ್ಲಿ ನಿತ್ಯವು ವಿಭೂತಿ, ರುದ್ರಾಕ್ಷಿಯ ಧಾರಣವ ಮಾಡುವ ಕಾರಣದಲ್ಲಿ ಇಹ ಲೋಕವೆಂದೇನು ಪರಲೋಕವೆಂದೇನು? ಹಂಗು ಹರಿದು ಒಂದಾದ ಬಳಿಕ ಮಲಮದಂಗಳ ಹರಿದು, ನಾನು ನೀನಾದ ಬಳಿಕ ಎಲೆ ಅಯ್ಯ ಭಕ್ತರ ಸರ್ವಾಂಗ ಲಿಂಗ ತನು

ಭಕ್ತರಿಪ್ಪ ಲೋಕವೇ ರುದ್ರಲೋಕ ಗುರುವೆ ಕಪಿಲಸಿದ್ಧಮಲ್ಲಿಕಾರ್ಜುನಯ್ಯ ನಿನ್ನ ಹಸ್ತ ಮಸ್ತಕದಲ್ಲಿ ಇಟ್ಟಡಾಯಿತ್ತು ॥೫೩॥

ಮತ್ತಂ॥ ಶುದ್ಧವನರಿದೆ, ಚನ್ನಬಸವಣ್ಣ ನಿಮ್ಮಿಂದ. ಸಿದ್ಧನರಿದೆ ಚನ್ನಬಸವಣ್ಣ ನಿಮ್ಮಿಂದ. ಪ್ರಸಿದ್ಧವನರಿದೆ ಚನ್ನಬಸವಣ್ಣ ನಿಮ್ಮಿಂದ. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ಚನ್ನಬಸವಣ್ಣ ಗುರುವಾಗಿ ಬಂದು, ಎನ್ನಜನ್ಮಕರ್ಮವ ನಿವೃತ್ತಿಯ ಮಾಡಿದನಯ್ಯ ॥೫೪॥

ಮತ್ತಂ॥ ಹೃದಯಕಮಲದ ಅಷ್ಟದಳದ ದ್ವಾತ್ರಿಂಶ ಕುಸುಮ ಮಧ್ಯದಲ್ಲಿ ಇಪ್ಪ ಸೂರ್ಯ, ಆ ಸೂರ್ಯನ ಮಧ್ಯದಲ್ಲಿ ಇಪ್ಪಚಂದ್ರ, ಆ ಚಂದ್ರನ ಮಧ್ಯದಲ್ಲಿ ಇಪ್ಪ ಅಗ್ನಿ, ಆ ಅಗ್ನಿಯ ಮಧ್ಯದಲ್ಲಿ ಇಪ್ಪುದು ಕಾಂತಿ, ಆ ಕಾಂತಿಯ ಮಧ್ಯದಲ್ಲಿ ಇಪ್ಪುದು ಸುಜ್ಞಾನ, ಆ ಸುಜ್ಞಾನದ ಮಧ್ಯದಲ್ಲಿಪ್ಪುದು ಚಿದಾತ್ಮ, ಆ ಚಿದಾತ್ಮನ ಮಧ್ಯದಲ್ಲಿಪ್ಪನಾ ಚಿತ್ಪ್ರಕಾಶ ನಪ್ಪಶಿವನು. ಅಂತಪ್ಪ ಪರಶಿವನು ಎನ್ನ ಸುಜ್ಞಾನದ ಕಾಯದ ಮಸ್ತಕದಲ್ಲಿ ಹಸ್ತವನಿರಿಸಿ ಮನ ಭಾವ ಕರಣೇಂದ್ರಿಯಗಳ ಸ್ವರೂಪೀಕರಿಸಿ ದೃಷ್ಟಿಗೆ ತೋರಿ ಕೈಯಲ್ಲಿ ಲಿಂಗವ ಕೊಟ್ಟ ಚನ್ನಬಸವಣ್ಣನ ಶ್ರೀ ಪಾದಕ್ಕೆ ನಮೋ ನಮೋ ಎಂಬ ಬದುಕಿದೆನಯ್ಯ, ಪ್ರಭುವೆ ಕಪಿಲಸಿದ್ಧ ಮಲ್ಲಿಕಾರ್ಜುನ ॥೫೫॥

ಹೀಗೆಂದು ಸಿದ್ಧರಾಮಯ್ಯದೇವರು ಚನ್ನಬಸವರಾಜದೇವರಿಂದೆ ಲಿಂಗಾಂಗ ಸಂಬಂಧಿಯಾಗಿಬದುಕಿದೆನೆಂದು ಸ್ತುತಿಸುತ್ತಿರಲು, ಆ ಚನ್ನಬಸವರಾಜದೇವರು ಸಂತೋಷಿಸಿ ಕೊಂಡಾಡಿದ ಪ್ರಸ್ಥಾನದ ವಚನ॥

ಕಂಗಳ ನೋಟವೆ ಮನದ ಕೂಟದಲ್ಲಿಯೆ ಏಕತ್ವ. ಭಾವದ ಲಿಂಗೈಕ್ಯದ ನಿಲವು ತನ್ನಿಂದ ತಾನೆಯಾದ ಬಗೆಯ ನೋಡಾ! ಅರಿಯಲಿಲ್ಲದ ಅರಿವಿನ ತೆರನು ಸಯವಾಯಿತ್ತು ಕೂಡಲ ಚನ್ನಸಂಗಯ್ಯನಲ್ಲಿ ಸಿದ್ಧರಾಮಯ್ಯಂಗೆ ॥೫೬॥

ಹೀಗೆಂದು ಚನ್ನಬಸವರಾಜದೇವರು ಸಿದ್ಧರಾಮಯ್ಯದೇವರಕೊಂಡಾಡಲು, ಪ್ರಭುದೇವರು ಚನ್ನಬಸರಾಜದೇವರೊಡನೆ ಸಿದ್ಧರಾಮಯ್ಯದೇವರ ಕೊಂಡಾಡಿದ ಪ್ರಸ್ಥಾವದ ವಚನ॥

ಸ್ವಾನುಭಾವದ ಬೆಳಗಿನಲ್ಲಿ ಒಂದು ಬೆಕ್ಕು ಹುಟ್ಟಿತ್ತು. ಆ ಬೆಕ್ಕಿನ ಶಿಳೆಯ ಮೇಲೆ ಒಂದು ಗಿರಿ ಹುಟ್ಟಿತ್ತು. ಆ ಗಿರಿಯ ಮೇಲೆ ಎರಡು ರತ್ನ

ಹುಟ್ಟಿದವು. ಆ ರತ್ನವನರಸಿಕೊಂಡು ಬರಲು, ಅವು ತನ್ನವಗ್ರಹಿಸಿದವು. ಒಂದು ರತ್ನ ಅಂಗವನವಗ್ರಹಿಸಿತ್ತು. ಮತ್ತೊಂದು ರತ್ನ ಪ್ರಾಣವನವಗ್ರಹಿಸಿತ್ತು. ಆ ರತ್ನಂಗಳ ಪ್ರಭೆ ತಾನಾದ ನಮ್ಮ ಗುಹೇಶ್ವರನ ಶರಣ ಸಿದ್ಧರಾಮಯ್ಯನ ನಿಲವಿಂಗೆ ನಮೋ ನಮೋ ಎನುತಿರ್ದೆನಯ್ಯ ಚನ್ನಬಸವಣ್ಣಾ ॥೫೭॥

ಇದಕ್ಕೆ ಚನ್ನಬಸವರಾಜದೇವರು ಪರಿಣಮಿಸಿ ತಾವು ಮತ್ತಾ ಸಿದ್ಧರಾಮಯ್ಯದೇವರಿಗೆ ನಿಜಲಿಂಗೈಕ್ಯದ ಭೇದಮಂ ಕೊಂಡಾಡಿ ನಿರೂಪಿಸಿದ ಪ್ರಸ್ಥಾವದ ವಚನ॥

ಅಹುದಹುದು ಅಂಗಕ್ಕೆ ಲಿಂಗವನರಸಬೇಕಲ್ಲನೆ ಲಿಂಗಕ್ಕೆ ಲಿಂಗವನರಸಲುಂಟೆ? ಪ್ರಾಣಕ್ಕೆ ಜ್ಞಾನವನರಸಬೇಕಲ್ಲದೆ ಜ್ಞಾನಕ್ಕೆ ಜ್ಞಾನವನರಸಲುಂಟೆ? ಎರಡಾಗಿದ್ದುದನೊಂದು ಮಾಡುವೆನೆನಬಹುದಲ್ಲದೆ ಒಂದಾಗಿರ್ದುದನೆರಡು ಮಾಡಲಿಲ್ಲ. ಕೂಡಲಚನ್ನಸಂಗಮದೇವರಲ್ಲಿ ಸಿದ್ಧರಾಮಯ್ಯದೇವರ ಶ್ರೀಪಾದಕ್ಕೆ ನಮೋ ನಮೋ ಎಂದು ಬದುಕಿದೆನು ಕಾಣಾ ಪ್ರಭುವೆ ॥೫೮॥

ಹೀಗೆಂದು ಚನ್ನಬಸವ ರಾಜದೇವರು ನಿರೂಪಿಸಲು, ಅದಕ್ಕೆ ಪ್ರಭುದೇವರು ಸಿದ್ಧರಾಮಯ್ಯ ದೇವರ ನಿಲವ ಕೊಂಡಾಡಿದ ಪ್ರಸ್ಥಾವದ ವಚನ॥

ಪಂಚಭೂತ ತ್ರಿಗುಣವನು ಸಂಚರಿಸಿ ರವಿಶಶಿಯ ಅಂತು ಕೂಡಿದರಾಜ ಬೀಜ ಬದ್ಧವಾಯಿತ್ತು. ಸಂಗತಿ ಇಲ್ಲದವನಲ್ಲ. ಪವನಗತಿಯ ನಡೆವವನಲ್ಲ. ಭೇದಿಸುತ್ತಿದ್ದಿತ್ತು ಲೋಕವೆಲ್ಲ. ಆತನೆ ರಾಜಬೀಜವಲ್ಲದ ಬಯಲುಬದ್ಧವಾಯಿತ್ತು. ಇನ್ನೇನೆಂದುಪಮಿಸುವೆ ಗುಹೇಶ್ವರ ಸಿದ್ಧರಾಮನ ನಾಮವನು? ॥೫೯॥

ಕಾಮನ ಕೊಲುವಲ್ಲಿ ಹೋಮವ ಸುಡುವಲ್ಲಿ ತ್ರಿಪುರ ಸಂಸಾರದ ಕೀಲನರಿವಲ್ಲಿ ಆತನ ಯೋಗಿ ಎನ್ನಬೇಡಾ! ಆತನ ಭೋಗಿ ಎನ್ನಬೇಡಾ. ಆತನು ಅಚ್ಚ ಲಿಂಗೈಕ್ಯನು. ಹಸಿವ ಮರೆತಲ್ಲಿ ವ್ಯಸನ ಮರತಲ್ಲಿ ಗುಹೇಶ್ವರ ಲಿಂಗವು ಸಿದ್ಧರಾಮಯ್ಯ ದೇವರು ತಾನೆ ॥೬೦॥

ಹೀಗೆಂದು ಪ್ರಭುದೇವರು ಸ್ತುತಿಸುತ್ತಿರಲು, ಚನ್ನ ಬಸವರಾಜದೇವರು ಮರಳಿ ಸಿದ್ಧರಾಮಯ್ಯ ದೇವರ ಕೊಂಡಾಡಿದ ಪ್ರಸ್ಥಾವದ ವಚನ

ಕಾಯದ ಕಲ್ಪಿತದಿಂದೆ ಭೋಗಾದಿ ಭೋಗಂಗಳ ಭೋಗಿಸಬಲ್ಲದೇ ವಲೋಕವೆ ಪರ್ವತ. ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯ ಇಂತೀ ಚತುರ್ವಿಧವನೆ ಮೀರಿ ಶಿವನ ಪ್ರಸಾದದಲ್ಲಿ. ಇರಬಲ್ಲರೆ ಈ ಕೈಲಾಸ ವೆ ಕಲ್ಯಾಣ. ಲಿಂಗವೆ ತಾನು, ತಾನೆ ಲಿಂಗವಾಗಿರಬಲ್ಲ ಶಿವಯೋಗಿ ಸಿದ್ಧರಾ ಮಯ್ಯ ದೇವರ ಶ್ರೀ ಪಾದದಲ್ಲಿ ಎಂದಿಪ್ಪೆ ಹೇಳಾ ಪ್ರಭುವೇ ಕೂಡಲ ಚನ್ನಸಂಗಮದೇವಾ ॥೬೧॥

ಮತ್ತಂ॥ ಹಸು ಹಯನಾಯಿತ್ತು. ಹಸು ಮನೆಗೆ ಬಂದಿತ್ತು ಹಸುವ ಕಟ್ಟುವರೆಲ್ಲರ ಕಟ್ಟುಬಂದವ ಒಕ್ಕಲಿಕ್ಕಿ ತುಳಿಯಿತ್ತು. ಕೂಡಲ ಚನ್ನಸಂಗಯ್ಯನಲ್ಲಿ ಹಸುವ ಕಟ್ಟಿದಾತ ನಮ್ಮ ಸಿದ್ಧರಾಮಯ್ಯ ದೇವ ರೊಬ್ಬರೆ. ॥೬೨॥

ಮತ್ತಂ, ಹರ ತನ್ನ ರೂಪವ ತೋರಲಿಕ್ಕೆ ಶ್ರೀಗುರುವಾದ. ಆ ಗುರುವೆ ಕರಸ್ಥಲಕ್ಕೆ ಲಿಂಗವಾದ. ಮನಸ್ಥಲಕ್ಕೆ ಮಂತ್ರವಾದ. ತನುಸ್ಥ ಲಕ್ಕೆ ಪ್ರಸಾದವಾದ. ಪ್ರಾಣಸ್ಥಲಕ್ಕೆ ಜಂಗಮವಾದ. ಕೂಡಲ ಚನ್ನ ಸಂಗಯ್ಯನಲ್ಲಿ ಸಮಯೋಗಿ ಸಿದ್ಧರಾಮಯ್ಯ ದೇವರು ಒಬ್ಬರೆ ತಾವಾ ದರು. ॥೬೩॥

ಕಬ್ಬುನಗಿದ ಗಾಣ ಬಲ್ಲುದೆ ಹಾಲ ಸವಿಯ? ಗಗನದಲಾಡುವ ಪಕ್ಷಿ ಬಲ್ಲುದೆ ರವಿಯ ನೆಲೆವ? ಹಗರಣಕ್ಕೆ ಪೂಜಿಸುವರು ಬಲ್ಲರೆ ನಮ್ಮ ಶರಣರ ಸುಳುಹ? ನಡು ಮುರಿದು ಗುಡಗೂರಿದರೇನು, ಲಿಂಗದ ನಿಜವನರಿಯದನ್ನಕ್ಕ? ಸಾವನ್ನಕ್ಕ ಜಪವ ಮಾಡಿದರೇನು ಲಿಂಗದ ಪ್ರಾಣ ತನ್ನ ಪ್ರಾಣ ಒಡಗೂಡದನ್ನಕ್ಕ? ಇಂತಿವರೆಲ್ಲರು ಅಭ್ಯಾಸ ಶಕ್ತಿ ಗರುಹಿಗರು. ನಮ್ಮ ಕೂಡಲ ಚನ್ನಸಂಗಯ್ಯನಲ್ಲಿ ಮಾಯಾ ಕೋಳಾ ಹಳ ಸಿದ್ಧರಾಮಯ್ಯ ದೇವರಿಗೆ ಅಹೋರಾತ್ರೆಯಲ್ಲಿ ನಮೋ ನಮೋ ಎಂದು ಬದುಕಿದೆನು ಕಾಣಾ ಪ್ರಭುವೇ. ॥೬೪॥

ಹೀಗೆಂದು ಚನ್ನಬಸವರಾಜ ದೇವರು ಕೊಂಡಾಡುತ್ತಿರಲು, ಆ ಸಿದ್ಧರಾಮಯ್ಯ ದೇವರು ಅತ್ಯಂತ ಭೀತಾತುರದಿಂದ ಬಿನ್ನೈಸುವ ಪ್ರಸ್ಥಾ ವದ ವಚನ.॥

ಮಲತ್ರಯಂಗಳಲಿ ಕುದಿಯಲೀಯ್ಯದೆ, ಮನಸಿಜನ ಬಾಣಕ್ಕೆ ಗುರಿ ಯಾಗಲೀಯ್ಯದೆ, ಎನ್ನ ತನ್ನಂತೆ ಮಾಡಿದನಯ್ಯ ಶ್ರೀಗುರು. ಪದಿನಾಲ್ಕು

ಮೀರಿ ಭವಕ್ಕೆ ಹೇತುವಾಗಲೀಯ್ಯದ ಕಾರಣ ಸದ್ಯೋನ್ಮುಕ್ತನ ಮಾಡಿ ದೆನಯ್ಯಾ ಶ್ರೀಗುರುವೆ ಪರಮ ಗುರುವೇ ಪರಿಭವಕ್ಕೆ ಬರಲೀಯ್ಯದಂತೆ ಎನ್ನ ನಿನ್ನವರೊಳಗೊಬ್ಬನೆಂದೆನಿಸಿದೆಯಲ್ಲ ಗುರುವೆ, ಪರಮ ಗುರುವೆ ಕಾಲ ಕರ್ಮಟಕ್ಕೆ ಗುರಿಯಹ ಎನ್ನನು ತೆಗೆದು, ಗುರುಲಿಂಗ ಜಂಗಮ ತ್ರೈಲಿಂಗಕ್ಕೆ ಕಾರಣಿಕನ ಮಾಡಿದೆ. ಇನ್ನು ಭವಕ್ಕೆ ಬಾರೆನು. ನಿನ್ನವ ರಾದಂತೆ ಅಪ್ಪೆ ಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ಎನ್ನ ಮೀರಿದ ಪದ ವೊಂದು ಇಲ್ಲವಯ್ಯ ॥೬೫॥

ರೂಪಿಂಗೆ ರೂಪು, ಜ್ಞಾನಕ್ಕೆ ಜ್ಞಾನ. ಪ್ರಾಣಕ್ಕೆ ಪ್ರಸಾದ ಲಿಂಗತ್ರ ಯುವ ಹೆದೆಯಿಂದವೆ ತಂದು, ಅವರವರ ಕರದಲ್ಲಿ ದೀಕ್ಷೆಯ ಮಾಡಿದನು ಚನ್ನಬಸವಣ್ಣ ಕಪಿಲಸಿದ್ಧಮಲ್ಲಿಕಾರ್ಜುನಯ್ಯ ॥೬೬॥

ಎಂದೊ ಎನಗೆ ಶಿವಪದ ಎಂದೊ ಎಂದು ಚಿಂತಿಸುವಂಗೆ ಮುಂದೆ ತೋರುತ್ತಿದೆ ಪರಮ ಪ್ರಸಾದದ ಬೀಡು. ಬೀಡಕಂಡು ಶಿವಗಣಂಗಳ ನೆರವ ಮಾಡಿಕೊಂಡು ಪರಮಗುರು ಚನ್ನಬಸವಣ್ಣನ ಶ್ರೀಪಾದಾರವಿಂದ ವನರಿದು, ಅವರ ಕೃಪಾವಲೋಕನದಿಂದೆ ನಿಮ್ಮ ಶ್ರೀಪಾದವನರಿದೆ ಕಾಣಾ ಕಪಿಲಸಿದ್ಧಮಲ್ಲಿನಾಥಯ್ಯ ॥೬೭॥

ಇನ್ನು ಜನನವಿಲ್ಲ. ಮುನ್ನವೆ ಸಂದಳಿದೆ. ಮನ್ನಣೆಯಿಂದ ನೀ ಕಳು ಹಿದಂತೆ ಉತ್ನತೋನ್ನತವಾದ ಚನ್ನಬಸವಣ್ಣನ ಕರುಣದಿಂದೆ ನಿನ್ನರೂ ಪಾದೆ. ಇನ್ನೆನಗೆ ಅರಿವುಂಟೆ ಕಪಿಲಸಿದ್ಧ ಮಲ್ಲಿಕಾರ್ಜುನ ? ॥೬೮॥

ಮತ್ತಂ॥ ಎನ್ನ ತನ್ನವನೆನಿಸಿ ಮನ್ನಿಸಿದ ಭಕ್ತಿಯೊಳು ಸನ್ನುತನು ಆದೆನಯ್ಯ. ಸಕಲದೊಳಗೆ ಬಿನ್ನಾಣ ದೇಹವನು ತನ್ನಂತೆ ಮಾಡಿದನು ಚನ್ನ ಬಸವಣ್ಣನಯ್ಯ ಕಪಿಲಸಿದ್ಧ ಮಲ್ಲಿಕಾರ್ಜುನ ॥೬೯॥

ಹೀಗೆಂದು ಚನ್ನಬಸವರಾಜದೇವರಂ ಸ್ತುತಿಸೆ ತಮ್ಮ ಲಿಂಗಾಂಗ ಸಮರಸಮಂ ಪ್ರಭುದೇವರಿಗೆ ಬಿನ್ನೈಸುವ ಪ್ರಸ್ತಾವದ ವಚನ ॥

ನೆರೆದೆನು ನೆರೆದೆನು ಎಂಬಡೆ ನಾನೇನು ಎರವೆ? ಶ್ರೀಗುರುಸ್ವಾಮಿ ನಿನ್ನ ಎನ್ನ ಕರಸ್ಥಲದಲ್ಲಿ ಸ್ಥಾಪ್ಯಗೊಳಿಸಿದ ಬಳಿಕ ಮಹಾ ಜ್ಯೋತಿರ್ಮ ಯದಲ್ಲಿ ತಮ ಉಂಟೆ? ಕಪಿಲಸಿದ್ಧ ಮಲ್ಲಿಕಾರ್ಜುನನೆಂಬ ಮಹಾ ಸಮುದ್ರ ವನೊಡಗೂಡಿದ ಬಳಿಕ ಬೇರೆ ನಾನೊಂದು ನದಿ ಎನಲುಂಟೆ ಪ್ರಭುವೆ?॥೭೦॥

ವುತ್ತಂ॥ ಕರಣಂಗಳ ಕಳೆದು. ಇರವಿನ ಬ್ರಹ್ಮ ನಿಜದಲ್ಲಿ ನಿಂದಿತ್ತಯ್ಯ. । ಆತ್ಮ ಸಂಗ ಸಂಯೋಗದ ಇರವು ನಿಮ್ಮಲ್ಲಿ ನಿಜವಾಯಿತ್ತಯ್ಯ. ಕಪಿಲಸಿದ್ಧಮಲ್ಲಿನಾಥಯ್ಯ ನಿಮ್ಮ ಚನ್ನಬಸವಣ್ಣನ ಕೃಪೆ ನಿಮ್ಮಿಂದ ಸಾಧ್ಯವಾಯಿತ್ತಯ್ಯ ಪ್ರಭುವೇ ॥೭೧॥

ಹೀಗೆಂದು ಸಿದ್ಧರಾಮಯ್ಯದೇವರು ಬಿನ್ನೈಸಲು ಪ್ರಭುದೇವರು ತಮ್ಮ ಲಿಂಗಾಂಗ ಸಮರಸ ಪರಿಣಾಮವ ಸಿದ್ಧರಾಮಯ್ಯ ದೇವರಿಂದೆ ಅರಿದೆನೆಂದು ನಿರೂಪಿಸಿದ ಪ್ರಸ್ತಾವದ ವಚನ ||

ಲಿಂಗವನರಿಯದೆ ಏನನರಿದಡೆಯು ಫಲವಿಲ್ಲ. ಲಿಂಗವನರಿದ ಬಳಿಕ ಮತ್ತೇನನರಿದಡೆಯು ಫಲವಿಲ್ಲ. ಸರ್ವಕಾರಣ ಲಿಂಗವಾಗಿ ಲಿಂಗವನೆ ಅರಿದರಿದು ಲಿಂಗ ಸಂಗವನೆ ಮಾಡುವೆ. ಸಂಗಸುಖದೊಳೋಲಾಡುವೆ ಗುಹೇಶ್ವರಾ ॥೭೨॥

ಹೀಗೆಂದು ಪ್ರಭುದೇವರು ನಿರೂಪಿಸಲು, ಆ ಸಿದ್ಧರಾಮಯ್ಯ ದೇವರು ಪ್ರಭುದೇವರ ಸ್ತೋತ್ರಮಂ ಮಾಡಿದ ಪ್ರಸ್ತಾವದ ವಚನ ॥

ಭವದ ಬೇರ ಹರಿಯಲ್ಕೆ ಪ್ರಭುವಾಗಿ ಬಂದ. ಮಲತ್ರಯಂಗಳ ಕೆಡಿಸಲ್ಕೆ ಪ್ರಭುವಾಗಿ ಬಂದ. ಅಜ್ಞಾನರಿಗೆ ಸುಜ್ಞಾನ ತೋರಲ್ಕೆ ಪ್ರಭುವಾಗಿ ಬಂದ. ಕಪಿಲಸಿದ್ಧ ಮಲ್ಲಿಕಾರ್ಜುನಯ್ಯನಾಗಿ, ಎನಗೋಸ್ಕರ ಪ್ರಭು ಬಂದಾ ॥೭೩॥

ಹೀಗೆಂದು ಸಿದ್ಧರಾಮಯ್ಯ ದೇವರು ಪ್ರಭುದೇವರ ಸ್ತುತಿಸುತ್ತಿರಲ್ಕಾ ಪ್ರಸ್ತಾವದಲ್ಲಿ ಚನ್ನಬಸವರಾಜದೇವರು ಸಿದ್ಧರಾಮಯ್ಯದೇವರ ಸ್ತೋತ್ರಮಂ ಮಾಡಿದ ಪ್ರಸ್ತಾವದ ವಚನ ॥

ಪದಂಗಳು ರಾಗರಾಮಕ್ರೀ॥ ಬೀಜವಿಲ್ಲದ ಸಸಿಗೆ ಸೌಖ್ಯ ರಾಜಿಸುವ ಸುಗಂಧದೊಡಲು ತ್ರೈಜಗಂಗಳನಿಂಬುಗೊಂಡ ಲಿಂಗದೇಹಿ ಶರಣನು ॥ಪ॥

ಆದಿಯಿಂದಲತ್ತತ್ತಲಾದನಾದಿ ಸಂಸಿದ್ಧವನ್ನು ವೇದಂಗಳರಸಿ ಕಾಣದಾಗಮುಕತ್ಯಧಿಕನಾ ॥ ಸಾಧಕಾಂಗದೊಳಗೈದಿ ಭೇದಿಸಿ ಪರತತ್ವದಿರವ ದಾಡಡಮವೆ ಲಿಂಗದಂಗ ಅಂಗಲಿಂಗ ಶರಣನು ॥೧॥

ಪರುಷಸೋಂಕಿನಿಂದ ಲೋಹ ಪರುಷವಾದುದೆಂಬ ಶಬ್ದಸ್ಪರುಶರೂಪುರ ಸಸುಗಂಧವೆರಸಿದರ್ಪಿತಂಗಳ ॥ ಪರಶಿವನೊಳು ಬೆರಸಿ ಪರತತ್ವತುರೀಯವಾದ ಬಳಿಕ ಶರಣ ಭರಿತಲಿಂಗವೊ, ಲಿಂಗ ಭರಿತ ಶರಣನೊ ॥೨॥

ಅಂಗ ಲಿಂಗ ಸಂಗ ಸಂಚ ಹಿಂಗೆ ಸಂಗಳಂಗದಲ್ಲಿ ಹಿಂಗದಾನೋಟ ಘೃತದ ನೆಳಲೊಳಿಪ್ಪ ಬಿಂಬವು॥ ಲಿಂಗವೆ ಶರಣಭರಿತ ಶರಣನೆ ಲಿಂಗ ಭರಿತ ಭಂಗ ಕೂಡಲಚನ್ನಸಂಗ ನಿಮ್ಮ ಶರಣನು. ॥೩॥

ಇಂತು ಚನ್ನಬಸವರಾಜ ದೇವರು ಸಿದ್ಧರಾಮಯ್ಯ ದೇವರ ಸ್ತುತಿ ಸುತ್ತಿರಲು, ಆ ಸಿದ್ಧರಾಮಯ್ಯ ದೇವರು ಚನ್ನಬಸವರಾಜ ದೇವರ ಕೊಂಡಾಡುವ ಪ್ರಸ್ಥಾವದ ವಚನ॥

ಕರಂಗಳೇ ಮನೆಯಾಗಿ, ಕರಂಗಳೆ ಕರಂಗಳಾಗಿ ಅರ್ಪಿಸುವ ಭೇದವನಾರು ಬಲ್ಲರಯ್ಯ, ಚನ್ನಬಸಣ್ಣನಲ್ಲದೆ? ತನು ಪ್ರಾಣ ಇಷ್ಟಲಿಂಗ ಸಂಬಂಧಿಯಾಗಿ ಇಂದ್ರಿಯಂಗಳೈದು ಮುಖಂಗಳಾಗಿ ಅರ್ಪಿಸುವ ಭೇದವನಾರುಬಲ್ಲರಯ್ಯ ಚನ್ನಬಸವಣ್ಣನಲ್ಲದೆ? ಆನಂದಸ್ಥಾನ ಅನುಮಿಷಾಕ್ಷರವ ಸಂಯೋಗದ ಅರ್ಪಣದ ಪ್ರಸಾದದ ಭೇದವ ಕಪಿಲ ಸಿದ್ಧಮಲ್ಲಿಕಾರ್ಜುನಯ್ಯನಲ್ಲಿ ಚನ್ನಬಸವಣ್ಣ ಬಲ್ಲ- ಮಿಕ್ಕಿನವರಿಗಸಾಧ್ಯವೆಂಬೆನೆಂಬೆ ॥೭೭॥

ಮತ್ತಂ॥ ಭಕ್ತಿವಿಡಿದು ಭಕ್ತನಾದ ಪ್ರಸಾದಿ. ಮೋಕ್ಷವಿಡಿದು ಧೈರ್ಯವಿಡಿದು ಆ ಭಕ್ತಂಗೆ ಮಹೇಶ್ವರನಾದ ಪ್ರಸಾದಿ. ಕಾರಣವಿಡಿದು ಅವಧಾನ ತಪ್ಪದೆ ಆ ಭಕ್ತಂಗೆ ಪ್ರಸಾದಿಯಾದ ಪ್ರಸಾದಿ. ಕರ್ಮರಹಿತನಾಗಿ ಕಾಲ ಕಲ್ಪಿತವಿಲ್ಲದ ಆ ಭಕ್ತಂಗೆ ಪ್ರಾಣಲಿಂಗಿಯಾದ ಪ್ರಸಾದಿ. ಪತಿಭಕ್ತಿವಿಡಿದು ಧರ್ಮಾರ್ಥ ಕಾಮ ಮೋಕ್ಷಂಗಳಾಸೆ ನಿವೃತ್ತಿಯಂ ಮಾಡಿದ ಆ ಭಕ್ತಂಗೆ ಶರಣನಾದ ಪ್ರಸಾದಿ. ಈ ಉಭಯ ಸಮರಸ ಏಕವೆಂದು ತಿಳಿದು ಉಭಯ ಭಾವ ಉರಿ ಕರ್ಪುರಸಂಯೋಗವಾದ ಆ ಭಕ್ತಂಗೆ ಐಕ್ಯನಾದ ಪ್ರಸಾದಿ. ನಮ್ಮ ಕಪಿಲಸಿದ್ಧಮಲ್ಲಿನಾಥನಲ್ಲಿ ಸರ್ವಕ್ಕೆ ಚೈತನ್ಯನಾದ ನಮ್ಮ ಚನ್ನಬಸವಣ್ಣನೆಂಬ ಅಚ್ಚಪ್ರಸಾದಿ ॥೭೮॥

ಇಂತು ಸಿದ್ಧರಾಮಯ್ಯದೇವರು ಚನ್ನಬಸವರಾಜದೇವರ ಸ್ತೋತ್ರಮಂ ಮಾಡುತ್ತಿರಲು, ಪ್ರಭುದೇವರು ಸಿದ್ಧರಾಮಯ್ಯ ದೇವರಿಂದ ಮಡಿವಾಳನೆಂಬ ಪರಬ್ರಹ್ಮವ ಕಂಡು ಒಡವೆರಸಿ ಬೆರಸಿ ನಿರವಯಲಾದೆವೆಂದು ನಿರೂಪಿಸಿದ ವಚನ॥

ಹಲವು ಮಕ್ಕಳ ತಾಯಂತೆ ಹೇಸದವರನಾರೈವ ತನು ಸಮರ್ಥವು ನಿನಗಲ್ಲದೆ, ಇನ್ನಾರಿಗೆ ಅಳವಡವುದು? ಮುನ್ನಾರಿಗೆ ಅಳವಡದು. ಇನ್ನು

ಎನ್ನಳವೆ? ನಿಮ್ಮನನು ತಿಳಿಯಲು ಮುನ್ನಿನ ಸುಕೃತ ಉಂಟಾಗಿ ನಿಮ್ಮ ಪಾದ ದೊರೆಕೊಂಡಿತ್ತು. ಇನ್ನು ನಮ್ಮ ನಿಳೆಯ ಬಿಡಪೆ ಎನ್ನುವನುಮಿ ವನೆಂದು ವಿವರಿಸಿ ಎನ್ನ ನಿನ್ನತ್ತ ತೆಗೆ ಕರುಣಿಸಿ. ಎನ್ನ ಮಾತಾಪಿತ ಗುಹೇಶ್ವರ ನಿಮ್ಮ ಶರಣ ಮಡಿವಾಳನಾಚಯ್ಯನಿಂದ ಬಯಲಾದೆನು. ಮುಕ್ತನಾದೆನು ನಿಮ್ಮ ಕರುಣದಿಂದಾ ॥೭೯॥

ಇದಕ್ಕೆ ಮಡಿವಾಳಮಾಚಿ ತಂದೆಗಳು ಬಸವಣ್ಣ ಚನ್ನಬಸವಣ್ಣ, ಪ್ರಭುದೇವರಿಂದ ಬದುಕಿದೆನೆಂದು ಬಿನ್ನೈಸುವ ಪ್ರಸ್ಥಾವದ ವಚನ॥

ಬಸವಣ್ಣ ಎಂದರೆ, ಚನ್ನಬಸವಣ್ಣ ಎಂದರೆ, ಪ್ರಭುದೇವ ಎಂದರೆ, ಮಹಾದೇವ ಎಂದರೆ, ಮಹಾಸ್ಥಾನದಲ್ಲರ್ಜು ಕರದಡೆ ಓ ಎನುತಿರ್ದೆ ಕಾಣಾ ಕಲಿದೇವರದೇವಾ ॥೮೦॥

ಇದಕ್ಕೆ ಚನ್ನಬಸವರಾಜದೇವರು ನಿರೂಪಿಸಿದ ಪ್ರಸ್ಥಾನದ ವಚನ॥ ಲಿಕಾರವೆ ಶೂನ್ಯ. ಬಿಂದುವೆ ಲೀಲೆ, ಗಕಾರವೆ ಚಿತ್ತು. ಈ ತ್ರಿವಿಧದೊಳಗೆ ಲಿಂಗವೆಂಬ ಸಕೀಲು. ಇದರ ಸಂಚವನಾವಾತ ಬಲ್ಲ ಆತನೆ ಲಿಂಗ ಸಂಗಿ. ಲಿಂಗಾನುಭಾವಿಗಳ ಚರಣಕ್ಕೆ ನಮೋ ನಮೋ ಎಂಬೆ ಕೂಡಲ ಚನ್ನಸಂಗಮದೇವಾ ॥೮೧॥

ಇದಕ್ಕೆ ಸಿದ್ಧರಾಮಯ್ಯದೇವರ ವಚನ॥ ಮೂರುಲಿಂಗಕ್ಕೆ ಮೂಲ ಮಂತ್ರವಾದಾತ ಗುರು. ಮೂರು ವಿದ್ಯಕ್ಕೆ ವಿದ್ಯರೂಪ ವಾದಾತ ಗುರು. ಹೊದ್ದಿದ ಪ್ರಪಂಚವನತಿಗಳೆದು ರೂಪಿಂಗೆ ರೂಪಾದಾತ ಗುರು. ಲೋಕ ತ್ರಯಕ್ಕೆ ಕಪಿಲ ಸಿದ್ಧ ಮಲ್ಲಿಕಾರ್ಜುನಯ್ಯನೆ ಗುರು ॥೮೨॥

ಮತ್ತಂ॥ ಅಯಿದು ಬ್ರಹ್ಮದಲ್ಲಿ ಅಯ್ಯ ನೀನು ಅತಿಶಯ ಜ್ಯೋತಿರ್ಮಯನು. ಅನಂತ ಸ್ಥಾನದಲ್ಲಿ ಅಯ್ಯ ನೀನು ಅತಿಶಯ ನಿತ್ಯಮಯನು. ಬಾಹ್ಯಾಭ್ಯಂತರದಲ್ಲಿ ಪರಿಪೂರ್ಣನು. ನಿನ್ನ ಆದಿ ಅಂತವನರಿಯಲ್ಕೆ ನಿಗಮಕ್ಕೆ ಅಭೇದ್ಯ. ಗುರುವಿನ ಕರುಣದಿಂದೆ ಎನ್ನ ಕರಸ್ಥಲಕ್ಕೆ ಸಿಕ್ಕಿ ಒಳಗಾದೆ, ಶಿವನೆ ಮಹಾಲಿಂಗ ಕಪಿಲ ಸಿದ್ಧ ಮಲ್ಲಿಕಾರ್ಜುನ ॥೮೩॥

ಮತ್ತಂ॥ ಭೇದಿಸಬಾರದೆ ಇಪ್ಪ ಅಭೇದ್ಯ ಶಿವನೆ ನಿನ್ನ ಭೇದಿಸಿ ತಂದುಕೊಟ್ಟನೆನ್ನಯ ಗುರು; ಇನ್ನು ನಾ ನಿನ್ನ ಬಿಡುವೆನೆ? ಬಿಡೆ, ಬಿಡೆ.

ಮುಚ್ಚಿದೆ. ಪಾದೋದಕವ ನಚ್ಚಿದೆ, ಪ್ರಸಾದವ ಗುರುವೆ ಕಪಿಲಸಿದ್ಧಮಲ್ಲಿಕಾರ್ಜುನ ||೮೪||

ಇವಕ್ಕೆ ಬಸವರಾಜದೇವರು ಸಿದ್ಧರಾಮಯ್ಯ ದೇವರ ಮಹಾತ್ಮೆಯಂ ಕೊಂಡಾಡಿದ ಪ್ರಸ್ತಾವದ ವಚನ||

ಅಡಿಗಡಿಗೆ ಸ್ಥಾನಸಿಧಿ. ಅಡಿಗಡಿಗೆ ದಿವ್ಯಕ್ಷೇತ್ರ. ಅಡಿಗಡಿಗೆ ನಿಧಿಯು ನಿಧಾನವು ನೋಡಾ! ಆತನ ಇರವೆ ವಾರಣಾಸಿ, ಅವಿಮುಕ್ತಕ್ಷೇತ್ರ. ಕೂಡಲಸಂಗನ ಶರಣ ಸ್ವತಂತ್ರನಾಗಿ ||೮೫||

ಇವಕ್ಕೆ ಸಿದ್ಧರಾಮಯ್ಯದೇವರು ಬಸವರಾಜದೇವರ ಕೊಂಡಾಡಿದ ಪ್ರಸ್ತಾವದ ವಚನ ||

ನೀಮ ಸಂಬಂಧಕ್ಕೆ ಮೀರಿಪ್ಪ ಮಂತ್ರಕ್ಕೆ ರಾಜಮಂತ್ರವು ತಾನು ಪಂಚಾಕ್ಷರಿ. ಪಂಚಾಕ್ಷರಿ ಗುಣದ ಬಸವಕ್ಷರತ್ರಯದ ಧ್ಯಾನ ಮೌನದ ಗುಣದ ಸತ್ವವಿಡಿದು, ಆನಂದ ತ್ರಿಲಿಂಗ ಮೂಲ ಮಂತ್ರಕ್ಕೀಗ ಬಸವಾಕ್ಷರವು ಮಾತೆಯಯ್ಯ ಕಪಿಲಸಿದ್ಧಮಲ್ಲಿಕಾರ್ಜುನ ||೮೬||

ಮತ್ತಂ|| ದೆಸೆದಿಗ್ವಳಯದಲ್ಲಿ ಪಸರಿಪ ಬಿತ್ತು ನಿನ್ನ ನಾಮ. ವಸುಧೆ ಎಲ್ಲವು ಹೆಣ್ಣು ನೀನೆ ಗಂಡು. ನೀನೆ ಬಸವಾಕ್ಷರತ್ರಯದಿಂದುದ್ಭವಿಸಿ ಸಕಲ ಬ್ರಹ್ಮಾಂಡಗಳಾದವಯ್ಯ ಕಪಿಲಸಿದ್ಧಮಲ್ಲಿಕಾರ್ಜುನ ||೮೭||

ಮತ್ತಂ|| ಮುನ್ನ ಮುನ್ನ ಶಶಿ ರವಿಗಳಿಲ್ಲದ ಮುನ್ನ, ಬ್ರಹ್ಮ ವಿಷ್ಣುಗಳುದ್ಭವಿಸಿದ ಮುನ್ನ ಮುನ್ನ, ಮೂರ್ತಿಗಳೆಂಟು ಒಂದಾಗದ ಮುನ್ನ ತನು ಮಧ್ಯವಳಯದಲ್ಲಿ ಸಕಲ ಬ್ರಹ್ಮಾಂಡ ಜಲಮಯವಾಗಿಪ್ಪಲ್ಲಿ ಭಕ್ತಿ ಕಾರಣ ಬಸವನನವಗ್ರಹಿಸಿಪ್ಪಲ್ಲಿ ಆವೆತ್ತಲಿದ್ದೆ? ನೀನೆ ಬಲ್ಲೆಯಯ್ಯ ಕಪಿಲಸಿದ್ಧಮಲ್ಲಿಕಾರ್ಜುನಯ್ಯ ಕುರುಹುಗೆಟ್ಟ ನಿಶ್ಚಿಂತನು ||೮೮||

ಮತ್ತಂ|| ಇಂದ್ರಾದಿ ದೇವತಾ ಸಂಕುಳಕ್ಕೆ ಅಂತಪ್ಪ ಪದವನಿತ್ತಾತ ಬಸವಣ್ಣನಯ್ಯ. ಬ್ರಹ್ಮ ವಿಷ್ಣು ಮೊದಲಾದ ದೇವತಾಮಾತ್ರಕ್ಕೆ ಅಂತಪ್ಪ ಪದವನಿತ್ತಾತ ಬಸವಣ್ಣನಯ್ಯ. ಶಿವಲಿಂಗ ಭಕ್ತರಿಗೆ ಚರಲಿಂಗದಾಚರಣೆಯ ಪರಿಯಾಯದಿಂದ ತೋರಿದಾತ ಗುರು. ಇಹಲೋಕ ಪರಲೋಕವನು ಮಿಷ್ಟವ ಸ್ಪುದ್ಧಿಯನರಿದಾತ ಗುರು ಬಸವಣ್ಣ ನೀನಯ್ಯ ಕಪಿಲಸಿದ್ಧಮಲ್ಲಿಕಾರ್ಜುನಯ್ಯ ||೮೯||

ಮತ್ತಂ|| ಪ್ರಸಾದವೈದರ ಪಾದೋದಕ ಎರಡೈದರ ಆದಿ ಅಕ್ಷರದಲ್ಲಿ ಏಕಸ್ವತ್ರಯವು ನಾದದಿಂದವೆ ತೂಗಿ, ಬಿಂದು ಸಮರಸದಿಂದೀಗ ಆಧಾರ

ಸ್ಥಾನಕ್ಕೆ ಅತ್ಯತಿಷ್ಠ ಮೂಲ ಸ್ಥಾನದಲ್ಲಿರ್ದ ಮುನ್ನೂರು ಕಮಲಕ್ಕೆ ಆದಿಭ್ರಮರನು ಬಸವ ಕಪಿಲಸಿದ್ಧಮಲ್ಲಿಕಾರ್ಜುನಯ್ಯ ॥೯೦॥

ಮತ್ತಂ॥ ಅಣ್ಣನ ನೋಡಿರೆ. ಲೋಕಕ್ಕೆ ಜಗದ ಕಣ್ಣಮುದವ ಕಳೆದನು. ಮುಕ್ಕಣ್ಣ ನಿಪ್ಪಡೆಯು ತೋರಿವ ಅಣ್ಣ ಬಸವಣ್ಣ. ವಾಙ್ಮನಕ್ಕಗೋಚರ ಮುಕ್ಕಣ್ಣನವತಾರಂಗಳನು ನಾಟಕವೆಂದರಿದು ಮೆರೆದ ಸತ್ಯಶುದ್ಧ ನಿಮ್ಮಗಳ ಕೈವಲ್ಯ ವಾಙ್ಮನಕ್ಕಗೋಚರ ಸತ್ಯಶುದ್ಧ ಬಸವಣ್ಣ ಅಣ್ಣ ನಿಮ್ಮಿಂದ ಶುದ್ಧವಕಂಡೆ. ಸಿದ್ಧವಕಂಡೆ. ಪ್ರಸಿದ್ಧವಕಂಡೆ. ಆಧಾರದಲಿ ಆಂದೋಳವಾದೆ. ಆರು ವ್ರತವಲ್ಲಿ ನಿಪುಣನಾದೆ. ನೀನೊಂದು ಮೂರಾದೆ. ಮೂರೊಂದಾಗಿ ತೋರಿದ ಗುಣವಿಂತುಟಯ್ಯ. ಬಸವಣ್ಣ ಇನ್ನೆನಗಾಧಿಕ್ಯ ಒಪ್ಪುದೊಂದಿಲ್ಲ. ನಾ ನಿಮ್ಮ ಉರವಣಿಸಿ ಹರಿವೆ. ಹರಿದು ಭರದಿಂದ ಗೆಲಿವೆ ತತ್ವ ಮೂವತ್ತಾರರಿಂ ಮೇಲೆ ಒಪ್ಪಿಪ್ಪ ತತ್ವಮುಸಿಯನೈದುವೆ. ಕಪಿಲಸಿದ್ಧಮಲ್ಲಿಕಾರ್ಜುನಯ್ಯ ಎನಗರಿದಿಪ್ಪುದಿಲ್ಲ ಕಾಣಾ ಪ್ರಭುವೆ, ಬಸವಪ್ರಸಾದದಿಂದ ॥೯೧॥

ಮತ್ತಂ॥ ಲೋಕಲೌಕಿಂಗಳೆಲ್ಲವು ನೀವು ಕೇಳಿರೆ. ಏಕೈಕ ರುದ್ರನ ಅವತಾರವನರಿದೆವೆಂಬಿರಿ. ನೋಡಿ ನಚ್ಚಿರೆ ಶಿವನ. ಶಿವನು ಬಸವಣ್ಣನಾದ ನೋಡಿರೆ. ಬಸವಣ್ಣ ಗುರುವಾದ. ಬಸವಣ್ಣ ಲಿಂಗವಾದ. ಬಸವಣ್ಣ ಚರವಾದ. ಬಸವಣ್ಣ ಪರಿಣಾಮ ಪ್ರಸನ್ನಪರವಾದ. ಬಸವಣ್ಣ ಮೂಲಮಂತ್ರವಾದ. ಬಸವಣ್ಣ ಭಕ್ತಿ ಎರಡು ತ್ರಯವಾದ ಬಸವಣ್ಣ ಅದರಿಂ ಮೇಲೆ ತೋರಿದ. ಕಪಿಲಸಿದ್ಧಮಲ್ಲಿಕಾರ್ಜುನಯ್ಯ ಬಸವಣ್ಣನ ಪ್ರಸಾದವ ಕೊಂಡು ಭವಂ ನಾಸ್ತಿಯಾದೆ ॥೯೨॥

ಸೀಮೆಯ ಮೀರಿದ ಸಂಬಂಧನೆ, ಸಂಬಂಧದಲ್ಲಿ ಸಮನಿಸದ ಸಂಯೋಗನೆ, ಎನ್ನ ಸಲಹುವ ಗುರುಲಿಂಗಜಂಗಮ ಪಾದೋದಕ ಪ್ರಸಾದಕ್ಕೆ ಅರ್ಹನ ಮಾಡಿದೆ. ಗುರುವೆ ಕಪಿಲಸಿದ್ಧಮಲ್ಲಿಕಾರ್ಜುನಯ್ಯ ನೀ ಬಸವನಾಗಿ ಬಂದು ನಿಮ್ಮವರಿಗೆ ಯೋಗ್ಯನ ಮಾಡಿದೆ, ಭವವ ತಪ್ಪಿಸಿದೆ ॥೯೩॥

ಮತ್ತಂ॥ ಗುರುವಾಗಿ ಬಂದೆನಗೆ ದೀಕ್ಷೆಯ ಮಾಡಿದಿರಿ. ಲಿಂಗವಾಗಿ ಬಂದೆನ್ನ ಮನದ ಮಲಿನವ ತೊಳೆದಿರಿ. ಜಂಗಮವಾಗಿ ಬಂದು ಪ್ರಪಂಚುಕತನುವ ಕಳೆದು ಪರಮ ಸೀಮೆಯ ಮಾಡಿದಿರಿ. ಇಂತೀ ಇವೆಲ್ಲವು ಬಸವಣ್ಣನಾಗಿ ಎನಗೆ ಪ್ರಸಾದವ ನೀಡಿ ಸಲಹಿದ ಕಪಿಲಸಿದ್ಧಮಲ್ಲಿಕಾರ್ಜುನ ಇನ್ನೆನಗತಿಶಯವೇನು ಇಲ್ಲ ॥೯೪॥

ಅರ್ಪಿತ ಅವಧಾನ ಮುಖಂಗಳು ಎಲ್ಲರಿಗೆ ಸುಲಭವೆ, ಅನಾದಿ ಸಂಸಿದ್ಧವಾಗಿ ಬಂದ ಬಸವಣ್ಣಂಗಲ್ಲದೆ? ತ್ರಿಲಿಂಗ ಮೂಲಕ್ಕೆ ಮಂತ್ರಾದಿ ರೂಪು ಬಸವಣ್ಣ. ಲಿಂಗ ಪ್ರಸಾದಕ್ಕರ್ಹ ಬಸವಣ್ಣ. ಮೂರು ಲಿಂಗ ಒಂದಾದ ಮೂರ್ತಿ ಬಸವಣ್ಣ. ಕಪಿಲಸಿದ್ಧಮಲ್ಲಿಕಾರ್ಜುನಯ್ಯ ನೀ ಸಾಕ್ಷಿಯಾಗಿ ಬಸವನ ನೆನೆವರು ನೀನಹರು ॥೯೫॥

ಮತ್ತಂ॥ ಪ್ರಥಮ ನಾಮಕ್ಕೀಗ ಬಸವಾಕ್ಷರವೆ ಬೀಜ. ಗುರು ನಾಮ ಮೂಲಕ್ಕೆ ಅಕ್ಷರಾಂಕ ಬಸವಣ್ಣ. ಬಸವಣ್ಣ, ಬಸವಣ್ಣ, ಬಸ ವಣ್ಣ ಎಂದೀಗ ದೆಸೆಗೆಟ್ಟೆನಯ್ಯ ಗುರುವೆ ಕಪಿಲಸಿದ್ಧಮಲ್ಲಿಕಾರ್ಜುನ ॥೯೬॥

ಮತ್ತಂ॥ ಆದಿ ಆಧಾರಕ್ಕೆ ಮೂಲ ತಾ ಬಸವಣ್ಣ. ಹೋದನಯ್ಯ ಭಕ್ತಿಯೊಳಗೆ ಹೊಲಬುದಪ್ಪಿ. ಊರನರಿಯದ ಗ್ರಾಮ ಹೊಲಬುದಪ್ಪಿದ ಸೀಮೆ ಆತನನುಮತದಿಂದೆ ನೀಸಾವೆನಯ್ಯ ಬಸವಣ್ಣ. ಬಸವಣ್ಣ ಬಸವಣ್ಣ ಎಂಬ ನಾಮಾಕ್ಷರದೊಳಗೆ ದೆಸೆಗೆಟ್ಟೆನಯ್ಯ. ಗುರುವೇ ಕಪಿಲ ಸಿದ್ಧಮಲ್ಲಿಕಾರ್ಜುನಾ. ॥೯೭॥

ಇಂತು ಸಿದ್ಧರಾಮಯ್ಯದೇವರು ಬಸವರಾಜದೇವರ ಕೊಂಡಾ ಡುತ್ತಿರಲು, ಇದಕ್ಕೆ ಚನ್ನಬಸವರಾಜದೇವರು ಸಿದ್ಧರಾಮಯ್ಯದೇವರು ಮುಖ್ಯವಾದ ಅಸಂಖ್ಯಾತ ಮಹಾ ಗಣಂಗಳ ಅನುಭಾವ ಸಂಪರ್ಕದಿಂದೆ ತ್ರಿವಿಧ ಸಾಧ್ಯವಾಯಿತ್ತೆಂದು ನಿರೂಪಿಸಿದ ಪ್ರಸ್ತಾವದ ವಚನ॥

ಅನಂತಕಾಲ ಹೋಗಿ ತರುಮರಾದಿಗಳಲ್ಲಿ, ತಪಮಿರುವದನು ಒಂದು ದಿನ ಗುರುಚರಣ ಸೇವೆ ಸಾಲದೆ ಅಯ್ಯ? ಅನಂತ ಕಾಲ ಗುರು ಚರಣ ಸೇವೆ ಮಾಡುವುದು ಒಂದು ದಿನ ಲಿಂಗಪೂಜೆ ಸಾಲದೆ ಆಯ್ಯ? ಅನಂತಕಾಲ ಲಿಂಗಪೂಜೆಯ ಮಾಡುವದನು ಒಂದುದಿನ ಜಂಗಮ ತೃಪ್ತಿ ಸಾಲದೆ ಆಯ್ಯ? ಅನಂತಕಾಲ ಜಂಗಮತೃಪ್ತಿ ಮಾಡುವುದನು ಒಂದು ನಿಮಿಷ ನಿಮ್ಮ ಶರಣರ ಅನುಭಾವ ಸಾಲದೆ ಕೂಡಲ ಚನ್ನ ಸಂಗಮ ದೇವಾ? ॥೯೮॥

ಇದಕ್ಕೆ ಸಿದ್ಧರಾಮಯ್ಯದೇವರು ಚನ್ನ ಬಸವಣ್ಣ ಮುಖ್ಯವಾದ ಅಸಂಖ್ಯಾತ ಮಹಾ ಗಣಂಗಳಿಂದ ಸರ್ವವೂ ಸಾಧ್ಯವಾಯಿತ್ತೆಂದು ಬಿನ್ನೈ ಸುವ ಪ್ರಸ್ತಾವದ ವಚನ॥

ಶುದ್ಧಸಿದ್ಧ ಪ್ರಸಿದ್ಧದ ನೆಲೆಯನರದಿಹೆನೆಂದು ತೊಳಲಿ ಬಂದೆ. ಗಿರಿ ಗಂಹರದೊಳಗೆ ಕಂಡೆ. ಕಾಣೆನೆಂಬ ಸಂಶಯವಾಯಿತ್ತು. ಅದೇನುಕಾರಣ?

ನೀನವರ ಗಣಸಮೂಹಕ್ಕೆ ತಾತ್ಪರ್ಯದವರಲ್ಲವಾಗಿ. ನೀನು ಸದ್ಭಕ್ತ ದೇಹಿಕನಾಗಿ ಸದ್ಭಕ್ತರಲ್ಲಿ ಒಚ್ಚತವೋಗಿ ಇಪ್ಪೆಯಾಗಿ. ಇಪ್ಪ ಗಿರಿಗಂಹರ ದಲ್ಲಿ ಗುರುವಿನ ಕರುಣದಿಂದೆ ಕಂಡೆ ನೀನಿಪ್ಪ ನೆಲೆಯಯ್ಯ. ಶುದ್ಧವು ಗುರುವಿನಲ್ಲಿ ಸಿದ್ಧವು ಲಿಂಗದಲ್ಲಿ ಪ್ರಸಿದ್ಧವು ಜಂಗಮದಲ್ಲಿ ಕಂಡೆ. ಅರಿದೆ, ನಚ್ಚಿದೆ, ಮಚ್ಚಿದೆ. ಎನ್ನ ಸರ್ವ ಸ್ವಾಯತವನೊಚ್ಚತಗೊಟ್ಟೆ. ನಿನ್ನ ಗಣಸಮೂಹಕ್ಕೆ ಪ್ರಾಪ್ತನಾದೆ. ನಿನ್ನ ಭಕ್ತರ ಸಲುಗೆಗೆ ಸಂದೆ ಕಪಿಲ ಸಿದ್ಧಮಲ್ಲಿಕಾರ್ಜುನತಂದೆ ॥೯೯॥

ಮತ್ತಂ॥ ಸೋಹಂ ನೀನೆ. ಎಲೆ ಅಯ್ಯ ಕೋಹಂ ತತ್ವ ತೂರ್ಯಾರ್ಥವು ನೀನೆ ಅಯ್ಯ ನಾಹಂ ನಾಹಂ ನೀನೆ ಅಯ್ಯ. ಆನೆಂಬುದೊಂದು ಭ್ರಾಂತು ಉಂಟೆ? ಕಪಿಲಸಿದ್ಧಮಲ್ಲಿಕಾರ್ಜುನಯ್ಯ ಗುರುವಿನ ಕೈಯ್ಯಲು ನಾನು ಸತ್ತು ಹುಟ್ಟಿದ ಬಳಿಕ ಆನು ನೀನೆಂಬ ಸಂದಳಿದೆ॥೧೦೦॥

ಇದಕ್ಕೆ ಪ್ರಭುದೇವರು ಪರಮ ಹರುಷವನೈದಿ ನಿರೂಪಿಸಿದ ಪ್ರಸ್ಥಾವದ ವಚನ॥

ಪರಿಣಾಮದೊಳಗೆ ಮನದ ಪರಿಣಾಮವೆ ಚಲುವು. ಸಂಗದೊಳಗೆ ಶರಣರ ಸಂಗವೆ ಚಲುವು. ಕಾಯಗೊಂಡು ಹುಟ್ಟಿದಮೂಢರೆಲ್ಲ ಸಾಯದ ಸಂಚವನರಿವುದೆ ಚಲುವು ಗುಹೇಶ್ವರಾ॥೧೦೧॥

ಇದಕ್ಕೆ ಸಿದ್ಧರಾಮಯ್ಯದೇವರು ಹರುಷಂದಳೆದು ಚನ್ನಬಸವರಾಜದೇವರೊಡನೆ ಪ್ರಭುದೇವರ ಸ್ತೋತ್ರಮಂ ಮಾಡುವ ಪ್ರಸ್ಥಾವದ ವಚನ॥

ಅಂಗಯ್ಯ ನೋಟದೊಳು ಕಂಗಳು ನಟ್ಟು ಕಂಗಳ ತೇಜ ಹಿಂಗದು. ಲಿಂಗಪ್ರಭೆಯೊಳಗೆ ಅಂಗವೆಲ್ಲ ಲೀಯ್ಯವಾಗಿ ಸಂಗ ನಿಸ್ಸಂಗವೆಂಬ ದಂದುಗವ ಹರಿದು, ಹಿಂದು ಮುಂದೆಂಬ ಭಾವವಳಿದು ನಿಂದ ನಿಜವಲ್ಲಿ ನಿರಾಳದಲ್ಲಿ ಪ್ರಾಣ ಸಮರತಿಯಾಗಿ ಕಪಿಲಸಿದ್ಧಮಲ್ಲಿಕಾರ್ಜುನನಲ್ಲಿ ಪ್ರಭುದೇವರ ಪಾದಕ್ಕೆ ನಮೋ ನಮೋ ಎಂದು ಬದುಕಿದೆನು ಕಾಣಾ ಚನ್ನಬಸವಣ್ಣಾ ॥೧೦೨॥

ಇದಕ್ಕೆ ಚನ್ನಬಸವರಾಜದೇವರು ಸಿದ್ಧರಾಮಯ್ಯದೇವರೊಡನೆ ಪ್ರಭುದೇವರ ಸ್ತೋತ್ರಮಂ ಮಾಡಿದ ಪ್ರಸ್ಥಾವದ ವಚನ॥

ಕಾಯವೆಂಬ ಕನ್ನಡವಿಲ್ಲ. ಪ್ರಾಣವಿಲ್ಲಾಗಿ. ಮನವೆಂಬ ನೆನಹಿಲ್ಲ ಅನುಭಾವವಿಲ್ಲವಾಗಿ. ಅರಿವೆಂಬ ಕುರುಹಿಲ್ಲ, ಪ್ರತಿಇಲ್ಲವಾಗಿ. ಕೂಡಲ

ಚನ್ನಸಂಗಮದೇವರಲ್ಲಿ ಪ್ರಭುದೇವರ ಪಾದಕ್ಕೆ ನಮೋ ನಮೋ ಎಂದು ಬದುಕಿದೆನು ಕಾಣಾ ಸಿದ್ಧರಾಮಯ್ಯ ॥೧೦೩॥

ಇವಕ್ಕೆ ಪ್ರಭುದೇವರು ಚಿಕ್ಕದಣ್ಣಾಯಕರ ಸ್ತೋತ್ರಮಂ ಮಾಡುವ ಪ್ರಸ್ತಾವದ ವಚನ ॥

ಗಗನ ಪವನದ ಮೇಲೆ ಉಭಯ ಮುಖದನುಭಾವ ಸದಮದಗಜಪ ನಿಲಿಸುವ ಮಾವತಿಗ ಬಂದ. ಅಷ್ಟದಳ ಕಮಲದೊಳು ಸೃಷ್ಟಿಯಂಕುರದ ಬೀಜವ ಮೆಟ್ಟಿ ನಿಂದಾತ ಪರಮಯೋಗಿಯಾಗದೆ ಮಾಣ. ಬಯಲ ಬಣ್ಣಕ್ಕೆ ತಂದು ನೆಳಲ ಶೃಂಗಾರವ ಮಾಡಿದ ಗುಹೇಶ್ವರನ ಶರಣ ಚನ್ನ ಬಸವಣ್ಣಂಗೆ ಶರಣೆನುತಿರ್ದೆನು ॥೧೦೪॥

ಹೀಗೆಂದು ಪ್ರಭುದೇವರು ಚಿಕ್ಕದಣ್ಣಾಯಕರ ಸ್ತೋತ್ರಮಂ ಮಾಡುತ್ತಿರಲು, ಸಿದ್ಧರಾಮಯ್ಯದೇವರು ತಾವು ಚಿಕ್ಕದಣ್ಣಾಯಕರ ಸ್ತೋತ್ರಮಂ ಮಾಡುವ ಪ್ರಸ್ಥಾವದವಚನ ॥

ವಾಣಿ ನಾಲ್ಕರ ಮೇಲೆ ಮಾಣದೆ ನುಡಿವ ನಿರ್ವಾಣಿಯ ಸಂಭಾಷಣೆಯ ಮಾಡಬಲ್ಲರೆ ನಿರ್ವಾಣ. ವರ್ಣವೇಳರೊಳಗೆ ಪರಿಪೂರ್ಣವಾಗಿಪ್ಪ ಮಹಾವರ್ಣವ ತನ್ಮಯ ಮಾಡಬಲ್ಲರೆ ನಿರ್ವಾಣ. ಸ್ಥಾನ ಹತ್ತರಲ್ಲಿ ಆನಂದ ಸಿಂಹಾಸನದ ನಾನಾ ಬೆಳಗಿನ ಬೀಜದ ತಿರುಳನನುಭವಿಸಬಲ್ಲರೆ ಲಿಂಗಾನುಭಾವಿ. ಪ್ರಣವ ಹತ್ತರಲ್ಲಿ ಧ್ಯಾನ ಚತುಷ್ಟಯ ಕೂಡಿದಲ್ಲಿಯ ಕೀಲ ಬಲ್ಲರೆ ಲಿಂಗೈಕ್ಯ. ಇದು ಕಾರಣ ಕಪಿಲಸಿದ್ಧಮಲ್ಲಿಕಾರ್ಜುನಯ್ಯ ನಿಮ್ಮ ಶರಣ ಚನ್ನಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು ॥೧೦೫॥

ಮತ್ತಂ॥ ಸಿದ್ಧರಾಮಯ್ಯದೇವರು ಬಸವಣ್ಣ ಚನ್ನಬಸವಣ್ಣ ಪ್ರಭುದೇವರು ಮೂವರನು ಕೂಡಿ ಸ್ತೋತ್ರಮಂ ಮಾಡುವ ಪ್ರಸ್ಥಾವದವಚನ॥

ಭಕ್ತಿರೂಪು ಬಸವಣ್ಣ. ಜ್ಞಾನರೂಪು ಬಸವಣ್ಣ. ಗುರುರೂಪು ಚನ್ನಬಸವಣ್ಣ. ಪ್ರಸಾದರೂಪು ಚನ್ನಬಸವಣ್ಣ. ಕಪಿಲಸಿದ್ಧಮಲ್ಲಿಕಾರ್ಜುನಯ್ಯ ಪ್ರಭುವಾಗಿ ಬಂದು ಬಸವಣ್ಣ ಚನ್ನಬಸವಣ್ಣನ ಒಕ್ಕುದ ಕೊಂಡು ಜಂಗಮವಾದನು ॥೧೦೬॥

ಮತ್ತಂ॥ ಮರ್ಮವನರಿತು, ಅಯ್ಯ ನಿಮ್ಮ ಕಾಂಬುವರು ಸುಲಭವೆ? ಲೋಕದಲ್ಲಿ ಲಿಂಗಭಕ್ತಿ ಜಂಗಮಭಕ್ತಿ ಗುರುಭಕ್ತಿ ಸುಲಭವೆ? ಲಿಂಗ

ಭಕ್ತಿ ಪ್ರಭುದೇವರು, ಜಂಗಮಭಕ್ತ ಬಸಣ್ಣನು. ಗುರುಮೊದಲಾದ ಪ್ರಸಾದ ಸರ್ವಕ್ಕೆ ಅನುಭಾವಿ ಚನ್ನಬಸವಣ್ಣ ಕಪಿಲ ಸಿದ್ಧಮಲ್ಲಿಕಾರ್ಜುನಯ್ಯ, ಇಂತಿವರ ಪಾದಕ್ಕೆ ನಮೋ ನಮೋ ಎಂಬೆನು. ॥೧೦೭॥

ಸೂತ್ರಂ॥ ಸಿದ್ಧರಾಮಯ್ಯ ದೇವರು ಗುರುಸ್ತೋತ್ರವಂ ಮಾಡುವ ಪ್ರಸ್ತಾವದ ವಚನ॥

ಗುರುವಿನ ಕೃಪೆಯಿಂದ ಸಾಧಾರಣ ತನುವ ಮರೆದೆ. ಗುರುವಿನ ಕೃಪೆಯಿಂದ ಮಲತ್ರಯದ ಪಂಕವ ತೊಳೆದೆ. ಗುರುವಿನ ಕೃಪೆಯಿಂದ ದೀಕ್ಷಾತ್ರಯದಿಂದ ಅನುಭಾವಿಯಾದೆ. ಗುರುವಿನ ಕೃಪೆಯಿಂದ ಶುದ್ಧ, ಸಿದ್ಧ, ಪ್ರಸಿದ್ಧ, ಪ್ರಮಾಣವನರಿದೆ. ಎನಗಧಿಕವಪ್ಪ ವಸ್ತು ಬೇರೊಂದಿಲ್ಲ. ಅದೇನು ಕಾರಣ? ಅವ ನಾನಾದೆಯಾಗಿ. ಗುರುವೇ ಎನ್ನ ತನುವಿಂಗೆ ಲಿಂಗದೀಕ್ಷೆಯ ಮಾಡಿ, ಎನ್ನ ಜ್ಞಾನಕ್ಕೆ ಸ್ವಾನುಭಾವ ದೀಕ್ಷೆಯ ಮಾಡಿ ಎನ್ನ ತನುಮನಧನದಲ್ಲಿ ವಂಚನೆ ಇಲ್ಲದೆ ಮಾಡಲೆಂದು ಜಂಗಮದೀಕ್ಷೆಯ ಮಾಡಿ, ಎನ್ನ ಸರ್ವಾಂಗವು ನಿನ್ನ ವಿಶ್ರಾಮಸ್ಥಾನ ಶುದ್ಧಮಂಟಪವಾದ ಕಾರಣ ಲೋಕ ವ್ಯಾಪ್ತಿಯನರಿಯದೆ ಲೋಕ ಎನ್ನೊಳಗಾಯಿತ್ತು ಆ ಲೋಕಕ್ಕೆ ಹೊರಗಾದೆನಾಗಿ. ಅದೇನು ಕಾರಣ? ಜನನಮರಣಪ್ರಳಯಕ್ಕೆ ಹೊರಗಾದೆನಾಗಿ. ಗುರುವೆ ಸದ್ಗುರುವೆ ಎನ್ನ ಭವದ ಬೇರ ಹರಿದ ಗುರುವೆ ಭವಪಾಶ ವಿಮೋಚನ ಅವ್ಯಯ ಮನನ ಸರ್ವಾಂಗ ಲೋಲುಪ್ತ ಭುಕ್ತಿ ಮುಕ್ತಿ ಪ್ರದಾಯಕ ಗುರುವೆ ಬಸವಣ್ಣ ಕಪಿಲಸಿದ್ಧಮಲ್ಲಿಕಾರ್ಜುನ ಚನ್ನಬಸವಣ್ಣನಾಗಿ ಪ್ರಭು ಮೊದಲಾಗಿ ಅಸಂಖ್ಯಾತರೆಲ್ಲರನು ತೋರಿದ ಗುರುವೆ ॥೧೦೮॥

ಇತಿಶ್ರೀಮತ್ಸಕಲ ಗಣ ಪುರಾತನರೊಳ್ ಪ್ರಭುದೇವರು ಮಹಾನುಭಾವ ಸಂಗೋಷ್ಠಿಯಂ ಮಾಡಿದ ಶೂನ್ಯಸಂಪಾದನೆಯೊಳ್ ಸಿದ್ಧರಾಮಯ್ಯದೇವರ ಗುರುಕರುಣಂ ದಶಮೋಪದೇಶಸಮಾಪ್ತ.

# ಪ್ರಭುದೇವರ ಪೂಜಾಸ್ತುತಿ

## (ಏಕಾದಶೋಪದೇಶ)

॥ಕಂದ॥ ಪರಮ ಪ್ರಭುದೇವರನು ಬಸ । ವರಸಠ ಅಂತರ್ಸಿವಾಸಕ್ಕೈದಲ್ ಮುದದಿಂ॥ ಶರಣಸಮೂಹಂ ಭಜಿಸಿದ । ಪರಿಯಂ ವಿರಚಿಸುವೆ ಶರಣ ಜನರಹುದೆನಲೂ॥

ಆಪೆಂತೆಂದೊಡಾ ಪ್ರಭುದೇವರು ಸಿದ್ಧರಾಮಯ್ಯದೇವರಿಗೆ ಚನ್ನ ಬಸವರಾಜದೇವರಿಂದ ಇಷ್ಟಲಿಂಗೋಪದೇಶಮಂ ಮಾಡಿಸಿ,ಪರಮ ಹರುಷಿತರಾಗಿ, ಬಸವರಾಜದೇವರಪರಿಮಿತವ ಗೃಹಕ್ಕೆ ಬಿಜಯಂಗೈವ ಪ್ರಸ್ಥಾವದ ವಚನ॥

ಮನದೊಡೆಯ ಮನೆಗೆ ಬಂದರೆ ಕನಕದ ತೋರಣವ ಕಟ್ಟಿ ಷಡುಸಮ್ಮಾರ್ಜನೆಯ ಮಾಡಿ ರಂಗವ್ರೋಲೆಯನಿಕ್ಕಿ ಉಘೇ ಚಾಂಗು ಭಲಾ ಎಂಬೆನು. ಕೂಡಲಸಂಗಮದೇವ ನಿಮ್ಮಶರಣ ಪ್ರಭುದೇವರು ಬಂದರೆ ಉಬ್ಬಿ ಕೊಬ್ಬಿ ನಲಿದಾಡುವೆ ॥೧॥

ಇಂತು ಪ್ರಭುದೇವರು ಬಸವರಾಜದೇವರ ಮಠಕ್ಕೆ ಬಿಜಯಂಗೈಯ್ಯೆ ಮುತ್ತಿನ ತೋರಣಂಗಳ ಕಟ್ಟಿ ದೇವಾಂಗಮಂ ನಡೆಮುಡಿಯು ಹಾಸಿ ನವ ರತ್ನಖಚಿತದಿಂದೆಸೆವ ಮೇಲುಕಟ್ಟಂ ಕಟ್ಟಿ ಷಡುಸಮ್ಮಾರ್ಜನೆಯಂ ಮಾಡಿ ರಂಗವೋಲೆಯನಿಕ್ಕಿ ಪಂಚಮಹಾವಾದ್ಯಂಗಳೊಡನೆ ಕಳಸ ಕನ್ನಡಿ ಯಿಂದಿದಿರ್ಗೊಂಡು ಮುತ್ತು ಮಾಣಿಕ್ಯದಾರತಿಗಳಂ ಪಿಡಿದೆತ್ತಿ ಮಂಗಳ ಸ್ವರದಿಂ ಪಾಡಿ, ಪರಮ ಹರುಷದಿಂದೆ ಆ ಬಸವರಾಜ ದೇವರು ಕೈಗೂಡಿ, ಮಡಿವಾಳಯ್ಯಗಳು ಪಾಯವಘಾರೆಂದುಗ್ಘಡಿಸಿ ಸೊಡ್ಡಳ ಬಾಚರಸರ ಹೆಗಲ ಮೇಲೆ ಹಸ್ತಮಂ ಮಡುಗಿ, ಚನ್ನಬಸವರಾಜದೇವರೊಡನೆ ನಸು ನಗೆಯಿಂ ಪ್ರಸಂಗಿಸುತ್ತ ಏಕಾಂತದ ಮಠಕ್ಕೆ ಬಿಜಯಂಗೈದು, ಮೂರ್ತಿ ಗೊಂಡಿರಲು ಬಸವರಾಜದೇವರು ಪ್ರಭುದೇವರ ಪಾದಾರ್ಚನೆಯಂ ಮಾಡಿದ ಪ್ರಸ್ಥಾವದ ವಚನ ॥

ಪರಿಮಿತಕ್ಕೆ ನಡೆತಂದು ಪರುಷದ ಸಿಂಹಾಸನದ ಮೇಲೆ ಪರಮ ಗುರು ಮೂರ್ತಿಗೊಂಡಿರಲು, ಪರಮಾನಂದ ಜಲದಿಂದ ಪಾದಾರ್ಚನೆಯಂ

ಮಾಡಿ ದಿವ್ಯ ಸುಗಂಧಮಂ ಲೇಪಿಸಿ, ಅಕ್ಷಯವೆಂಬ ಅಕ್ಷತೆಯನ್ನಿಟ್ಟು ಹೃದಯ ಕಮಲದ ಪುಷ್ಪದಿಂದ ಪೂಜೆಯಂ ಮಾಡಿ, ಸುಜ್ಞಾನವಾಸನೆ ಎಂಬ ಧೂಪವಂ ಬೀಸಿ ಭಕ್ತಿಸಾರಾಯವೆಂಬ ನೈವೇದ್ಯವಂ ಸಮರ್ಪಿಸಿ ಪರಮ ಹರುಷವನೆ ಮಜ್ಜನಕ್ಕೆರೆದು ತ್ರಿಕರಣ ಶುದ್ಧವೆಂಬ ತಾಂಬೂಲವಂ ಕೊಟ್ಟು ಸಮರಸಸಂಗದಿಂದ ಕೂಡಲಸಂಗಮದೇವರ ಶರಣ ಪ್ರಭುದೇವರ ಕರುಣವೆನಗಾಯಿತ್ತು ॥೨॥

ಆ ಪ್ರಸ್ಥಾವದೊಳು ಬಸವರಾಜದೇವರು ನಿವಾಳಿಯನೆತ್ತುತ್ತ ಹಾಡಿದ ಪದಂಗಳು ॥

ರಾಗ ಲಲಿತೆ ॥ಪದ॥ ಜಯಜಯ ಶ್ರೀ ಮಹಾದೇವ ಜಯಜಯ ಶ್ರೀಮಹಾದೇವಗೆ ಶರಣೆಂಬುದೆನ್ನ ಮನವು ॥ಪ॥

ಓಂ ಭೂ ಓಂ ಭೂ ಓಂಭೂ ಎನುತಿರ್ಪುದೆನ್ನಮನವು। ಭರ್ಗೋದೇವಸ್ಯ ಧೀಮಹಿ ಶರಣೆಂಬುದೆನ್ನಮನವು ॥೧॥

ಯತೋ ವಾಚೋ ನಿವರ್ತಂತೆ। ಅಪ್ರಾಪ್ಯ ಮನಸಾ ಸಹ॥ ತಸ್ಮೈ ಶ್ರೀಗುರುಲಿಂಗವೆ ಶರಣೆಂಬುದೆನ್ನ ಮನವು ॥೨॥

ಹರರೂಪಂ ಕಾಯಸಂಬಂಧಂ। ಗುರುರೂಪಂ ಪ್ರಾಣಸಂಯುತಂ ಭಕ್ತರೂಪಾತ್ಮಸಂಬಂಧಂ। ಗುರುಶಿಷ್ಯಮನುಗ್ರಹ ಎಂದುದಾಗಿ ॥೩॥

ದೀರ್ಘದಂಡ ನಮಸ್ಕಾರಂ। ನಿರ್ಲಜ್ಜಂ ಗುರುಸನ್ನಿಧೌ। ಶರೀರಮರ್ಥ ಪ್ರಾಣಂ ಚ। ಸದ್ಗುರುಭ್ಯೋ ನಿವೇದಯೇತ್॥ ಎಂದುದಾಗಿ ॥೪॥

ಭವರೋಗ ವೈದ್ಯನೆಂದು ನಂಬುವದೆನ್ನಮನವು। ಕೂಡಲ ಸಂಗಮ ದೇವಂಗೆ ಶರಣೆಂಬುದೆನ್ನ ಮನವು ॥೫॥

ಇಂತು ಬಸವರಾಜದೇವರು ಪ್ರಭುದೇವರಿಗೆ ಅಷ್ಟ ವಿಧಾರ್ಚನೆ ಷೋಡಶೋಪಚಾರಗಳಿಂ ಅಭಿವಂದಿಸಲು ಅಲ್ಲಿ ಚಿಕ್ಕದಣ್ಣಾಯಕರು ಪ್ರಭುದೇವರಿಗೆ ಶರಣೆಂದು ಪಾದಾರ್ಚನೆಯಂ ಮಾಡಿ, ಪಾದೋದಕವಂ ಕೊಂಬ ಪ್ರಸ್ಥಾವದ ವಚನ॥

ನಿತ್ಯವೆಂಬ ಭಕ್ತನ ಮನೆಗೆ ಘನಚೈತನ್ಯನೆಂಬ ಜಂಗಮ ಬಂದರೆ ಜಲವಿಲ್ಲದ ಜಲದಲ್ಲಿ ಪಾದಾರ್ಚನೆಯಂ ಮಾಡಿ ಆ ಪಾದೋದಕವೆ ಮಹಾಪಾದೋದಕವಯ್ಯ. "ಸ್ವೇಚ್ಛಾನಂದ ಜಲಂ ಕೃತ್ವಾ ಪ್ರಕ್ಷಾಲ್ಯ ಚರ

ಣಾಂಬುಕಂ। ತತ್ಪಾದೋದಕಂ ಪೀತ್ವಾ ನಾಂ। ಸಮುಕ್ತೋ ನಾತ್ರಸಂಶಯಂ॥" ಇಂತೆಂದುದಾಗಿ, ಆ ಪಾದೋದಕವ ಕೊಂಡು ಪರಿಣಾಮಿಸಿದೆನಯ್ಯ ಕೂಡಲಚನ್ನಸಂಗಮದೇವಾ ॥೮॥

ಮತ್ತಂ॥ ಚಿಕ್ಕದಣ್ಣಾಯಕರು ಅಷ್ಟವಿಧಾರ್ಚನೆಯಂ ಮಾಡುವ ಪ್ರಸ್ತಾವದ ವಚನ ॥

ಅಂಗದ ಮೇಲೆ ಲಿಂಗ ಉಳ್ಳುದೆಲ್ಲವು ಸಂಗಮನಾಥನೆಂಬ ಭಾವ ಬಸವಣ್ಣಂಗಾಯಿತ್ತಲ್ಲದೆ ಎನಗೆ ಆ ಭಾವವಿಲ್ಲ ನೋಡಾ! ಲಿಂಗೈಕ್ಯ ಶರಣರ ಕಂಡರೆ ನಂಬಿ ನಚ್ಚಿ ಅವರ ಪಾದಕ್ಕೆರಗುವದೆನ್ನಮನವು. ಅವರ ಕಂಡರೆ ಕರುಣಾಮೃತವು ಸುರಿವುದೆನಗೆ. ಅವರ ಪಾದಕ್ಕೆ ಅಷ್ಟವಿಧಾರ್ಚನೆ, ಷೋಡಶೋಪಚಾರವ ಮಾಡುವುದೆನ್ನ ಮನವು. ಕೂಡಲಚನ್ನಸಂಗಮದೇವ ನಿಮ್ಮ ಪ್ರಭುವೆಂಬ ಜಂಗಮವ ಕಂಡು ಪೂಜಿಸಿ ಪೂಜಿಸಿ ದಣಿಯದೆನ್ನಮನವು ॥೯॥

ಮತ್ತಂ, ಚಿಕ್ಕದಣ್ಣಾಯಕರು ಅಷ್ಟ ವಿಧಾರ್ಚನೆಯಂ ಮಾಡುತ್ತ ಪ್ರಭುದೇವರಿಗೆ ಮಂಗಳಾರುತಿಯನೆತ್ತುವ ಪ್ರಸ್ತಾವದ ವಚನ.

ಪದಂಗಳು ॥ರಾಗಲಲಿತೆ॥ ಮಂಗಳ ಪಾಡುವೆ ಚನ್ನಸಂಗಮದೇವಂಗೆ। ಕರಣಮುಖ ಲಿಂಗ ಸುಖದಿಂದ ನೋಡುತಾ. ॥ಪಲ್ಲ॥

ತನ್ನಹಂಕಾರಾದಿ ಗುಣಗಳೆಲ್ಲವ ಮರೆದು ಕಳೆದು ಲಿಂಗದಲ್ಲಿ ಸಂಗಿಯಾಗಿ। ಸಂಗನಾದ ಲಿಂಗವು ತನ್ನ ಸರ್ವಾಂಗ ತತ್ವವು ಮಹತ್ತಾದಿ ಗುಣಂಗಳೆಲ್ಲವ ಮರೆದು ಆ ಶರಣನಲ್ಲಿಗೆ ಸಂಗನಾದ ॥೧॥

ತನಗೇನುವ ಕಾಮಿಸುವನಲ್ಲ ಲಿಂಗಪ್ರೇರಣೆಯಲಿ ಬಂದಡೆ ಬಂದಿತು ಏನಾದಡೆಯು। ಸಕಲ ಸಂಬಂಧ ಸನ್ನಿಹಿತ ಲಿಂಗದಲ್ಲಿ ಅನುಗ್ರಹಿಸಿ ಸಂಗನಾದ. ॥೨॥

ಆವ ಪದಾರ್ಥ ತನ್ನ ಕಾಮಿಸಿಯೆ ಬಂದು ಲಿಂಗ ದೇವಗಿತ್ತುದ ಮುನ್ನವೆ। ಇತ್ತುದ ತಾನು ಲಿಂಗದಲ್ಲಿ ಮುನ್ನವೆ ಸಂದುದನೆಲ್ಲವ ನಾನಂದದಿಂದಲಲ್ಲಿಯೆ ಸಂಗಿಸುವಾ. ॥೩॥

ತನ್ನ ಮನವು ಲಿಂಗಸಂಗ ನಯನಾದಿಗಳಿಗೆ ಅಲ್ಲಿಯೆಸಂಗ ಪ್ರಾಣಕ್ಕೆ ಲಿಂಗ। ನಿಕ್ಷೇಪಸಂಗ ಆತನಲ್ಲಿಗೆ ಸಂಗವ ಮಾಡಿದಡಲ್ಲಿ ಸಂಗ ಲಿಂಗದಲ್ಲಿ ನಿರಂತರ ಸಂಗನಾದ. ॥೪॥

ನಿರುಪಾಧಿಕ ಲಿಂಗದಲ್ಲಿ ತಾನು ಪಾಧಿಯುಪಧಿ ಎಂಬ ಸೋಪಾಧಿ ಸಮಯ। ಸಮನಿಸುವನಲ್ಲ ಮರ್ತ್ಯಲೋಕ ದೇವಲೋಕವೆಂಬ ಸೀಮೆಯ ಮೀರಿ ನಿಸ್ಸೀಮ ಶರಣ ಕೂಡಲಚನ್ನಸಂಗನಾದಾ. ॥೫॥

ಇಂತು ಚಿಕ್ಕ ದಣ್ಣಾಯಕರು ಪ್ರಭುದೇವರಿಗೆ ಅಷ್ಟವಿಧಾರ್ಚನೆ ಷೋಡಶೋಪಚಾರದಿಂದ ಪೂಜೆಯ ಮಾಡಿ ಪರಮ ಹರುಷತೆಯನೈದಿದ ತದನಂತರದಲ್ಲಿ ಮಡಿವಾಳ ಮಾಚಿತಂದೆಗಳು ಪ್ರಭುದೇವರ ಪಾದಾರ್ಚನೆಯಂ ಮಾಡುವ ಪ್ರಸ್ತಾವನ ವಚನ ॥

ಸತ್ತುಚಿತ್ತಾನಂದ ನಿತ್ಯ ಪರಿಪೂರ್ಣವೆಂಬರು. ನಾನದ ಹಿಡಿದು ಮಾತಾಡುವವನಲ್ಲ. ಸತ್ತೇ ಗುರು, ಚಿತ್ತೇ ಲಿಂಗ, ಆನಂದವೆ ಜಂಗಮ, ನಿತ್ಯವೆ ಪ್ರಸಾದ, ಪರಿಪೂರ್ಣವೆ ಪಾದೋದಕವೆಂಬುವನನುಗ್ರಹಿಸಿ ನಿಮ್ಮ ಜಂಗಮಕ್ಕೆ ಭಕ್ತನಾದೆನಯ್ಯ. ನಿತ್ಯನಾಗಿ ನಿಮ್ಮ ಜಂಗಮಕ್ಕೆ ವಂದಿಸುವೆ. ಆನಂದದಿಂದ ನಿಮ್ಮ ಜಂಗಮದ ಪಾದೋದಕವ ಕೊಂಬೆ. ಪರಿಪೂರ್ಣನಾಗಿ ನಿಮ್ಮನರ್ಚಿಸಿ ಪೂಜಿಸಿ ಪರಸರನಪ್ಪೆ. ನಾನು ಭಕ್ತಿಪ್ರಸಾದ ಮುಕ್ತಿಪ್ರಸಾದ ನಿತ್ಯಪ್ರಸಾದವ ನಿಮ್ಮ ಜಂಗಮದಲ್ಲಿ ವರವ ಪಡೆದು, ಕಲಿದೇವರ ದೇವ ನಿಮ್ಮ ಶರಣ ಪ್ರಭುದೇವರ ಶ್ರೀಪಾದದಲ್ಲಿ ಮನಮಗ್ನವಾಗಿಪ್ಪೆನಯ್ಯ ॥೧೫॥

ಇಂತು ಮಡಿವಾಳ ಮಾಚಿತಂದೆಗಳು ಅಷ್ಟವಿಧಾರ್ಚನೆ ಷೋಡಶೋಪಚಾರದಿಂದೆ ಪ್ರಭುದೇವರನರ್ಚಿಸಿ ತದನಂತರದಲ್ಲಿ ಸೊಡ್ಡಳಬಾಚರಸರು ಬಂದು ಪ್ರಭುದೇವರ ಪೂಜಿಸುವ ಪ್ರಸ್ತಾವವ ವಚನ॥

ಏಕ ಏವ ನ ದ್ವಿತೀಯ ಬ್ರಹ್ಮವೆಂಬ ಘನ ಮಹಿಮನ ಕಂಡಾಕ್ಷಣದಲ್ಲಿಯೆ, ಮನ ಮನ, ಬೆರಸಿ ತನು ತನು ಕರಗಿ ಕರಣಂಗಳೆಲ್ಲ ತರಹರವಾದವಯ್ಯ! "ದೀರ್ಘದಂಡನಮಸ್ಕಾರಂ। ನಿರ್ಲಜ್ಜಂ ಗುರುಸನ್ನಿಧೌ॥ ಶರೀರ ಮರ್ಥ ಪ್ರಾಣಂ ಚ। ಸದ್ಗುರುಭ್ಯೋ ನಿವೇದಯೇತ್ ॥" ಎಂದುದಾಗಿ, ಶರಣುಹೊಕ್ಕೆ ನಾನು. ಎನ್ನ ಶರೀರ ನಿಮ್ಮ ಚರಣದಲ್ಲಿ ಬಿಡಿಸಬಾರದ ಸಂಗ ಮಹಾದಾನಿ ಸೊಡ್ಡಳನ ಶರಣ ಪ್ರಭುದೇವರ ಕಂಡು, ಎನ್ನ ಭವದ ಬಳ್ಳಿಯ ಬೇರ ಹರಿಯಿತ್ತಯ್ಯ ॥೧೬॥

ಮತ್ತಂ॥ ನಿತ್ಯ ನಿಜತತ್ವ ಭಕ್ತಿ ಕಂಪಿತವಾಗಿ ಎನ್ನತ್ತ ತಿರುಗಿತ್ತು. "ವತ್ಸಂ ಗೌರವ" ಎಂಬ ಶೃತಿಯ ತೋರಲೆಂದು ಎನಗೆ ಕೃಪೆಯಾಗಿ ತನ

ಶ್ರೀಪಾದವನು ತೋರಿದನು. ಜಯ ಜಯ ಶ್ರೀಮಹಾದೇವ, ಜಯ ಜಯ ಶ್ರೀಮಹಾದೇವ, ಗುರುವೆ ನಮೊ ನಮೊ, ಎನ್ನ ಪರಮ ಗುರುವೆ ನಮೋ ನಮೋ, ಎನ್ನ ಭವಬಂಧನಂಗಳ ಬಿಡಿಸಿದೆಯಾಗಿ, ಗುರುವೆ ನಮೊ ನಮೊ ಎಂದೆ. ಮಹಾದಾನಿ ಸೊಡ್ಡಳ ನಿಮ್ಮ ಶರಣ ಪ್ರಭುದೇವರ ಶ್ರೀಪಾದಕ್ಕೆ ನಮೊ ನಮೊ ಎಂದು ಬದುಕಿದೆನು. ॥೧೭॥

ಇಂತು ಸೊಡ್ಡಳ ಬಾಚರಸರು ಪ್ರಭುದೇವರ ಶ್ರೀಪಾದವ ನಚ್ಚಿ ಹಾಡಿ ಹಾಡಿ ಮನದಣಿಯ ಭಕ್ತಿಯ ಮಾಡಿದ ತದನಂತರದಲ್ಲಿ ಪಡಪದಪ್ಪಣ್ಣಗಳು ಬಂದು ಪೂಜಿಸುವ ಪ್ರಸ್ಥಾವದ ವಚನ ॥

ಮನಕ್ಕೆ ಮನೋಹರ ಒಂದಾಗಿ, ಭಾವಕ್ಕೆ ಭಾವ ಒಂದಾಗಿ, ನಚ್ಚಿ ಮಚ್ಚಿದ ಶರಣರ ದರುಶನವಾದ ಬಳಿಕ ಕತ್ತಲೆ ಎಂದರಿಯೆನಯ್ಯ ಲೌಕಿಕವ. ಬಸವಪ್ರಿಯ ಕೂಡಲಚನ್ನಸಂಗ ನಿಮ್ಮ ಶರಣ ಪ್ರಭುದೇವರಿಗೆ ಶರಣು ಶರಣೆಂಬುದಲ್ಲದೆ ಅನ್ಯವನೇನೆಂದು ಅರಿಯೆನಯ್ಯ ॥೧೮॥

ಅಂತು ಅಸಂಖ್ಯಾತರೆಲ್ಲರು ಬಂದು ಪ್ರಭುದೇವರ ದರುಶನವಾಗಿ ಪಾದಾಕ್ರಾಂತರಾಗಿ, ಅರ್ಚಿಸಿ, ಪೂಜಿಸಿ ವರಂಬಡೆದು ಸುಖ ಸಂಕಥಾ ವಿನೋದದಿಂದ ಪ್ರಭುದೇವರಿಂಗೊಡ್ಡೋಲಗಂಗೊಟ್ಟು ಬಸವರಾಜದೇವರು ಪ್ರಭುದೇವರ ಕೊಂಡಾಡಿದ ಪ್ರಸ್ಥಾವದ ವಚನ॥

ಪದಂಗಳು॥ ರಾಗ ಭೂಪಾಳಿ॥ ನಾನಾವಿಧ ಬ್ರಹ್ಮಾಂಡದ ಲಯ ಸ್ಥಾನವೆನಿಪ ಮಾತಾಶ್ರಯ ರೂಪಾ ॥ಪಲ್ಲ॥

ಇನ ಮಂಡಲ ಕಿರಣಾವಳಿಯ ತನ್ನೊಳಗೆ ಗರ್ಭೀಕರಿಸಿಪ್ಪಂತೆ ನೆರೆದ ಜಗಂಗಳೆಲ್ಲವ ನಿಮ್ಮಯ ಉದರದೊಳಗಡಗಿಸಿದ ಪ್ರಭುವೆ ॥೧॥

ಅಣು ಮಾತ್ರ ಬೀಜದೊಳಗೆ ಘನವೃಕ್ಷವು ಅಡಗಿಪ್ಪಂತೆ ನಿಜತನುವಿನೊಳಗೆ ತೋರುವ ತೋರಿಕೆ ನಿಮ್ಮ ತನುವಿನೊಳಡಗಿತ್ತೀನೆಂಬ ॥೨॥

ಭಾಂಡದೊಳಗ ದ್ರವ್ಯಗಳಿಪ್ಪಂತೆ ಪಿಂಡಾಂಡದೊಳಗೆ ಶಿವತತ್ವದ ಖಂಡ ಖಂಡಿತವಾನುವಾಲಿಂಗಿಸಿ ನಿಂದ ನಿರ್ಲೇಪ ನಿರಂಜನನೆ ॥೩॥

ಸಕಲ ಪ್ರಪಂಚ ಗರ್ಭೀಕರಿಸಿ ಸಕಲ ಪ್ರಪಂಚೆಂವರಿಯದ ಉಪಮಾತೀತ ಮಹಂತ ನಿಮ್ಮಯ ನಿಜವನಾರು ಬಲ್ಲರು ಹೇಳಾ ॥೪॥

ಸರ್ವಾಚಾರ ಸಂಪತ್ತಿನ ಸರ್ವಾನುಭಾವ ಸತ್ಕ್ರಿಯೆಗಳ ಗರ್ಭೀಕರಿಸಿಕೊಂಡಿಪ್ಪ ಕೂಡಲ ಸಂಗನಲ್ಲಿ ಅಲ್ಲಮ ಪ್ರಭುವೆ ॥೫॥

ಇಂತು ಬಸವರಾಜದೇವರು ಪ್ರಭುದೇವರ ಸ್ತೋತ್ರಮಂ ಮಾಡು ತ್ತಿರಲು, ಆ ಪ್ರಸ್ತಾವದೊಳು ಚನ್ನಬಸವರಾಜದೇವರು ಪ್ರಭುದೇವರ ಹಾಡ ಹೊಗಳಿದ ಪದಂಗಳು ॥

ರಾಗಧನ್ಯಾಸಿ॥ ಪರಕೆ ಪರವಾದ ಘನಕ್ಕೆ ಘನತರ ಮಹಾಘನವು ವರಕೆ ವರ ನಿಜ ವಾಙ್ಮನಾತೀತಗತಿಶಯವು। ಸರಿ ಇಲ್ಲದಪ್ರತಿಮ ಲಿಂಗದ ಮಹಾತ್ಮೆಗಿಂದಿಲ್ಲ ಮತ್ತಾವ ಘನವು ॥ಪ॥

ವೇದಾದಿ ವೇಪಗಳಿಗುಪಮೆಗುಪಮಾತೀತ। ಆದಿಮಧ್ಯಾಂತಗಳಿಗ ತ್ರಸ್ತಲಿಹಘನವು। ಸಾಧಕರ ಸತ್ವ ರಜ ತಮ ಜೀವತೆಗಳಿಗ ಗೋಚರವಾದ ಪರಶಿವ ತತ್ವವು। ಭೇದಾದಿ ಭೇದಬ್ರಹ್ಮಾಂಡ ಕೋಟಿಗಳ ರೋ। ಮಾದಿ ಗಳೊಳಡಕವಾಗಿಹವು ಸಚರಾಚರವ। ನಾದಿ ಲೋಕಾಲೋಕವೆಲ್ಲ ಲೀಲಾ ಸೂತ್ರ ಮಾತ್ರದೊಳಗಿಹವು ಶಿವನ ॥೧॥

ದೆಸೆ ಶ್ರೋತ್ರವಲ್ಲಿ ನೇತ್ರವಲಿ ರವಿ ಮನಸಿನಲಿ। ಶಶಿ ಪ್ರಾಣದಲಿ ವಾಯು ವನಲಿ ಮುಖವಲಿ ಶಿರವ। ವಿಸರವಲಿ ತೆತ್ತೀಸ ಕೋಟಿ ದೇವತೆಗಳಭ್ಯಂತ ರವು ನಾಭಿಯಲ್ಲಿ॥ ವಸುಧೆ ಪದತಳವಲ್ಲಿ ಪ್ರಸರವಲಿ ಶಕ್ರನಜ। ನೆಸೆವ ಜಂಘೆಯಲಿ ಭುಜವಲಿ ವಿಷ್ಣು ರುದ್ರಮುಖ। ಬಿಸರುಹದೊಳಖಿಳಜಗ ಜಠರದಲಿ ಜನಿತ ಶಿವ ಲಿಂಗಾಂಗ ಮಹಿಮೆಯಲ್ಲಿ ॥೨॥

ಉಪಮೆಗುಪಮಾನ ಮನ ದೇವತಾದಿಗಳಿಲ್ಲ। ಜಪ ತಪ ಮಹಾದಿವ್ಯ ಮಂತ್ರ ಧ್ಯಾನಂಗಳಿಂ। ದಪರಮಿತ ಸೇವನಾ ರತನಾಗಿ ನಿಮ್ಮ ಪದನುತಿಯಿಂ ಕೃತಾರ್ಥರಾಗಿ॥ ತೃಪತಿವಟ್ಟಪ್ಪರಲ್ಲದೆ ನಿಶ್ಚಯದ ಮಹಿಮೆಯ ಪರಾ ಪರಂ ಪರಮಗಮ್ಯ ಭಾವಾತೀತ ವಿಮಳ ಜ್ಯೋತಿರ್ಲಿಂಗ ವಿಶ್ವತೋ ಮುಖನ ಮುಖ ಘನ ಗಾಬ ಘನವಾವುದು ॥೩॥

ಮನು ಮುನೀಶ್ವರ ವೇದ ಶಾಸ್ತ್ರ ಶೃತಿ ಸ್ಮೃತಿಯಲ್ಲಿ ತಮತಮಗೆ ಹೊಗಳುತಿರುತಿಹವು ಶಿವನ ಘನತೆಯಂ। ಘನತರಂತರ ಗಾಣದತ್ಯತಿ ಷ್ಠದ್ದಶಾಂಗುಲನೆಂದು ಒರಲುತಿಹವು॥ ಎನಲಾ ಘನವದಾವ ದರುಶ ನಾಗಮ ತರ್ಕ್ಯವನುಮತಕಸಾಧ್ಯ ಲಿಂಗದ ಮಹಾತ್ಮೆಗೆ ಕಡೆಯ। ನೆಣಿಸ ಲಿಲ್ಲಾಗಿ ಪ್ರಣವಾದಿ ಪಂಚಾಕ್ಷರಿಯೊಳಡಕನಾಗಿಹವು ಶಿವನಾ ॥೪॥

ನಿತ್ಯನನಿತ್ಯ ದೇವತೆಗಳರಿಯಲಿ ಕಳವೆ ಸಚ್ಚಿದಾನಂದ ಶಿವಜ್ಞಾ ನಾನುಭಾವ ಭಾವೋತ್ತಮರ ಭಾವ ಕರಣದ ಕರದೊಳಮೃತ ಕರ ಕಿರಣ

ಸಮ್ಯಗ್ಜ್ಯೋತಿಯು॥ ವಿಸ್ತರಿಸೆ ತೊಳ ತೊಳಗುವತ್ಯಂತ ನಿರವಯುವ ಸಚ್ಚಿದಾನಂದದ ನಿರಂಜನ ನಿರ್ಮಳದ ನಿತ್ಯ ಕೂಡಲ ಚನ್ನಸಂಗನಂಗವನು ಪ್ರಭುಲಿಂಗದಲ್ಲಿಯೆ ಕಂಡೆನು. ॥೫॥

ಇಂತು ಚನ್ನಬಸವರಾಜ ದೇವರು ಪ್ರಭುದೇವರ ಸ್ತೋತ್ರಂಗೆಯ್ಯುತ್ತಿರಲು, ಆ ಪ್ರಸ್ತಾವದೊಳು ಸಿದ್ಧರಾಮಯ್ಯ ತಂದೆಗಳು ಪ್ರಭುದೇವರ ಸ್ತುತಿಸಿ ಕೊಂಡಾಡಿದ ಪದಂಗಳು.

॥ರಾಗಲಹರಿ॥ ॥ಪದ॥ ಸ್ವಾನುಭಾವಸಿದ್ಧಿಯಿಂದ ತಾನು ತನ್ನನರಿದಂಗಿದೇನು ತನಗನ್ಯ ಸುಜ್ಞಾನಿಯಾದ ಶರಣ. ॥ಪಲ್ಲ॥

ಬ್ರಹ್ಮದಿಂದಲೊಗೆದ ಶರಣನ ಪೆರ್ಮೆಯದ ನಾನೇನೆಂಬೆ। ಕರ್ಮಕ್ರಿಗಳನ್ನು ಸದ್ಧರ್ಮವಲ್ಲೆಂದರಿದನು। ನಿರ್ಮಳ ನಿಜಲಿಂಗದ ಮರ್ಮವರಿದು ಭಕ್ತಿಯ ಸ। ದ್ಧರ್ಮದಲ್ಲಿ ನಡೆವ ನಿಃಕರ್ಮಿ ತಾನೆ ಶರಣಾ. ॥೧॥

ಅಳಿಯುವುಳಿಯನು ಬ್ರಹ್ಮವೆಂಬ ಬೆಳೆಯ ಲೊದಗಿದ ಶರಣನು। ತೀದಿಂದಿ ನಿತ್ಯದ ನಿಳಯುವೆ ತಾನಾಗಿ ಹೊಳೆಯೆ ಮುಕ್ತಿ ಎಂಬ ವಳಿಯದತ್ತ ನಿತ್ಯ ನಿಜದ ಕಳೆಯ ಬೆಳಗು ತಾನೆಯಾದ ಜಿಗುತಾನೆ ಶರಣಾ. ॥೨॥

ಚಂದ್ರಕಾಂತದ ಶಿಲೆಯೊಳು ಜಲಬಿಂದುವ ತಂದರಿಸಿದವರಂತೆ ಸಂದಳಿದು ಲಿಂಗದೊಳು ಒಂದಿ ನಿಜಸುಖದಿ। ನಿಂದ ನಿಜ ಪದದೊಳಗೊಂದಿ ತಾನಾನಂದದಿಂದ ದ್ವಂದ್ವವಳಿದು ನಿಂದ ಸಂಬಂಧಿ ತಾನೆ ಶರಣ ॥೩॥

ಮೇಘ ಒಸರಿ ಜಲಬಿಂದುಗಳು ಭೂ ಗಗನಾಂಗಣದಿ ಸುರಿಯು। ಲಾಗ ವಾಯು ಸಂಗ ತಾನಾಗಿ ನಾದ ಬಲಿದುದು। ಆಗ ವಾರಿ ಕಲ್ಲೆಂದೆನಿಸಿ ಶೀಘ್ರದಿಂದ ತೋರಿಯಡಗಿ। ಮುನ್ನಿನ ಹಾಗೆ ತನ್ನ ನಿಜವು ತಾನಾಗಿ ನಿಂದ ಶರಣಾ ॥೪॥

ಕೀಟ ಭೃಂಗನ ಪರಿಯಂತೊದನಾಡಿಯಾಡಿ ಲಿಂಗವೇ ಗೂಡಾಗಿ ಶರಣ ಸುಖದೊಳಗೋಲಾಡಿ ಹಾಡಿ ಹರಿಸಿ ಲಿಂಗ ಸಂಗದಿ ಮೂಡಿ ಮುಳುಗಿ ಶರಣರೊಡನಾಡಿಯಾಡಿ ಪುಣ್ಯ ಪಾಪ ಗೂಡನಳಿದು ನಿಂದು ಆರೂಢನಾದ ಶರಣ ॥೫।

ಸರ್ಪ ಮುಟ್ಟಲು ದೇಹಭಾವ ದರ್ಪವಳಿದು ಕರಣದುಪಟಳದ ಒಪ್ಪವಳಿದು, ಸಿಂದ ನಿಜವದಿಪ್ಪುದು ಕರ್ಪುರ ಉರಿ ಕೊಂಡಂತಾತನು ಸರ್ಪಭೂಷಣನಾಜ್ಞೆವಿಡಿದು ಯಪ್ಪಿಯಗಲದಂತೆ ನಿಷ್ಪತಿಯಾದ ಶರಣಾ ॥೬॥

ದೀಪ ಒಂದರಿಂದ ಶತದೀಪ ಉದಿಸಲವರ ಪ್ರಭೆಗಳೇಪರಿ ಲಿಂಗಾಂಗ ಸಂಗವಾಪರಿ ಎಂದರಿವುದು ಭಾಪುರೆ ನಿಜಲಿಂಗ ಸಂಗವೀಪರಿ ಎಂದರಿದು ನಿಜರೂಪು ಕಪಿಲಸಿದ್ಧ ಮಲ್ಲೇಶನಾದ ಶರಣಾ ॥೭॥

ಇಂತು ಸಿದ್ಧರಾಮಯ್ಯ ದೇವರು ಪ್ರಭುದೇವರ ಸ್ತೋತ್ರಮಂ ಮಾಡುತ್ತಿರಲು, ಆ ಪ್ರಭುದೇವರು ಚನ್ನಬಸವರಾಜ ದೇವರ ಸ್ತೋತ್ರಮಂ ಮಾಡುವ ಪ್ರಸ್ತಾವದ ವಚನ ॥

ಚೌದಂತ ಮದಕರಿಯೊಳಗಡಗಿತ್ತು. ಬೆಳಗುವ ಬೆಳಗು ನವ ಪಂಜರದೊಳಗಡಗಿತ್ತು. ಈ ಉಭಯ ಭಾವವ ಭಾವಿಸಬಾರದು. ಮದವಳಿದಿಹ ಸುಳುಹಿನ ಸೂಕ್ಷ್ಮಂಗಲ್ಲದೆ ಅಳಿ ಪರಿಮಳವ ನುಂಗಿದ ಪರಿ ಇನ್ನೆಂತು ಸಾಧ್ಯವಾಯಿತ್ತು. ಸುಖ ಸಂಭಾಷಣೆ ಗುಹೇಶ್ವರಲಿಂಗದಲ್ಲಿ ಚನ್ನಬಸವಣ್ಣಂಗೆ ॥೩೬॥

ಹೀಗೆಂದು ಪ್ರಭುದೇವರು ಚಿಕ್ಕದಣ್ಣಾಯಕರ ಸ್ತೋತ್ರಮಂ ಮಾಡಲು, ಆ ಪ್ರಸ್ತಾವದೊಳು ಬಸವರಾಜ ದೇವರು ಚಿಕ್ಕದಣ್ಣಾಯಕರ ಸ್ತೋತ್ರಮಂ ಮಾಡಿದ ಪ್ರಸ್ತಾವದ ವಚನ. ॥

ಇಂದ್ರನ ವ್ಯಸನ ಉಪೇಂದ್ರನ ಓಲಗ ಚಂದ್ರಮೌಳಿಯ ನರಿಯದೆ ಹೋಯಿತ್ತು. ಬಂಧ ಮೋಕ್ಷದ ಭವಬಂಧನ ಬಿಡದನ್ನಕ್ಕರ ಮತ್ತೊಂದರ ಮುಖ ಜನಸಿತಲ್ಲ. ಕೂಡಲಸಂಗಮದೇವ ಚನ್ನಬಸವಣ್ಣನ ಸನ್ನಿಧಿಯಿಂದ ಲಾನು ಬದುಕಿದೆನು. ॥೩೭॥

ಮತ್ತಂ, ಪ್ರಸಾದಿಯ ಪ್ರಸಾದದಲೊದಗಿದ ಪ್ರಸಾದಿಯ ಪ್ರಸಾದವ ನೇನೆಂದುಪಮಿಸುವೆನು? ಏನೆಂದು ಸ್ತುತಿಸುವೆನಯ್ಯ! ಮಹಾಪ್ರಸಾದಿಯಾದ ಪ್ರಸಾದವನು ಅಗಮ್ಯ ಪ್ರಸಾದದಲ್ಲಿ ಸ್ವಾಯತವಾದ ಕೂಡಲಸಂಗಮದೇವರಲ್ಲಿ ಚನ್ನಬಸವಣ್ಣಂಗೆ ನಮೋ ನಮೋ ಎನುತಿರ್ದೆನು. ॥೩೮॥

ಹೀಗೆಂದು ಬಸವರಾಜ ದೇವರು ಚಿಕ್ಕದಣ್ಣಾಯಕರ ಸ್ತೋತ್ರಮಂ ಮಾಡುತ್ತಿರಲು, ಆ ಚಿಕ್ಕದಣ್ಣಾಯಕರು ಬಸವರಾಜ ದೇವರ ಸ್ತೋತ್ರಮಂ ಮಾಡುವ ಪ್ರಸ್ತಾವದ ವಚನ. ॥

ಅಯ್ಯ ಘನ ಗಂಭೀರವಪ್ಪ ಸಮುದ್ರದೊಳಗೊಂದು ರತ್ನ ಹುಟ್ಟಿದರೆ ಆ ಸಮುದ್ರದೊಳಗಡಗಿಪ್ಪುದಲ್ಲದೆ ಘನವಾಗಿ ತೋರಬಲ್ಲುದೇ? ನಿಮ್ಮ ಕರುಣ ಕಟಾಕ್ಷದಿಂದಲುದಯಿಸಿ ಅನಂತ ಲಿಂಗ ಪುರಾಣವೆಲ್ಲ ನಿಮ್ಮ ಕೃಪೆ ಯಿಂದೆ ಸಾಧ್ಯವಾಯಿತ್ತೆನಗೆ. ಆದಿ ಅನಾದಿ ಇಲ್ಲದಂದು ನೀನೊಬ್ಬನೆ ಪ್ರಸಾದಿ. ಉಮೆಯ ಕಲ್ಯಾಣವಿಲ್ಲದಂದು ನೀನೊಬ್ಬನೆ ಪ್ರಸಾದಿ. ಕೂಡಲ ಚನ್ನಸಂಗಮ ದೇವರು ಸಾಕ್ಷಿಯಾಗಿ ಬಸವಣ್ಣ ನಿಮ್ಮ ತೊತ್ತಿನ ತೊತ್ತಿನ ಮರುದೊತ್ತಿನ ಮಗ ನಾನಯ್ಯ. ॥೩೯॥

ಮತ್ತಂ॥ ತನುವ ಗುರುವಿನಲ್ಲಿ ಸವಿಸಿ, ಮನವ ಲಿಂಗದಲ್ಲಿ ಸವಿಸಿ, ಧನವ ಜಂಗಮದಲ್ಲಿ ಸವಿಸಿ, ತನುವೆ ಗುರುವಾಗಿ, ಮನವೆ ಲಿಂಗವಾಗಿ ಧನವೆ ಜಂಗಮವಾಗಿ, ಇಂತೀ ತ್ರಿವಿಧವು ನಿಮ್ಮಲ್ಲಿ ನಿಜಭರಿತವಾದ ಕಾಯವಿಡಿದು ಕರ್ಮ ರಹಿತನಾದ ಕೂಡಲ ಚನ್ನಸಂಗಮದೇವರಲ್ಲಿ ಸಂಗನಬಸವಣ್ಣಂಗೆ ನಮೋ ನಮೋ ಎನುತಿರ್ದೆನು ॥೪೦॥

ಇಂತು ಚಿಕ್ಕದಣ್ಣಾಯಕರು ಬಸವರಾಜದೇವರ ಸ್ತೋತ್ರಮಂ ಮಾಡು ತ್ತಿರಲು, ಆ ಪ್ರಸ್ತಾವದೊಳು ಮಡಿವಾಳತಂದೆಗಳು ಬಸವರಾಜದೇವರ ಹೊಗಳಿದ ಪ್ರಸ್ತಾವದ ವಚನ॥

ಅಂಗಾಲ ಕಣ್ಣವರಾಗಬಹುದಲ್ಲದೆ ಮೈಯಲ್ಲಿ ಕಣ್ಣವರಾಗಬಾರದು. ಮೈಯಲ್ಲಿ ಕಣ್ಣವರಾಗಬಹುದಲ್ಲದೆ ನೊಸಲಕಣ್ಣ ಚತುರ್ಭುಜದವರಾಗ ಬಾರದು. ನೊಸಲುಕಣ್ಣ ಚತುರ್ಭುಜದವರಾಗಬಹುದಲ್ಲದೆ, ಪಂಚ ಮುಖ ದಶಭುಜದವರಾಗಬಾರದು. ಪಂಚಮುಖ ದಶಭುಜದವರಾಗಭ ಹುದಲ್ಲದೆ, ಸರ್ವಾಂಗಲಿಂಗಿಗಳಾಗಬಾರದು. ಸರ್ವಾಂಗ ಲಿಂಗಿಗಳಾಗ ಬಹುದಲ್ಲದೆ ಕಲಿದೇವಯ್ಯ ನಿಮ್ಮ ಶರಣ ಬಸವಣ್ಣನಾಗಬಾರದೆಂದರಿದು ಆ ಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು ॥೪೧॥

ಮತ್ತಂ॥ ಬಸವಣ್ಣನ ಬಳ್ಳಿಯಯ್ಯ ಗಂಗೆ ವಾಳುಕ ಸಮ ರುದ್ರರು ಬಸವಣ್ಣನ ಫಲವಯ್ಯ! ಓಂ ನಮಃ ಶಿವಾಯೆಂಬರೆಲ್ಲರು ಬಸವಣ್ಣನ ಆಜ್ಞೆಯಯ್ಯ. ಎಲ್ಲ ಶಿವಾರ್ಚಕರು ಬಸವಣ್ಣನ ಘನವಯ್ಯ. ಸೋಹಿದಾ ಸೋಹಿಗಳು ಬಸವಣ್ಣನ ಧನವಯ್ಯ ಪಾದೋದಕ ಪ್ರಸಾದಿಗಳು ಬಸ ವಣ್ಣನ ಮನವಯ್ಯ! ತನುಮನಧನವ ಗುರುಲಿಂಗಜಂಗಮಕ್ಕೆ ಇಕ್ಕುವರು ಬಸವಣ್ಣನ ತನುವಯ್ಯ. ತನು ಪದಾರ್ಥವ ಮಾಡಿ, ಗುರುಲಿಂಗಜಂಗ

ಮಕ್ಕೆ ಅರ್ಪಿಸುವರು ಬಸವಣ್ಣ ಮಾಡಿದ ಅನುಗಳಯ್ಯ. ಕನಸಿನಲ್ಲಿ ಮನಸಿನಲ್ಲಿ ಶಿವ ಶಿವ ಎಂಬವರೆಲ್ಲರು ಬಸವಣ್ಣನ ಬಂದು ಬಳಗವಯ್ಯ. ಎಲ್ಲ ಶಿವಲಾಂಛನಿಗಳು ಬಸವಣ್ಣನ ಪ್ರಸಾದಿಗಳಯ್ಯ. ಬಸವಣ್ಣನ ನಾಮಾಮೃತವ ನೆನೆವರೆಲ್ಲರು ಎಲೆ ಕಲಿದೇವರದೇವ ಬಸವಣ್ಣನ ಆಜ್ಞೆಯಲ್ಲಿ ನೀನಿದ್ದೆಯಾಗಿ, ಎಲ್ಲ ಶಿವಭಕ್ತರ ತನು ಮನ ಧನ ಸಹಿತ ನಾನಾದೆನಯ್ಯ ॥೪೨॥

ಕರಸ್ಥಲವು, ಕರ್ಣಸ್ಥಲವು, ಕಂಠಸ್ಥಲವು, ಲಲಾಟಸ್ಥಲವು, ಮಧ್ಯಸ್ಥಲವು ಇಂತೆಲ್ಲ ಸ್ಥಲಂಗಳು ಮಹಾಸ್ಥಲಕ್ಕೆ ತಂದು ಬಸವಣ್ಣನು ಸಂಪೂರ್ಣವಾದ ಪರಿಯ ನೋಡಾ, ಕಲಿದೇವರ ದೇವಾ ॥೪೩॥

ಮತ್ತಂ॥ ಪ್ರಾಣಾಪಾನ ಮೊದಲಾದ ದಶವಾಯುಗಳಿಚ್ಛೆಯಲ್ಲಿ ಸುಳಿದಾಡದು. ಜ್ಞಾನದಲ್ಲಿ ಬೆಳೆವುದು. ನಿರಾಲಂಬದಲ್ಲಿ ಆಡುವುದು. ಹೃದಯ ಕಮಲ ಪದ್ಮಸತ್ರದುಸಿರನಾಲಸಿ ಸಂಪುಟ ಜಂಗಮದಾಟವನಾಡುವದು. ಲಿಂಗದ ನೋಟವ ನೋಡುವುದು. ಮಹಾ ಪ್ರಸಾದದಲ್ಲಿ ಬೆಳೆವುದು. ಕಲಿದೇವ ನಿಮ್ಮ ಶರಣ ಬಸವಣ್ಣನ ನಿಲವಿದು. ॥೪೪॥

ಮತ್ತಂ॥ ಅಯ್ಯ ನಿಮ್ಮ ಧ್ಯಾನವಲ್ಲಿರಿಸಲೊಲ್ಲದೆ, ಬಸವಣ್ಣನ ಧ್ಯಾನದೊಳಿರಿಸೆನ್ನ. ಲಿಂಗವೇದ್ಯ ಜಂಗಮವೇದ್ಯ ಪ್ರಸಾದವೇದ್ಯ ನಿಜಪದವೇದ್ಯ ಮಹಾವೇದ್ಯ ಬಸವಣ್ಣನ ಸಂಗಮೊಳಿರಿಸು ಕಲಿದೇವರದೇವಾ ॥೪೫॥

ಹೀಗೆಂದು ಮಡಿವಾಳ ತಂದೆಗಳು ಬಸವರಾಜದೇವರ ಸ್ತೋತ್ರಮಂ ಮಾಡಲು, ಆ ಬಸವರಾಜ ದೇವರು ಮಡಿವಾಳ ತಂದೆಗಳ ಸ್ತೋತ್ರಮಂ ಮಾಡುವ ಪ್ರಸ್ತಾವದ ವಚನ. ॥

ಭಕ್ತಿ ಯುಕ್ತಿಯನರಿಯೆ, ಷೋಡಶೋಪಚಾರವನರಿಯೆ, ಭಾವ ನಿರ್ಭಾವವನರಿಯೆ, ಜ್ಞಾನ ಮಹಾಜ್ಞಾನವನರಿಯೆ, ಕೂಡಲ ಸಂಗಮದೇವಯ್ಯ ಮಡಿವಾಳ ತಂದೆಗಳ ಪಾದಕ್ಕೆ ನಮೋ ನಮೋ ಎನುತಿರ್ದೆನು. ॥೪೬॥

ಇಂತು ಬಸವರಾಜ ದೇವರು ಮಡಿವಾಳ ತಂದೆಗಳ ಸ್ತೋತ್ರಮಂ ಮಾಡಲು, ಆ ಮಡಿವಾಳ ತಂದೆಗಳು ಆ ಬಸವರಾಜ ದೇವರನ್ನು ಚನ್ನಬಸವರಾಜ ದೇವರನ್ನು ಕೂಡಿ ಸ್ತೋತ್ರಮಂ ಮಾಡುವ ಪ್ರಸ್ತಾವದ ವಚನ. ॥

ಎನ್ನ ಮನ ಬಸವಣ್ಣನು, ಎನ್ನ ವಾಕ್ಕು ಬಸವಣ್ಣನು, ಎನ್ನ ಕಾಯ ಪ್ರಭುದೇವನು. ಇಂತೀ ಮೂವ್ವರ ಪಾದವನು ತ್ರಿಕರಣ ಶುದ್ಧದಿಂದ ನಂಬಿ ನಮೋ ನಮೋ ಎನುತಿರ್ದೆನು ಕಾಣಾ ಕಲಿದೇವರ ದೇವಾ. ॥೪೭॥

ಹೀಗೆಂದು ಮಡಿವಾಳ ತಂದೆಗಳು ಬಸವಣ್ಣ ಚನ್ನಬಸವಣ್ಣ ಪ್ರಭುದೇವರನು ಒಂದೆ ವಚನದಲ್ಲಿ ಸ್ತೋತ್ರಮಂ ಮಾಡುವ ಪ್ರಸ್ಥಾವದ ವಚನ. ॥

ಎನ್ನ ಅಂತರಂಗ ಬಸವಣ್ಣ, ಎನ್ನ ಬಹಿರಂಗ ಮಡಿವಾಳನು. ಈ ಉಭಯದ ಸಂಗವೆ ಪ್ರಭುದೇವರು. ಇಂತೀ ಮೂವ್ವರ ಕರುಣದ ಕಂದನಾಗಿ ಬದುಕಿದೆನು ಕಾಣಾ ಕೂಡಲ ಚನ್ನ ಸಂಗಮದೇವಾ. ॥೪೮॥

ಹೀಗೆಂದು ಚಿಕ್ಕದಣ್ಣಾಯಕರು ಬಸವಣ್ಣ ಮಡಿವಾಳತಂದೆಗಳು ಪ್ರಭುದೇವರನು ಒಂದೆ ವಚನದಲ್ಲಿ ಸ್ತೋತ್ರಮಂ ಮಾಡಲು, ಆ ಪ್ರಸ್ಥಾವದೊಳು ಪ್ರಭುದೇವರು ಬಸವಣ್ಣ ಚನ್ನಬಸವಣ್ಣ ಮಡಿವಾಳ ತಂದೆಗಳನು ಕೂಡಿ ಹೊಗಳುವ ಪ್ರಸ್ಥಾವದ ವಚನ॥

ಎನ್ನ ಕಾಯವ ಬಸವಣ್ಣನಳವಡಿಸಿಕೊಂಡ. ಎನ್ನ ಮನವ ಚನ್ನ ಬಸವಣ್ಣನಳವಡಿಸಿಕೊಂಡ. ಎನ್ನ ಭಾವವ ಮಡಿವಾಳಯ್ಯನಳವಡಿಸಿಕೊಂಡ. ಇಂತೀ ಮೂವ್ವರು ಒಂದೊಂದನಳವಡಿಸಿಕೊಂಡ ಕಾರಣ ಗುಹೇಶ್ವರ ನಿಮ್ಮ ಶರಣರೆಂಬ ತ್ರಿಮೂರ್ತಿಗಳಿಗೆ ನಮೋ ನಮೋ ಎನುತಿರ್ದೆನು ॥೪೯॥

ಮತ್ತಂ॥ ಎನ್ನ ತನುವೆ ಚನ್ನಬಸವಣ್ಣನಯ್ಯ. ಎನ್ನ ಮನವೆ ಮಡಿವಾಳನಯ್ಯ. ಎನ್ನ ಪ್ರಾಣವೆ ಸಂಗನಬಸವಣ್ಣನಯ್ಯ. ಗುಹೇಶ್ವರ ನಿಮ್ಮ ಶರಣರ ಘನವನು ಎನ್ನ ಸರ್ವಾಂಗದಲ್ಲಿ ಕಂಡು ಪರಮ ಸುಖಿಯಾಗಿರ್ದೆನು ॥೫೦॥

ಇಂತೆಲ್ಲ ಶಿವಗಣಂಗಳು ಒರ್ಪೋರ್ವರ ಸ್ತೋತ್ರಮಂ ಮಾಡುತ್ತಿರಲು, ಆ ಪ್ರಸ್ಥಾವದೊಳು ಸಿದ್ಧರಾಮಯ್ಯದೇವರು ಬಸವರಾಜದೇವರಿಗೆ ಶರಣರ ಸಂಗದಿಂದೆ ಸರ್ವವು ಅಳವಟ್ಟು ಮಹಾಘನ ಲಿಂಗ ಸಂಗವಾಯಿತ್ತೆಂದು ಸ್ತುತಿಸಿದ ಪ್ರಸ್ಥಾವದ ವಚನ ॥

ಆಯಿತ್ತಾಯಿತ್ತು ಫಲವಿಲ್ಲದ ವೃಕ್ಷ. ಆಯಿತ್ತಾಯಿತ್ತು ಪದವಿಲ್ಲದ ಫಲ. ಆಯಿತ್ತಾಯಿತ್ತು ಸೀಮೆಯ ಮೀರಿದ ಸಂಬಂಧ. ಆಯಿತ್ತಾಯಿತ್ತು ಅನ್ವಯದಲ್ಲಿ ಆಂದೋಳ. ಆಯಿತ್ತಾಯಿತ್ತು ನಿತ್ಯದಲ್ಲಿ ಭಕ್ತಿ. ಆಯಿತ್ತಾ

ಯಿತ್ತು ಭಕ್ತಿಯಲ್ಲಿ ವೈರಾಗ್ಯ. ಆಯಿತ್ತಾಯಿತ್ತು ವೈರಾಗ್ಯದಲ್ಲಿ ಅನುಗುಣ. ಆಯಿತ್ತಾಯಿತ್ತುಸ್ವಾನುಭಾವ. ಸ್ವಾನುಭಾವದಲ್ಲಿ ಸಕಲ ಭಕ್ತಿ. ಸಕಲ ಭಕ್ತಿಯಿಂದ ಕಪಿಲಸಿದ್ಧಮಲ್ಲಿಕಾರ್ಜುನಯ್ಯನ ಸಂಯೋಗ ಬಸವಣ್ಣಂಗೆ ॥೫೧॥

ಹೀಗೆಂದು ಸಿದ್ಧರಾಮಯ್ಯದೇವರು ಮರಳಿ ಆ ಬಸವರಾಜದೇವರ ಸ್ತೋತ್ರಮಂ ಮಾಡಿದ ಪ್ರಸ್ಥಾವದ ವಚನ ॥

ಅಯ್ಯ ನಿಮ್ಮ ಶರಣ ಬಸವಣ್ಣನಿಂದ ಲಿಂಗವ ಕಂಡು ಒಳಗೆ ಬಚ್ಚಿಟ್ಟುಕೊಂಡೆನಯ್ಯ। ನಿಮ್ಮ ಶರಣ ಬಸವಣ್ಣನಿಂದ ಲಿಂಗವ ಹಾಸಿ ಹೊವೆದುಕೊಂಡನು. ಅಯ್ಯ ನಿಮ್ಮ ಶರಣ ಬಸವಣ್ಣನಿಂದ ನಿರವಯವಾದೆನು. ಎಲೆ ಕಪಿಲಸಿದ್ಧ ಮಲ್ಲಿನಾಥಯ್ಯ ನಿಮ್ಮ ಶರಣ ಬಸವಣ್ಣಂಗೆ ನಮೋ ನಮೋ ಎನುತಿರ್ದೆನು ॥೫೨॥

ಮತ್ತಂ॥ ಸಿದ್ಧರಾಮಯ್ಯದೇವರು ಪ್ರಭುದೇವರ ಸ್ತೋತ್ರಮಂ ಮಾಡುವ ಪ್ರಸ್ಥಾವದ ವಚನ ॥

ಎಲೆ ಅಯ್ಯ ನಿಮ್ಮ ನಚ್ಚಿನ ಮಚ್ಚಿನ ಶರಣರ ಸಂಗದಲ್ಲಿರಿಸಿ ಎನ್ನನಾಗು ಮಾಡಿದಿರಿ. ಆಹಾ ನಿಮ್ಮ ಕರುಣವನೇನೆಂದುಪಮಿಸುವೆನು? ಎರಡು ಪುರವ ಮೆಟ್ಟಿ ಮೇಲುಪುರವ ನೋಡುತಿಪ್ಪೆನು. ಮೇಲು ಪುರವ ಭೇದಿಸಲೊಡನೆ ನೀನು ನಾನಾದೆನಯ್ಯ. ಕಪಿಲಸಿದ್ಧಮಲ್ಲಿನಾಥಯ್ಯ ನಿಮ್ಮ ಶರಣ ಪ್ರಭುದೇವರ ಕರುಣದಿಂದಲಾನು ಬದುಕಿದೆನು ॥೫೩॥

ಸಿದ್ಧರಾಮಯ್ಯ ದೇವರು ಚನ್ನಬಸವರಾಜದೇವರ ಸ್ತೋತ್ರಮಂ ಮಾಡುವ ಪ್ರಸ್ಥಾವದ ವಚನ ॥

ಅಯ್ಯ ಮೂರು ಪುರದ ಮೇಲುಪ್ಪರಿಗೆಯ ಕೆಲಸವನೇನೆಂಬೆನಯ್ಯ ? ಮುತ್ತಿನ ಕಳಸದ ಮೇಲೊಂದು ಅರಳಿದ ಪುಷ್ಪದ ಪರಿಯೊಳಗೆ ಅಗ್ನಿಯ ಕಂಡೆನಾಗಿ ಕಪಿಲಸಿದ್ಧಮಲ್ಲಿನಾಥ ನಿಮ್ಮ ಶರಣ ಚನ್ನಬಸವಣ್ಣ ತೋರಿದ ಹಾದಿ ಸುಪಥವಾಯಿತ್ತಾಗಿ, ಆನು ಚನ್ನಬಸವಣ್ಣಂಗೆ ನಮೋ ನಮೋ ಎನುತಿರ್ದೆನು ॥೫೪॥

ಮತ್ತಂ॥ ಅಗ್ನಿ ಸಿದ್ಧನನರ್ಚಿಸುವಲ್ಲಿ ಆರಯ್ಯ ಬಲ್ಲವರು ಚನ್ನಬಸವಣ್ಣನಲ್ಲದೆ ಮೂರ್ತಿ ಎಂಟು ಆಗದ ಮುನ್ನ ಮುಖಲಿಂಗವಾಗಿರ್ದ ಸುದ್ದಿಯನಾರಯ್ಯ ಬಲ್ಲವರು ಚನ್ನಬಸವಣ್ಣನಲ್ಲದೆ, ಸದಮಳಜ್ಞಾನದಲ್ಲಿ

ಒಪ್ಪಿಪ್ಪ ಅಕ್ಷರ ದ್ವಯದ ಭೇದಾದಿ ಭೇದವಂ ಭೇದಿಸಿ ಲೋಕಕ್ಕೆ ಭಕ್ತಿಯ ಸಾಧಿಸಿಕೊಟ್ಟ ಲೋಕಕ್ಕೆ ಉರುತರವಾದ ಕಾರಣ ಚನ್ನಬಸವಣ್ಣ ನಯ್ಯಕಪಿಲಸಿದ್ಧ ಮಲ್ಲಿಕಾರ್ಜುನಯ್ಯ ॥೫೫॥

ಮತ್ತಂ॥ ಸಿದ್ಧರಾಮಯ್ಯದೇವರು ಮಡಿವಾಳತಂದೆಗಳ ಸ್ತೋತ್ರವಂ ಮಾಡಿದ ಪ್ರಸ್ಥಾವದ ವಚನ ॥

ಎಲೆ ಅಯ್ಯ ಗಾರುಡವ ಬಲ್ಲನಯ್ಯ. ಮತ್ತೆ. ಗಾರುಡಿಗನಲ್ಲ ನೋಡಯ್ಯ. ಎನ್ನ ಮನದ ಮೇಲಿಪ್ಪ ಶಂಕೆ ಎಂಬ ವಿಷವ ಗಾರುಡಿಸಿ ಮಾಣಿಸಿ ನಿಃಶಂಕನ ಮಾಡಿದ ಕಪಿಲ ಸಿದ್ಧಮಲ್ಲಿನಾಥನಲ್ಲಿ ಮಡಿವಾಳ ಮಾಚಿತಂದೆಯ ಪಾದಕ್ಕೆ ನಮೋ ನಮೋ ಎನುತಿರ್ದೆನು ॥೫೬॥

ಹೀಗೆಂದು ಸಿದ್ಧರಾಮಯ್ಯ ಮಡಿವಾಳತಂದೆಗಳ ಸ್ತೋತ್ರವಂ ಮಾಡಲು, ಆ ಮಡಿವಾಳಯ್ಯಗಳು ಸಿದ್ಧರಾಮಯ್ಯದೇವರ ಸ್ತೋತ್ರವಂ ಮಾಡಿದ ಪ್ರಸ್ಥಾವದ ವಚನ॥

ಅಕ್ಕತಂಗಿಯರೈವರು ಒಬ್ಬನ ಅರಸಿಯರು, ಕಿರಿಯಕ್ಕನ ಕೂಡುವರೆ ಹಿರಿಯರಸಿ ಕುಂಟಣಿ, ಹಿರಿಯರಸಿಯ ಕೂಡುವರೆ ಕಿರಿಯರಸಿ ಕುಂಟಣಿ ಈ ಇಬ್ಬರನು ಕೂಡುವರೆ ಬೇರು ಮಾಡಿ ಬೆರಿಸಬಾರದೆಂದರಿದು ಒಂದಾಗಿ ಕೂಡಲು ಒಬ್ಬಾಕೆ ಕಣ್ಣ ಕೆಂಚನೆ ಮಾಡುವಳು. ಒಬ್ಬಾಕೆ ಬುದ್ಧಿಯನೆ ಹೇಳುವಳು. ಒಬ್ಬಾಕೆ ಹಾಸಿಕೊಡುವಳು. ಇವರಿಬ್ಬರನು ಅಪ್ಪಿಕೊಂಡು, ಒಂದೆ ಬಾರಿ ಬೆರಿಸಲು, ನೀರು ನೀರು ಬೆರಿಸಿದಂತಾಯಿತ್ತು. ಕಲಿದೇವಯ್ಯ ನಿಮ್ಮ ಶರಣ ಸಿದ್ಧರಾಮಯ್ಯ ದೇವರು ಈ ಪಥವ ಕಲಿಸಿ ನಿಜವಾಗಿ ವಾಸಪಲ್ಲಿರಿಸಿದ ಕಾರಣ, ಆನು ನಮೋ ನಮೋ ಎನುತಿರ್ದೆನು ॥೫೭॥

ಇಂತೀ ಶ್ರೀ ಮತ್ಸಕಲ ಪುರಾತನರೊಳ್ ಪ್ರಭುದೇವರು ಮಹಾನುಭಾವ ಸಂಗೋಷ್ಠಿಯಂ ಮಾಡಿದ ಶೂನ್ಯ ಸಂಪಾದನೆಯೊಳ್ ಪ್ರಭುದೇವರ ಪೂಜಾಸ್ತುತಿಗಂ ಏಕಾದಶೋಪದೇಶ ಸಮಾಪ್ತ. ||

---

# ಆಯುದಕ್ಕಿ ಮಾರಯ್ಯಗಳ ಸಂಪಾದನೆ.

## ದ್ವಾದಶೋಪದೇಶ

॥ಕಂದ॥ ಅಕ್ಕಿಯೊಪ್ಪಿಡಿಯನಾಯ್ತಂ। ದಕ್ಕರಿನಿಂ ಬಸವ ಮುಖ್ಯ ಶರಣರ್ಗರ್ಪಿಸಿ। ಗಕ್ಕನೆ ನಿಜದೊಳು ನಿಂದಾಯ್ದಕ್ಕಿಯ ಮಾರಯ್ಯಗಳ ಚರಿತ್ರವನುಸುರ್ವೆಂ ॥

ಅದೆಂತೆಂದೊಡಾ ಪ್ರಭುದೇವರು ಬಸವರಾಜ ದೇವರು ಮಡಿವಾಳ ಮಾಚಿ ತಂದೆಗಳು ಸಿದ್ಧರಾಮಯ್ಯ ದೇವರು ಸೊಡ್ಡಳ ಬಾಚರಸರು ಹಡಪದಪ್ಪಣ್ಣಗಳು ಮುಖ್ಯವಾದ ಅಸಂಖ್ಯಾತ ಮಹಾಗಣಂಗಳು ಸುಖಾನುಭಾವ ಗೋಷ್ಠಿಯೊಳಿರುತ್ತಿರಲು, ಆ ಪ್ರಸ್ತಾವದೊಳು ಆಯಿದಕ್ಕಿಯ ಮಾರಿತಂದೆಗಳೆಂಬ ಶಿವಶರಣನು ಬಸವರಾಜದೇವರು ಮೊದಲಾದ ಶರಣ ಸಮೂಹದಲ್ಲಿಗೆ ಬಂದು ಪ್ರಭುದೇವರೊಡನೆ ತಮ್ಮ ಕಾಯಕದ ನಿರ್ವಂಚಕತ್ವವೆ ಗುರು ಲಿಂಗ ಜಂಗಮ, ಕಾಯಕವೆ ಕೈಲಾಸವೆಂದು ಬಿನ್ನಹಂ ಮಾಡುವ ಪ್ರಸ್ಥಾವದ ವಚನ॥

ಕಾಯಕದಲ್ಲಿ ನಿರುತನಾದಡೆ, ಗುರು ದರುಶನವಾದಡೂ ಮರೆಯಬೇಕು. ಲಿಂಗ ಪೂಜೆಯಾದಡೂ ಮರೆಯಬೇಕು. ಜಂಗಮ ಮುಂದಿದ್ದಡೆಯೂ ಹಂಗುಹರಿಯಬೇಕು. ಕಾಯಕವೇ ಕೈಲಾಸವಾದ ಕಾರಣ. ಅಮರೇಶ್ವರ ಲಿಂಗವಾಯಿತ್ತಾದರೂ ಕಾಯಕದೊಳಗು ॥೧॥

ಮತ್ತಂ॥ ಹಾಗದ ಕಾಯಕವ ಮಾಡಿಕೊಂಡು ಹಣ ಅಡ್ಡವ ತಾ ಎಂಬಲ್ಲಿ ಸತ್ಯಕಾಯಕ ಉಂಟೆ? ಭಕ್ತರಲ್ಲಿ ಕಾಯಕಕ್ಕೆ ಕಡಿಮೆಯಾಗಿ ತಾ ಎಂಬುದು ಅಮರೇಶ್ವರ ಲಿಂಗಕ್ಕೆ ಚಿತ್ತ ಶುದ್ಧ ಕಾಯಕ ॥೨॥

ಮತ್ತಂ॥ ನೇಮವ ಮಾಡಿಕೊಂಡು, ಭಕ್ತರ ಭವನಂಗಳ ಹೊಕ್ಕು ಕಾಯಕಕ್ಕೆ ಸತ್ತು ಹಣ ಹೊನ್ನ ಬೇಡಿಹೆನೆಂಬುದು ಕಷ್ಟವಲ್ಲವೆ ಸದ್ಭಕ್ತಂಗೆ? ಆ ಗುಣ ಅಮರೇಶ್ವರ ಲಿಂಗಕ್ಕೆ ದೂರ ॥೩॥

ಮತ್ತಂ॥ ಗುರು ಲಿಂಗ ಜಂಗಮದಲ್ಲಿ ಬೆರಸಿ ದಾಸೋಹವ ಮಾಡುವಲ್ಲಿ ಹೊನ್ನು ಹೆಣ್ಣು ಮಣ್ಣು ಇವೇ ಮೂಲ ಮೊದಲು. ಮಾಟ ಸ್ವಸ್ಥವಾದಲ್ಲಿ ಮೂರ ಮರೆಯಬೇಕು ಅಮರೇಶ್ವರ ಲಿಂಗವನರಿವುದಕ್ಕೆ ॥೪॥

ಹೀಗೆಂದು ಆಯದಕ್ಕಿ ಮಾರಿತಂದೆಗಳು ತಮ್ಮ ಕಾಯಕದ ನಿರುತಮಂ ಪ್ರಭುದೇವರೊಡನೆ ಬಿನ್ನೈಸಲು, ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ಥಾವದ ವಚನ॥

ಕಂಗಳ ಮುಂದಣ ಗೊತ್ತು ಹರಿಯದು. ಕಾಮ್ಯದ ಮುಂದಣ ಚಿತ್ತ ಹರಿಯದು. ಮಾಡಿಹೆನೆಂಬ ಮಾಟ ಕೂಟದ ಚಿತ್ತ ನಿಂದಲ್ಲದೆ ಸ್ವಸ್ಥವಿಲ್ಲ. ಹಾಗಲ್ಲದೆ ಲಿಂಗವ ಕಾಣಬಾರದು ಅಯದಕ್ಕಿಯ ಮಾರಯ್ಯ ॥೫॥

ಇದಕ್ಕೆ ಆಯಿದಕ್ಕಿಯ ಮಾರಯ್ಯಗಳು ಬಿನ್ನೈಸುವ ಪ್ರಸ್ಥಾವದ ವಚನ॥

ಒಂದ ಬಿಟ್ಟು ಒಂದ ಕೊಂಡಿಹೆನೆಂದರೆ ಅದು ಬಾರದ ಬಯಲು. ಒಂದರಲ್ಲಿ ಸಲೆ ಸಂದು ಹಿಂಗದ ಭಾವ ನೆಲೆಗೊಂಡಲ್ಲಿ ಅಮರೇಶ್ವರ ಲಿಂಗವು ತಾನೆ ॥೬॥

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ ॥

ಮಾಡಿಹೆನೆಂಬನ್ನಬರ ತನ್ನ ಅವಧಿಗೆ ಬಂದುದನರಿವ ಪರಿ ಇನ್ನೆಂತೊ? ಅಸಗ ನೀರಡಿಸಿ ನಿಂದಂತೆ ಆಗಬೇಡಾ. ಗುಹೇಶ್ವರಲಿಂಗವನರಿವುದಕ್ಕೆ ಮಾರಯ್ಯ ॥೭॥

ಇದಕ್ಕೆ ಆಯಿದಕ್ಕಿಯ ಮಾರಿತಂದೆಗಳು ಬಿನ್ನೈಸುವ ಪ್ರಸ್ಥಾವದ ವಚನ ॥

ತೊಟ್ಟು ಬಿಡದನ್ನಕ್ಕರ ಮತ್ತಾ ಬುಡದಾಸೆ ಬೇಕು. ಮರ್ತ್ಯದ ಹಂಗುಳ್ಳನ್ನಕ್ಕರ ಸತ್ಯ ಶರಣರ ಸಂಗ ನಿತ್ಯ ಜಂಗಮ ಸೇವೆ ಕೃತ್ಯವಿರಬೇಕು. ಅಮಳೇಶ್ವರ ಲಿಂಗವನರಿಯಬೇಕು ॥೮॥

ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ಥಾವದ ವಚನ ॥

ಮಾಡುವ ಮಾಟದಿಂದವೇ ಬೇರೊಂದನರಿಯಬೇಕು. ಅರುವಿಂಗೆ ನೆಮ್ಮುಗೆ ಒಡಗೂಡಬೇಕು. ಅರುವಿಂಗೆ ನೆಮ್ಮುಗೆ ವಡಗೂಡಿದ ಬಳಿಕ ಬಯಲ ಭ್ರಮೆಯ ಕಳೆದು, ನಮ್ಮ ಗುಹೇಶ್ವರ ಲಿಂಗದಲ್ಲಿ ನಿಜಪದವನೈದುವುದು ಮಾರಯ್ಯ ॥೯॥

ಹೀಗೆಂದು ಪ್ರಭುದೇವರು ಮಹಾಘನಲಿಂಗದ ನಿಜಪದದಲ್ಲಿ ಬೆರಸಿ ಎರಡಳಿದಿರಬೇಕೆಂದು ನಿರೂಪಿಲು, ಇದಕ್ಕೆ ಆಯಿದಕ್ಕಿ ಮಾರಿತಂದೆಗಳು

ಕೃತ ನಿಶ್ಚಯವನೈದಿ ತಮ್ಮ ಕಾಯಕವ ತಾವೆ ಜರಿದು ಘನಲಿಂಗದ ನಿಜ ಸಮಾಧಿಯೊಳಗೆ ಬೆರಿಸಿ ನಿಂದು ಪ್ರಭುದೇವರ ಶ್ರೀಪಾದಕ್ಕೆ ನಮಸ್ಕರಿಸುವ ಪ್ರಸ್ಥಾವದ ವಚನ ॥

ಅಹುದಹುದು. ಗೆದಲಿ ಮನೆಯ ಮಾಡಿ ಸರ್ಪಂಗೆ ಇಂಬಾದಂತೆ ನಾನತ್ತಣ ದ್ರವ್ಯವ ತಂದು, ಇತ್ತ ಮಾಡಿದರೆ ನನಗಿನ್ನೆತ್ತಣ ಮುಕ್ತಿ? ಘನ ಮಹಿಮ ಶರಣರ ಸಂಗದಿಂದ ಘನಕ್ಕೆ ಘನ ವೇದ್ಯವಾದ ಬಳಿಕ ಅರಿವರತು ಮರಹು ನಷ್ಟವಾಗಿ, ಅಮರೇಶ್ವರ ಲಿಂಗದಲ್ಲಿ ನಿಜಪದವ ಬೆರಿಸಿ ಪ್ರಭುದೇವರ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು ॥೧೦॥

ಹೀಗೆಂದು ಆಯಿದಕ್ಕಿ ಮಾರಿ ತಂದೆಗಳು ನಿಮ್ಮ ಸಂಗದಿಂದ ಘನ ಲಿಂಗದಲ್ಲಿ ಮನಮಗ್ನಯೋಗವಾಯಿತ್ತೆಂದು ಪ್ರಭುದೇವರೊಡನೆ ಬಿನ್ನೈಸುತ್ತಿರಲು ಆ ಪ್ರಸ್ಥಾವದೊಳು ಆಯಿದಕ್ಕಿ ಮಾರಯ್ಯಗಳ ಪುಣ್ಯಾಂಗನೆಯಪ್ಪ ಲಕ್ಕಮ್ಮಗಳು ಬಂದು ಪ್ರಭುದೇವರು ಮುಖ್ಯವಾದ ಅಸಂಖ್ಯಾತ ಮಹಾಗಣಂಗಳಿಗೆ ನಮಸ್ಕರಿಸಿ ತಮ್ಮ ಪತಿಗೆ ಕಾಯಕ ನಿಂದಿತ್ತು ಹೋಗಯ್ಯ ಎನ್ನಾಳ್ದನೆಂದು ಬಿನ್ನೈಸಿ ಕಳುಹುವ ಪ್ರಸ್ಥಾವದ ವಚನ॥

ಕಾಯಕ ನಿಂದಿತ್ತು ಹೋಗಯ್ಯ ಎನ್ನಾಳ್ದನೆ. ಭಾವ ಶುದ್ಧವಾಗಿ ಮಹಾಶರಣರ ತಿಪ್ಪಿಯ ತಪ್ಪಲ ಅಕ್ಕಿಯ ತಂದು ನಿಶ್ಚಯಿಸಿ ಮಾಡಬೇಕು. ಮಾರಯ್ಯ ಪ್ರಿಯ ಅಮರೇಶ್ವರ ಲಿಂಗಕ್ಕೆ ಬೇಗ ಹೋಗು ಮಾರಯ್ಯ ॥೧೧॥

ಮತ್ತಂ॥ ಅಂಗವರತ ಅರುವೆಯ ಅಂಗದಲ್ಲಿ ಬಯಕೆಯುರತ ಕೈಯಲ್ಲಿ ತಂಡುಲವನಾಯ್ದುಕೊಂಡು ಸಂಗನ ಪ್ರಮಥರ ಅಂಗಳಕ್ಕೆ ಬೇಗ ಹೋಗಿ, ಕೊಂಡು ಬಾ ಮಾರಯ್ಯ ಪ್ರಿಯ ಅಮರೇಶ್ವರ ಲಿಂಗಕ್ಕೆ ಮಾರಯ್ಯ ॥೧೨॥

ಹೀಗೆಂದು ಲಕ್ಕಮ್ಮಗಳು ಆಯಿದಕ್ಕಿಯ ಮಾರಯ್ಯಗಳ ಕಾಯಕಕ್ಕೆ ಕಳುಹಲು, ಆ ಆಯಿದಕ್ಕಿಯ ಮಾರಯ್ಯಗಳು ಸಂತೋಷಚಿತ್ತರಾಗಿ, ದಳದಳನೆ ಬಸವೇಶ್ವರನ ಅಂಗಳಕ್ಕೆ ಬಂದು ಅಲ್ಲಿ ಚಲ್ಲಿರ್ದ ತಂಡುಲಮಂ ಹಿರಿದಾಗಿ ಆಯಿದು ತರಲು, ಆನು ಆಸೆ ಎಂದು ಲಕ್ಕಮ್ಮಗಳು ವಿಡಂಬಿಸುವ ಪ್ರಸ್ಥಾವದ ವಚನ ॥

ಸಂದಣಿಗೊಂಡು ಮನ ಹರುಷದಿಂದೆ ಬಸವಣ್ಣನ ಅಂಗಳಕ್ಕೆ ಹೋಗಿ ತಿಪ್ಪೆಯ ತಪ್ಪಲಲ್ಲಿ ಬಿದ್ದಿರ್ದ ತಂಡುಲವ ಕಟ್ಟಿಕೊಂಡು ಯಥಾಸ್ಥಾಗಿ

ತರಲು, ಯಯ್ಯಾಗಿ ಬಂದಿತಲ್ಲ. ಎಂದಿನಂದವೆ ಸಾಕು. ಮತ್ತೆ ಕೊಂಡು ಹೋಗಿ ಅಲ್ಲಿಯೆ ಸುರಿ. ಮಾರಯ್ಯ ಪ್ರಿಯ ಅಮಲೇಶ್ವರಲಿಂಗ ಕೊಟ್ಟ ಕಾಯಕವೆ ಸಾಕು ಮಾರಯ್ಯಾ ॥೧೩॥

ಆಸೆ ಎಂಬುದು ಅರಸಿಂಗಲ್ಲದೆ ಶಿವಭಕ್ತರಿಗುಂಟೆ ಎಲೆ ಅಯ್ಯ? ರೋಷವೆಂಬುದು ಯಮದೂತರಿಗಲ್ಲದೆ ಅಜಾತರಿಗುಂಟೆ ಎಲೆ ಅಯ್ಯ? ಈಸಕ್ಕಿಯ ಆಸೆ ನಿಮಗೇಕೆ? ಈಶ್ವರನೊಪ್ಪ. ಮಾರಯ್ಯ ಪ್ರಿಯ ಅಮಲೇಶ್ವರ ಲಿಂಗಕ್ಕೆ ದೂರ ಮಾರಯ್ಯ ॥೧೪॥

ಮತ್ತಂ॥ ಅಂಗಕ್ಕೆ ಬಡತನವಲ್ಲದೆ ಮನಕ್ಕೆ ಬಡತನ ಉಂಟೆ? ಜಟ್ಟಿ ಬಲ್ಲಿತ್ತೆಂದರೆ ಉಳಿಯ ಮೊನೆಯಲ್ಲಿ ಬಡತನ ಉಳ್ಳರೆ ಒಡೆಯದೆ? ಘನ ಶಿವಭಕ್ತರಿಗೆ ಬಡತನವಿಲ್ಲ. ಸತ್ಯರಿಗೆ ದುಃಕರ್ಮವಿಲ್ಲ. ಎನಗೆ ಮಾರಯ್ಯ ಪ್ರಿಯ ಅಮಲೇಶ್ವರ ಲಿಂಗವುಳ್ಳನ್ನಕ್ಕರ ನನಗಾರ ಹಂಗಿಲ್ಲ ಮಾರಯ್ಯ ॥೧೫॥

ಮತ್ತಂ॥ ಭಕ್ತರು ಕಾಯಕವೆಂದು ದಾಯಗಾರಿಕೆಯಲ್ಲಿದ್ದು ದಾಸೋಹವ ಮಾಡಬಹುದೆ? ಒಮ್ಮನವ ತಂದು ಒಮ್ಮನದಲ್ಲಿಯೆ ಮಾಡಿ, ಇಮ್ಮನವಾಗದ ಮುನ್ನವೆ ಮಾರಯ್ಯ ಪ್ರಿಯ ಅಮಲೇಶ್ವರಲಿಂಗಕ್ಕೆ ಸಲ್ಲಬೇಕು ಮಾರಯ್ಯ ॥೧೬॥

ಭಕ್ತಂಗೆ ಬಡತನ ಉಂಟೆ? ನಿತ್ಯರಿಗೆ ಮರಣ ಉಂಟೆ? ಭಕ್ತರು ಬಡವರೆಂದು ಮತ್ತೊಂದ ಕೊಟ್ಟಹೆನೆಂದರೆ ಮಾರಯ್ಯ ಪ್ರಿಯ ಅಮಲೇಶ್ವರ ಲಿಂಗವು ಸತ್ತಂದಿಗಲ್ಲದೆ ಬಡತನವಿಲ್ಲ ॥೧೭॥

ಮತ್ತಂ॥ ಆಯಿದು ಇಲ್ಲವಾದಂದಿಗಲ್ಲದೆ ಜಗದೊಳಗೆ ಆರಿಗು ಬಡತನವಲ್ಲದಿಲ್ಲ. ಆಯಿದುವುಳ್ಳನ್ನಕ್ಕ ಸಕಲ ಜೀವನಕ್ಕೆ ಜೀತನ ಮಾರಯ್ಯ ಪ್ರಿಯ ಅಮಲೇಶ್ವರಲಿಂಗವುಳ್ಳನ್ನಕ್ಕ ಧನ ಮಾನ ಸಂಪನ್ನರು ॥೧೮॥

ಮತಂ॥ ಬಾಹಾಗ ಕೊಂಡುಬಂದಪ್ರಾಪ್ತಿಯಲ್ಲಿದೆ ಬೇರೊಂದು ಗಳಿಸಲಿಲ್ಲ. ಬೇರೊಂದು ಕೆಡಿಸಲಿಲ್ಲ.ಬಂದುದು ನಿಂದುದು. ಮಾರಯ್ಯಪ್ರಿಯ ಅಮಲೇಶ್ವರ ಲಿಂಗ ಕೊಟ್ಟಲ್ಲದಿಲ್ಲ. ॥೧೯॥

ಮತ್ತಂ॥ ಕಾಯಕವಳಿದ ಠಾವಿನಲ್ಲಿ ಜೀವದ ಎಡೆಯಾಟ ಉಂಟೆ? ಭಾವಶುದ್ಧವಿಲ್ಲದ ಭಕ್ತಿ ಹೋಯಿತ್ತು ಮಾರಯ್ಯ ಪ್ರಿಯಅಮಲೇಶ್ವರಲಿಂಗವುಟ್ಟದೆ. ॥೨೦॥

ಮತ್ತಂ॥ಗರ್ವದಿಂದ ಮಾಡುವ ಭಕ್ತಿ ದ್ರವ್ಯದ ಕೇಡು. ನಡೆಯಿಲ್ಲದ ನುಡಿ, ಅರುವಿಂಗೆ ಹಾನಿ. ಕೊಡದೆ ತ್ಯಾಗಿ ಎನಿಸಿಕೊಂಬುದು ಮುಡಿ ಇಲ್ಲದ ಶೃಂಗಾರ. ದೃಢವಿಲ್ಲದ ಭಕ್ತಿ ಅಡಿ ಒಡೆದ ಕುಂಭದಲ್ಲಿ ಸುಖಜಲವ ತುಂಬಿವಂತೆ ಮಾರಯ್ಯಪ್ರಿಯ ಅಮಲೇಶ್ವರ ಲಿಂಗ ಮುಟ್ಟದ ಭಕ್ತಿ. ॥೨೧॥

ಮತ್ತಂ॥ ಒಮ್ಮನವ ವಿಚಾರಿ ಇಮ್ಮನದಲ್ಲಿ ತಂದಿರಿ. ಇದು ನಿಮ್ಮ ಮನವೊ? ಬಸವಣ್ಣನ ಅನುಮಾನದ ಚಿತ್ತ.ಈ ಮಾತು ಮಾರಯ್ಯ ಪ್ರಿಯ ಅಮಲೇಶ್ವರ ಲಿಂಗಕ್ಕೆ ಸಲ್ಲದ ಬೋನವ ಅಲ್ಲಿಯೆ ಸುರಿದು ಬನ್ನಿ ಮಾರಯ್ಯ. ॥೨೨॥

ಹೀಗೆಂದು ಆಯಿದಕ್ಕಿಯ ಮಾರಯ್ಯಗಳ ಪುಣ್ಯಾಂಗನೆ ಆಸೆಯ ವಿಡಂಬಿಸಿ ಲಿಂಗೈಕ್ಯದ ಮನದ ಭೇದವ ಎಚ್ಚರಿಸಿ ಬಿನ್ನೈಸುತ್ತಿರಲು,ಆ ಮಾರಯ್ಯತಂದೆಗಳು ಬಿಜ್ಜರಂಬೋಗಿ, ಮಹಾಘನಲಿಂಗದೊಳಗೆ ವಾರಿ ವಾರಿ ಬೆರೆವ ಹಾಗೆ, ಶಿಖಿಕರ್ಪೂರ ಸಂಯೋಗದಂತೆ ಎಂದಪ್ಪದೆಂದು ಬೆಸಗೊಂಬ ಪ್ರಸ್ಥಾವದ ವಚನ॥

ಗಂಗೆ ವಾಳುಕ ಸಮರುದ್ರರೆಲ್ಲರು ತಾವು ಬಂದಲ್ಲಿಯೆ ಬಟ್ಟೆಯ ಮೆಟ್ಟಿದಂತಾದರು. ಪ್ರಮಥ ಗಣಂಗಳೆಲ್ಲರು ಪ್ರಮಾಣಿದ್ದಲ್ಲಿಗೆ ಹರಿದರು. ಎನಗೆ ಅರಿವು ಕರಿಗೊಂಬ ಅರಿವೆಲ್ಲ ಅಮಲೇಶ್ವರ ಲಿಂಗದಲ್ಲಿ ಹೇಳಾ ॥೨೩॥

ಹೀಗೆಂದು ಮಾರಯ್ಯಗಳು ತಮ್ಮ ಪುಣ್ಯಾಂಗನೆಯ ಬೆಸಗೊಳಲು ಆ ಲಕ್ಕಮ್ಮಗಳು ಶಿವಲೋಕದ ಭ್ರಮೆಯ ವಿಡಂಬಿಸುವ ಪ್ರಸ್ಥಾವದ ವಚನ. ॥

ಮಾಡುವ ಮಾಟವುಳ್ಳನ್ನಕ್ಕ ಜೇರೊಂದು ಪದವನರಸಲೇತಕ್ಕೆ? ದಾಸೋಹವೆಂಬ ಸೇವೆಯ ಬಿಟ್ಟು ನಿರಿಸಲಾರದೆ ಕೈಲಾಸವೆಂಬ ಆಸೆ ಬೇಡ ಮಾರಯ್ಯ ಪ್ರಿಯ ಅಮಲೇಶ್ವರಲಿಂಗವಿದ್ದ ಠಾವೆ ಕೈಲಾಸವು. ॥೨೪॥

ಮತ್ತಂ॥ ಮಾಡಿ ನೀಡಿ ಹೋದಿಹೆನೆಂಬಾಗಲಿ ಕೈಲಾಸವೇನು ಕೈಕೂಲಿಯೆ? ಮುಂದೊಂದ ಕಲ್ಪಿಸದೆ ಹಿಂದೊಂದು ಭಾವಿಸದೆ, ಸಲೆ ಸಂದಿದ್ದಾಗಲೆ ಮಾರಯ್ಯಪ್ರಿಯ ಅಮಲೇಶ್ವರ ಲಿಂಗವಿದ್ದ ಠಾವೆ ಕೈಲಾಸ ॥೨೫॥

ಮತ್ತಂ॥ ಇದ್ದಿಹೆನೆಂಬ ಕಾಯದ ಅರಿಕೆ ಹಿಂಗಿತ್ತೆ? ನಾ ಮಾಡಿಹೆನೆಂಬ ತವಕ ಹಿಂಗಿತ್ತೆ? ಉಭಯದ ಕೈಕೂಲೆ ಹಿಂಗಿ ಮಾರಯ್ಯ ಪ್ರಿಯ ಅಮಲೇಶ್ವರಲಿಂಗಕ್ಕೆ ಅಲಸಿಕೆಯಾಯಿತ್ತು ॥೨೬॥

ಹೀಗೆಂದು ಆಯಿದಕ್ಕಿಯ ಮಾರಯ್ಯಗಳ ಪುಣ್ಯಾಂಗನೆ ತನ್ನ ಪತಿಗೆ ಬಿನ್ನೈಸಲು, ಇದಕ್ಕೆ ಮಾರಯ್ಯಗಳು ತಮ್ಮ ಸತಿಯ ಲಿಂಗಾಂಗಸಂಯೋಗಮಂ ಬೆಸಗೊಂಬ ಪ್ರಸ್ಥಾವದ ವಚನ. ॥

ಅಂಧಕಂಗೆ ಜೀವವಿದ್ದರೆ ಕಣ್ಣಿಸಿಂದಲೆ ಕಂಡು ನಡೆಯಬಲ್ಲನೆ? ನೀ ಸತಿಯಾಗಿ ನಾ ಪತಿಯಾಗಿ ಉಭಯ ಪ್ರಾಣ ಏಕ ರೂಪಾಗಿ ಯೋಗದ ಅಂಗನೆಯ ಅಮಲೇಶ್ವರಲಿಂಗವ ತೋರಾ. ॥೨೭॥

ಹೀಗೆಂದು ಆಯಿದಕ್ಕಿಯ ಮಾರಿತಂದೆಗಳು ಲಿಂಗದೊಳು ಒಡವೆರಸಿ ಬೆರಸುವ ಭೇದ ಹೇಗೆಂದು ತಮ್ಮ ಸತಿಯ ಬೆಸಗೊಳಲು, ಇದಕ್ಕೆ ಅಹಂಕಾರ ಗುಣವಳಿದು, ತ್ರಿವಿಧ ದಾಸೋಹವೆ ಮಹಾ ಘನಲಿಂಗೈಕ್ಯವೆಂದು ಬಿನ್ನೈಸುವ ಪ್ರಸ್ಥಾವದ ವಚನ. ॥

ಕೈದುವ ಕುಡುವರಲ್ಲದೆ, ಕಲಿತನವ ಕೊಟ್ಟವರುಂಟೇ ಮಾರಯ್ಯ? ಹೆಣ್ಣ ಕುಡುವರಲ್ಲದೆ ಕೂಟಗಾದವರುಂಟೆ ಮಾರಯ್ಯ? ಕಳವ ಚೋರಂಗೆ ಬಡವರೆಂಬ ದಯ ಉಂಟೆ ಮಾರಯ್ಯ? ಮನವ ನೋಡಿ ಭಕ್ತಿಯ ನೋಡಿಹೆನೆಂಬವಂಗೆ ಎಮ್ಮಲ್ಲಿ ಗುಣದ ಸಂಪಾದಿಸಲಿಲ್ಲ. ಮಾರಯ್ಯ ಶೂಲವ ಹಾಯ ಬಂದಲ್ಲಿ ಮತ್ತಿನ್ನು ಸಾವಿಂಗೆ ಹಂಗುವಡಲೇಕೆ? ಮಾರಯ್ಯಪ್ರಿಯ ಅಮಲೇಶ್ವರ ಲಿಂಗ ನೀನೆ ಬಲ್ಲೆ. ॥೨೮॥

ಮತ್ತಂ॥ ಸಸಿಗೆ ನೀರೆರೆದಡೆ ಅಳುಕುವಲ್ಲದೆ ನಷ್ಟ ಮೂಲಕ್ಕೆ ಹೊತ್ತು ನೀರೆರೆದರೆ ಅಳುಕುವುದೆ? ಮಾರಯ್ಯ ನಿನ್ನ ವಿರಕ್ತಿ ನಷ್ಟವಾಗದ ಮುನ್ನವೆ ಮಾರಯ್ಯ ಪ್ರಿಯ ಅಮಲೇಶ್ವರ ಲಿಂಗವನರಿಯಿರಯ್ಯ. ॥೨೯॥

ಮತ್ತಂ॥ ಪೂಜೆಯುಳ್ಳನ್ನಕ್ಕ ಪುಣ್ಯದ ಗೊತ್ತು ಕಾಣಬಂದಿತ್ತು. ಮಾಟವುಳ್ಳನ್ನಕ್ಕ ಮಹಾ ಪ್ರಮಥರ ಭಾಷೆ ಭಾಗ್ಯ ದೊರಕೊಂಡಿತ್ತು. ಮಾಟವಿಲ್ಲದವನ ಭಕ್ತಿ ಹಾಳೂರ ಮುಂದಿಟ್ಟಿಹ ಕೋಳದಲ್ಲಿ ಕಾಲನಿಟ್ಟು ಕೀಲ ಜಡಿಕೊಂಡಂತಾಯಿತ್ತು. ಮಾಡುವಲ್ಲಿ ಉಭಯವಳಿದು ಮಾಡಬಲ್ಲರೆ ಮಾರಯ್ಯಪ್ರಿಯ ಅಮಲೇಶ್ವರ ಲಿಂಗವ ಕೂಡುವ ಕೂಟಾ ॥೩೦॥

ಮತ್ತಂ॥ ಪ್ರತಿಷ್ಠೆಗೆ ಮಾಟವಲ್ಲದೆ ಸ್ವಯಂಭುವಿಂಗುಂಟೆ? ಉಳುಮೆ ನನಗು ನಿನಗು ಮಾರಯ್ಯ ಪ್ರಿಯ ಅಮಲೇಶ್ವರ ಲಿಂಗವನರಿವುದಕ್ಕೆ ಬೇರೊಂದು ಠಾವುಂಟೆ ಮಾರಯ್ಯ? ॥೩೧॥

ವುತ್ತಂ॥ ಆವ ಬೀಜವ ಬಿತ್ತಿದರೂ ಮೊಳೆಯ ಮುಖ ಹಿಂಚು ಮುಂಚುಂಟೇ? ನೀನು ಮರೆದಲ್ಲಿ ನಾನರಿದಲ್ಲಿ ಬೇರೊಂದೊಡಲುಂಟೇ? ಮೂಲ ನಷ್ಟವಾದಲ್ಲಿ ಅಂಕುರ ನಿಂದಿತ್ತು. ಕೂಟಕ್ಕೆ ಸತಿಪತಿ ಎಂಬ ನಾಮವಲ್ಲದೆ ಅರಿವಿಂಗೆ ಬೇರೊಂದೊಡಲುಂಟೇ? ಬೇರೊಂದಡಿಯಿಡದಿರು ಮಾರಯ್ಯ ಪ್ರಿಯ ಅಮಲೇಶ್ವರಲಿಂಗವನರಿಯಬಲ್ಲರೆ. ॥೩೨॥

ಇಂತೀತ್ರಿವಿಧ ದಾಸೋಹವೆ ಲಿಂಗೈಕ್ಯವೆಂದು ಆಯಿದಕ್ಕಿ ಮಾರಯ್ಯಗಳ ಸತಿ ತಮ್ಮ ಪತಿಗರುಹಲು ಆ ಮಾರಯ್ಯಗಳು ತ್ರಿವಿಧ ದಾಸೋಹವೆ ಸಚ್ಚಿದಾನಂದ ಬ್ರಹ್ಮವೆಂದು ನಿಶ್ಚೈಸಿದ ಪ್ರಸ್ಥಾವದ ವಚನ॥

ಗುರುಪೂಜೆಯ ಮಾಡುವಲ್ಲಿ ಗುರುಪೂಜೆಯಲ್ಲಿಯೆ ಮುಕ್ತರು. ಲಿಂಗಪೂಜೆಯ ಮಾಡುವಲ್ಲಿ ಲಿಂಗಪೂಜೆಯಲ್ಲಿಯೆಮುಕ್ತರು. ಜಂಗಮಪೂಜೆಯಮಾಡುವಲ್ಲಿ ಜಂಗಮ ಪೂಜೆಯಲ್ಲಿಯೆ ಮುಕ್ತರು. ಈ ಮೂರೊಂದಾದಲ್ಲಿ ಬೇರೊಂದಂಗವಿಲ್ಲ. ಆಗು ಹೋಗೆ ಮೂರರಲ್ಲಿಯೆ ಅಡಗಿದ ಮತ್ತೆ ಅಮಲೇಶ್ವರ ಲಿಂಗವ ಪೂಜಿಸಲಿಲ್ಲ. ॥೩೩॥

ಇಂತು ಆಯುವಕ್ಕಿ ಮಾರಯ್ಯಗಳು ಆ ಮಾರಯ್ಯಗಳ ಸತಿಯು ಮಹಾನುಭಾವದಿಂದೋಲಾಡುತ್ತ ಮತ್ತಂ ತಮ್ಮ ಪತಿಯೊಡನೆ ಬಸವಣ್ಣ ಚನ್ನಬಸವಣ್ಣ ಪ್ರಭುದೇವರು ಮುಖ್ಯವಾದ ಅಸಂಖ್ಯಾತ ಮಹಾಗಣಂಗಳಿಗೆ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮ ದೇವರುಗಳಿಗೆ ಅಮಲೇಶ್ವರ ಲಿಂಗದ ಮನೆಯಲ್ಲಿ ಪದಾರ್ಥವಾಯಿತ್ತೆಂದು ವಿಭೂತಿಯ ಕಳುಹುವ ಪ್ರಸ್ಥಾವದ ವಚನ॥

ಬಸವಣ್ಣ ಚನ್ನಬಸವಣ್ಣ ಪ್ರಭುದೇವರು ಮೊದಲಾದ ನೇಮ ನಿತ್ಯ ಕೃತ್ಯ ಸಕಲ ಸಮೂಹ ನಿತ್ಯ ನಿಯಮದ ಜಂಗಮ ಭಕ್ತರುಗಳು ಗಣಂಗಳು ಮುಂತಾದ ಸಮೂಹ ಸಂಪದಕ್ಕೆ ನೈವೇದ್ಯಕ್ಕೆ ವೇಳೆ ಎಂದು ಹೇಳಿ ಬಾ ಮಾರಯ್ಯಪ್ರಿಯ ಅಮಲೇಶ್ವರ ಅಂಗದ ಮಹಾಮನೆಯಲ್ಲಿ ಪದಾರ್ಥವಾಯಿತ್ತೆಂದು ॥೩೪॥

ಹೀಗೆಂದು ಆಯಿದಕ್ಕಿಯ ಮಾರಯ್ಯಗಳ ಸತಿ ತಮ್ಮ ಪತಿಗೆ ಅಸಂಖ್ಯಾತ ಮಹಾಗಣಂಗಳಿಗೆ ವಿಭೂತಿಯ ಸಂಬಂಧಿಸಿ ಬನ್ನಿ ಎಂದು ಬಿನ್ನೈಸಲು, ಆ ಮಾರಯ್ಯಗಳು ಶಿವ ಶಿವಾ ನಾನೆತ್ತ ನಿತ್ಯ ನಿಯಮ ವ್ರತಶೀಲ ಸಂಪನ್ನರುಗಳಿಗೆ ಅವರವರ ನೇಮಂಗಳಂ ಸಲಿಸುವದು ನಮಗಳವೆ?

ನಾವು ನಿರ್ಧನಿಕರು. ಅಸಂಖ್ಯಾತ ಮಹಾಗಣಂಗಳಿಗೆ ತೃಪ್ತಿಬಡಿಸುವುದಕ್ಕೆ ನಾವು ಅಶಕ್ತರೆಂದು ನಿರೂಪಿಸುವ ಪ್ರಸ್ತಾವದ ವಚನ ॥

ಗಣಸಹವೆಂದು ಕೂಡಿ ಮಾಡುವಲ್ಲಿ ಸಮಯದ ನೋವು. ಭೂರಿಗೀಡಾಗಿ ಮಾಟದ ಸಂದೇಹವ ಹೊತ್ತು ಮಾತಿಗೊಳಗಾದಲ್ಲಿ ಭಕ್ತಿ ನೀತಿ ಸಿಕ್ಕಿತು. ಅಮಲೇಶ್ವರಲಿಂಗಕ್ಕೆ ದೂರವಾಯಿತ್ತು. ॥೩೫॥

ಹೀಗೆಂದು ಮಾರಯ್ಯಗಳು ತಮ್ಮ ಸತಿಯೊಡನೆ ಭಕ್ತಿ ನಿಜವಾಗದೆಂದು ಎಡೆಯಲ್ಲಿ ಕೆಡುವುದೆಂದು ನಿರೂಪಿಸಲು, ಇದಕ್ಕೆ ಮಾರಯ್ಯಗಳ ಸತಿ ಶಿವನ ಕರುಣವ ಪಡೆದ ಶಿವಭಕ್ತರುಗಳು ಅಹುದಾಗದೆಂಬ ಸಂದೇಹವ ಮಾಡಲಾಗದೆಂದು, ಬಿನ್ನೈಸುವ ಪ್ರಸ್ತಾವದ ವಚನ ॥

ಮನಶುದ್ಧವಿಲ್ಲದವರಿಗೆ ದ್ರವ್ಯದ ಬಡತನವಲ್ಲದೆ ಚಿತ್ತಶುದ್ಧದಲ್ಲಿ ಕಾಯಕವ ಮಾಡುವಲ್ಲಿ ಸದ್ಭಕ್ತಂಗೆ ಎತ್ತ ನೋಡಿದಡತ್ತ ಲಕ್ಷ್ಮಿ ತಾನಾಗಿಪ್ಪಳು, ಮಾರಯ್ಯ ಪ್ರಿಯ್ಯ ಅಮಲೇಶ್ವರ ಲಿಂಗದ ಸೇವೆಯುಳ್ಳನ್ನಕ್ಕ ॥೩೬॥

ಮತ್ತಂ॥ ಅಮಾರಿ ಎಂದು ಮಾಡುವಲ್ಲಿ ಅವರಿವರೇದು ಪ್ರಮಾಣಿಸಲುಂಟೆ ? ಸಮಯಕ್ಕೆ ಹೋಗಿ ಸಮಯವನರಿಯರೆಂದು ಭವಗೆಡಲುಂಟೆ? ಭಾವಜ್ಞನಾದಡೆ ಭಾವವನರಿದಲ್ಲಿ ಶುಚಿಯಾಗಿರಬಲ್ಲರೆ ಮಾರಯ್ಯ ಪ್ರಿಯ ಅಮಲೇಶ್ವರ ಲಿಂಗವ ಹೊಂದುವ ಭಾವ ॥೩೭॥

ಹೀಗೆಂದು ಮಾರಯ್ಯಗಳ ಸತಿ ತನ್ನ ಪತಿಗೆ ಬಿನ್ನೈಸಲು, ಆ ಮಾರಯ್ಯಗಳು ಹರುಷಂದಳೆದು ದರಹಸಿತ ವದನದಿಂದ ಸಕಲ ಪ್ರಮಥರ್ಗೆ ವಿಭೂತಿಯ ಸಂಬಂಧಿಸುವೆನೆನುತ ನೀನು ಕಳುವುದೆಲ್ಲಿ ಪ್ರಮಥರ್ಗೆ ಸಲುವ ಸಲುವ ಸೇವಂಗಳಲ್ಲಿ ಪದಾರ್ಥವನನುಗೆಯ್ಯೆನಲು ಅನಿತರೊಳಗೆ ಮಾರಯ್ಯಗಳ ಸತಿ ಬಸವಾದಿ ಅಸಂಖ್ಯಾತರಹೃತ್ಕಮಲ ಮಧ್ಯದಲ್ಲಿ ಮಹಾಜ್ಞಾನದಿಂದ ನಿರೀಕ್ಷಿಸಿ ಅವರವರಾಯತದ ಪದಾರ್ಥವ ನಿಮಿಷದೊಳಗನುಗೈದು ವಿಭೂತಿಯ ಸಂಬಂಧಿಸಿ ಬಿಜಯಂಗೈಸಿ ತಹುದೆಂದು ಬಿನ್ನೈಸಲು, ಆಗ ಮಾರಯ್ಯಗಳು ಅಸಂಖ್ಯಾತ ಪ್ರಥಮರೆಲ್ಲರು ಸಹವಾಗಿ ಅಮಲೇಶ್ವರ ಲಿಂಗದ ಮನೆಯಲ್ಲಿ ಪ್ರಸಾದವ ಸಲಿಸುವ ಬಾರಾ ಸಂಗನಬಸವಣ್ಣಾ ಎಂದು ವಿಭೂತಿಯ ಸಂಬಂಧಿಸುವ ಪ್ರಸ್ತಾವದ ವಚನ ॥

ಸತ್ಯವೆಂಬ ತಟ್ಟೆಯಲ್ಲಿ ಚಿತ್ತಶುದ್ಧವೆಂಬ ವಿಭೂತಿಯ ಬೈಚಿಟ್ಟು ಸಕಲ ಸಂಪದ ಪ್ರಮಥರು ಮುಂತಾಗಿ ಅಮಲೇಶ್ವರಲಿಂಗದ ಆಶ್ರಯದಲ್ಲಿ ಪ್ರಸಾದವ ಕೊಂಬುದಕ್ಕೆ ಬಾರಾ ಸಂಗನಬಸವಣ್ಣಾ ॥೩೮॥

ಇವಕ್ಕೆ ಬಸವರಾಜದೇವರ ಪ್ರತ್ಯುತ್ತರ ॥

ಅಲ್ಲೆನಬಾರದು ಅಹುದೆನಬಾರದು. ಕೂಡಲಸಂಗನ ಶರಣರ ಸಂಗ ಕರಗಸದ ಬಾಯಿಧಾರೆಯಂತೆ ಅರಿಬಿರಿದೈಯ್ಯ ॥೩೯॥

ಇದಕ್ಕೆ ಮಾರಯ್ಯಗಳ ಪ್ರತ್ಯುತ್ತರ ॥

ಸಮುಸುಕ್ಕೆ ಬಂದಿಹೆನೆಂದು, ಕಂಪದೆ ಬಾರೆನೆಂದು, ಕುಂದದೆ ಉಭಯದ ಸಂದಳಿದು ನಿಂದಲ್ಲ ಅಮಲೇಶ್ವರ ಲಿಂಗವು ತಾನೆ ॥೪೦॥

ಹೀಗೆಂದು ಮಾರಯ್ಯಗಳು ಬಿನ್ನೈಸಲು ಇದಕ್ಕೆ ಬಸವರಾಜದೇವರು ಅಸಂಖ್ಯಾತರು ಸಹಿತ ಮಾರಯ್ಯಗಳ ಮಠಕ್ಕೆ ಪೋಪೆವೆಂದು ಹಾರೈಸಿ ಇದ್ದ ಪ್ರಸ್ಥಾವದ ವಚನ ॥

ಆಕಾಶವ ಮೀರುವ ತರುಗಿರಿಗಳುಂಟೆ? ಪತಿ ದೃಷ್ಟಿಯಾಗಿ ಮಾಡ ಬಲ್ಲರೆ ಅದೇ ಮಾಟ. ಕೂಡಲಸಂಗಮದೇವರ ಕೂಡುವ ಕೂಟಾ ॥೪೧॥

ಹೀಗೆಂದು ಅಸಂಖ್ಯಾತರು ಮುಖ್ಯವಾಗಿ ಬಸವರಾಜದೇವರು ಏಳಲು ಮಾರಯ್ಯಗಳು ಬಿಜಯಂಗೈಸಿ ತಂದು ತಮ್ಮ ಮನೆಯೊಳಗಿಸಿದ ಪ್ರಸ್ಥಾವದ ವಚನ॥

ವಿಶ್ವಮಯ ನಿಶ್ಚಯರೂಪಾಗಿಬಂದೆಯಯ್ಯ! ಭಕ್ತಿಗೆ ಎನ್ನ ಮನಕ್ಕೆ ಭಿನ್ನವಿಲ್ಲದೆ ಸಲೆಸಂದ ನಿಲವು ಅಮಲೇಶ್ವರಲಿಂಗಕ್ಕೆ ಕೂಟವಾಯಿತ್ತು ॥೪೨॥

ಇಂತು ಅಸಂಖ್ಯಾತ ಮಹಾಗಣಂಗಳು ಸಹಿತ ಬಸವರಾಜ ದೇವರು ಪ್ರಭುದೇವರು ಸಹಿತ ಬಿಜಯಂಗೈಸಿ ತಂದು ಪಾದಾರ್ಚನೆಯಂ ಮಾಡಿಸಿ ಸಿಂಹಾಸನವನಿಕ್ಕಿ ಶರಣರ ಮನದ ಣಿವನ್ನೆಗಂ ಎಡೆ ಮಾಡಿ ಓರೋರ್ವರ್ಗೆ ಮನದ ಆಯತದ ಪದಾರ್ಥಂಗಳಂ ಮತ್ತಂ ಮಹೇಶ್ವರರ ಇಚ್ಛಾಪದಾರ್ಥಮಂ ಸಲಿಸಲು ಎಲ್ಲ ಗಣಂಗಳು ಷಡುರುಚಿಯ ಲಿಂಗಕ್ಕರ್ಪಿಸಿ ತೃಪ್ತಿವಡೆಯಲು ಅದಂ ಕಂಡು ಪ್ರಭುದೇವರು ಆಶ್ಚರ್ಯಮಂ ಬಟ್ಟು ಬಸವರಾಜದೇವರೊಡನೆ ನಿರೂಪಿಸುವ ಪಸ್ಥಾವದ ವಚನ॥

ಆರಾರ ಸೇವುಕ್ಕೆ ಸಂದಿತ್ತು. ಇಚ್ಛಾ ಭೋಜನಕ್ಕೆ ಕೃತ್ಯವಾಯಿತ್ತು. ಮನಘನವುಕಂಡಯ್ಯ ಸಂಗನಬಸವಣ್ಣ ಗುಹೇಶ್ವರಲಿಂಗಕ್ಕೆ ಆಶ್ಚರ್ಯ ವಾಯಿತ್ತು. ॥೪೩॥

ಹೀಗೆಂದು ಪ್ರಭುದೇವರು ನಿರೂಪಿಸಲು, ಅದಕ್ಕೆ ಬಸವರಾಜದೇವರು ನಿಮ್ಮ ಶರಣರು ಬಡವರಲ್ಲ, ಘನ ಮಹಿಮರೆಂದು ಬಿನ್ನೈಸುವ ಪ್ರಸ್ಥಾವದ ವಚನ. ॥

ಮನೆ ನೋಡಾ ಬಡವರು. ಮನ ನೋಡಾ ಸಂಪನ್ನರು. ಧನ ನೋಡಾ ಬಡವರು. ಘನ ಮನ ಸಂಪನ್ನರು. ಕೂಡಲಸಂಗನ ಶರಣರು ಕರುಳಿಲ್ಲದ ಕಲಿಗಳು. ಆರಿಗುಪಮಿಸಬಾರದು. ॥೪೪॥

ಹೀಗೆಂದು ಬಸವರಾಜದೇವರು ಬಿನ್ನೈಸಲು, ಅದಕ್ಕೆ ಪ್ರಭುದೇವರು ತೃಪ್ತಿವಡೆದೆವೆಂದು ನಿರೂಪಿಸುವ ಪ್ರಸ್ಥಾವದ ವಚನ. ॥

ಉಭಯದೃಷ್ಟಿಯಲ್ಲಿ ದೃಷ್ಟವ ಕಾಂಬಂತೆ, ದಂಪತಿ ಏಕಭಾವವಾಗಿ ನಿಂದಲ್ಲಿ ಗುಹೇಶ್ವರ ಲಿಂಗಕ್ಕೆ ಅರ್ಪಿತವಾಯಿತ್ತು ಸಂಗನಬಸವಣ್ಣಾ. ॥೪೫॥

ಹೀಗೆಂದು ಪ್ರಭುದೇವರು ನಿರೂಪಿಸಲು, ಆ ಮಾರಯ್ಯಗಳು ನಿರಹಂಭಾವದಲ್ಲಿ ನುಡಿವ ಪ್ರಸ್ಥಾವದ ವಚನ. ॥

ತನುಪೀವಡೆ ತನುವೆನಗಿಲ್ಲ. ಮನವೀವಡೆ ಮನವೆನಗಿಲ್ಲ. ಧನವೀವಡೆ ಧನವೆನಗಿಲ್ಲ. ಇಂತೀ ತನು ಮನ ಧನ ಸಕಲ ಸಂಪತ್ತುಳ್ಳ ನಿಮ್ಮ ಶರಣರ ತಪ್ಪಲಕ್ಕಿಯನಾಯ್ದು ತಂದು ಎನ್ನೊಡಲ ಹೊರವನಲ್ಲದೆ ಅಮಲೇಶ್ವರ ಲಿಂಗಕ್ಕೆ ನೀಡುವ ಬಯಕೆ ಎನಗಿಲ್ಲ ಸಂಗನಬಸವಣ್ಣಾ. ॥೪೬॥

ಮತ್ತಂ॥ ಎನಗೆ ಮನೆ ಇಲ್ಲ. ಎನಗೆ ಧನವಿಲ್ಲ; ಮಾಡುವದೇನು? ನೀಡುವದೇನು? ಮನೆ ಧನ ಸಕಲಸಂಪದ ಸೌಖ್ಯವುಳ್ಳ ನಿಮ್ಮ ಶರಣರ ತಪ್ಪಲಕ್ಕಿಯನಾಯ್ದು ಎನ್ನೊಡಲ ಹೊರೆವೆನಾಗಿ ಅಮಲೇಶ್ವರಲಿಂಗಕ್ಕೆ ನೀಡುವ ಬಯಕೆ ಎನಗಿಲ್ಲ ಸಂಗನಬಸವಣ್ಣಾ ॥೪೭॥

ಹೀಗೆಂದು ಆಯಿದಕ್ಕಿಯ ಮಾರಯ್ಯಗಳು ನಿರಹಂಭಾವದಿಂದ ನುಡಿವುತ್ತಿರೆ ಆ ಬಸವರಾಜದೇವರು ಆ ಮಾರಯ್ಯಗಳ ವೈಭವವ ಸಂಭಾವಿಸುವಲ್ಲಿ ಸಂಕಲ್ಪಿಸಿದೆನಲಾ ಎಂಬು ಅನುತಾಪಂಬಟ್ಟ ಪ್ರಸ್ತಾವದ ವಚನ॥

ನಾನಾಡುವುದೆಲ್ಲವು ಅನಾಚಾರ. ನಾನುಡಿವುದೆಲ್ಲವು ಅವಿಚಾರ. ನಡೆ ನುಡಿ ಶುದ್ಧವಿಲ್ಲದಪವಿತ್ರನ ತಂದು ನಿರೋಕ್ಯರನ್ಕಿ ಸಲಹಿದಿರಾಗಿ, ಎನಗಿನ್ನಾವ ಭಯವಿಲ್ಲ. ಕೂಡಲ ಸಂಗಮದೇವರು ಸಾಕ್ಷಿಯಾಗಿ ಆಯಿ ಪಕ್ಕಿ ಮಾರಯ್ಯನ ಮನೆಯ ಮಗ ನಾನು ॥೪೮॥

ಹೀಗೆಂದು ಬಸವರಾಜದೇವರು ನುಡಿಯಲು, ಆ ಮಾರಯ್ಯಗಳು ಬಸವರಾಜದೇವರ ಸ್ತುತಿಸಿದ ವಚನ ॥

ಹಮ್ಮು ಬಿಮ್ಮುನಳಿದ ಅನುಪರಿತ ಶಿವ ನೀನು. ಎನ್ನ ಕರಸ್ಥಲದ ಕಳೆ ನೀನು. ಎನ್ನ ಮನೋ ಮಧ್ಯದ ಸ್ವಯಂಜ್ಯೋತಿ ನೀನು. ಅಮ ಲೇಶ್ವರ ಲಿಂಗವ ಅನುಪಿನ ಕಳೆ ನೀನು, ಸಂಗನಬಸವಣ್ಣಾ ॥೪೯॥

ಮತ್ತಂ॥ ಆ ಮಾರಯ್ಯಗಳು ತಮ್ಮ ಕಟ್ಟಿನ ನೇಮದ ನಿಷ್ಠೆ ಬಸ ವಣ್ಣ ನೀನೆ ಎಂಬುದ ಮಡಿವಾಳ ಮಾಚಿತಂದೆಗಳು ಬಲ್ಲರೆಂದು ಬಿನ್ನೈ ಸುವ ಪ್ರಸ್ತಾವದ ವಚನ ॥

ಭಕ್ತರ ಭಾವದಲ್ಲಿ ಸುಳಿವ ಸ್ವಹಹು ವಿರಕ್ತರ ಜ್ಞಾನದಲ್ಲಿ ಹೊಳೆವ ಕಳೆಯು ನೀನಯ್ಯ. ಸೂರ್ಯನ ಬೆಳಗಿನೊಳಗೆ ಸಚರಾಚರ ಪ್ರಾಣಿಗಳು ಸುಳಿವಂತೆ ನಮ್ಮ ಕಟ್ಟಿದ ನೇಮದ ನಿಷ್ಠೆ ನೀನೆ ಆಯ್ಯ. ಅಮಲೇಶ್ವರ ಲಿಂಗದ ಒಡಲು ಸಂಗನಬಸವಣ್ಣನೆಂಬುದನು ಮಡಿವಾಳ ಮಾಚಿತಂದೆ ಗಳೆ ಬಲ್ಲರು ಕಾಣಾ ಸಂಗನಬಸವಣ್ಣಾ ॥೫೦॥

ಮತ್ತಂ॥ ಆ ಮಾರಯ್ಯಗಳು ಬಸವರಾಜದೇವರ ಸ್ತೋತ್ರಮಂ ಮಾಡುವ ಪ್ರಸ್ತಾವದ ವಚನ ॥

ಮನದಲ್ಲಿ ಹುಟ್ಟಿದ ಅರಿವು ಮಾಡುವ ಮಾಟದಲ್ಲಿ ಕಾಣಬಹುದು. ಶರಣರ ಸಂಗಕ್ಕೆಳಸಿದ ಚಿತ್ತದ ಅನುಭಾವದಲ್ಲಿ ಕಾಣಬಹುದು. ಒಳ ಹೊರಗೆ ತೆರಹಿಲ್ಲದ ಕೂಟ ನಿನ್ನದು. ಅಮಲೇಶ್ವರ ಲಿಂಗದಲ್ಲಿ ಸಂಗನ ಬಸವಣ್ಣ ನಿಮ್ಮ ಪಾದಕ್ಕೆ ನಮೋ ನಮೋ ಎಂಬೆನು ॥೫೧॥

ಮತ್ತಂ॥ ಅಮೃತ ಸವಿ ಸ್ವಾದಿಸುವರಿಗಲ್ಲದೆ, ಅಮೃತ ತನ್ನ ತಾ ಸ್ವಾದಿಸಿದ ಪರಿಯಂತೆ ನಿತ್ಯ ತೃಪ್ತಂಗೆ ಆಪ್ಯಾಯನ ಉಂಟೆ? ಏಳನೂ ರೆಪ್ಪತ್ತು ಅಮರಗಣಂಗಳು ಕಟ್ಟಳೆಯ ನೇಮದ ಕಟ್ಟು ನಿನ್ನದು. ನಿನಗೆ ಭಾವ ನಿರ್ಭಾವವೆಂಬುದುಂಟೆ? ಅಮಲೇಶ್ವರ ಲಿಂಗದಲ್ಲಿ ಸಂಗನಬಸವಣ್ಣಾ ನಿಮ್ಮ ಪಾದಕ್ಕೆ ನಮೋ ನಮೋ ಎಂಬೆನು ॥೫೨॥

ಹೀಗೆಂದು ಸ್ತೋತ್ರವಂ ಮಾಡಿದ ತದನಂತರದಲ್ಲಿ ಆ ಮಾರಯ್ಯ ಗಳು ತಮ್ಮ ಭಕ್ತಿ ಪ್ರಕಟವಾಯಿತ್ತೆಂದು ತಮ್ಮ ಲಿಂಗದಲ್ಲಿ ಐಕ್ಯವಾದ ಪ್ರಸ್ಥಾವದ ವಚನ ॥

ಚಂದ್ರಕಾಂತದ ಶಿಲೆಯಲ್ಲಿ ಬಿಂದು ಅಡಗಿದಂತೆ ಗೋವುಗಳಲ್ಲಿ ಗೋರೋಜನ ರಂಜಿಸುವಂತೆ, ಶಿಲೆ ಕಾಷ್ಠಂಗಳಲ್ಲಿ ಅನಲ ಅಡಗಿಪ್ಪಂತೆ ಸತ್ಯರ ಹೃದಯದಲ್ಲಿ ಮೌಕ್ತಿಕದ ಉದುಕದಂತೆ ಭಾವವಿಲ್ಲದೆ ಅಡಗಿದೆ ಅಮಲೇಶ್ವರ ಲಿಂಗದಲ್ಲಿ ॥೫೩॥

ಇಂತು ಆಯಿದಕ್ಕಿಯ ಮಾರಯ್ಯಗಳು ತಮ್ಮ ಲಿಂಗದಲ್ಲಿ ನಿರವ ಯುವನೈದಲು, ಆ ಮಾರಯ್ಯಗಳ ಸತಿ ತಮ್ಮ ಪತಿಯೊಡನೆ ಲಿಂಗೈಕ್ಯ ವಾದ ಪ್ರಸ್ಥಾವದ ವಚನ ॥

ಪ್ರಭುದೇವರು ಬಸವಣ್ಣ ಚನ್ನಬಸವಣ್ಣ ಮೊದಲಾದ ಸಕಲ ಪ್ರಮ ಥಗಣಂಗಳು ನೇಮನಿತ್ಯದ ಜಂಗಮಲಿಂಗ ಮುಂತಾದ ಸರ್ವ ಸಮೂ ಹಕ್ಕೆ ತ್ರಿಕರಣ ಶುದ್ಧವಾಗಿ ಭಾವದ ಭ್ರಮೆಯಡಗಿ ಜೀವ ವಿಕಾರ ನಿಂದು ಮಾಡುವ ಮಾಟ ಸಮಯದಿಂದ ಮಾರಯ್ಯಪ್ರಿಯ ಅಮಲೇಶ್ವರ ಲಿಂಗ ದಲ್ಲಿ ಐಕ್ಯ. ॥೫೪॥

ಇಂತೀ ಶ್ರೀಮತ್ಸಕಲ ಗಣ ಪುರಾತನರೊಳ್ ಪ್ರಭುದೇವರು ಮಹಾ ನುಭಾವ ಸದ್ಗೋಷ್ಠಿಯಂ ಮಾಡಿದ ಶೂನ್ಯಸಂಪಾದನೆಯೊಳ್ ಆಯಿದ ಕ್ಕಿಯ ಮಾರಯ್ಯಗಳ ಸಂಪಾದನೆಗಂ ದ್ವಾದಶೋಪದೇಶ ಸಮಾಪ್ತ.



# ಮೋಳಿಗೆ ಮಾರಯ್ಯಗಳ ಸಂಪಾದನೆ.

## ತ್ರಯೋದಶೋಪದೇಶ.



॥ಕಂದ॥ ಹೊನ್ನ ಜಾಳಿಗೆಗಳಂ ಬಸ। ವಣ್ಣ ನಿರ್ಥಕರೆಂದು ಇರಿಸಲ್ಕಾ ಮಾರ। ಯ್ಯಂ ನಗುತಜರಿದು ತರಕಂ। ಸ್ವರ್ಣದ ದಂಡಗಳನಿತ್ತದೆಂತೆನೆ ಪೇಳ್ವೆಂ ॥೧॥

ಅದೆಂತೆಂತೊಡಾ ಆಯಿದಕ್ಕಿಯ ಮಾರಯ್ಯಗಳು ಅವರ ಸತಿಯು ಲಿಂಗೈಕ್ಯವಾಗಲು, ಅವರ ಲಿಂಗೈಕ್ಯದ ಪರಮ ಸೌಖ್ಯವನು ಕಂಡು ಎಲ್ಲ ಗಣಂಗಳು ಸಂತೋಷಂಬಟ್ಟು, ಬಸವರಾಜ ದೇವರ ಮಹಾಮನೆಗೆಯ್ದಿ ಬಸವಣ್ಣ ಚನ್ನಬಸವಣ್ಣ ಪ್ರಭುದೇವರು ಸಿದ್ಧರಾಮಯ್ಯದೇವರು ಅಪ್ಪಣ್ಣಗಳು, ಸೊಡ್ಡಳಬಾಚರಸರು ಮೊದಲಾದ ಅಸಂಖ್ಯಾತ ಪ್ರಮಥಗಣಂಗಳೆಲ್ಲರು ಷಡುಸ್ಥಲಸ್ವರೂಪು ನಿರ್ಣಯ ಪ್ರಸಂಗ ಪರಿಣಾಮದ ಪರಮಾನಂದ ಪರಮಾಮೃತ ಶರಧಿಯೊಳಗೆ ಓಲಾಡುತ್ತಂ ಇರಲು, ಇತ್ತ ಮತ್ತೊರ್ವ ಮೋಳಿಗೆಯ ಮಾರಯ್ಯನೆಂಬ ಶರಣನು ಕಾಶ್ಮೀರ ದೇಶಾಧಿಪತಿತ್ವದಿಂದಿರ್ದು, ಅದಂ ತ್ಯಜಿಸಿ, ಸತಿಪತಿಗಳೀರ್ವರು ಕಲ್ಯಾಣಕ್ಕೆ ಬಂದು ಮೋಳಿಗೆಯ ಕಾಯಕಮಂ ಮಾಡಿಕೊಂಡು ಜಂಗಮಾರ್ಚನೆಯ ಮಾಡುತ್ತಿರೆ ಬಸವರಾಜದೇವರ ಗೃಹದಲ್ಲಿ ಇಚ್ಛಾಪದಾರ್ಥಮಂ ಷಡುರುಚಿಯಂ ಸ್ವೀಕರಿಸಿದ ಜಂಗಮಮೂರ್ತಿಗಳು ಆ ಮೋಳಿಗೆಯ್ಯನ ಗೃಹಕ್ಕೆ ಬಂದು, ಅಂಬಕಳಮಂ ಸ್ವೀಕರಿಸಿ, ಆ ಬಸವರಾಜದೇವರ ಗೃಹಕ್ಕೆ ಹೋಗಿ ಅತಿಶಯದಿಂ ಕೊಂಡಾಡಿ ಹೇಳುತ್ತಿರೆ ಬಸವರಾಜದೇವರು ಮೋಳಿಗೆಯ್ಯಗಳ ಸ್ತುತಿಸಿದ ವಚನ. ॥

ನಿಷ್ಠೆಯಿಂದಲಿ ಲಿಂಗವ ಪೂಜಿಸಿ, ಮತ್ತೊಂದು ಪಥವನರಿಯದ ಶರಣರು ಸರ್ಪನ ಹೆಡೆಯ ಮಾಣಿಕ್ಯದಂತಿಪ್ಪರು ಭೂಷಣವಾಗಿ. ದರ್ಪಣದೊಳಗಣ ಪ್ರತಿಬಿಂಬದಂತೆ ಹಿಂಗದಿಪ್ಪರು ಕೂಡಲ ಸಂಗಮದೇವ ನಿಮ್ಮ ಶರಣರು. ॥೧॥

ಮತ್ತಂ॥ ಮೆಬಸವರಾಜದೇವರು ಮೋಳಿಗೆಯ್ಯಗಳ ಗೃಹಕ್ಕಂ ಪೋಗಬೇಕೆಂದು ಎರಡು ಜಾಳಿಗೆಯ ಹೊನ್ನಂ ಕೊಂಡು ಬಂದು ಅವರಂಗ

ಳದಲ್ಲಿ ನಿಂದು ಇಂಥಾ ಭಕ್ತರ ಮನೆಯಲ್ಲಿ ಅನ್ನೋದಕಂಗಳ ಬೇಡಿ ತೆಗೆದುಕೊಂಡು ಸ್ವೀಕರಿಸಿದರೆ ಸಮಸ್ತ ಪಾಪ ಕ್ಷಯವೆಂದು ಕೊಂಡಾಡಿದ ಪ್ರಸ್ತಾವದ ವಚನ. ॥

ಉಪಪಾತಕ ಮಹಾಪಾತಕಮಂ ಮಾಡಿದವನು ಸದ್ಭಕ್ತರ ಮನೆಗೆ ಹೋಗಿ ಅವರೊಕ್ಕ ಪ್ರಸಾದವನಾಯ್ದುಕೊಂಡುಂಡಡೆ ಸಕಲ ಬ್ರಹ್ಮಹತ್ಯಾದಿ ಪಾತಕ ಪರಿಹಾರ. ಒಮ್ಮೆ ಬೇಡಿಕೊಂಡುಂಡಡೆ ಪಾತಕೇಷು ಮನಂ ಪ್ರಪ್ತಿ, ಶಿವಭಕ್ತ ಗೃಹಂ ವ್ರಜೇತ್। ಯಾಚಕತ್ವಂ ನಮಾವೃತಂ। ತದ್ಗ್ರಾಹೆ ಜಲಂ ಪಿಬೇತ್।" ಇದು ಕಾರಣ ಕೂಡಲಸಂಗಮದೇವ ನಿಮ್ಮ ಸದ್ಭಕ್ತರಿಗೆ ನಮೋ ನಮೋ ಎಂಬೆನು. ॥೨॥

ಹೀಗೆಂದು ಬಸವರಾಜದೇವರು ಅವರವರ ಗೃಹಕ್ಕಂ ಪೋಗಲು, ಆ ಮೋಳಿಗೆಯ್ಯಗಳ ಸತಿಯು ಪಾದಾರ್ಚನೆಗೆ ಅಗ್ಗವಣಿಯಂ ಕೊಟ್ಟು ಲಿಂಗಾರ್ಚನೆಯಂ ಮಾಡಿಸಿ ತಮ್ಮ ಗೃಹದಲ್ಲಿರ್ದ ಪದಾರ್ಥಮಂ ನೀಡಲು, ಲಿಂಗಾರ್ಪಿತಮಂ ಮಾಡಿ ಬರುವಲ್ಲಿ ಎರಡು ಜಾಳಿಗೆಯ ಹೊನ್ನನು ಮಜ್ಜನಸಾಲೆಯ ಮರೆಯಲ್ಲಿರಿಸಲು, ಇತ್ತಾ ಮೋಳಿಗೆಯ ಮಾರಿತಂದೆಗಳು ಕಟ್ಟಿಗೆಗಳಂ ಕೊಂಡು ಬಂದು ಪಾದಾರ್ಚನೆಯಂ ಮಾಡಿಕೊಂಡು ಶಿವಾರ್ಚನೆಯಂ ಮಾಡುವಲ್ಲಿ ಆ ಜಾಳಿಗೆಯ ಹೊನ್ನಂ ಕಂಡು, ಇಲ್ಲಿ ಬಂದಿದ್ದವರಾರೆಂದು ತಮ್ಮ ಸತಿಯ ಕೇಳಲು, ಒಬ್ಬ ಭಕ್ತರು ಬಂದು ಲಿಂಗಾರ್ಚನೆಯಂ ಮಾಡಿ ಹೋದರು ಎನಲು, ನಾವು ಬಡವರೆಂದು ಬಸವಣ್ಣನು ಗರ್ವದಿಂದೆ ಜಾಳಿಗೆಯ ಹೊನ್ನ ಮಡಿಗಿ ಹೋದನೆಂದು ಕನಲಿ ಜರಿವ ಪ್ರಸ್ತಾವದ ವಚನ. ॥

ಗುರುಲಿಂಗಜಂಗಮಕ್ಕೆ ತನುಮನಧನವೆಶವದು ದೃಢವಿಲ್ಲದೆ ಪೊಡಪಿಯ ಜನಂಗಳು ಮೆಚ್ಚಬೇಕೆಂದು ಮೃಡನ ಭಕ್ತರಿಗೆ ನರೆ ನಿಚ್ಚಟಿಯುಂಟೆ? ಆಹುದೆನಿಸಿಕೊಂಡಿಹೆನೆಂಬ ಧಳರಾಣಿಯ ಚೋರರಿಗೆ ಎಲ್ಲಿಹುದೋ ನಿಜಭಕ್ತಿ ನಿಃ ಕಳಂಕಮಲ್ಲಿಕಾರ್ಜುನ? ॥೩॥

ಮತ್ತಂ॥ ಆತ್ಮತ್ರೇಜವ ಬಿಟ್ಟಾಗಲಿ ಗುರುವನರಿವ. ಮನ ವಿಕಾರವ ಬಿಟ್ಟಾಗಲೆ ಲಿಂಗವನರಿವ, ಧನವಿಕಾರವ ಬಿಟ್ಟಾಗಲೆ ಜಂಗಮವನರಿದವ ಇಂತೀ ತ್ರಿವಿಧ ನಾಸ್ತಿಯಾದಂಗಲ್ಲದೆ, ನಿಃಕಳಂಕಮಲ್ಲಿಕಾರ್ಜುನನಲ್ಲಿ ಸಹಜಭಕ್ತನಲ್ಲಾ. ॥೪॥

ಮತ್ತಂ॥ ಅರ್ಚನೆಯುಲರ್ಚಿಸಿದಲ್ಲಿ ಪುಣ್ಯದಫಲಂ. ಭಕ್ತಿಯಿಂ ದ್ರವ್ಯವ ಕುಡುವುದು ಮುಕ್ತಿ. ಲೋಕದೊಳಗು ಈ ಉಭಯದ ಬಿತ್ತಿಯನರಿದು ನಿತ್ಯವ ತಿಳಿದವಂಗೆ ಏನು ಎನಲಿಲ್ಲ ನಿಃಕಳಂಕಮಲ್ಲಿಕಾರ್ಜುನ. ॥೫

ಇಂತು ತಾನೆ ಧನಿಕನೆಂದು ಆತ್ಮತೇಜದಿಂ ಭಕ್ತಿಯಂ ಮಾಡಿದಡೆ ಫಲಪದಕ್ಕೆ ಕಾರಣವಲ್ಲದೆ ಸಹಜವಲ್ಲೆಂದು ಜರಿದು ಆ ಎರಡು ಜಾಳಿಗೆಯ ಹೊನ್ನನು ಈರ್ವರು ಚರಮೂರ್ತಿಗಳಿಗೆ ಸಮರ್ಪಿಸಿ, ಬಸವಣ್ಣನ ಗೃಹಕ್ಕಂ ಪೋಗಿ. ಲಕ್ಷದ ಮೇಲೆ ತೊಂಭತ್ತಾರು ಸಾವಿರ ಜಂಗಮದೇವರುಗಳಂ ಬಿಜಯಂಗೈಸಿ ತಂದು, ಅವರಿಗೆ ಇಚ್ಛಾಪದಾರ್ಥವಂ ನೀಡಿ. ತೃಪ್ತಿಬಡಿಸಿ ತಾವು ತಂದಕಟ್ಟಿಗೆಯ ಸರಬಗಳ ಮೇಲೆ ಪಾದಾರ್ಚನೆಯುದಕಮಂ ತಳಿದು, ಸುವರ್ಣದಂಡಂಗಳಂ ಮಾಡಿ, ಎಲ್ಲ ಜಂಗಮದೇವರುಗಳಿಗೆ ಒಂದೊಂದು ಕುಡಲು, ಅವರು ಬಸರಾಜದೇವರ ಗೃಹಕ್ಕಂ ಬರಲು, ಆ ಬಸವರಾಜದೇವರು ಈ ಸುವರ್ಣದ ದಂಡಂಗಳಂ ಇವೆಲ್ಲಿಯವೆಂದು ಕೇಳಲು, ಮೊಳಿಗೆಯ ಮಾರಯ್ಯಗಳು ಕೊಟ್ಟರೆಂದು ಹೇಳಿ ಆ ಬಸವರಾಜದೇವರು ಇಂತಹ ನಿರಾಶಾ ಮಹಾತ್ಮರೆಂದರಿಯದೆ ಇದ್ದೆನಲಾ ಎಂದು ಭೀತಿಯಿಂ ನುಡಿವ ಪ್ರಸ್ಥಾವದ ವಚನ॥

ಧನದಲ್ಲಿ ಶುಚಿ ಪ್ರಾಣದಲ್ಲಿ ನಿರ್ಭಯ ಇದಾರಿಂಗಳವಡವುದೈಯ್ಯ? ನಿಧಾನ ತಪ್ಪಿ ಬಂದರೆ ಒಲ್ಲೆನೆಂಬವರಿಲ್ಲ. ಪ್ರಮಾದವಶದಿಂ ಬಂದರೆ ಹುಸಿಯನೆಂಬವರಿಲ್ಲ. ನಿರಾಶೆ ನಿರ್ಭಯ ಕೂಡಲಸಂಗಮದೇವ ನೀನೊಲಿದ ಶರಣಂಗಲ್ಲದಿಲ್ಲ. ॥೬॥

ಹೀಗೆಂದು ಬಸವರಾಜದೇವರು ಅನುತಾಪಂಬಟ್ಟು ಚನ್ನಬಸವರಾಜದೇವರು ಹಡಪವಪ್ಪಣ್ಣಗಳು ಸಿದ್ಧರಾಮಯ್ಯತಂದೆಗಳು ಮುಖ್ಯವಾದ ಶರಣರುಗಳು ಸಹವಾಗಿ ಬಂದು ಅಷ್ಟಾಂಗ ದಂಡ ಪ್ರಣತರಾಗಿ ದೈನ್ಯದಿಂ ಬಿನ್ನೈಸುವ ಪ್ರಸ್ಥಾವದ ವಚನ॥

ಭಕ್ತಿ ವಿಶೇಷವ ಮಾಡುವರೆ ಹತ್ತು ಜೆರಳುಂಟು. ಹಾಸಿದುಡಿದರೆ ತನಗುಂಟು. ತನ್ನ ಪ್ರಮಥರಿಗುಂಟು. ಮೋಳಿಗೆಯ ಮಾರಿತಂದೆಗಳಂತೆ ನನಗೇಕಹುದಯ್ಯ? ರತ್ನದ ಸಂಕೊಲೆಯನಿಕ್ಕಿ ಕಾಡಿಹನಯ್ಯ, ಕೂಡಲ ಸಂಗಮದೇವ ಶಿವಧೋ ಶಿವಧೋ ॥೭॥

ಮತ್ತಂ॥ ಮನೆಯ ನೋಡಾ ಬಡವರು, ಮನವ ನೋಡಾ ಧೀರರು ಸೋಂಕಿನಲ್ಲಿ ಶುಚಿಗಳು. ಸರ್ವಾಂಗ ಕರರು. ಧಿ ಪಸಾರವ ನೋಡಿದಡೇನು ಇಲ್ಲ. ಸಮಯೋಚಿಸತಕ್ಕೆ ಸಕಲ ಪದಾರ್ಥ ಬಂದಿಹುದು ಕೂಡಲಸಂಗಮದೇವ ನಿಮ್ಮ ಶರಣ ಸರ್ವಾಂಗಧೀರ ಮೋಳಿಗೆಯ ಮಾರಿತಂದೆ ॥೮॥

ಹೀಗೆಂದು ಬಸವರಾಜ ದೇವರು ದೈನ್ಯದಿಂ ಬಿನ್ನೈಸುತ್ತಿರೆ, ಆ ಮೋಳಿಗೆಯ ಮಾರಿತಂದೆಗಳು ಭಕ್ತಿಯಿಂದ ಫಲಪದವ ಪಡೆದವರಿಗೆ ಭವ ಉಂಟು. ಫಲಪದ ವಿರಹಿತ ಚನ್ನಬಸವಣ್ಣನೆಂದು ನುಡಿದ ಪ್ರಸ್ಥಾವದ ವಚನ ॥

ಬಸವಣ್ಣ ಮೊದಲಾದ ಮಹಾ ಭಕ್ತರೆಲ್ಲರು ಕಂಡರಯ್ಯ. ಮಹಾ ಕೈಲಾಸವೆಂಬ ಬೆಳ್ಳಿಯ ಬೆಟ್ಟವನೇರಿ ಒಳ್ಳಿಹ ಪದವಲ್ಲಿ ತಲ್ಲೀಯರಾದಿಹೆವೆಂದು ಬಲ್ಲ ತನವ ಮುಚ್ಚಿ ಇರಲಾಗಿ, ಬೆಳ್ಳಿಯ ಬೆಟ್ಟ ಕಲ್ಲೋಲವಾಗಲಾಗಿ ಅಲ್ಲಿದ್ದವರನೆಲ್ಲಿಯೂ ಕಾಣೆ, ಇವರಿಗಿನ್ನೆಲ್ಲಿಯ ಮುಕ್ತಿ? ಬಲ್ಲಿಯ ನಡದುಗ ಮೇಲಿಹ ಪಶುವಿನಂತೆ ಇವರೆಲ್ಲರು ಬಲ್ಲಹರೆ ಬಲ್ಲಹ ನಮ್ಮ ಚನ್ನಬಸವಣ್ಣನಲ್ಲದೆ? ಇವರೆಲ್ಲರನೊಲ್ಲೆನೆಂದೆ. ಬಲ್ಲಹರ ಬಲ್ಲಹನೆ ನಿಃಕಳಂಕಮಲ್ಲಿಕಾರ್ಜುನ ॥೯॥

ಹೀಗೆಂದು ಮೋಳಿಗೆಯ ಮಾರಿತಂದೆಗಳು ನಿರೂಪಿಸಲು ಚನ್ನಬಸವರಾಜದೇವರು ಸಮಸ್ತದೇಹಿಗಳಿಗೆ ಭೋಗ ಲಕ್ಷ್ಮಿಯಾಗಿರ್ದ ದ್ರವ್ಯವ ಶಿವಶರಣರ ಗೃಹದಲ್ಲಿ ಇರಿಸಬಹುದೇ ಎಂದು ಬಸವರಾಜದೇವರ ನುಡಿದು ಆ ಮೋಳಿಗೆಯ ಮಾರಿತಂದೆಗಳಿಗೆ ನಮಸ್ಕರಿಸಿದ ಪ್ರಸ್ಥಾವದ ವಚನ॥

ಹಸಿವು ತೃಷೆವಿಷಯವೆಂಬ ಕರ್ಮಂಗಳನೇ ಕಂಡು ಪರಿಣಾಮವೆಂಬ ಕೊಡಲೆಯಲ್ಲಿ ತತ್ತರದರಿದು ಕಾಮ ಕ್ರೋಧ ಲೋಭ ಮೋಹ ಮದ ಮತ್ಸರಂಗಳ ತರಿದೊಟ್ಟಿದ ನೊಂದೆಡೆಯಲ್ಲಿ. ಪಂಚೇಂದ್ರಿಯ ಷಡುವರ್ಗ ಸಪ್ತಧಾತು ಅಷ್ಟಮದವೆಂಬ ಬಳ್ಳಿಯ ಸೀಳಿ ಏಳುಕಟ್ಟಿನ ಮೋಳಿಗೆಯನೆ ಹೊತ್ತು ನಡದನಯ್ಯ. ಆಸೆ ಆಮಿಷ ತಾಮಸವೆಂಬ ತುರುವನೇರಿ ಆ ತುರದ ತುರವ ಕಳೆದನಯ್ಯ. ಈ ಮಹಾ ಮಹಿಮರಿಗೆ ಜಗದ ಜತ್ತಿಗೆಯ ಹಾದರಗಿತ್ತಿಯ ಹದಿನೆಂಟು ಜಾತಿಯ ಮನೆಯಲ್ಲಿ ತೊತ್ತಾಗಿ ಹುಟ್ಟಿದ ಶಿವದ್ರೋಹಿಯ ಲಿಂಗವಂತರ ಮನೆಯ ಹೊಗಿಸುವರೇ ಎಲೆ ಲಿಂಗ ತಂದೆ ಜಂಜಡವಿಡಿದು ಕೆಟ್ಟೆನೆಂದು ಭಕ್ತಿಯ ಕುಳವನರಿಯದೆ? ಎಲೆ ಲಿಂಗಾದಾಜ್ಞಾ ಧಾರಕ ಎಲೆ ಲಿಂಗ ಸನುಮತ ಎಲೆ

ಲಿಂಗ ಏಕೋ ಪ್ರತಿಗ್ರಾಹಕ ಕೂಡಲ ಚನ್ನಸಂಗನಲ್ಲಿ ಮೋಳಿಗೆಯ ಮಾರಿತಂದೆಗಳ ಶ್ರೀ ಪಾದಕ್ಕೆ ನಮೋ ನಮೋ ಜಯಜಯತು ॥೧೦॥

ಹೀಗೆಂದು ಚನ್ನ ಬಸವರಾಜದೇವರು ಬಸವರಾಜದೇವರ ನುಡಿದು ಆ ಮೋಳಿಗೆಯ ಮಾರಿತಂದೆಗಳ ಸ್ತುತಿಸಲು, ಆ ಮೋಳಿಗೆಯ ಮಾರಿತಂದೆಗಳು ಅರಿವು ಮರವೆಯಿಂ ಮಾಡುವ ಭಕ್ತಿ ಸ್ಥಿರವಲ್ಲನೆಂದು ಚನ್ನಬಸವ ರಾಜದೇವರಿಗೆ ನಮಸ್ಕಾರವಂ ಮಾಡುವ ಪ್ರಸ್ಥಾವದ ವಚನ॥

ಅರಿದು ಮಾಡುವ ಮಾಟ ಮರವಿಂಗೆ ಬೀಜವೆಂಬೆ. ಅದಕ್ಕೆ ಮರೆದರಿವುಡೆ ತಪ್ಪದು. ಆ ಅರಿವಿನ ಭೇದವೆತ್ತಿದ ದೀಪದ ಬೆಳಗಿನಂತೆ ಅರಿದು ಮರೆಯದೆ ಇಂತೀ ಅರಿಕೆಯಲ್ಲಿ ಮಾಡುವವನ ಅರಿವು ಹೊತ್ತದ ದೀಪದ ನಿಶ್ಚಯದಂತೆ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ಚನ್ನಬಸವಣ್ಣಂಗೆ ನಮೋ ನಮೋ ಎನುತಿರ್ದೆನು. ॥೧೧॥

ಇಂತೀ ಮೋಳಿಗೆಯ ಮಾರಿತಂದೆಗಳು ಚನ್ನಬಸವಣ್ಣಂಗೆ ನಮಸ್ಕರಿಸಿ ಇನ್ನು ಕಂಡು ಕೇಳಿ ಅರಿದು ಭಕ್ತಿಯ ಮಾಡಿಹೆನೆಂಬಾಗ ಮುಂದಕ್ಕೆ ನಿಶ್ಚಯವಲ್ಲವೆಂದು ನಿರೂಪಿಸಿದ ಪ್ರಸ್ಥಾವದ ವಚನ. ॥

ಇನ್ನು ಕೇಳಿ ಅರಿದಿಹೆನೆಂಬಾಗ ಮುಂದಕೆ ಮರವೆಯೆ? ಮುಂದನರಿದು ಹಿಂದೆ ಮರೆವಾಗ ಭೂತಕಾಯವೇ ? ಹಿಂದಕ್ಕು ಮುಂದಕ್ಕು ಈ ದ್ವಂದ್ವದ ಭೇದವ ಇದರಂದವ ಹೇಳಾ ನಿಃಕಳಂಕ ಮಲ್ಲಿಕಾರ್ಜುನ॥೧೨॥

ಮತ್ತಂ॥ ಅರಿದಿಹೆ ಅರಿದಿಹೆನೆಂದು ಹೊರಹೊಮ್ಮುವಾಗ ಕಾಯ ಮರುಜೀವಣಿಯೆ ? ಮಹಾ ಪ್ರಳಯಕ್ಕೆ ಹೊರಗಾದ ಶ್ರವಣವೆ ಅವತಾರಕ್ಕೆ ಹೊರಗಾದ ನಿರಂಗವೆ ಅಸಗ ನೀರಡಿಸಿ ಸತ್ತಂತಾಯಿತ್ತು. ಇವನಿರವು ನಿಃಕಳಂಕ ಮಲ್ಲಿಕಾರ್ಜುನ ॥೧೩॥

ಮತ್ತಂ॥ ಬಯಲು ಬತ್ತಲೆಯಾದಡೆ ಹೊದಿಸುವರಿನ್ನಾರು? ಏರಿ ನೀರು ಕುಡಿದರೆ ಬಿಡಿಸುವರಿನ್ನಾರು ? ಮಹಾಮೇರುವು ನಡೆದರೆ ಪಥ ಕೆಂಬುಗೊಡುವವರಾರು ? ಅರಿದವ ಮರೆದವನಾದಡೆ ಅರಿಕೆಯ ಹೇಳುವರಾರು ? ನಿಮ್ಮ ನಿಜವ ನೀವೆ ಬಲ್ಲಿರಿ ನಾನಂಜುವೆ ನಿಃಕಳಂಕ ಮಲ್ಲಿಕಾರ್ಜುನ ॥೪೧॥

ಹಿಗೆಂದು ಮೋಳಿಗೆಯ ಮಾರಿತಂದೆಗಳು ನುಡಿಯಲು, ಆ ಬಸವರಾಜದೇವರು ಸಮಸ್ತ ಪದಾರ್ಥವನೊಪ್ಪಿಸಿದಲ್ಲಿ ಭಕ್ತನಲ್ಲ. ನಿಮ್ಮ ಮನವ

ನಿಮಗೊಪ್ಪಿಸಿ ಶುದ್ಧನೆಂದು ನಿರಹಂಭಾವದಿಂದೆ ನುಡಿದ ಪ್ರಸ್ಥಾವದ ವಚನ॥

ಅರ್ಥ ಪ್ರಾಣಾಭಿಮಾನವನೊಪ್ಪಿಸಿದಲ್ಲಿ ಭಕ್ತನೆ? ಅಲ್ಲ. ಆದಿ ರುದ್ರನ ಮಗಳು ಆದಿಶಕ್ತಿ, ಆದಿಶಕ್ತಿಯ ಮಗ ವಿಷ್ಣು, ವಿಷ್ಣುವಿನ ಅರ್ಧಾಂಗಿ ಲಕ್ಷ್ಮಿ. ಈ ತೊತ್ತಿನ ತೊತ್ತಿನ ಪಡಿಪೊತ್ತನೊಪ್ಪಿಸಿದಲ್ಲಿ ಭಕ್ತನಪ್ಪನೆ? ಅಲ್ಲ. ಎನ್ನ ಮನದೊಡೆಯ ಮಹಾದೇವ ನಿಮ್ಮ ಮನವ ನಿಮಗೊಪ್ಪಿಸಿ ನಾನು ಶುದ್ಧ ಕಾಣಾ ಕೂಡಲಸಂಗಮದೇವಾ ॥೧೫॥

ಹೀಗೆಂದು ಬಸವರಾಜದೇವರು ಬಿನ್ನೈಸಲು, ಆ ಮೋಳಿಗೆಯ ಮಾರಿ ತಂದೆಗಳು ಪ್ರಸನ್ನಮುಖರಾಗಿ ಸ್ತೋತ್ರಮಂ ಮಾಡಿದ ಪ್ರಸ್ಥಾವದ ವಚನ॥

ಎನ್ನ ಚಿತ್ತಕ್ಕೆ ನಕಾರವಾಗಿ ಬಂದೆಯಯ್ಯ ಬಸವಣ್ಣ. ಎನ್ನ ಬುದ್ಧಿಗೆ ಮಕಾರವಾಗಿ ಬಂದೆಯಯ್ಯ ಬಸವಣ್ಣ. ಎನ್ನ ಅಹಂಕಾರಕ್ಕೆ ಶಿಕಾರವಾಗಿ ಬಂದೆಯಯ್ಯ ಬಸವಣ್ಣ. ಎನ್ನ ಮನಕ್ಕೆ ವಕಾರವಾಗಿ ಬಂದೆಯಯ್ಯ ಬಸವಣ್ಣ. ಎನ್ನ ಜ್ಞಾನಕ್ಕೆ ಯಕಾರವಾಗಿ ಬಂದೆಯಯ್ಯ ಬಸವಣ್ಣ. ಎನ್ನ ಮತಿಗೆ ಓಂಕಾರವಾಗಿ ಬಂದೆಯಯ್ಯ ಬಸವಣ್ಣ. ಎನ್ನ ನಾದಕ್ಕೆ ಅಕಾರವಾಗಿ ಬಂದೆಯಯ್ಯ ಬಸವಣ್ಣ. ಎನ್ನ ಬಿಂದುವಿಗೆ ಉಕಾರವಾಗಿ ಬಂದೆಯಯ್ಯ ಬಸವಣ್ಣ. ಎನ್ನ ಕಳೆಗೆ ಮಕಾರವಾಗಿ ಬಂದೆಯಯ್ಯ ಬಸವಣ್ಣ. ಎನ್ನ ಭವವ ಕೊಂದಿಹೆನೆಂದು ಬಂದೆಯಯ್ಯ ಬಸವಣ್ಣ. ಎನ್ನ ಶಕ್ತಿಗೆ ಸಕಾರವಾಗಿ ಬಂದೆಯಯ್ಯ ಬಸವಣ್ಣ. ಎನ್ನ ವಚಸ್ಸಿಗೆ ವಕಾರವಾಗಿ ಬಂದೆಯಯ್ಯ ಬಸವಣ್ಣ. ಇಂತಪ್ಪ ಮಹಾ ಪ್ರಣವಂಗಳೆ ಬಸವಣ್ಣನಾಗಿ ಆ ಬಸವಣ್ಣನೆ ಮಹಾ ಪ್ರಣವಂಗಳಾಗಿ ತನ್ನ ಮಠಕ್ಕೆ ತಾನೆ ಬಂದು ಭಕ್ತಿ ಪಸ್ತುವಸಿತ್ತಡೆ ಇವ ನಾನೂ ನಿಃಕಳಂಕ ಮಲ್ಲಿಕಾರ್ಜುನನ ಭಕ್ತರಿಗಿತ್ತು ಬದುಕಿದೆನಯ್ಯ ॥೧೬॥

ಇಂತು ಮೋಳಿಗೆಯ ಮಾರಿತಂದೆಗಳು ಬಸವರಾಜದೇವರ ಸ್ತೋತ್ರಮಂ ಮಾಡುತ್ತಿರಲು, ಆ ಪ್ರಸ್ಥಾವದೊಳು ಸಿದ್ಧರಾಮಯ್ಯದೇವರು ಆ ಮೋಳಿಗೆಯ ಮಾರಿತಂದೆಗಳ ಸ್ತೋತ್ರಮಂ ಮಾಡಿದ ಪ್ರಸ್ಥಾವದ ವಚನ॥

ಮೊರು ಕಟ್ಟಿಗೆಯನು ಮೂಯೂರಲಿರಿಸಿದನು. ನಿಃಪತಿಯಾದ ಲಿಂಗದಲ್ಲಿ ಆರೂಢ. ಅಂಗುಲದೊಳಗೆ ಆರುವೆರಳನಿರಿಸಿದನು. ಧೀರ ಮೋಳಿಗೆಯ ಮಾರ ಶರಣು ಶರಣು. ಆರೂಢ ದಶಗಳ ಭೇದವನರಿದಂತೆ ತೋರಿದ. ಶರಣೆಂದೆನಯ್ಯ ಕಪಿಲಸಿದ್ಧಮಲ್ಲಿಕಾರ್ಜುನ.॥೧೭॥

ಇಂತು ಬಸವರಾಜದೇವರು ಚನ್ನಬಸವರಾಜದೇವರು ಸಿದ್ಧರಾಮಯ್ಯದೇವರು ಮೋಳಿಗೆಯ ಮಾರಿತಂದೆಗಳೊಡನೆ ಮಹಾನುಭಾವ ಸದ್ಗೋಷ್ಠಿಯಂ ಮಾಡಿ ತಮ್ಮ ಗೃಹಕ್ಕೆ ಬಿಜಯಂಗೈಯ್ಯಲು, ಇತ್ತ ಮೋಳಿಗೆಯ ಮಾರಿತಂದೆಗಳು ಲಿಂಗೈಕ್ಯವಾದಿಹೆನೆಂಬ ಆತುರದಿಂ ನುಡಿದ ಪ್ರಸ್ಥಾವದ ವಚನ॥

ಓಂ ಎಂದಲ್ಲಿ ನಿರಾಕಾರವಾದೆಯಲ್ಲ. ಓಂ ಎಂದಲ್ಲಿ ಸಾಕಾರ ವಸ್ತುವಾದೆಯಲ್ಲ. ತತ್ವಮಸಿ ಎಂದಲ್ಲಿ ತತ್ವರೂಪಾಗಿ ಜಗವ ರಕ್ಷಿಸಿಹೆನೆಂದು ಕರ್ತೃ ರೂಪಾದೆಯಲ್ಲ. ನಿಮಗೆ ಮರ್ತ್ಯದ ಮಣಿಯದಲ್ಲಿಹ ಪರಿಯಂತರ ಎನಗೆ ಕಟ್ಟು ಗುತ್ತಿಗೆಯನಾ ಕಟ್ಟಿಗೆಯ ಹೊತ್ತು ಶಿವಭಕ್ತರ ಮನೆಗೆ ನೀವು ಕೊಟ್ಟ ಕಾಯಕದ ಕೃತ್ಯ ಇನ್ನೆಷ್ಟು ದಿನ ಹೇಳಾ ನಿಃಕಳಂಕಮಲ್ಲಿಕಾರ್ಜುನ॥೧೮॥

ಮತ್ತಂ ಊರ ಕೆಟ್ಟು ಸೂರೆಯಾಡುವಲ್ಲಿ ಆರಿಗಾರು ಇಲ್ಲ. ಬಸವಣ್ಣ ಸಂಗಮಕ್ಕೆ ಚನ್ನಬಸವಣ್ಣ ಉಳವಿಗೆ ಪ್ರಭು ಕದಳಿಗೆ ಮಿಕ್ಕಾದ ಪ್ರಮಥರೆಲ್ಲರು ತಮ್ಮ ತಮ್ಮ ಲಕ್ಷ ಭಾವಕ್ಕೆ ಮುಕ್ತಿಯನೈದಿಹರು. ಎನಗೊಂದು ಬಟ್ಟೆಯ ಹೇಳಾ ನಿಃಕಳಂಕ ಮಲ್ಲಿಕಾರ್ಜುನ ॥೧೯॥

ಮತ್ತಂ॥ ಕಾಯ ಸಮಾಧಿಯನೊಲ್ಲೆ. ಜೀವನೆನಹು ಸಮಾಧಿಯನೊಲ್ಲೆ. ಕೈಲಾಸವೆಂಬ ಭವಸಾಗರವನೊಲ್ಲೆ. ನೀ ಎನ್ನ ಅಲ್ಲಿಗೆ ಇಲ್ಲಿಗೆ ಎಳೆಯದೆ ನಿನ್ನಲ್ಲಿ ಕೂಟಸ್ಥನ ಮಾಡಾ ನಿಃಕಳಂಕ ಮಲ್ಲಿಕಾರ್ಜುನಾ ॥೨೦॥

ಮತ್ತಂ॥ ಎನಗೆ ನೀನಿಂಬುಗೊಡುವಲ್ಲಿ ಸಕಲವ ಪ್ರಮಾಣಿಸುವದ ಬಿಟ್ಟು ನಿಃಕಲ ವಸ್ತುವಾಗು. ಶಕ್ತಿ ಸಮೇತವ ಬಿಟ್ಟು ನಿಃಶಕ್ತಿಯ ನಿರ್ಲೇಪನಾಗು. ಚಿತ್ತವ ನೋಡಿಹಿನೆಂಬ ಹೆಚ್ಚು ಕುಂದವ ಬಿಟ್ಟು ನಿಶ್ಚಿಂತನಾಗು ಅಂದು ಮಿಕ್ಕಾದ ಭಕ್ತರ ಗುಣವ ನೋಡಿಹೆನೆಂದು ತೊಟ್ಟ ಠಕ್ಕು ಠಮುಳವ ಬಿಟ್ಟು ಸರ್ವರಾಗ ವಿರಾಗನಾಗಿ ಸರ್ವಗುಣ ಸಂಪನ್ನನಾಗಿ ಜ್ಞಾನಸಿಂಧು ಸಂಪೂರ್ಣವಾಗಿ ನಿನ್ನರಿವಿನ ಗುಡಿಯ ಬಾಗಿಲವ ತೆರದೊಮ್ಮೆ ತೋರಾ.

ಎನ್ನಡಿಗೆ ನಿನ್ನಗುಡಿಯ ಸಂಬಂಧವ ನೋಡಿಹೆ. ಇವಕ್ಕೆ ಗನ್ನ ಬೇಡ ಚನ್ನ ಜೋ ನಿಃಕಳಂಕ ಮಲ್ಲಿಕಾರ್ಜುನ ॥೨೧॥

ನಿನ್ನನರಿದವುಕ್ಕೆ ಹೆಣ್ಣು ಹೊನ್ನು ಮಣ್ಣೆಂಬ ತೊರೆಯ ಹಾಯ ಬೇಕು. ಆ ಪೂರನರಿವಲ್ಲಿ ಮರೆದು ಹಿಡಿವಲ್ಲಿ ಅರಿದು ಬಿಡುವಲ್ಲಿ ಆ ಉಭಯದ ಒಡಲ ಹರಿದು ತೋರಿಕೆ ನಷ್ಟವಾಗಿ ನಿಂದವಂಗಲ್ಲದೆ ನಿನ್ನ ಚರಣದ ಬಾಗಿಲ ಬಾದಳವನೇರಬಾರದು. ಅದಕ್ಕೆ ಸನ್ನೆಗಟ್ಟೆಗೆಯೆ ಚನ್ನ ನಿಃಕಳಂಕ ಮಲ್ಲಿಕಾರ್ಜುನ ॥೨೧॥

ಹೀಗೆಂದು ಮೋಳಿಗೆಯ ಮಾರಿತಂದೆಗಳು ಲಿಂಗೈಕ್ಯವಾದಿಹೆನೆಂದು ಅವಸ್ಥೆಯಂ ನುಡಿಯಲು ಆ ಪ್ರಸ್ಥಾಪದೊಳು ಇವರ ಪುಣ್ಯಾಂಗನೆ ಮಹಾದೇವಿಯಮ್ಮನು ಇನ್ನು ಭಿನ್ನವಾಗಿ ಲಿಂಗೈಕ್ಯವಾದಿಹೆನೆಂಬಾಗ ಮುನ್ನ ಲಿಂಗದಲ್ಲಿ ಏಕಾರ್ಥವಿಲ್ಲವೇ ಎಂದು ನುಡಿದ ಪ್ರಸ್ಥಾವದ ವಚನ॥

ಅದೇತಕ್ಕೆಯ್ಯ ಶಿವನೊಳಗೆ ಕೂಟಸ್ಥವಾದಿಹೆನೆಂಬ ಬಲು ಬೇಟ? ಇದು ಭಕ್ತಿ ಸತ್ಯದ ಆಟವಲ್ಲ. ಇನ್ನಾರ ಕೇಳಿ ಮತ್ತಿನ್ನಾರಿಗೆ ಹೇಳಿ ನೀ ಮಾಡುವ ಮಾಟ ಮುನ್ನ ನೀನಾರೆಂದಿದ್ದೆ ಹೇಳಾ? ಆ ಭಾವನರಿದು ನಿನ್ನ ನೀನೆ ತಿಳಿ. ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ ॥೨೩॥

ಮತಂ॥ ಕಾಷ್ಠವ ಸುವರ್ಣವ ಮಾಡಿಹೆನೆಂಬ ಘಾತಕತನವೆ ನಿಮ್ಮ ಭಕ್ತಿ? ಸಕಲ ದೇಶಕೋಶ ವಾಸ ಭಂಡಾರ ಸವಾ ಲಕ್ಷ ಮುಂತಾದ ಸಂಬಂಧ ಸ್ತ್ರೀಯರ ಬಿಟ್ಟು ಬಂದೆನೆಂಬ ಕೈಕೂಲಿಯೆ ನಿಮ್ಮ ಭಕ್ತಿ? ಬಸವಣ್ಣ ಚನ್ನಬಸವಣ್ಣ ಪ್ರಭುದೇವರು ಮುಂತಾದ ಏಳನೂರೆಪ್ಪತ್ತು ಅಮರಗಣಂಗಳು ಭಾವವಿದ್ದಂತೆ ನಿಮ್ಮ ಆಗಡವೇಕಯ್ಯ ? ನಿಮ್ಮ ಅರಿವಿಂಗೆ ಇದಿರಿನಲ್ಲಿ ಕೂಡಿಹನೆಂಬ ಭಿನ್ನ ಭಾವ ಉಂಟೆ ಅಯ್ಯ? ಕರ್ಪುರದ ಅರಣ್ಯವ ಕಿಚ್ಚು ಹತ್ತಿ ಬೆಂದಲ್ಲಿ ಭಸ್ಮ ಇದ್ದಲ್ಲಿಂದು ಭಕ್ಷಿಸಲುಂಟೆ? ನಿಮ್ಮ ಭಾವವ ನಿಮ್ಮಲ್ಲೆ ತಿಳಿದುಕೊಳ್ಳಿ. ನಿಮ್ಮ ಕೂಟಕ್ಕೆ ಎನ್ನ ನಾಚಿಕೆಯ ಬಿಡಿಸಿದ ತೆರನ ತಿಳಿದುಕೊಳ್ಳಿ. ಶಕ್ತಿಯ ಮಾತೆಂದು ಧಿಕ್ಕರಿಸಬೇಡ. ಹೊರಗೆ ಕೂಡಿಹೆನೆಂಬುದು ನಿಮ್ಮ ಅರುವಿಂಗೆ ಹಾನಿ. ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ ನಿಮ್ಮ ಶರಣರ ನೆಲೆಯ ನೀವೆ ನೋಡಿಕೊಳ್ಳಿ ॥೨೪॥

ಮತ್ತಂ॥ ಸ್ವಯವಿದ್ದಂತೆ ಲಯವು ಕೂಡುವರೆ ಅಯ್ಯ? ಪರುಷವಿದ್ದಂತೆ ಹೇಮವನರಸುವರೆ ಅಯ್ಯ? ಸ್ವಯಂಜ್ಯೋತಿ ಇದ್ದಂತೆ ದೀಪವನರಸುವರೆ ಅಯ್ಯ? ನೀ ಅಲ್ಲಿ ಇಲ್ಲಿ ಕೂಡಿಹೆನೆಂಬ ಕೂಟದ ಭಿನ್ನವ ಹೇಳಯ್ಯ. ಕಣ್ಣಿನಲ್ಲಿ ನೋಡಿ ಕಣ್ಣ ಮರೆದೆನೆಂದು ಅಭಿನ್ನ ಭಾವನಂತೆ ಆದಿರಲ್ಲ. ಅದು ನಿಮ್ಮ ಗುಣವಲ್ಲ, ಎನ್ನಗುಣ. ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ ॥೨೭॥

ಮತ್ತಂ ಕೈಯ್ಯಲ್ಲಿ ಜ್ಯೋತಿಯ ಹಿಡಿದು ಕತ್ತಲೆ ಎನಲೇತಕ್ಕೆ? ಪರುಷ ರಸ ಕೈಯ್ಯಲ್ಲಿದ್ದು ಕೂಲಿಯ ಮಾಡಲೇತಕ್ಕೆ? ಕ್ಷುತ್ತು ನಿವೃತ್ತಿಯಾದವಂಗೆ ಕಟ್ಟೋಗರದ ಹೊರೆಯ ಹೊರಲೇತಕ್ಕೆ? ನಿತ್ಯ ಅನಿತ್ಯವನೀ ತಿಳಿದು ಮರ್ತ್ಯ ಕೈಲಾಸ ವೆಂಬುದು ಭಕ್ತರಿಗೆ ಯುಕ್ತಿಯಲ್ಲ. ನಿಶ್ಚಯವ ತಾನರಿದು ಅತ್ತಣ ಗೊತ್ತು ನಿಶ್ಚಯವಾಗಿ ನಿಂದಲ್ಲಿ ಆ ಬಚ್ಚಬಯಲ ಬೆಳಗ ನಿನ್ನ ನೀನೆ ನೋಡಿಕೊ, ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿ ಕಾರ್ಜುನನಲ್ಲಿ ॥೨೮॥

ಮತ್ತಂ॥ ಕಣ್ಣಿಗೆ ಹೋರಿ ಕಡವರ ನೀಗಲೇತಕ್ಕೆ? ಅಳಿಗಾಡಿ ತುಂಬಿದ ಕೊಡನ ಹೊಡಗೆಡಹ ಲೇತಕ್ಕೆ? ನಿನ್ನಂಗದಲ್ಲಿ ಗುರು ಕೊಟ್ಟ ಲಿಂಗವೆಂಬುದೊಂದು ಕುರುಹಿರುತ್ತಿರಲಕ್ಕೆ ಆ ನಿಜಲಿಂಗ ಸಂಗವನರಿಯದೆ ಸಂದಿಗೊಂದಿಯಲ್ಲಿ ಹೊಕ್ಕೆನೆಂಬ ಗೊಂದಣ ವೇತಕ್ಕೆ? ತಾ ನಿಂದಲ್ಲಿ ಕೆಡಹಿದ ಒಡವೆಯ ಆಚೆಯಲ್ಲಿ ನೆನೆದು ಅರಸಿಪಡಿಲ್ಲ.. ಅದು ಮತ್ತೆ ತನಗೆ ಸಂದಿಹುದೆ? ಘನಲಿಂಗ ನಿನ್ನಂಗದಲ್ಲಿ ಇದ್ದಂತೆ ಕಂಡೆ ಕಾಣೆನೆಂಬ ನಿಂದ ವಿಜ ನಿಂದಲ್ಲಿಯೇ ಸಂದೇಹವ ತೀಱುಕೊ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ॥೨೭॥

ಮತ್ತಂ॥ತನ್ನ ಕಣ್ಣಿಂದ ಕನ್ನಡಿಯ ನೋಡಿ ಆ ದೃಷ್ಟಿ ಕಾಣಲಿಕ್ಕೆ ಕಣ್ಣೋ ಕನ್ನಡಿಯೋ? ಆ ಉಭಯ ದೃಷ್ಟಿಯಿಂದ ಇಷ್ಟದ ದೃಷ್ಟವ ಕಂಡು ಉಭಯ ನಿಶ್ಚಯವಾದಲ್ಲಿ ಕೈವಲ್ಯವೆಂಬ ಕರ್ಕಶ ಬೇಡಾ. ಕೈಮುದ್ದೆಯ ಕೆಡಹಿದಲ್ಲಿ ಬಾಯ್ಗೆ ಬಯಲು. ಅದು ನಿಮ್ಮ ನೀವೆ ತಿಳಿದುಕೊಳ್ಳಿ ಎನ್ನಯ್ಯ ಪ್ರಿಯ ಇಮ್ಮಡಿನಿಃಕಳಂಕಮಲ್ಲಿಕಾರ್ಜನ. ॥೨೮॥

ಮತ್ತಂ॥ಸಕಲದಲ್ಲಿ ಅಳಿದು ನಿಃಕಲದಲ್ಲಿ ಉಳಿದ ಮತ್ತೆ ಸಕಲವನು ಕೂಡಿಹೆನೆಂಬ ನಿಃಕಲ ಉಂಟೆ ಅಯ್ಯ? ನಿಃಕಲದೊಳಗೆ ಸಕಲ ಅಡಗಿ ಆ

ಗುಣ ಉಪದೃಷ್ಟವಿಡಿದಲ್ಲಿ ಅಖಿಲ ಜಗವೆಂಬುದು ಹೊರಗು. ಆ ಗುಣ ನಿನ್ನ ಸದ್ಭಾವ ನಿಜವಾದಲ್ಲಿ ನಿನ್ನಂಗವೆ ಕೈಲಾಸವು. ಆ ಲಿಂಗದ ಕೂಟನೆ ನಿರ್ವಾಣವು. ಇದು ನಿಃಸಂಗವ ಸಂಗ. ನಿಮ್ಮ ನೀವೆ ತಿಳಿದುಕೊಳ್ಳಿ ಎನ್ನಯ್ಯ ಪ್ರಿಯ ಇಮ್ಮಡಿನಿಃಕಳಂಕಮಲ್ಲಿಕಾರ್ಜುನಾ. ||೨೯||

ಮತ್ತಂ||ಅಂಗಕ್ರಿಯರಿವಲ್ಲಿ ಸ್ಥಾಣುವಿನ ಬಾಯ್ಮ ತಿಲದಂತೆ. ಆತ್ಮನ ಕಲೆಯ ತಿಳಿವಲ್ಲಿ ಶಿಲೆ ಇದ್ದ ಬಿಂದು ವಲವರದಿಂದೆ ಜಾರುವಂತೆ. ಅರಿವು ಮಹದಲ್ಲಿ ಬೆರಿಸುವಾಗ ವಾರಿ ಶಿಲೆ ನೋಡನೋಡಲ್ಕೆ ನೀರಾದಂತೆ ಇರ ಬೇಕು. ಕಾಯವಶದಿಂದ ಕರ್ಮವ ವಿಾರಿ ಕರ್ಮವಶದಿಂದ ವರ್ಮ ವಶಗ ತವಾದಲ್ಲಿ ಅದೆ ಕಾಯ ಬೆರಿಸಿ ಇದ್ದುದು ಕೈಲಾಸ. ಆ ಭಾವವ ನಿಮ್ಮ ನೀವೆ ತಿಳಿದುಕೊಳ್ಳಿ ಎನ್ನಯ್ಯಪ್ರಿಯಇಮ್ಮಡಿ ನಿಃಕಳಂಕಮಲ್ಲಿಕಾರ್ಜುನ. ||೩೦||

ಮತ್ತಂ|| ಮನೆಯಲ್ಲಿ ವೀರ ಧೀರ. ರಣದಲ್ಲಿ ಓಸರಿಸಿದ ಮತ್ತೆ ಭಾಷೆ ಬಂಟನಲ್ಲ. ನೀ ಬಂದಡೆ ನೀ ಮಾಡುವ ಮಾಟ. ನಿಮ್ಮ ಪ್ರಮಥರೆಲ್ಲ ಹಂಗಿ ಸುವರು. ನಿರಂಗ ವಚನವ ಕೂಡಿಹೆನೆಂಬ ಸಂದಿಯಲ್ಲಿಯೆ ನಿಂದಿತ್ತು ನಿಜಲಿಂಗದ ಕೂಟ. ಆ ಗುಣ ನಿನ್ನ ನೀನೆ ನೋಡಿಕೊ ಎನ್ನಯ್ಯ ಪ್ರಿಯ ಇಮ್ಮಡಿನಿಃಕಳಂಕಮಲ್ಲಿಕಾರ್ಜುನ. ||೩೧||

ಹೀಗೆಂದು ಮಹಾದೇವಿಯಮ್ಮನು ನುಡಿಯಲು, ಆ ಮೋಳಿಗೆಯ ಮಾರಿತಂದೆಗಳು ಲಿಂಗೈಕ್ಯದ ನಿಶ್ಚಯವ ಕೇಳಿದ ಪ್ರಸ್ತಾವದ ವಚನ. ||

ಭಕ್ತಿಯುಳ್ಳನ್ನಕ್ಕ ಇಷ್ಟಲಿಂಗದ ಹಂಗು ಬೇಕು. ಆತ್ಮವುಳ್ಳನ್ನಕ್ಕ ಅರಿ ವೆಂಬುದ ವಿಚಾರಿಸಬೇಕು. ಮರ್ತ್ಯವೆಂಬುದ ನಾ ಬಲ್ಲನ್ನಕ್ಕ ಕರ್ಕಶದ ಜಗ. ಇದು ಕಾರಣದಲ್ಲಿ ಕೈಲಾಸವೆಂಬ ಬಟ್ಟೆಯನರಸಬೇಕು. ಎನ್ನ ಸತ್ಯಕ್ಕೆ ಎನ್ನ ಭಕ್ತಿಗೆ ಎನ್ನ ಮನಕ್ಕೆ ಎನ್ನ ಮುಕ್ತ್ಯಂಗನೆ ಎನ್ನ ನಿಶ್ಚಯಕ್ಕೆ ಒಂದು ಗೊತ್ತ ತೋರಾ ನಿಃಕಳಂಕಮಲ್ಲಿಕಾರ್ಜುನನು ಎಲ್ಲಿದ್ದಹನು ಹೇಳಾ. ||೩೨||

ಹೀಗೆಂದು ಮೋಳಿಗೆಯ ಮಾರಿತಂದೆಗಳು ಕೇಳಲು ಅವರ ಸತಿಯು ಮಹಾ ಘನಲಿಂಗ ಸ್ವರೂಪರು ನೀವಾದ ಕಾರಣ ಎನಗೆ ಸ್ವತಂತ್ರವಿ ಲ್ಲೆಂದು ಬಿನ್ನೈಸಿದ ಪ್ರಸ್ಥಾವದ ವಚನ ||

ಕಾಯವಿದ್ದಂತೆ ತಲೆ ನಡೆವುದುಂಟೆ ಅಯ್ಯ? ಕಣ್ಣಿದ್ದಂತೆ ಕರ್ಣ ನೋ ಡುದುಂಟೆ ಅಯ್ಯ? ಬಾಯಿ ಇದ್ದಂತೆ ನಾಸಿಕ ಉಂಡುದುಂಟೆ ಅಯ್ಯ? ತಾ ಇಲ್ಲದೆ ಮಕ್ಕಳು ಬಂದ ತೆರನ ಹೇಳಯ್ಯ. ನಿಮ್ಮ ಸೇವೆಯ ತೊತ್ತಿನನುಭಾ

ವವ ಕೇಳಲೇತಕ್ಕೆ? ಪಟದೊಳಗಣ ಬಾಲ ಸರಕ್ಕೆ ಪ್ರತಿಸೂತ್ರ ನೇಣುಂಟೆ? ನಿಮ್ಮಲ್ಲಿ ಎನ್ನ ಭಾವ ಲೇಪ. ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕಮಲ್ಲಿಕಾ ರ್ಜುನನಲ್ಲಿಯೆ. ||೩೩||

ಮತ್ತಂ|| ಚಿತ್ರ ಬೊಂಬೆಯ ಹಾಹೆ ಎಲ್ಲಕ್ಕು ಆತ್ಮನಿಂದ ಚೇತ ರಿಸಿ ನಡೆವುತ್ತಿಹವೆ? ಅವು ಸೂತ್ರಾದಿಕನ ಭೇದ. ಎನ್ನ ಶಕ್ತಿ ಜಾತಿ ಲಕ್ಷಣ ನಿಮ್ಮ ಭಕ್ತಿ ಸೂತ್ರದಿಂದ ಎನ್ನ ಸ್ತ್ರೀಜಾತಿ ನಿಮ್ಮ ಶ್ರೀಪಾದದಲ್ಲಿ ಅಡ ಗಿತ್ತು. ಎನಗೆ ಭಿನ್ನದ ಮಾತಿಲ್ಲ. ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನೆಂಬವರು ನೀವೆ. ||೩೪||

ಹೀಗೆಂದು ಮಹದೇವಿಯಮ್ಮ ನುಡಿಯಲು, ಆ ಮೋಳಿಗೆಯ ಮಾರಿ ತಂದೆಗಳು ಎನ್ನ ಸದಾಚಾರ ಸದ್ಭಕ್ತಿಗೆ ನೀನೊಳಗಾದ ಕಾರಣ ಎನಗು ನಿನಗು ಭಿನ್ನಭಾವವಿಲ್ಲೆಂದು ಕೇಳಿದ ಪ್ರಸ್ಥಾವದ ವಚನ ||

ತಲೆ ಇಲ್ಲದೆ ಕಾಲು ನಡೆಯಬಲ್ಲುದೆ? ಕುಕ್ಷಿ ಇಲ್ಲದ ಬಾಯಿ ಉಣಬಲ್ಲುದೆ? ಆತ್ಮನಿಲ್ಲದಿರೆ ಕರಚರಣಾದಿಗಳಿಗೆ ಏತರ ಹೊಲಬು? ನಿನ್ನ ಭಕ್ತಿಯ ಬೆಳೆಯೆ ಎನಗೆ ಸತ್ಯದ ಹಾದಿ. ಇದು ನಿಶ್ಚಯ ನಿಃಕ ಳಂಕಮಲ್ಲಿಕಾರ್ಜುನ. ||೩೫||

ಮತ್ತಂ|| ಸತ್ವಗೆಟ್ಟಲ್ಲಿ ಕಾಷ್ಠವನೂರಿ ನಡೆಯಬೇಕು. ಮತತ್ವವಿ ಪ್ಪಲ್ಲಿ ನಿಶ್ಚಯವ ಹೇಳಲಾಗಿ ಮಹಾ ಪ್ರಸಾದವೆಂದು ಕೈಕೊಳ್ಳಬೇಕು. ಎನ್ನ ಭಕ್ತಿಗೆ ನೀ ಶಕ್ತಿಯಾದ ಕಾರಣ ಎನ್ನ ಸತ್ಯಕ್ಕೆ ನೀ ಸತಿಯಾದ ಕಾರಣ ಎನ್ನ ಸುಖದುಃಖ ನಿನ್ನ ಸುಖದುಃಖ ಅನ್ಯವಿಲ್ಲ. ಇದಕ್ಕೆ ಭಿನ್ನ ಭೇದವೇನು ಹೇಳಾ ನಿಃಕಳಂಕ ಮಲ್ಲಿಕಾರ್ಜುನ? ||೩೬||

ಹೀಗೆಂದು ಮೋಳಿಗೆಯ ಮಾರಿತಂದೆಗಳು ಕೇಳಲು, ಅವರ ಸತಿಯು ಮಹಘನಲಿಂಗಕ್ಕು ನಿನಗು ಅನ್ಯಭಿನ್ನವಿಲ್ಲೆಂದು ನಿಶ್ಚಯವ ತೋರಿ ನುಡಿದ ಪ್ರಸ್ಥಾವದ ವಚನ ||

ಕೂಟಕ್ಕೆ ಕುರುಹಾದುದನರಿಯದೆ, ಆತ್ಮಕ್ಕೆ ಅರುಹಾದುದನರಿಯದೆ ಕೈಲಾಸವೆಂಬ ಸೂತ್ರದ ಒಳಗಿಗೆ ಮನ ಸೋತಿರಲ್ಲ. ಅಂಧಕನ ಕೈಯ್ಯ ತ್ನದಂತೆ ಆದಿರಲ್ಲ. ಪಂಗುಳನ ಕಯ್ಯ ಶಸ್ತ್ರದಂತೆ ಆದಿರಲ್ಲ. ಇದ ಗಂರವ ತಿಳಿದು ನಿಂದಲ್ಲಿ ಬೇರೆ ಅಂಗವಡಸುವವಕ್ಕೆ ಉಭಯವುಂಟೆಂಬ

ದಂದುಗ ಬೇಡಾ. ತಾ ನಿಂದಲ್ಲಿಯೆ ನಿಜಕೂಟ. ತಿಳಿದಲ್ಲಿಯೆ ನಿರಂಗವೆಂಬುದು ಉಭಯವಿಲ್ಲ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕಮಲ್ಲಿಕಾರ್ಜುನನಲ್ಲಿ ॥೩೭॥

ಮತ್ತಂ॥ ಇಷ್ಟದಲ್ಲಿ ನೋಟ, ಜ್ಞಾನದಲ್ಲಿ ಕೂಟ, ಏಕಾರ್ಥವಾದಲ್ಲಿ ಕಾಯವೆಂಬ ಕದಳಿಯ ಬಿಟ್ಟದು. ಭಾವವೆಂಬ ಕುರುಹ ಮರೆದುವ.. ಇಂತೀ ಉಭಯ ನಿರ್ಭಾವವಾದಲ್ಲಿ ಇಹಪರವೆಂಬ ಹೊಲಬುಗೆಟ್ಟಿತ್ತು. ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನು ಒಂದೆಂದಲ್ಲಿ. ॥೩೮॥

ಮತ್ತಂ॥ ಹೇಮದ ಬೆಂಬಳಿಯ ಸ್ವರೂಪದಂತೆ ಗ್ರಾಮದ ಬೆಂಬಳಿಯ ಬಟ್ಟೆಯಂತೆ ಹೇಮ ರೂಪಳಿದು ಸ್ವರೂಪಡಗಿದಲ್ಲಿ ಕುಶಲ ಚಿತ್ರ ಎಲ್ಲಿ ಇದ್ದಿತ್ತು. ಬಟ್ಟೆಯ ಮೆಟ್ಟ ಹೋಗಿ ಪುನರಪಿಯಾಗಿ ತಿರಿಗಿದಲ್ಲಿ ಊರ ಬಾಗಿಲ ಬಟ್ಟೆಯ ಒಂದರಲ್ಲಿ ಹೋಗಬೇಕು. ಇದ ದೃಷ್ಟಕ್ಕೆ ಕೊಟ್ಟ ಇಷ್ಟ. ಆ ಇಷ್ಟ ಚಿತ್ತದಲ್ಲಿ ಅಚ್ಚೊತ್ತಿದ ಮತ್ತೆ ಆ ನಿಶ್ಚಯದ ಉಭಯವ ತಿಳಿದಲ್ಲಿ ಕಾಯಕ್ಕೆ ಕೈಲಾಸವೆಂಬುದಿಲ್ಲ. ಭಾವಕ್ಕೆ ಬಯಲೆಂಬುದಿಲ್ಲ. ಅನಲನಲ್ಲಿ ಅರತ ದ್ರವ್ಯದಂತೆ ಅದು ಅಮೂರ್ತಿಭಾವ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ಸದ್ಭಾವವಂತನ ಲಕ್ಷ॥೩೯॥

ಮತ್ತಂ॥ ಗುರುವನರಿದು, ಲಿಂಗವನರಿವರುಂಟು. ಲಿಂಗವನರಿದು ಪಂಚಾಚಾರವನರಿವರುಂಟು. ಪಂಚಾಚಾರವನರಿದು, ಜಂಗಮವನರಿವರುಂಟು. ಆ ಜಂಗಮವನರಿವಲ್ಲಿ ಷಟುಸ್ಥಲ ಸಂಬಂಧವಾಯಿತ್ತು. ಆ ಸಂಬಂಧ ಸಮಯ ನಿಂದು ಉಭಯವಳಿದು ಏಕವಾದಲ್ಲಿ ಹಲವು ನೆಲೆ ತನ್ನ ವಿಶ್ವಾಸದ ಹೊಲಬಿನಲ್ಲಿ ಅಡಗಿತ್ತು. ಆ ಹೊಲಬದ ಹೊಲಬಿನಲ್ಲಿ ನಿಂದವಂಗೆ ಇಹಪರವೆಂಬ ಕಲೆ ಇಲ್ಲ, ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕಮಲ್ಲಿಕಾರ್ಜುನ ಒಂದೆ ಎಂದಲ್ಲಿ ॥೪೦॥

ಮತ್ತಂ॥ ಪೂಜೆಯಲ್ಲಿ ಲಕ್ಷಿತವಪ್ಪರು ಪುಣ್ಯದ ಆಗಿಂಗೆ ಒಡಲು. ದಾಸೋಹವೆಂಬ ಸೋಹವನರಿದಲ್ಲಿ ಚತುರ್ವಿಧ ಫಲಪದದಾಸೆಗೆ ಒಡಲು. ಇಂತೀ ಉಭಯದ ಪ್ರೀತಿಯನರಿದು ತೋರಿದಕೆ ಬಂದಂತೆ ಅವನಾರೈದು ಗುರುವಿಂಗೆ ತನು ಹೋಯಿತ್ತು. ಲಿಂಗಕ್ಕೆ ಮನ ಹೋಯಿತ್ತು. ಜಂಗಮಕ್ಕೆ ಧನ ಹೋಯಿತ್ತು. ಇಂತೀ ಎಲ್ಲ ಲಕ್ಷದಲ್ಲಿ ಲಕ್ಷಿಸಿ ನೀವು ಕೈಲಾ

ಸಕ್ಕೆ ಹೋದಿಹೆನೆಂಬ ಕಲ್ಪನೆಗೆ ನಾನಂಜಿನೆನು ಎನ್ನಯ್ಯ ಪ್ರಿಯಇಮ್ಮಡಿನಿಃಕಳಂಕಮಲ್ಲಿಕಾರ್ಜುನ ॥೪೧ ॥

ಮತ್ತಂ॥ ಕಾಯವುಳ್ಳನ್ನಕ್ಕ ಲಿಂಗಪೂಜೆ. ಆತ್ಮವುಳ್ಳನ್ನಕ್ಕ ಗುರುವಿನ ಭೇದ. ಪುರುಷ ನೀ ಸತಿ ನಾನೆಂಬಲ್ಲಿ ಉಭಯದ ಬೀಜ. ನಾನೀನೆಂಬನ್ನಕ್ಕ ಅಂಗವು ಲಿಂಗದಲ್ಲಿಯೇ ನಿರಂಗವಾಗಬೇಕು. ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ ॥೪೨॥

ಮತ್ತಂ॥ ಕಾಯವೆರಸಿ ಕೈಲಾಸಕ್ಕೆ ಹೋದಿಹೆನೆಂಬುದು ಮತವಲ್ಲ. ಘನಲಿಂಗ ಕರಸ್ಥಲದಲ್ಲಿಪ್ಪ ಅನುವನರಿಯದೆ ಇಲ್ಲಿಗೆ ಕರ್ಮ ಅಲ್ಲಿಗೆ ನಿಃಕರ್ಮವೆ? ಹೇಮದ ಮಾಟದ ಒಳಹೊರಗಿನಂತೆ. ಮರ್ತ್ಯ ಕೈಲಾಸ ಕಟ್ಟಳೆ ಇಲ್ಲ. ಆತ್ಮನಿಶ್ಚಯವಾದಲ್ಲಿಯೆ ಕೈಲಾಸ. ಮತತ್ವವಾದಲ್ಲಿಯೆ ಮರ್ತ್ಯದೊಳಗು. ಈ ಗುಣ ಸದಮಲ ಭಕ್ತನ ಯುಕ್ತಿ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕಮಲ್ಲಿಕಾರ್ಜುನನು ಇಕ್ಕಿದ ಗೊತ್ತು ॥೪೩॥

ಮತ್ತಂ॥ ಮಾಡಿದ ಭಕ್ತಿಗೆ ಕೈಲಾಸಕ್ಕೆ ಹೋದಿಹೆನೆಂಬುದು ಕೈಕೂಲಿ. ಭಾಷೆಗೆ ತಪ್ಪಿ ಒಸರಿಸದೆ ಮತ್ತೆ ನಾನೀಹಿತವ ಹೇಳಿದಲ್ಲಿ ಮತ್ತೆ ಘಾತಕತನದಿಂದ ಎಯ್ದಿಹೆನೆಂಬುದು ಭಕ್ತರಿಗೆ ವಿಹಿತವಲ್ಲ. ದೃಷ್ಟದಲ್ಲಿ ಕೊಟ್ಟುದ ಲಕ್ಷಿಸಲರಿಯದೆ, ಆ ಲಕ್ಷವ ಲಕ್ಷಿಸಿ ಕಾಂಬುದಕ್ಕೆ ಲಕ್ಷವೇನು? ಅದು ನಿರೀಕ್ಷಣೆಯ ಲಕ್ಷದಿಂದಲ್ಲದೆ ಆತ್ಮಂಗೆ ಲಕ್ಷವಿಲ್ಲ. ಇಂತೀ ಉಭಯದಲ್ಲಿ ಲಕ್ಷಿತವಾದಂಗೆ ಮರ್ತ್ಯಕೈಲಾಸವೆಂಬುದು ತನ್ನರಿವು ನಿಶ್ಚಯವಾದಲ್ಲಿ ಅದ ಲಕ್ಷ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನ ಅಲ್ಲಿಯು ಇಲ್ಲಿಯು ತಾನೆ ॥೪೪॥

ಕಾಯದ ಭ್ರಮೆಯಿಂದ ಕೈಲಾಸ ಜೀವದ ಭ್ರಮೆಯಿಂದ ಮಹದ ಕೂಟವೆಂಬುದು ಕಾಯದಜೀವದ ಭೇದವನರಿತಲ್ಲಿ ಅತ್ತಲಿತ್ತಲೆಂದು ಮತ್ತೆ ಹಲುಬಲಿಲ್ಲ. ಇದು ನಿಶ್ಚಯದ ಕೂಟ ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ॥೪೫॥

ಮತ್ತಂ॥ ಸುಮ್ಮಾನ ಸುಬುದ್ಧಿ ಭಕ್ತಿಸ್ಥಲ, ಮಲಅಮಲ ಮಹೇಶ್ವರಸ್ಥಲ, ಅಜ್ಞಾನ ಸುಜ್ಞಾನ ಪ್ರಸಾದಿ ಸ್ಥಲ, ಉಭಯ ಕೂಟಸ್ಥವೆಂಬುದ ಪರಿಹರಿಸಿದಲ್ಲಿ ಪ್ರಾಣಲಿಂಗಿಸ್ಥಲ, ಸ್ತುತಿ ನಿಂದ್ಯಾದಿಗಳಲ್ಲಿ ಒಡಲಳಿದು ನಿಂದುದು ಶರಣ ಸ್ಥಲ, ಇಂತೀ ಪಂಚಭೇದಂಗಳ ಸಂಚವನರಿತು ವಿಸಂಚ

ವಿಲ್ಲದೆ ಪರುಷ ಪಾಷಾಣದಂತೆ ಭಿನ್ನಭಾವವಿಲ್ಲದೆ ಅರಿವರುಹಿಸಿಕೊಂಬ ಕುರುಹು ಏಕವಾದಲ್ಲಿ ಐಕ್ಯಸ್ಥಲ ಎನ್ನಯ್ಯ ಎನ್ನ ನಿಮ್ಮ ಷಡುಸ್ಥಲ ಇದಕ್ಕೆ ಭಿನ್ನಭಾವವಿಲ್ಲ. ಅದು ಎನ್ನ ನಿನ್ನ ಕೂಟದ ಸುಖದಂತೆ ಇದ ಚನ್ನಾಗಿ ತಿಳಿದು ನೋಡಿಕೊಳ್ಳಿ. ಅಲ್ಲಿ ಇಲ್ಲಿ ಎಂಬ ಗೆಲ್ಲಗುಳಿತನ ಬೇಡಾ ಹಾಂಗೆಂಬಲ್ಲಿಯೆ ಬಯಲಾಗಬೇಕು. ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನಲ್ಲಿ ॥೪೬॥

ಮತ್ತಂ॥ ಬಿಡುವುದಕ್ಕೆ ಮುನ್ನವೆ ಮೊನೆ ಮುಂಚಿದಂತಿರಬೇಕು. ಅಡಿ ಏರುವುದಕ್ಕೆ ಮುನ್ನ ಆ ಮೊನೆಯ ಜಾರಿ ಮತ್ತೆ ತಾನಡಿ ಏರಿ ಮೀರಿ ಮುಂಚಿದಂತಿರಬೇಕು. ನೀನೆಂಬನ್ನಕ್ಕ ಲಕ್ಷದಲ್ಲಿ ಅಲಕ್ಷವಾಗಬೇಕು. ಎನ್ನಯ್ಯ ಪ್ರಿಯ ಇಮ್ಮಡಿ ನಿಃಕಳಂಕ ಮಲ್ಲಿಕಾರ್ಜುನನೆಂಬುದಕ್ಕೆ ಮುನ್ನವೆ. ॥೪೭॥

ಇಂತು ಮಹದೇವಿಯಮ್ಮನು ಲಿಂಗೈಕ್ಯದ ನಿರ್ಣಯವ ಬಿನ್ನೈಸಲು, ಆ ಮೋಳಿಗೆಯ ಮಾರಿತಂದೆಗಳು ಘನಲಿಂಗದಲ್ಲಿ ತಮಗೆ ಸಮರಸಭಾವವ ತಿಳಿದು ನಿಶ್ಚೈಸಿದ ಪ್ರಸ್ತಾವದ ವಚನ॥

ಹಲವು ಬಹುರೂಪ ಬರೆವ ಕರದ ಕಡ್ಡಿಯ ಭೇದದಂತೆ, ಮನ ಮರಿದು, ಕಣ್ಣ ನೋಡಿ ಕೈಯ್ಯ ಕಡ್ಡಿಯ ಹಿಡಿದು ಲಕ್ಷಿಸುವಂತೆ, ಸ್ಥಲದಲ್ಲಿ ನಿಂದು ಅರುಹಿನಲ್ಲಿ ಆಶ್ರಯಿಸಿ, ಇಷ್ಟ ವಿಶ್ವಾಸಭಕ್ತಿಯೊಳಡಗಿ ಭಕ್ತಿ ವಸ್ತುವಿನಲ್ಲಿ ಲೇಪವಾದಲ್ಲಿ ನಿಃಕಳಂಕ ಮಲ್ಲಿಕಾರ್ಜುನ ಲಿಂಗವು ನಿರ್ಲೇಪವಾಯಿತ್ತು. ॥೪೮॥

ವಿಶ್ವಾಸದ ಹರವರಿಯಲ್ಲಿ ವಿಶ್ವಮಯ ಸ್ಥಲಕುಳಂಗಳಾದವು. ಅದು ನಾನಾ ತಟಾಕಂಗಳಲ್ಲಿ ತೋರುವ ದಿನಕರನಂತೆ ಹಲವುಮಯ ತೋರುವವಲ್ಲಿಗಲ್ಲಿಗೆ ಒಲವರವಿಲ್ಲದೆ ಆ ಅರುಣನ ನೆಲೆ ಒಂದೆ ಹಲವು ಜಗಕ್ಕೆ ಹೊಲಬಾದಂತೆ ಸ್ಥಲ ಜ್ಞಾನಾದಿಯಲ್ಲ ಸ್ಥಲನೆಲೆ ಒಂದೆಂದರಿವಲ್ಲಿಯೇ ಕರಸ್ಥಲ ಮೂರ್ತಿ ನೀನೆ ಏಕಸಾಕೆಂದಲ್ಲಿ ನಿರಾಕಾರನಾದೆಯಲ್ಲ ನಿಃಕಳಂಕ ಮಲ್ಲಿಕಾರ್ಜುನ ॥೪೯॥

ಇತಿ ಶ್ರೀಮತ್ಸಕಲ ಗಣ ಪುರಾತನರೊಳ್ ಪ್ರಭುದೇವರು ಮಹಾನುಭಾವ ಸದ್ಗೋಷ್ಠಿಯಂ ಮಾಡಿದ ಶೂನ್ಯಸಂಪಾದನೆಯೊಳ್ ಮೋಳಿಗೆಯ ಮಾರಯ್ಯಗಳ ಸಂಪಾದನೆಗಂ ತ್ರಯೋದಶೋಪದೇಶ ಸಮಾಪ್ತ.

# ನುಲಿಯುಚಂದಯ್ಯಗಳ ಸಂಪಾದನೆ.

## ( ಚತುರ್ದಶೋಪದೇಶ. )



॥ಕಂದ॥ ನುಲಿಯುಚಂದಯ್ಯನೆಂಬೆಂ। ಬಲಘೂತರ ಶರಣ ತನ್ನ ಲಿಂಗದಕೈಯಲಿ ॥ ಸಲೆಕಾಯಕವಹಾಸ್ಸ। ಗ್ಗಜ ಚರಿತವ ಪೇಳ್ವೆನಿಳೆಯೊಳಾನಂದದೊಳಂ ॥

ಅದೆಂತೆಂದೊಡಾ ಮೋಳಿಗೆಯ ಮಾರಿತಂದೆಗಳು ಘನಲಿಂಗದಲ್ಲಿ ಸಮರಸಭಾವವನೈದಿ ನಿಶ್ಚಯಿಸುತ್ತಂ ಬಸವಣ್ಣ, ಚನ್ನಬಸವಣ್ಣ, ಪ್ರಭುದೇವರು, ಸಿದ್ಧರಾಮಯ್ಯದೇವರು, ಅಪ್ಪಣ್ಣಗಳು, ಸೊಡ್ಡಳಬಾಚರಸರು ಮೊದಲಾದ ಅಸಂಖ್ಯಾತ ಪ್ರಮಥಗಣಂಗಳೆಲ್ಲರು ಮಹಾನುಭಾವದ ನಿಜಾನಂದ ಶರಧಿಯೊಳೋಲಾಡುತ್ತಮಿರಲು ಮತ್ತೋರ್ವ ಶರಣ ನುಲಿಯ ಚಂದೈಯ್ಯನ ಮಹಾತ್ಮೆ ಎಂತೆಂದೊಡೆ ಮೊದಲಾ ಶಿವ ನಿರೂಪದಿಂ ಈ ಗಣಂಗಳೆಲ್ಲರು ಜಗದ್ಧಿತಾರ್ಥವಾಗಿ ವೀರಶೈವ ನಿಜವರ್ತನಾಸಂಬಂಧಮಂ ಮರ್ತ್ಯದಲ್ಲಿ ಪಸರಿಸಲೆಂದು ಭೂಮಿಗೆ ಬಿಜಯಂಗೈವಾಗ ತಾನೊಬ್ಬ ಶರಣನಾಗಿ, ಜನಿಸಿ ನುಲಿಯ ಚಂದಯ್ಯನೆಂಬ ನಾಮಮಿಂ ಜಂಗಮದಾಸೋಹಕ್ಕೆ ಸತ್ಯಶುದ್ಧ ನಿಜಕಾಯಕದಿಂ ನುಲಿಯ ಮಾಡಿ, ಹಾಗಕ್ಕೆ ಮಾರಿತಂದ ಪ್ರಸ್ಯದಿಂ ಪದಾರ್ಥಮಂ ತಂದು, ಜಂಗಮಕ್ಕೆ ನೀಡಿ, ತತ್ಪ್ರಸಾದವಂ ಲಿಂಗಭೋಗೋಪ ಭೋಗಿಯಾಗಿರುತ್ತಂ ಬಸವಣ್ಣನ ಭಕ್ತಿ ಮಡಿವಾಳಯ್ಯನ ನಿಷ್ಠೆ ಚನ್ನಬಸವಣ್ಣನ ಸಾವಧಾನಜ್ಞಾನ, ಸತ್ಯಣ್ಣನ ಸ್ವಾನುಭಾವಪ್ರಭೆ, ಪ್ರಭುದೇವರ ಸದಾನಂದಪರಮಕಾಷ್ಠೆ ಅಜಗಣ್ಣನ ಸಮರಸದೈಕ್ಯತ್ವ ಇಂತಿವರು ಮೊದಲಾದ ಗಣಂಗಳ ನಿಜವೇ ರೂಪಾದಂತೆ ಜಂಗಮ ಭಕ್ತಿಯೇ ಅಧಿಕ ಜಂಗಮ ಪೂಜೆಯೇ ಲಿಂಗಪೂಜೆ, ಜಂಗಮ ಭಕ್ತಿಯೇ ಲಿಂಗಭಕ್ತಿ ಜಂಗಮತೃಪ್ತಿಯೇ ಲಿಂಗತೃಪ್ತಿ, ಜಂಗಮ ದಾಸೋಹವೆ ಪರಮ ಪದವೆಂದು ಎಲ್ಲ ಕ್ರಿಯೆಗಳನು ಜಂಗಮ ದಾಸೋಹದಲ್ಲಿಯೆ ತಿಳಿದು, ಅಲ್ಲಿಯೆ ಮನಮಗ್ನನಾಗಿ ಅದೆ ತನ್ನ ನಿಜಪದವಾಗಿರುತ್ತಂ ಒಂದು ದಿನ ತನ್ನ ನಿಜಕಾಯಕಕ್ಕೈತಂದು ಹುಲ್ಲಂ ಕೊಯ್ದು ಹೊರೆಯಂ ಕಟ್ಟುವ ಕಾಲದಲ್ಲಿ ತನ್ನ ಇಷ್ಟಲಿಂಗವು ಈತನು ಜಂಗಮದಾಸೋ

ಹವೆ ಪರವೆಂಬುದು ನಿಜವೊ ಅಲ್ಲವೊ ಎಂದು ನೋಡುವ ನಿಮಿತ್ತಂ ಮತ್ತೆ ಈತನ ಅಸಂಖ್ಯಾತರ ಮುಂದೆ, ಪ್ರಜ್ವಲಿಸಿ ಅರಿಕೆಯ ಮಾಡುವ ನಿಮಿತ್ತಂ ಈತನಲ್ಲಿ ತಾವು ಸೇವೆಯ ಮಾಡಬೇಕೆಂಬ ನಿಮಿತ್ತಂ ಈ ಮೂರು ಭಾವದಿಂ ಸರಿದು ಜಲದಲ್ಲಿ ಬೀಳಲು ನುಲಿಯ ಚಂದಯ್ಯಗಳು ಈ ಲಿಂಗದ ಮನೋಭಾವದಿಚ್ಛೆಯನರಿದು ಚರಸೇವೆಯು ಬೇಕಾದಡೆ ಲಿಂಗ ತಾನೆ ಬಂದಿತ್ತೆಂಬುದರಿಂ ಪರಿಪೂರ್ಣವಹ ವಸ್ತು ಎಲ್ಲಿದ್ದರೇನು ಎಂಬ ಭಾವದಿಂ ಜಂಗಮ ದಾಸೋಹದಲ್ಲಿಯೆ ಲಿಂಗ ಉಂಟೆಂದರಿದು, ಆ ಚಂದಯ್ಯ ಬಿಟ್ಟು ಪೋಗುತಿರೆ ಆ ಲಿಂಗವು ಆತನ ಮನದ ಜಂಗಮದ ಸೇವಾ ನಿಷ್ಠೆಯಂ ಕಂಡು ಎಲೆ ಚಂದಯ್ಯ ನಾವು ಬಂದೆವೆಂದು ಮೇಲಕ್ಕೆ ಬಂದು ಧ್ವನಿಯ ಮಾಡಲಾತಂ ನಿಮ್ಮ ಭಾವ ಹೇಗೆ ಇದ್ದಿತ್ತು ಹಾಗೆ ಇರಿ ನನಗೆ ನಮ್ಮ ಒಡೆಯರ ಸೇವೆ ಉಳಿದೀತು ಎಂದು ಹೋಗು ತ್ತಿರೆ ಆ ಲಿಂಗವು ತಾನೆ ವೃತ್ತ ಗೋಳಕ ಗೋಮುಖಾಕಾರವನುಳಿದು ಪುರುಷಾಕಾರಮಂ ತಳೆದು ನಾನು ಬಂದೆನು ಬಿಟ್ಟು ಹೋಗದಿರಯ್ಯ ಎನಲಾ ಚಂದಯ್ಯ ಕೇಳ್ದು ಮೊದಲು ಹೋಗಿ ಈಗ ಬಂದಿಹೆನೆಂದರೆ ನಾನೊಪ್ಪೆ ನೆನಲು ಆ ಲಿಂಗವು ನೀನೊಲ್ಲೆನೆಂದರೆ ನಾ ಬಿಡೆನೆಂದು ಸೆರಗಂ ಸುತ್ತಿ ಕೊಂಡು ಬಿಡದಿರಲು ಆ ಚಂದಯ್ಯ ನೀವು ಸುಮ್ಮನೆ ಬಂದಿಹೆನೆಂದರೆ ನಾನೊಪ್ಪೆನು. ಮುಂದೆ ನಾವು ಹೋಹ ದಾರಿಯಲ್ಲಿ ಮಡಿವಾಳಯ್ಯಗಳು ಸೀರೆಯ ಪ್ರಕ್ಷಾಲಿಸುತ್ತ ಇದ್ದಾರೆ, ಅವರ ಬಳಿಗೆ ಬನ್ನಿ ಎಂದು ನಮಸ್ಕರಿಸಲು. ಆ ಮಡಿವಾಳಯ್ಯಗಳ ಬಳಿಗೆ ಬಂದು ನಿಂದಿರೆ ಆ ಮಡಿವಾಳಯ್ಯಗಳು ನಮಸ್ಕರಿಸಿ ಏನು ಬಂದಿರಿ ಎಂದು ಕೇಳಲಾಗಿ ಆ ಲಿಂಗವು ಮಡಿವಾಳಯ್ಯಂಗೆ ತಮ್ಮ ಸ್ಥಿತಿಯನು ಹೇಳಲಾಗಿ ಆ ಮಡಿವಾ ಳಯ್ಯಗಳು ಚಂದಯ್ಯಂಗೆ ನಿರೂಪಿಸಿದ ಪ್ರಸ್ಥಾವದ ವಚನ॥

ಬಂದಿಹೆನೆಂಬ ಸುಖವ ಹಿಂಗಿಪವರುಂಟೆ? ಕಂಡ ನಿಧಾನವ ನೆಡೆ ಹಿಕೊಂಡು ನಡೆ ಎಂದವರುಂಟೆ? ಸುಖಕ್ಕೆ ಸುಖ ಒದಗಿದರೆ ಒಲ್ಲೆನೆಂ ಬವರುಂಟೆ? ಕಲಿದೇವಯ್ಯ ಬಂದಿಹೆನೆಂದರೆ ಬೇಡವೆನಬೇಕೆಚಂದಯ್ಯ॥೧॥

ಇದಕ್ಕೆ ಚಂದಯ್ಯಗಳ ಪ್ರತ್ಯುತ್ತರ॥

ಅಂದು ಹೋಗಿ ಇಂದು ಬಂದಿಹೆನೆಂಬಾಗ ಈ ದಂದುಗದೊಡಲು ತನ ಉಂಟೆ? ಘನಲಿಂಗವೆಲ್ಲಿರ್ದಡಲ್ಲಿಯೆ ಪರಿಪೂರ್ಣ ಲಿಂಗ ಹೋಯಿ

ತ್ತೆಂಬ ಸಂದೇಹವೆನಗುಂಟಾದರೆ ಆ ಲಿಂಗ ಉಳಿಯಬಲ್ಲುದೆ? ಆತ್ಮ ಹೋದಲ್ಲಿ ಘಟವೆಷ್ಟು ದಿನ ಉಳಿವುದು? ಜಂಗಮವುಳ್ಳನ್ನಕ್ಕರ ಚಂದೇಶ್ವರ ಲಿಂಗಕ್ಕೆ ಸಂದಿಲ್ಲ ಕಾಣಾ ಮಡಿವಾಳಯ್ಯ ॥೨॥

ಇದಕ್ಕೆ ಮಡಿವಾಳಯ್ಯಗಳ ನಿರೂಪ॥

ದಾಸೋಹವೆಂಬನ್ನಕ್ಕ ಈಶ್ವರಪೂಜೆಯ ಆಚಾರದಲ್ಲಿ ಇರಬೇಕು. ಮಾಡೆನೆಂಬ ನೇಮ ಬೇಡಾ, ಮಾಡಿಹೆನೆಂಬ ಕೃತ್ಯ ಬೇಡಾ. ಈ ಉಭಯಸನ್ಮತವಳವಟ್ಟಲ್ಲಿ ಕಲಿದೇವಂಗೆ ಭಾವ ಶುದ್ಧವಾಯಿತ್ತು ಕಾಣಾ ಚಂದಯ್ಯ॥೧

ಇದಕ್ಕೆ ಚಂದಯ್ಯಗಳ ಬಿನ್ನಹ॥

ಅವಾವ ಕಾಯಕದಲ್ಲಿ ಬಂದರೂ ಭಾವಶುದ್ಧವಾಗಿ ಗುರುಲಿಂಗ ಜಂಗಮಕ್ಕೆ ಮಾಡುವುದೆ ಶಿವಪೂಜೆ· ಅದು ಚಂದೇಶ್ವರ ಲಿಂಗಕ್ಕೆ ಒಪ್ಪವಲ್ಲವೆ ಮಡಿವಾಳಯ್ಯ? ॥೪॥

ಮತ್ತಂ॥ ಲಿಂಗವೆಂಬುದು ಗುರುವಿನ ಹಂಗು. ಗುರುವೆಂಬುದು ಲಿಂಗದ ಹಂಗು. ಈ ಉಭಯಕ್ಕತೀತ ಜಂಗಮಲಿಂಗ ದಾಸೋಹ. ಅದೆ ಚಂದೇಶ್ವರಲಿಂಗಕ್ಕೆ ಕಟ್ಟುಗೊತ್ತು ಕಾಣಾ ಮಡಿವಾಳಯ್ಯ ॥೫॥

ಇದಕ್ಕೆ ಮಡಿವಾಳಯ್ಯಗಳ ವಚನ ॥

ಗುರುವಾದರೂ ಲಿಂಗವ ಪೂಜಿಸಬೇಕು. ಲಿಂಗವಾದರೂ ಲಿಂಗವ ಪೂಜಿಸಬೇಕು. ಜಂಗಮವಾದರೂ ಲಿಂಗವ ಪೂಜಿಸಬೇಕು. ಜಂಗಮಕ್ಕೆ ಲಿಂಗವಿಲ್ಲದೆ ಪ್ರಾಣವಿಲ್ಲ. ಆದಿ ಆಧಾರವಿಲ್ಲದೆ ಜಗವೇನು ಇಲ್ಲ. ಅರಿದಿಹೆನೆಂದರೆ ಅಂಗದಲ್ಲಿ ಲಿಂಗವಿರಬೇಕು. ಕಲಿದೇವಯ್ಯನ ನರಿವುದಕ್ಕೆ ಇದೆ ಮಾರ್ಗ ಚಂದಯ್ಯ ॥೬॥

ಇದಕ್ಕೆ ಚಂದಯ್ಯಗಳ ಬಿನ್ನಹ,

ಭಾವಶುದ್ಧವಾಗಿಪ್ಪದೆ ಗುರುಪೂಜೆ. ಜ್ಞಾನ ಶುದ್ಧವಾಗಿಪ್ಪದೆ ಲಿಂಗಪೂಜೆ. ತ್ರಿಕರಣ ಶುದ್ಧವಾಗಿಪ್ಪದೆ ಜಂಗಮ ಪೂಜೆ. ಆ ತ್ರಿವಿಧ ಭೇದದಲ್ಲಿ ದ್ರಿವಿಧಾರ್ಪಣವ ಸಮರ್ಪಿಸಿ ನಿಂದುದೆ ಚಂದೇಶ್ವರಲಿಂಗಕ್ಕೆ ಅರ್ಪಿತವಯ್ಯ ಮಡಿವಾಳಯ್ಯ ॥೭॥

ಇದಕ್ಕೆ ಮಡಿವಾಳಯ್ಯಗಳ ನಿರೂಪ

ಅರಿವನರಿದಿಹೆನೆಂದು ಕ್ರಿಯೆಯ ಬಿಡಬಹುದೆ? ಮಧುರಕ್ಕೆ ಮಧುರ

ಒದಗಲಾಗಿ ಆ ಸವಿಗೆ ಸವಿ ಕೊರತೆಯುಂಟೆ? ದ್ರವ್ಯಕ್ಕೆ ದ್ರವ್ಯ ಒದಗಲಾಗಿ, ಬಡತನನವಧಿಯುಂಟೆ? ಮಾಡುವ ಮಾಟ ಶಿವಪೂಜೆಯ ನೋಟ ಭಾವವಿರಬೇಕು. ಅದು ಕಲಿದೇವಯ್ಯನ ಮಾಟವಲ್ಲವೆ ಚಂದಯ್ಯ? ॥೮॥

ಇದಕ್ಕೆ ಚಂದಯ್ಯಗಳ ಬಿನ್ನಹ॥

ಕಪಿತ್ತ ಕಾಯುವಿಡಿದು, ಜಲವನೀಸಬಹುದೆ? ಲಿಂಗಪೂಜೆಗೆ ಷೋಡಶೋಪಚಾರ ಬೇಕು. ಅದು ಮಾಡುವನಕ್ಕರ ಕಾಯಕ ನಿಂದಿತ್ತು. ಕಾಯಕ ಒದಗೆ ಮೂರರ ಕೂಟ ಚಂದೇಶ್ವರಲಿಂಗಕ್ಕೆ ಮಡಿವಾಳಯ್ಯ. ॥೯॥

ಇದಕ್ಕೆ ಮಡಿವಾಳಯ್ಯಗಳ ಬಿನ್ನಹ॥ ಕಿಂಚಿತ್ತಾದರೂ ನೇಮವ ಮಾಡುವಲ್ಲಿ ಶೂನ್ಯವಿಲ್ಲದಿರಬೇಕು. ತತ್ವಕ್ಕೆ ತಕ್ಕ ಸಮರ್ಥತ್ವ ಬಚ್ಚಿ ಹೊತ್ತಾದರೆಯು ಶಿವಪೂಜೆಯು ನಿಶ್ಚಯವಾಗಿ ಮಾಡಬೇಕು. ಅದು ತನಗೆ ಸುಚಿತ್ತದ ಹಾದಿ ಕಲಿದೇವರ ದೇವನ ಒದಗು ಕಾಣಾ ಚಂದಯ್ಯ ॥೧೦॥

ಇದಕ್ಕೆ ನುಲಿಯ ಚಂದಯ್ಯಗಳ ಬಿನ್ನಹ

ಗೋಡೆಯ ತೊಳೆವು ಕೆಸರ ಕೆಡಿಸಿಹೆನೆಂಬರೆ ಅದಾರ ವಶ? ನಿಯಮಕ್ಕೆ ಕಡೆ ನಡು ಮೊದಲಿಲ್ಲ. ಒಂದ ಬಿಟ್ಟು ಒಂದ ಹಿಡಿದಿಹೆನೆಂದರೆ ಸಂದಿಲ್ಲ. ಸಂಶಯವದು ಚಂದೇಶ್ವರ ಲಿಂಗಕ್ಕೆ ಮಾಟ ಕಾಣಾ ಮಡಿವಾಳಯ್ಯ ॥೧೧॥

ಇದಕ್ಕೆ ಮಡಿವಾಳಯ್ಯಗಳ ವಚನ ॥

ಜಂಗಮಸೇವೆ ಲಿಂಗವಿರಹಿತವಾಗಿರಬೇಕು. ಲಿಂಗನೆಂಬುದು ಜಂಗಮದಂಗ ಆ ಅಂಗವಿಲ್ಲದೆ ಪ್ರಾಣವುಂಟೆ? ಹಣ್ಣಿಲ್ಲದೆ ರುಚಿಯುರಸುವಂತೆ ನಿನ್ನ ಕಾಯಕದ ಕ್ರಿಯೆಲ್ಲವು ಲಿಂಗವಾದ ಬಳಿಕ ಮತ್ತೇನು ಭಾವಭೇದ? ನೀನೆಂದಂತೆ ಇರಲಿ ಆರೇನೆಂದರೆ ನಿನ್ನ ಮನವ ತಿಳುಹಿಕೊಳ್ಳಲಿ. ಇದಕ್ಕೆ ಕಲಿದೇವಯ್ಯ ಹೊಣೆಗಾರ ಕೊಳಾ ಎನ್ನೊಡೆಯ ಚನ್ನಂದಯ್ಯ. ॥೧೨॥

ಹೀಗೆಂದು ಮಡಿವಾಳತಂದೆಗಳು ನಿರೂಪಿಸಲು ಇದಕ್ಕೆ ತಮ್ಮ ಲಿಂಗಕ್ಕೆ ಕಣ್ಣಿಯ ಮಾಡಿ ಕೊಂಡಿರಬಲ್ಲರೆ ಬಾರೆಂದು ಚಂದಯ್ಯಗಳು ಕರೆವ ಪ್ರಸ್ತಾವದ ವಚನ. ॥

ಇಷ್ಟವೆಂಬುದು ಗುರುವಿನ ಹಂಗು. ಆ ಗುರುವಿಗೆಯೂ ಇಷ್ಟಕ್ಕೆಯೂ ಜಂಗಮವೆ ಪ್ರಾಣವೆಂದು ಅರಿದ ಬಳಿಕ ಆ ಗುರುವು ಇಷ್ಟವು ಜಂಗಮದಲ್ಲಿ ಅಡಕ ನೋಡಾ. ಆ ಗುರುಲಿಂಗ ಜಂಗಮದ ಹಂಗಿಗಳು. ಇದು ಕಾರಣ ಚಂದೇಶ್ವರಲಿಂಗಕ್ಕೆ ಕಣ್ಣಿಯ ಮಾಡಬಲ್ಲರೆ ಬಾರಾ ವಸ್ತು ತಂದೆ॥೧೩॥

ಇವಕ್ಕೆ ಮಡಿವಾಳಯ್ಯಗಳಿಗೆ ನಮಸ್ಕರಿಸಿ ಹೊಣೆಯ ಕೊಂಡು ತನ್ನ ಲಿಂಗ ಸಹಿತ ಬೀಳ್ಕೊಂಡು ನಿಜಗೃಹಕ್ಕೆ ಬಂದು ಆ ಲಿಂಗದ ಕೈಯ್ಯಲ್ಲಿ ಕಾಯಕವ ಮಾಡಿಸಿ, ಆ ಕಣ್ಣಿಯಂ ಮಾರಿ ಹಾಗವ ಕೊಂಡು ಬಾರೆಂದು ಕಳುಹಲು, ಆ ಲಿಂಗವು ಸಂಗನಬಸವಣ್ಣನ ಮಠಕ್ಕೈದಿ ಕಣ್ಣಿಯಂ ಕೊಡಲು, ಇತ್ತ ಬಸವರಾಜದೇವರು ಶಿವಪೂಜೆಯಂ ಮಾಡುತ್ತ ಈ ವೃತ್ತಾಂತಮಂ ತಮ್ಮ ಲಿಂಗದಲ್ಲಿ ಕಂಡು ಇದಿರೆದ್ದು ಕಣ್ಣಿಯಂ ತಂದಯ್ಯಂಗೆ ಶರಣೆಂದು, ಸಾವಿರಹೊನ್ನಂ ಕೊಟ್ಟು ಆ ನುಲಿಯ ತೆಗೆದುಕೊಂಡು ಬೀಳ್ಕೊಡಲಾ ಲಿಂಗವು ಮರಳಿ ಬಂದಾ ಚಂದಯ್ಯಂಗೆ ಹೊನ್ನಂ ಕುಡೆ ಕೊಂಡಾತ ಇದೆಲ್ಲಿಂದ ತಂದೆಯಯ್ಯ ಕಳವಿಂದ ತಂದಿಯೊ ಎಂದು ನುಡಿವ ಪ್ರಸ್ಥಾವದ ವಚನ. ॥

ಸತ್ಯ ಶುದ್ಧಕಾಯಕವಲ್ಲಿ ಬಂದ ದ್ರವ್ಯದಲ್ಲಿ ಚಿತ್ತ ವಿಚ್ಛಂದವಾಗದಿರಬೇಕು. ನೇಮದ ಕೂಲಿಯಿಂದಿನ ನಿತ್ಯ ನೇಮದಲ್ಲಿ ಸಂದಿರಬೇಕು. ನೇಮದ ಕೂಲಿಯ ಬಿಟ್ಟು ಹೇಮದಾಸೆಗೆ ಕಾಮಿಸಿ ದ್ರವ್ಯವ ಹಿಡಿವರೆ ತಾ ಮಾಡುವ ಸೇವೆ ನಷ್ಟವಯ್ಯ! ನಿನ್ನಾಸೆ ವೇಷದ ಪಾಶಕ್ಕೆ ನೀನೆ ಹೋಗು. ನನಗೆ ನಿನ್ನ ಜಂಗಮದ ಪ್ರಸಾದದಾಗೆ ಚಂದೇಶ್ವರಲಿಂಗಕ್ಕೆ ಪ್ರಾಣವಯ್ಯ. ॥೧೪॥

ಮತ್ತಂ॥ ಕಂದಿಸಿ, ಕುಂದಿಸಿ, ಬಂಧಿಸಿ, ನೋಯಿಸಿ, ಕಂಡ ಕಂಡವರ ಬೇಡಿ ತಂದು ಜಂಗಮಲಿಂಗಕ್ಕೆ ಮಾಡಿಹೆನೆಂಬ ದಂಡುಗದ ಮಾಟಕ್ಕೆ ಲಿಂಗ ನೈವೇದ್ಯ ಸಲ್ಲದು. ತನು ಕರಗಿ ಮನ ಬಳಲಿ ಬಂದ ತೆರದನುವನರಿದು ಸಂದಿಲ್ಲದೆ ಸಂಶಯವಿಲ್ಲದೆ ಜಂಗಮಲಿಂಗಕ್ಕೆ ದಾಸೋಹವೆ ಮಾಟ. ಕಾರೆಯ ಸೊಪ್ಪಾದರೂ. ಕಾಯಕದಿಂದ ಬಂದುದ ಲಿಂಗಕ್ಕರ್ಪಿತವಲ್ಲದೆ ದುರಾಸೆಯಿಂದ ಬಂದುದು ಅನರ್ಪಿತ. ಇದು ಕಾರಣ ಸತ್ಯ ಶುದ್ಧ ಕಾಯಕದ ನಿತ್ಯದ್ರವ್ಯವಾದರೆ ಚಂದೇಶ್ವರಲಿಂಗಕ್ಕೆ ನೈವೇದ್ಯ ಸಂದಿತ್ತು ಕೇಳಯ್ಯ. ॥೧೫॥

ಹೀಗೆಂದು ಚಂದಯ್ಯಗಳು ತಮ್ಮ ಲಿಂಗದೇವರ ನೋಡಿ ನೀ ತಂದ ಅನ್ಯ ದ್ರವ್ಯ ಸಹಿತ ನೀನೆಲ್ಲಿಯಾದರೂ ಹೋಗು. ಮೊದಲು ಗುರುಪ್ರಾಜ್ಞೆಗೆಟ್ಟುದೊಂದು ಮತ್ತೆ ಹೋದ ಅಪರಾಧಕ್ಕೆ ಒಡೆಯರ ಸೇವೆಯು ಮಾಡಿಹೆನೆಂದು ಅವಗಡಿಯು ಶರಣ ಮಡಿವಾಳಯ್ಯನ ಹೊಣೆಯು ಕೊಟ್ಟು

ಡೊಂದು ಈ ಎರಡಕ್ಕೆ ಸೀಸೆ ಗುರಿಯಾಗು ಹೋಗೆಂದು ಝುಂಕಿಸಿ ನುಡಿದು ಹೊರಡಿಸಲು, ಆ ಲಿಂಗವು ಚಂದಯ್ಯ ಸಹಿತವಾಗಿ ಮಡಿವಾಳಯ್ಯನ ಮಠಕ್ಕೈದಿ ಈ ವೃತ್ತಾಂತವನೆಲ್ಲವ ಹೇಳಲು ಆ ಮಾಚಯ್ಯನು ಚಂದಯ್ಯಂಗೆ ನಿರೂಪಿಸಿದ ಪ್ರಸ್ಥಾವದ ವಚನ ॥

ಕಾಯಕದಲ್ಲಿ ನಿಂದ ಶರಣಂಗೆ ಸೇವೆಯುವರ ತಪ್ಪ ಹಿಡಿದಿಹೆನೆಂದರೆ ಕಾಯಕವೆಂತು ನಡೆವುದೈಯ್ಯ? ಅವಗುಣಕ್ಕೆ ಮುನಿಯಬೇಕಲ್ಲದೆ ಲಾಂಛನಕ್ಕೆ ಮುನಿಯಬಹುದೆ ? ಮುಗ್ಗಿದ ತುರುಗವ ಕಾಲಕತ್ತರಿಸಿದವರುಂಟೆ? ಕಚ್ಚುವ ತ್ರಿಗುಣಿಗಾಗಿ ಮನೆಯ ಸುಟ್ಟವರುಂಟೆ ? ಕಲಿದೇವರ ದೇವನಲ್ಲಿ ತಪ್ಪ ಹಿಡಿಯಲಿಲ್ಲ ಕೇಳಾ ಚಂದಯ್ಯ ॥೧೬॥

ಇಂತು ಶಿವಲಿಂಗದಲ್ಲಿ ತಪ್ಪ ಹಿಡಿಯಬಹುದೆ ಎಂದು ಮಡಿವಾಳಯ್ಯಗಳು ನುಡಿಯೆ ಅದಕ್ಕೆ ಚಂದಯ್ಯನ ಪ್ರತ್ಯುತ್ತರ ॥

ನುಡಿದ ಮಾತಿಂಗೆ ತಡಬಡ ಬಂದಲ್ಲಿ, ನುಡಿದ ಭಾಷೆಗೆ ಭಂಗನೋಡಯ್ಯ. ಹಿಡಿದ ಕುಳಕ್ಕೆ ಹಾನಿ ಬಂದಲ್ಲಿ, ಒಡಲನಿರಿಸುವುದೇ ಭಂಗನೋಡಯ್ಯ. ಇದು ಕಾರಣ ನಡೆನುಡಿ ಶುದ್ಧವಿಲ್ಲದಿದ್ದರೆ ಚಂದೇಶ್ವರಲಿಂಗವಾದರೂ ತಪ್ಪನೊಳಕೊಳ್ಳ ಕಾಣಾ ಮಡಿವಾಳಯ್ಯ ॥೧೭॥

ಹೀಗೆಂದು ಚಂದಯ್ಯಗಳು ಬಿನ್ನೈಸಲು, ಆತನ ತಿಳುಹುವದಕ್ಕೆ ಅನುಭಾವ ಮಂಟಪದಲ್ಲಿ ಬಸವರಾಜದೇವರು ಪ್ರಭುದೇವರು ಮುಂತಾದ ಗಣಂಗಳ ಕೈಯ್ಯಲಲ್ಲದೆ ಆಗದೆಂದು ಶರಣರ ಸಂಗವೆ ಮುಖ್ಯವೆಂದು ಅಲ್ಲಿಗೆ ಕರೆವ ಪ್ರಸ್ಥಾವದ ವಚನ॥

ಗುರುಪೂಜೆಯನರಿದೆನೆಂದು ಲಿಂಗ ಪೂಜೆಯ ಬಿಡಲಾಗದು. ಲಿಂಗಪೂಜೆಯ ನರಿದೆನೆಂದು ಜಂಗಮದ ಪೂಜೆಯ ಬಿಡಲಾಗದು. ಜಂಗಮಪೂಜೆಯನರಿದೆನೆಂದು, ಶರಣರ ಸಂಗವ ಬಿಡಲಾಗದು. ಇದು ಕಾರಣ ಶರಣರ ಸಂಗದ ಸಮ್ಯಜ್ಞಾನದಲಲ್ಲದೆ ಕಲಿದೇವಯ್ಯನ ಕೂಡುವ ಕೂಟ ಕಾಣಬಾರದು. ಹೋಹ ಬಾರಾ ಚಂದಯ್ಯ ॥೧೮॥

ಹೀಗೆಂದು ಮಡಿವಾಳ ತಂದೆಗಳು ಚಂದಯ್ಯಗಳನು ಆತನ ಅಂಗದ ಮೇಲಣ ಲಿಂಗವೆ ಚರಸೇವೆಯ ಮಾಡಬೇಕೆಂದು ಮೋಹದಿಂ ಲಿಂಗಮೂರ್ತಿಯನು ಅನುಭಾವ ಮಂಟಪಕ್ಕೆ ಬಿಜಯಂಗೈಸಿಕೊಂಡು ಬರಲು

ಆ ಲಿಂಗ ಭಕ್ತ ಮೂರ್ತಿಯು ಮೊದಲು ಕಣ್ಣಿಯ ಬಸವಣ್ಣಂಗೆ ಕುಡಲು, ಅದಕ್ಕೆ ಕೂಲಿಯಾಗಿ ಕೊಟ್ಟ ಸಾವಿರ ಹೊನ್ನಂ ಮರಳಿ ಬಸವಣ್ಣಂಗೆ ಇತ್ತು ಈ ವೃತ್ತಾಂತಮಂ ಹೇಳಲು, ಆ ಪ್ರಸ್ಥಾವದೊಳು ಶರಣಂಗಳಿಗೆ ಚಂದಯ್ಯ ನಮುಸ್ಕರಿಸಿ ತನ್ನ ಕಾಯಕದ ಕ್ರಮುವನು ದಾಸೋಹದ ನೆಲೆಯನು ನಿಷ್ಠೆಯ ಬಗೆಯನು ಎಲ್ಲ ಪ್ರಮಥರು ಕೇಳುವ ಹಾಗೆ ಬಿನ್ನೈಸುವ ಪ್ರಸ್ಥಾವದ ವಚನ ॥

ಕೈದುವಿಡಿದಾಡುವರೆಲ್ಲ ಇರಿವರೇ? ಸಾಧನೆಯ ಮಾಡಬಲ್ಲವರೆಲ್ಲರು ಕಾದಬಲ್ಲರೆ? ಅರ್ಥಿಗೆ ಮಾಡಬಲ್ಲ ಕೃತ್ಯವಂತರೆಲ್ಲರು ಭಕ್ತರಪ್ಪರೇ? ಅದು ಚಂದೇಶ್ವರ ಲಿಂಗಕ್ಕೆ ಮುಟ್ಟದ ಮಾಟಾ ॥೧೯॥

ಮತ್ತಂ॥ ಕಣವ ನಿಚ್ಚೈಸಿದ ಸುಭಟಂಗೆ ಮನೆಯ ಮೇಲಣ ಹಂಗುಂಟೆ? ಅರ್ಥ ಪ್ರಾಣಾಭಿಮಾನವ ಈ ಮೂರನು ಕರ್ತಂಗೆ ಇತ್ತು ಮತ್ತೆ ಹೊತ್ತು ಹೊರೆವಂಗೆ ಸದ್ಭಕ್ತಿಯುಂಟೆ? ಅದು ಚಂದೇಶ್ವರಲಿಂಗಕ್ಕೆ ಮುಟ್ಟದ ಮಾಟ ॥೨೦॥

ಮತ್ತಂ॥ ಗುರುವಿಂಗೆ ತನುವೆಂದಲ್ಲಿ, ಲಿಂಗಕ್ಕೆ ಮನವೆಂದಲ್ಲಿ, ಜಂಗಮಕ್ಕೆ ಧನವೆಂದಲ್ಲಿ, ಮತ್ತೊಂದರಾಸೆಗೆ ಕೊಂಡಾಡಲೇಕೆ? ಅದು ಚಂದೇಶ್ವರ ಲಿಂಗಕ್ಕೆ ದೂರ ॥೨೧॥

ಇಡಿದ ಭೂತಹಿತಕ್ಕೆ ಗುರುಪೂಜೆಯ ಮಾಡಲಿಲ್ಲ. ಅರ್ಥಿಗಾರಿಕೆಯಲ್ಲಿ ಲಿಂಗವ ಬಿಟ್ಟು ಪೂಜಿಸಲಿಲ್ಲ. ರಾಜ ಚೋರರ ಭಯಕ್ಕಂಜಿ ಜಂಗಮ ದಾಸೋಹವ ಮಾಡಲಿಲ್ಲ. ಆವ ಕೃತ್ಯವಾದರು ಮನ ಶುದ್ಧವಾಗಿರಬೇಕು ಚಂದೇಶ್ವರಲಿಂಗವನರಿಯಬಲ್ಲರೆ ॥೨೨॥

ಮತ್ತಂ॥ ಗುರು ಇಷ್ಟವ ಕೊಟ್ಟ. ಕೂಲಿಗೆ ಮುಟ್ಟಿ ಪೂಜಿಸಲಿಲ್ಲ. ಅದಕ್ಕೆ ದೃಷ್ಟವ ನೋಡಿ ತನ್ನ ಬೆಳ್ಳಿಯ ಬೆಟ್ಟದ ಮೇಲಿರಿಸಿದ. ಇಂತು ಗುರುವಿಂಗೆ ಲಿಂಗಕ್ಕೆ ಮಾಡಿ, ಹಿಂದಣ ಮುಂದಣ ಸಂದೇಹಕ್ಕೆ ಈಡಾಗದೆ ಪ್ರಸಿದ್ಧಮಪ್ಪ ಜಂಗಮಲಿಂಗಕ್ಕೆ ಮನ ಸಂದು ಧನವ ಕೊಟ್ಟು ಸರ್ವ ಪದಾರ್ಥವ ಅರ್ಪಿತ ಮಾಡಲಾಗಿ ಚಂದೇಶ್ವರಲಿಂಗಕ್ಕೆ ಹಿಂದು ಮುಂದೆಂಬುದಿಲ್ಲ. ॥೨೩॥

ಮತ್ತಂ॥ ಸಂಸಾರ ಸಾಗರ ಮಧ್ಯದೊಳಗೆ ಬೆಳೆದ ಹೊಡೆತೆನೆಯ ಹುಲ್ಲ ಕೊಯಿತಂದು, ಮತ್ತಂ ಮಂಕಣ ತೆಗೆದು ಕಣ್ಣಿಯ ಮಾಡಿ

ಇಹಪರವೆಂಬ ಉಭಯದ ಗಂಟನಿಕ್ಕಿ ತುದಿಯಲ್ಲಿ ಮಾಟಕೂಟವೆಂಬ ಮನದ ಕುಣಿಕೆಯೊಳಗೆ ಕಾಯಕವಾಯಿತ್ತು. ಇದು ಕಾರಣ ಚಂದೇಶ್ವರ ಲಿಂಗವೆಂಬ ಭಾವವೆನಗಿಲ್ಲ. ॥೬೪॥

ಹೀಗೆಂದು ಚಂದಯ್ಯಗಳು ತಮ್ಮ ಕಾಯಕದ ವಿವರವನು ದಾಸೋಹದ ನಿಷ್ಠೆಯನು ಗಣಂಗಳ ಮುಂದೆ ಬಿನ್ನೈಸಲು, ಆ ಪ್ರಸ್ತಾವದೊಳು ಪ್ರಭುದೇವರು ಲಿಂಗವ ಬಿಡಲಾಗದೆಂದು ನಿರೂಪಿಸಿದ ಪ್ರಸ್ತಾವದ ವಚನ॥

ಪರುಷವಾದರು ಒಂದರಲ್ಲಿ ಇರಿಸಿರಬೇಕು. ರತ್ನವಿಶೇಷವಾದರು ಕುಂದಣದಲ್ಲಿ ಬಂಧಿಸಿ ಸಂದಿಸಿರಬೇಕು. ಲಿಂಗವ ಹಿಡಿವಲ್ಲಿ ಪೂಜಿಸುವ ಅಂಗವಿರಬೇಕು. ಇದು ಕಾರಣ ಗುಹೇಶ್ವರ ಲಿಂಗವನರಿದು, ಮರೆಯಲಿಲ್ಲ ಕಾಣಾ ಚಂದಯ್ಯ. ॥೬೫॥

ಹೀಗೆಂದು ಪ್ರಭುದೇವರು ಜಂಗಮ ದಾಸೋಹವಾದರು ಲಿಂಗವ ಬಿಡಲಾಗದೆಂದು ನಿರೂಪಿಸಲು, ಇದಕ್ಕೆ ಚಂದಯ್ಯಗಳು ಬಿನ್ನೈಸುವ ಪ್ರಸ್ತಾವದ ವಚನ. ॥

ಗುರುಸೇವೆಯ ಮಾಡಿದರೆ ಇಹದಲ್ಲಿ ಸುಖ. ಲಿಂಗಸೇವೆಯ ಮಾಡಿದರೆ ಪರದಲ್ಲಿ ಸುಖ. ಜಂಗಮಸೇವೆಯ ಮಾಡಿದರೆ ಇಹಪರವೆಂಬುಭಯ ನಾಸ್ತಿ. ಇದು ಚಂದೇಶ್ವರ ಲಿಂಗಕ್ಕೆ ಭಾವ ಕಾಣಾ ಪ್ರಭುವೆ. ॥೬೬॥

ಇದಕ್ಕೆ ಪ್ರಭುದೇವರ ನಿರೂಪ॥ ಅಂಗವುಳ್ಳನ್ನಬರ ಲಿಂಗಪೂಜೆಯಿಂಬೇಕು. ಲಿಂಗವೆಂಬ ಮೂರ್ತಿಯುಳ್ಳನ್ನಬರ ಸಂದಿಲ್ಲದೆ ಅರ್ಪಿಸಬೇಕು. ಅಂಗವಳಿದು ಮತ್ತೆ ಲಿಂಗವೆಂಬ ಭಾವ ಹಿಂಗದಿರಬೇಕು. ಅದು ಗುಹೇಶ್ವರ ಲಿಂಗದ ಇರವು ಚಂದಯ್ಯ ॥೬೭॥

ಇದಕ್ಕೆ ಚಂದಯ್ಯಗಳ ಬಿನ್ನಹ.

ಗುರುಪೂಜಕರು ಲಿಂಗವ ನೆತ್ತಬಲ್ಲರು? ಲಿಂಗಪೂಜಕರು ಜಂಗಮವನೆತ್ತಬಲ್ಲರು? ಜಂಗಮ ದಾಸೋಹ ಉಭಯ ಸಂಗನಾಸ್ತಿ. ಅದು ಚಂದೇಶ್ವರ ಲಿಂಗದ ಅರಿವು ಕಾಣಾ ಪ್ರಭುವೆ ॥೬೮॥

ಇದಕ್ಕೆ ಪ್ರಭುದೇವರ ನಿರೂಪ॥ ಐದಿಂದ್ರಿಯವನರಿವಲ್ಲದೆ ಒಂದಿಂದ್ರಿಯಕ್ಕೆ ಸಂದ ಗುಣವನರಿಯಬಾರದು. ಆಗುಣ ಏಕಮೂರ್ತಿ ತ್ರಿವಿಧರೂಪವಾದ ಕಾರಣ. ಪೂಜೆ ಎಂಬುದು ಪುಣ್ಯವೆಂಬ ಭಾವ ವಿಲ್ಲದೆ

ಮಾಡಿಪರೆ ನಮ್ಮ ಗುಹೇಶ್ವರ ಲಿಂಗಕ್ಕೆ ಅನ್ಯವಿಲ್ಲ ಕಾಣಾ ಚಂದಯ್ಯಾ ॥೨೯॥

ಹೀಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಚಂದಯ್ಯಗಳು ಗುರುವಾದರು ಲಿಂಗವಾದರು ಜಂಗಮವಾದರು ಜಂಗಮ ದಾಸೋಹ ವೆ ಬೇಕು. ನನಗೆ ಹೇಳುವಾಗ ನಿನಗೆ ಬೇಡವೆ ಎಂದು ಬಿನ್ನೈಸುವ ಪ್ರಸ್ಥಾವದ ವಚನ॥

ಗುರುವಾದರು ಕಾಯಕದಿಂದವೆ ಜೀವನ್ಮುಕ್ತಿ, ಲಿಂಗವಾದರು ಕಾಯಕದಿಂದವೆ ಸಿಲಿಯ ಕುರುಹು ಹರಿವುದು. ಜಂಗಮವಾದರು ಕಾಯ ಕದಿಂದವೆ ತನ್ನವೇಷದ ಪಾಶ ಹರಿವುದು. ಗುರುವಾದರು ಚರಸೇವೆಯ ಮಾಡಬೇಕು. ಲಿಂಗವಾದರು ಚರಸೇವೆಯ ಮಾಡಬೇಕು. ಜಂಗಮ ವಾದರು ಚರಸೇವೆಯ ಮಾಡಬೇಕು. ಇದು ಚಂದೇಶ್ವರ ಲಿಂಗದ ಅರಿವು ಕೇಳಾ ಪ್ರಭುವೆ ॥೩೦॥

ಮತ್ತಂ॥ ಗುರುವನರಿದು ಪರಗುರು ತಾನಾಗಬೇಕು. ಲಿಂಗವಾದರು ನೈಷ್ಠೆಯಾಗಿ ಪೂಜೆಗೊಳಬೇಕು. ಜಂಗಮವಾದರು ತ್ರಿವಿಧವ ಮರೆದು ಜಂಘೆ ನಾಸ್ತಿಯಾಗಿ ಜಂಗಮವಾಗಬೇಕು. ಜಂಗಮವಾದರು ಜಂಗ ಮಕ್ಕೆ ನೀಡಿ ಮಾಡಿ ಸಂಪಳಿದು ಚಂದೇಶ್ವರ ಲಿಂಗವನರಿಯಬೇಕು ಕೇಳಾ ಪ್ರಭುವೆ ॥೩೧॥

ಇದಕ್ಕೆ ಪ್ರಭುದೇವರ ನಿರೂಪ॥

ಆರಾರ ಭಾವ ತೋರಿದಂತೆ ಆ ಕುಳಕ್ಕೆ ಸುಖವಾಗಿಪ್ಪನು. ಹಿಡಿದ ವ್ರತನೇಮಂಗಳಲ್ಲಿ ಬಿಡುಗಡೆ ಇಲ್ಲದಿರಬೇಕು. ತಾ ಮಾಡುವ ಎಂದಿನ ನಿತ್ಯ ನೇಮಂಗಳಲ್ಲಿ ಭಾವ ಶುದ್ಧವಾಗಿಪ್ಪಡೆ ಗುಹೇಶ್ವರ ಲಿಂಗಕ್ಕೆ ಅನ್ಯ ಭಿನ್ನವಿಲ್ಲ ಮಡಿವಾಳಯ್ಯ ॥೩೨॥

ಇದಕ್ಕೆ ಮಡಿವಾಳಯ್ಯಗಳ ವಚನ॥

ಅಂಗದ ಕ್ರಿಯೆ ಲಿಂಗದ ನಿಜ. ಲಿಂಗನಿಜವೆ ಜಂಗಮ. ಆ ಜಂಗಮದ ಕ್ರಿಯಲ್ಲಿ ಲಿಂಗಮಯ. ಜಂಗಮದ ಸೇವೆಯೆ ಲಿಂಗದ ಕಳೆ. ಆ ಲಿಂಗದ ಕಳೆಯೆ ಜಂಗಮ. ಜಂಗಮದಿಂದೊಗೆದುದೆ ಪ್ರಸಾದ. ಪ್ರಸಾದದೊದವೆ ಲಿಂಗೈಕ್ಯವು. ಇವು ಗುರುವು ನಾನು ನಿಜವ ಸಾಧಿಸಿದೆನು ನಮ್ಮ ಕಲಿದೇವರ ದೇವನ ಬಸವಣ್ಣನಿಂದ ಕೇಳಯ್ಯಾ ಚಂದಯ್ಯಾ ॥೩೩॥

ಇದಕ್ಕೆ ಚಂದಯ್ಯಗಳ ವಚನ॥

ಒಂದ ಬಿಟ್ಟು ಒಂದ ಹಿಡಿದಲ್ಲಿ ಆ ಮೂರಂಗ ಒಂದು ಇಲ್ಲ. ಹಿಡಿದ ಭಾವ ಒಂದುಂಟಾಯಿತ್ತಾದಡೆ ಉಭಯದ ಸಂಗ ಸಲೆ ಸಂದಿತ್ತು. ಅದು ಸಂಗನಬಸವಣ್ಣ ಪ್ರಿಯ ಚಂದೇಶ್ವರ ಲಿಂಗಕ್ಕೆ ಸಂದಿತ್ತು ಮಡಿವಾಳ ಮಾಚಯ್ಯ ॥೩೪॥

ಮತ್ತಂ॥ ಶಿಷ್ಯಂಗೆ ಗುರು ಬೋಧಿಸುವಲ್ಲಿ ತನ್ನನಳಿದು, ಲಿಂಗವ ತೋರಿಸಬೇಕು. ಲಿಂಗ ಸಂಗ ನೆನಹಾದಲ್ಲಿ ಆ ಲಿಂಗಕ್ಕೆ ಉಂಬ ಬಾಯಿ ಜಂಗಮವಾದ ಕಾರಣ ಆ ಜಂಗಮ ಲಿಂಗದ ದಾಸೋಹದಿಂದ ಬೇರೊಂದಂಗವಿಲ್ಲ. ಸಂಗನ ಬಸವಣ್ಣ ಪ್ರಿಯ್ಯ ಚೆಂದೇಶ್ವರಲಿಂಗವ ಹಿಂಗದ ಭಾವ ಕಾಣಾ ಮಡಿವಾಳಯ್ಯ ॥೩೫॥

ತನುಭಾವವನರಿದಿಪ್ಪುದು ಗುರುಭಕ್ತಿ. ಮನಭಾವವನರಿದಿಪ್ಪುದು ಲಿಂಗಭಕ್ತಿ. ಎರಡುಭಾವವನೆ ಮರೆದು ತ್ರಿವಿಧಮಲತ್ರಯಂಗಳ ಮರೆದಿಪ್ಪುದು ಜಂಗಮಭಕ್ತಿ. ಈ ಗುಣ ನಿಶ್ಚಯವಾಗಿ ನಿಂದು ಸಂಗನಬಸವಣ್ಣ ಪ್ರಿಯ ಚಂದೇಶ್ವರ ಲಿಂಗವನರಿದುದು ॥೩೬॥

ಹೀಗೆಂದು ಚಂದಯ್ಯಗಳು ತಮ್ಮ ಭಕ್ತಿ ಜ್ಞಾನದಾಚಾರದ ದಾಸೋಹವು ಸಂಗನಬಸವಣ್ಣಂಗೆ ಪ್ರಿಯವೆಂದು ಬಿನ್ನೈಸಲು, ಆ ಪ್ರಸ್ಥಾವದೊಳು ಪ್ರಭುದೇವರು ಮತ್ತಂ ಬಸವಣ್ಣನ ಸ್ವರೂಪಮಂ ಹೇಳಿ ಆತನ ಕೇಳಿ ಬದುಕೆಂದು ನಿರೂಪಿಸುವ ಪ್ರಸ್ಥಾವದ ವಚನ ॥

ಅಂಗದಲ್ಲಿ ಅಳವಟ್ಟಿಪ್ಪ ಆಚಾರವೆ ಲಿಂಗವೆಂದರಿದನು. ಮನದಲ್ಲಿ ಬೆಳಗುತ್ತಿಪ್ಪ ಅರಿವೆ ಜಂಗಮವೆಂದರಿದನು. ಈ ಎರಡರ ಸಂಗವೆ ತಾನೆಂದರಿದನು. ಮಾಡುವ ದಾಸೋಹವೆ ಲಿಂಗಜಂಗಮವೆಂದರಿದನು. ನಮ್ಮ ಗುಹೇಶ್ವರಲಿಂಗದಲ್ಲಿ ಸಂಗನಬಸವಣ್ಣನ ನಿಲವನರಿಯಬೇಕು ಕೇಳಾ ಚಂದಯ್ಯ ॥೩೭॥

ಹೀಗೆಂದು ಪ್ರಭುದೇವರು ಬಸವರಾಜದೇವರ ನೋಡಿ ತಿಳಿದು ಬದುಕೆಂದು ನಿರೂಪಿಸಲು, ಇದಕ್ಕೆ ಬಸವರಾಜದೇವರು ಆ ಚಂದಯ್ಯಗಳ ಜಂಗಮದ ದಾಸೋಹದ ನಿಷ್ಠೆಗೆ ಶರಣೆಂಬ ಪ್ರಸ್ಥಾವದ ವಚನ॥

ಜಂಗಮಸೇವೆಯೆ ಗುರುಪೂಜೆ ಎಂದರಿದ. ಜಂಗಮಸೇವೆಯೇ ಲಿಂಗಪೂಜೆ ಎಂದರಿದ. ಜಂಗಮಸೇವೆಯೆ ತನ್ನಿರವೆಂದರಿದ. ಜಂಗಮಸೇ

ವೆಯೆ ತನ್ನ ನಿಜನೆಂದರಿಸ. ಜಂಗಮಸೇವೆಯೆ ತನ್ನ ಸ್ವಯವೆಂದರಿದ. ಜಂಗಮ ಸೇವೆಯೆ ನಿತ್ಯಪದವೆಂದರಿದ. ಇದು ಕಾರಣ ನಮ್ಮ ಕೂಡಲಸಂಗಮದೇವರಲ್ಲಿ ಜಂಗಮ ಪ್ರಾಣಿಯಾದ ಚಂದಯ್ಯನ ಹಳೆಯ ಮಗನಾಗಿ ಆತನ ಶ್ರೀ ಚರಣಕ್ಕೆ ಶರಣೆಂದು ಶುದ್ಧನಾದೆನು. ಆ ಮಹಿಮನ ಘನವ ನಾನೆತ್ತ ಬಲ್ಲೆನಯ್ಯ ಪ್ರಭುವೆ ?॥೩೮॥

ಇದಕ್ಕೆ ಪ್ರಭುದೇವರು ಬಸವಣ್ಣ ನೀನು ಅರಿಯೆನೆನಬಹುದೆ ? ಕುರಿತು ಬಂದ ಠಾವಿನಲ್ಲಿ ಮರೆಯ ಮಾಡಿ ನುಡಿವುದುಚಿತವೆ ? ಚಂದಯ್ಯಂಗೆ ನೀನೇನ ಮಾಡಿಯೂ ನಿಜವ ಹೇಳೆಂದು ನಿರೂಪಿಸಿದ ಪ್ರಸ್ಥಾವದ ವಚನ॥

ಆದಿಯಲ್ಲಿ ನೀನೆ ಗುರುವಾದ ಕಾರಣ ನಿನ್ನಿಂದ ಹುಟ್ಟಿತ್ತು ಲಿಂಗ. ಆದಿಯಲ್ಲಿ ನೀನು ಲಿಂಗವಾದ ಕಾರಣ ನಿನ್ನಿಂದ ಹುಟ್ಟಿತ್ತು ಜಂಗಮ. ಆದಿಯಲ್ಲಿ ನೀನು ಜಂಗಮವಾದ ಕಾರಣ ನಿನ್ನಿಂದ ಹುಟ್ಟಿತ್ತು ಪ್ರಸಾದ. ಆದಿಯಲ್ಲಿ ನೀನೆ ಪ್ರಸಾದಿಯಾದ ಕಾರಣ ನಿನ್ನಿಂದ ಹುಟ್ಟಿತ್ತು ಪಾದೋದಕ. ಇಂತೀ ಗುರುಲಿಂಗ ಜಂಗಮ ಪ್ರಸಾದ ಪಾದೋದಕ ಸ್ವರೂಪ ನೀನೆಯಾದ ಕಾರಣ ಜಂಗಮ ಪ್ರಾಣಿಯಾಗಿ ಸದಾಚಾರಿಯಾದೆ ಅದು ಕಾರಣ ನೀನೆ ಸರ್ವಾಚಾರ ಸಂಪನ್ನನಾಗಿ ಪೂರ್ವಾಚಾರಿ ನೀನೆಯಾದ ಕಾರಣ ಗುಹೇಶ್ವರ ಲಿಂಗದಲ್ಲಿ ಚಂದಯ್ಯಂಗೆ ಲಿಂಗದ ನಿಜವ ತಿಳಿಸಾ ಸಂಗನ ಬಸವಣ್ಣಾ ॥೩೯॥

ಹೀಗೆಂದು ಪ್ರಭುದೇವರು ಆ ಬಸವರಾಜದೇವರ ಆದಿ ಅನಾದಿಯ ನೆತ್ತಿ ಗುರುಲಿಂಗ ಜಂಗಮ ಪ್ರಸಾದ ಪಾದೋದಕ ಸ್ವರೂಪ ಬ್ರಹ್ಮನೆ ನೀನೇ ಎಂದು ಪೂರ್ವಾಚಾರಿ ನೀನೇ ಎಂದು ಕೊಂಡಾಡಿ ಚಂದಯ್ಯನ ತಿಳುಹೆನಲು, ಆ ಬಸವರಾಜದೇವರು ನಾನೇನ ಬಲ್ಲೆನು. ಎನಗೆ ನಿಜವ ತಿಳುಹಿದಾತ ಚನ್ನಬಸವಣ್ಣ. ಆತನ ಕೇಳುವದೆಂದು ಬಿನ್ನೈಸುವ ಪ್ರಸ್ಥಾವದ ವಚನ॥

ಮೆಲ್ಲಮೆಲ್ಲನೆ ಭಕ್ತಾದ್ವೈಕ್ಯಾಂತವಾದೆನೆಂದು ತಾಮಸ ಜ್ಞಾನದಿಂದಿರಲು, ಅದಕ್ಕೆ ನೀನು ನಿತ್ಯನ ಪಡೆನು ಬಂದೆಯಾ ಎಂದು ನಿಂದ ಸ್ಥಲದಲ್ಲಿಯೆ ನಿಜ ಷಡುಸ್ಥಲವಡಗಿರ್ದಡೆ ಜಂಗಮದಾಸೋಹವೇಕೆಂದು ಹೇಳಿ ನಿಜವ ಕರುಣಿಸಿದನಾಗಿ ಲಿಂಗ ಜಂಗಮದ ಭೇದವಂ ಚನ್ನ

ಬಸವಣ್ಣ ಬಲ್ಲ, ನಾನು ಆತ ಇರಿಸಿದಂತೆ ಇಪ್ಪೆನಯ್ಯಾ. ಇದು ಕಾರಣ ಕೂಡಲಸಂಗಮದೇವರಲ್ಲಿ ಚಂದಯ್ಯಂಗೆ ಶರಣೆಂದು ಶುದ್ಧನಯ್ಯಾ ಪ್ರಭುವೆ ॥೪೮॥

ಹೀಗೆಂದು ಬಸವರಾಜದೇವರು ನಾನರಿಯೆ ಚನ್ನಬಸವಣ್ಣನ ಕೇಳೆಂದು ಬಿನ್ನೈಸಲು, ಅದಕ್ಕೆ ಚಂದಯ್ಯಗಳು ತಮ್ಮ ಸುಜ್ಞಾನಾಚಾರ ಜಂಗಮ ದಾಸೋಹ ನಿರ್ಣಯವೆಲ್ಲವು ಚನ್ನಬಸವಣ್ಣಂಗೆ ಪ್ರಿಯವೆಂದು ಬಿನ್ನೈ ಸುವ ಪ್ರಸ್ಥಾವದ ವಚನ. ॥

ಜಂಗಮಸೇವೆಯು ಚಿತ್ತಶುದ್ಧವಾಗಿ ಮಾಡುವಲ್ಲಿ ಗುರುಪೂಜೆ ಸಂದಿತ್ತು. ಜಂಗಮ ಸೇವೆಯು ಚಿತ್ತಶುದ್ಧವಾಗಿ ಮಾಡುವಲ್ಲಿ ಲಿಂಗ ಪೂಜೆ ಸಂದಿತ್ತು. ಜಂಗಮದಾಸೋಹದಿಂದ ಸರ್ವ ಸಂಪದವಾಯಿತ್ತು. ಆ ಗುಣವನರಿತು ಮಾಡಲಾಗಿ ಬಟ್ಟಬಯಲು ಕಾಣಬಂದಿತ್ತು. ಹುಟ್ಟುವ ಹೊಂದುವ ನೆಲೆ ಇತ್ತಲೆ ಉಳಿಯಿತ್ತು ಚನ್ನ ಬಸವಣ್ಣ ಪ್ರಿಯ ಚಂದೇ ಶ್ವರಲಿಂಗವನರಿಯಲಾಗಿ. ॥೪೧॥

ಮತ್ತಂ॥ ಜಂಗಮ ನಮಸ್ಕಾರವೆ ಗುರುಪೂಜೆ. ಜಂಗಮಪೂಜೆಯೆ ಲಿಂಗಪೂಜೆ. ಜಂಗಮತೃಪ್ತಿಯೆ ತನಗೆ ಪ್ರಸನ್ನ. ತನಗೆ ಪ್ರಸಾದವಾದುದೆ ನಿತ್ಯ. ಪ್ರಸಾದದಾಗು ಚನ್ನಬಸವಣ್ಣ ಪ್ರಿಯ ಚಂದೇಶ್ವರಲಿಂಗಕ್ಕೆ ಕೊಟ್ಟ ಗೊತ್ತು ಕಾಣಾ ಸಂಗನಬಸವಣ್ಣ ಪ್ರಭುವೆ. ॥೪೨

ಇದಕ್ಕೆ ಪ್ರಭುದೇವರು ನಿರೂಪಿಸಿದ ಪ್ರಸ್ಥಾವದ ವಚನ. ॥

ಕಣ್ಣು ಕಂಡಲ್ಲದೆ ಮನ ನೆನೆಯದು. ಮನ ನೆನೆವಲ್ಲಿಗೆ ಕಾಲು ನಡೆವುದು. ಕಾಲನಡೆದಲ್ಲದೆ ಕೈಯ್ಯಿ ಪೋಗುವುದು. ಕಾಲೆಂಬರೆ ನೀ ಚರಿ ಸುವ ವರ್ತನೆ. ಆ ವರ್ತನಾಚಾರವೆಲ್ಲವು ಲಿಂಗ ಇದು ಕಾರಣ ಲಿಂಗವ ಹಿಂಗದ ಮಾಟ ಮೀಸಲಿಲ್ಲದ ಮನೆದೇವರ ಹಬ್ಬದಂತೆ ನಮ್ಮ ಗುಹೇ ಶ್ವರ ಲಿಂಗಕ್ಕೆ ಇದೆ ಬೇಹ ಶೌಚ ಕೇಳಾ ಚಂದಯ್ಯ. ॥೪೩॥

ಹೀಗೆಂದು ಪ್ರಭುದೇವರು ನಿರೂಪಿಸಲು ಆ ಚಂದಯ್ಯಗಳು ಲಿಂಗ ಜಂಗಮದ ನಿಜವನು ಚನ್ನಬಸವಣ್ಣನಿಂದ ತಿಳುಹಿಕೊಡೆಂದು ಪ್ರಭು ದೇವರ ಬೆಸಗೊಂಬ ಪ್ರಸ್ಥಾವದ ವಚನ. ॥

ಎನ್ನ ಸತ್ಕ್ರಿಯೆ ಬಸವಣ್ಣನು, ಎನ್ನ ಸುಜ್ಞಾನವೆ ಚನ್ನಬಸವ ಣ್ಣನು, ಈ ಎರಡರ ಏಕ ಭಾವದ ಪ್ರಭುವು ನೀವು. ನಿಮ್ಮೆಲ್ಲರ ನಿಷ್ಠೆಯು

ನಿಜವೆ ಪಡಿಪಾಳಯ್ಯನು. ಇಂತೀ ಚತುರ್ವಿಧ ಎನಗೆ ಬೇಕಾದ ಕಾರಣ ಸಂಗನಬಸವಣ್ಣಪ್ರಿಯ ಚಂದೇಶ್ವರ ಲಿಂಗದಲ್ಲಿ ಇಷ್ಟಲಿಂಗದ ನಿಜವೆ ದಾಸೋಹವೆಂಬುದ ಚನ್ನಬಸವಣ್ಣನಿಂದ ತಿಳಿಹಿಕೊಡಾ ಪ್ರಭುವೆ. ॥೪೪॥

ಹೀಗೆಂದು ಚಂದಯ್ಯಗಳು ನಿಶ್ಚೈಸಲು, ಆ ಪ್ರಭುದೇವರು ಚನ್ನ ಬಸವಣ್ಣ ನೀನೆ ಹೇಳೆಂದು ನಿರೂಪಿಸಿದ ಪ್ರಸ್ಥಾವದ ವಚನ. ॥

ಅಂಗದ ಲಿಂಗವೆ ಮನದ ಲಿಂಗ, ಮನದ ಲಿಂಗವೆ ಭಾವದ ಲಿಂಗ, ಭಾವದ ಲಿಂಗವೆ ಜಂಗಮ ದಾಸೋಹ, ದಾಸೋಹವೆಂಬುದು ಸಂದಿಲ್ಲದ ನಿಜ ನೋಡಾ! ಅದರಂದವನೆ ತಿಳಿದು, ನಿಂದ ನಿಲುಕಡೆಯ ಭೇದವನೆ ಕೇಳಬೇಕೆಂದು ಬಂದಲ್ಲಿಯೆ ತಿಳುಹಬೇಕಯ್ಯ. ಇಂತೀ ಪ್ರಕಾರದಲ್ಲಿ ನಂದ ಸೌಖ್ಯದ ಭೇದವನು ಸಂದಿಲ್ಲದ ಲಿಂಗದ ನಿಜವನು ಇಂದು ನಮ್ಮ ಗುಹೇಶ್ವರ ಲಿಂಗದಲ್ಲಿ ಚಂದಯ್ಯಂಗೆ ತಿಳುಹಿಕೊಡಾ ಚನ್ನಬಸವಣ್ಣಾ. ॥೪೫

ಹೀಗೆಂದು ಪ್ರಭುದೇವರು ನಿರೂಪಿಸಲು ಇದಕ್ಕೆ ಚನ್ನಬಸವರಾಜದೇವರು ನಿರ್ಣಯವಾಗಿ ನಿರೂಪಿಸಿದ ಪ್ರಸ್ಥಾವದ ವಚನ॥

ಶ್ರೀ ಗುರುಕರುಣವೆ ಲಿಂಗ, ಲಿಂಗದ ನಿಜವೆ ಜಂಗಮ, ಇಂತು ಈ ಬಹಿರಂಗದ ವರ್ತನೆ ಇನ್ನು ಅಂತರಂಗದ ಸುಜ್ಞಾನವೆ ಜಂಗಮ, ಆ ಜಂಗಮದ ನಡೆವ ಸತ್ಕ್ರಿಯೆ ಲಿಂಗ, ಆ ಉಭಯದ ಏಕತ್ವ ಸಿದ್ಧಿಯೆ ಗುರು. ಇದು ಕಾರಣ ಅಂಗತ್ರಯದಲ್ಲಿ ಲಿಂಗತ್ರಯ ಸಂಬಂಧವಾದಲ್ಲಿ ಜಂಗಮ ದಾಸೋಹವಿಲ್ಲದಡೆ ಲಿಂಗತೃಪ್ತಿ ಇಲ್ಲ. ಅಂಗದ ಮೇಲೆ ಲಿಂಗವಿಲ್ಲದಿರ್ದಡೆ ಜಂಗಮ ಸೇವೆಯ ಕೈಕೊಳ್ಳ. ಅದು ಕಾರಣ ಒಂದ ಬಿಟ್ಟು ಒಂದರಲ್ಲಿ ನಿಂದರೆ ಅಂಗವಿಲ್ಲದ ಆತ್ಮನಂತೆ ಶಕ್ತಿ ಇಲ್ಲದ ಶಿವನಂತೆ ದೀಪವಿಲ್ಲದ ಪ್ರಕಾಶದಂತೆ. ಒಂದಂಗ ಶೂನ್ಯವಾಗಿ ಭಕ್ತಿಯುಂಟೆ? ಅವಯವ ಹೀನನು ರಾಯ ಪಟ್ಟಕ್ಕೆ ಸಲುವನೆ? ಲಿಂಗಹೀನನು ಭಕ್ತಾಚಾರಕ್ಕೆ ಸಲುವನೆ? ಅದು ದೇವತ್ವಕ್ಕೆ ಸಲ್ಲದು. ನಮ್ಮ ಕೂಡಲ ಚನ್ನ ಸಂಗಯ್ಯನಲ್ಲಿ ತ್ರಿವಿಧ ಸನ್ಮತವೆ ಚರಸೇವೆಯಯ್ಯ ಚಂದಯ್ಯ ಪ್ರಭುವೆ ॥೪೬॥

ಮತ್ತಂ॥ ಜಂಗಮವೆ ಪರವೆಂಪರಿದಡೇನು? ಆ ಜಂಗಮದಂಗವಲ್ಲವೆ ಲಿಂಗ? ಆ ಲಿಂಗದ ಚೈತನ್ಯದರಿವೆಲ್ಲವು ಜಂಗಮವಲ್ಲವೆ? ಅಂಗವಿಲ್ಲದ ಜೀವ ಆತ್ಮವಿಲ್ಲದಂಗಕ್ಕೆ ಸರ್ವಯೋಗದ ಸುಖ ಉಂಟೇ ? ಮರ

ನಿಲ್ಲದ ಹಣ್ಣುಂಟೆ? ಹಣ್ಣಿಲ್ಲದ ಸ್ವಾದವುಂಟೆ? ಹೀಗಿರುವುದಕ್ಕೆ ಕ್ರಮ. ಅಂಗವೇ ಮಣ್ಣು ಲಿಂಗವೆ ಮರನು ಫಲವೆ ಜಂಗಮ ರುಚಿಯೆ ಪ್ರಸಾದ. ಇದು ಕಾರಣ ಕೂಡಲ ಚನ್ನಸಂಗಯ್ಯನಲ್ಲಿ ಸಾಕಾರಲಿಂಗವೆ ಜಂಗಮ ಡಂಗವಯ್ಯ ಪ್ರಭುವೆ ॥೪೭॥

ಹೀಗೆಂದು ಚನ್ನಬಸವೇಶ್ವರ ದೇವರು ನಿರೂಪಿಸಲು, ಅದಕ್ಕೆ ಪ್ರಭು ದೇವರು ಸಾಮ್ಯವಾಗಿಯೆ ನುಡಿದು ಚನ್ನಬಸವಣ್ಣನ ಪ್ರಸಾದ ವಾಕ್ಯವ ಕೇಳೆಂದು ಚಂದಯ್ಯಂಗೆ ನಿರೂಪಿಸಿದ ಪ್ರಸ್ಥಾವದ ವಚನ॥

ಆಚಾರವೆ ಲಿಂಗ, ಆಚಾರದರಿವೆ ಜಂಗಮ, ಅಂಗವೆ ಲಿಂಗಚೈತನ್ಯ. ಚೈತನ್ಯವೇ ಜಂಗಮ ಜಂಗಮ, ಸೇವೆಯೆ ಲಿಂಗ ಕೊಂಬುದು. ಜಂಗಮ ನಮ್ಮ ಗುಹೇಶ್ವರನ ಶರಣರು ಮಚ್ಚುವಂತೆ ಮಡಿವಾಳನ ಕಾಯಕವಂತೆ ನಿರೂಪಿಸಿದ ಚನ್ನಬಸವಣ್ಣನ ಕರುಣದಲ್ಲಿ ಬದುಕಾ ಚಂದಯ್ಯ ॥೪೮॥

ಹೀಗೆಂದು ಪ್ರಭುದೇವರು ಚನ್ನಬಸವಣ್ಣನ ನಿರೂಪವ ಕೇಳಿ, ಬದುಕೆಂದು ಹೇಳಲಾ ಚಂದಯ್ಯಗಳು ನಿರೂಪಕ್ಕೆ ಒಪ್ಪಿ ಒಡಂಬಟ್ಟು ತಮ್ಮ ಇಷ್ಟಲಿಂಗಮಂ ಧರಿಸಿಕೊಂಡು ಚಿತ್ತ ನಿಸ್ತರಂಗವನೈದಿ ಬಸವಣ್ಣ ಮೊದಲಾದ ಶರಣರ ಸಮ್ಯಜ್ಞಾನ ಎನಗಾಯಿತ್ತೆಂದು ಬಿನ್ನೈಸಿದ ಪ್ರಸ್ಥಾವದ ವಚನ॥

ಎನ್ನಂಗ ಸತ್ಕ್ರಿಯೆ ಬಸವಣ್ಣನು. ಎನ್ನ ಲಿಂಗ ಸತ್ಕ್ರಿಯೆ ಚನ್ನಬಸವಣ್ಣನು. ಎನ್ನ ಅರಿವಿನ ಸತ್ಕ್ರಿಯೆ ಪ್ರಭುದೇವರು. ಎನ್ನ ದಾಸೋಹ ನಿಷ್ಠೆಯೆ ಮಡಿವಾಳಯ್ಯನು. ಇದು ಕಾರಣ ಎನ್ನಂಗ ಲಿಂಗ ಜ್ಞಾನ ದಾಸೋಹ, ಇವು ಮುಂತಾದ ಸಮಸ್ತವು ನಿಮ್ಮ ಪುರಾತನರಾದ ಕಾರಣ ಚನ್ನಬಸವಣ್ಣನ ಕರುಣ ಇಂತು ಮಾಡಲಾಗಿ, ನಾನು ನಿಮ್ಮ ಪಾದವ ಬೆರೆದು ಬೇರಿಲ್ಲದೆ ನಿಜವನೈದಿದೆ ಚನ್ನಬಸವಣ್ಣ ಚಂದೇಶ್ವರಲಿಂಗವಲ್ಲಿ ಶರಣರ ಸಮ್ಯಜ್ಞಾನ ಎನಗಾಯಿತ್ತು ಪ್ರಭುವೆ ॥೪೯॥

ಇತಿ ಶ್ರೀಮತ್ಸಕಲ ಗಣ ಪುರಾತನರೊಳ್ ಪ್ರಭುದೇವರು ಮಹಾನುಭಾವ ಸದ್ಗೋಷ್ಠಿಯಂ ಮಾಡಿದ, ಶೂನ್ಯ ಸಂಪಾದನೆಯೊಳ್ ನುಲಿಯ ಚಂದಯ್ಯಗಳ ಸಂಪಾದನೆಗಂ ಚತುರ್ದಶೋಪದೇಶ ಸಮಾಪ್ತ.

# ಘಟ್ಟಿವಾಳಯ್ಯಗಳ ಸಂಪಾದನೆ.

## (ಪಂಚದಶೋಪದೇಶ)

ಕಂದ॥ ಘಟ್ಟಿವಾಳಯ್ಯನೆಂಬ ಘ। ರಟ್ಟಂ ತನ್ನಿಷ್ಟಲಿಂಗದೊಳ್ ವಿಗೆ ಗಂಡಂ। ನಿಷ್ಠೆಯಿಂದಡಗಿಸಿದುದಂ। ಸೃಷ್ಟಿಯೊಳರಿವಂತೆ ಶರಣಜನರಿಂಗು ಸುರ್ವೆಂ. ॥೧॥

ಅದೆಂತೆಂದೊಡಾ ಪ್ರಭುದೇವರು, ಬಸವರಾಜದೇವರು, ಚನ್ನಬಸವ ರಾಜದೇವರು, ಮಡಿವಾಳ ಮಾಚಿತಂದೆಗಳು. ಆ ನುಲಿಯ ಚಂದಯ್ಯ ಗಳೊಡನೆ ಮಹಾನುಭಾವ ಸದ್ಗೋಷ್ಠಿಯಂ ಮಾಡಿ, ಓಲಾಡುತ್ತಿರಲು, ಆ ನುಲಿಯ ಚಂದಯ್ಯಗಳು ತಮ್ಮ ನಿಜಕಾಯ ಕಕ್ಕೈದಲು, ಇತ್ತ ಮತ್ತೋರ್ವ ಗಣಾಧೀಶ್ವರನು ಕೈಲಾಸದಿಂದೆ ಸ್ವೇಚ್ಛಾ ಲೀಲಾ ವಿಲಾಸ ದಿಂದೆ ಮರ್ತ್ಯಕ್ಕವತರಸಿ, ಘಟ್ಟಿವಾಳ ಮುದ್ದಣ್ಣಗಳೆಂಬ ನಿಜನಾಮದಿಂ ಪರಮ ವೈರಾಗ್ಯದ ಹೆಚ್ಚುಗೆಯಿಂದ ಇಂದ್ರಿಯಾದಿ ವಿಷಯಂಗಳಂ ತೃಣ ಸಮಾನಂಗೈದು ನಿರಾಶಾಭರಿತನಾಗಿ, ಚರಿಸಾಡುತ್ತಲೊಂದು ದಿನಂ ಬಸ ವರಾಜದೇವರ ಗೃಹದ ಬಾಗಿಲಲ್ಲಿ ಹೋಗುವ ಹೊರಹೊರಡುವ ಜಂಗಮ ಸಮೂಹಮಂ ಕಂಡು, ಇವರು ಉಪಾಧಿಯಿಂ ಶರೀರ ಪೋಷಣರಲ್ಲದೆ ಜ್ಞಾನ ಜಂಗಮಸ್ಥಲಕ್ಕೆ ಸಲ್ಲರೆಂದು ವಿಡಂಬಿಸುವ ಪ್ರಸ್ಥಾಪದ ವಚನ॥

ಕಾಳು ದೇಹದೊಳಗೊಂದು ಕೀಳು ಜೀವ ಹುಟ್ಟಿತ್ತಾಗಿ, ಅಪ್ಯಾ ಯನವಡಗದು. ಸಂದೇಹ ಹಿಂಗದು. ಇದೇನೊ? ಇದೇನೊ? ಹಂದೆ ಗಳು ಮುಂದೆ ಮುಂದೆ ಬಂದು ಕಾಡುತಲಿಪ್ಪುದು. ಇದೇನೊ? ಇದೇನೊ? ಕಾಲಾಳು ಮೇಲಾಳುಗಳು ಬೇಳುವೆಗೊಳಗಾದರು. ಚಿಕ್ಕಯ್ಯ ಪ್ರಿಯಸಿದ್ಧ ಲಿಂಗ ಇಲ್ಲ ಇಲ್ಲ ಎಂಬರು ॥೧॥

ಮತ್ತಂ॥ ಜಂಗಮವಾಗಿ ಹುಟ್ಟಿದವರು ಮತ್ತಂ ಹಿಂದಣ ಹೆಜ್ಜೆಯ ಮೆಟ್ಟಲುಂಟೆ? ಜಂಗಮವೆಂಬ ಮಾತಿಗೊಳಗಾದಲ್ಲಿ ಮೂರು ಮಲತ್ರ ಯಂಗಳು ಹಿಂಗಿರಬೇಕು. ಅನಂಗನ ಬಲೆಗೆ ಎಂದಿಗೂ ಸಿಲುಕದಿರಬೇಕು. ಅದು ನಿಜದ ಸಂಗ ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ. ಈ ಗುಣ ಆರಿಗು ಇಲ್ಲ ಇಲ್ಲ ಎಂದೆ ॥೨॥

ಮತ್ತಂ॥ ಹೊನ್ನು ಹೆಣ್ಣು ಮಣ್ಣು ಕುರಿತು ಹಾರುವನ್ನಬರ ಉಭಯದ ಕೇಡು. ಮರ್ಮವನರಿಯದೆ ಮಾಡುವನ್ನಬರ ದ್ರವ್ಯದ ಕೇಡು. ಇಂತೀ ಉಭಯದ ಭೇದವನರಿತು ಚರಿಸಿ ಮಾಡಿ ಅರಿಯಬೇಕು. ಚಿಕ್ಕಯ್ಯ ಪ್ರಿಯ ಸಿದ್ಧಲಿಂಗವನರಿಯಬಲ್ಲಡೆ ॥೩॥

ಮತ್ತಂ॥ ಹೊರಗಣ ಮಲತ್ರಯಕ್ಕೆ ಒಳಗಣ ಅರಿವನೀಗಾಡಲೇಕೆ? ಅಲ್ಪ ಸುಖಕ್ಕೆ ಮೆಚ್ಚಿ ಕುಕ್ಕುರನಂತೆ ಸಿಕ್ಕಿ ಸಾಯಲೇತಕ್ಕೆ? ನಿಶ್ಚಯವಾಗಿ ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ॥೪॥

ಮತ್ತಂ॥ ಹೊನ್ನು ಹೆಣ್ಣು ಮಣ್ಣಿಂಗೆ ಹೊಡೆದಾಡುವನ್ನಬರ ಅವರು ಹಿರಿಯರೆಂತಪ್ಪರೋ? ತ್ರಿವಿಧ ಮಲಕ್ಕೆ ತ್ರಿವಿಧ ಅಮಲದಿಂದಂ ಮಲ ಹರಿವಲ್ಲದೆ ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ ॥೫॥

ಮತ್ತಂ॥ ಜಂಗಮಕ್ಕೆ ಅರಿವ ಮರೆದಾಗಲೆ ಅಪಮಾನ ಹೋಯಿತ್ತು. ಭಕ್ತಂಗೆ ಸ್ವಸದಾಚಾರವ ಬಿಟ್ಟಾಗಲೆ ಅಪಮಾನ ಹೋಯಿತ್ತು. ಈ ಅಪಮಾನವಲ್ಲದೆ ದ್ವಾರ ಮಲಭಾಂಡಕ್ಕೆ ಹೋರಿ ಮಾಡುವವರಿಗೇಕೆ ಚಿತ್ತ ಶುದ್ಧ ? ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ ॥೬॥

ಮತ್ತಂ॥ ತನುವ ಮರೆಯಬೇಕೆಂದು ಗುರುವ ತೋರಿ ಮನವ ಮರೆಯಬೇಕೆಂದು ಲಿಂಗವ ತೋರಿ ಧನವ ಮರೆಯಬೇಕೆಂದ. ಜಂಗಮವ ತೋರಿ ಲೇಸವ ಮರೆದು ಕಷ್ಟಕ್ಕೆ ಕಡಿದಾಡುವ ಭಾಷೆಹೀನರ ಕಂಡು ನಾಚಿಕೆಯಾಯಿತ್ತು. ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ ॥೭॥

ಮತ್ತಂ॥ ತಮ್ಮ ಮಲವ ತಾವು ಮುಟ್ಟವು. ಆವಾವ ಜಾತಿಯು ತ್ರಿವಿಧ ಮಲತ್ರಯಕ್ಕೆ ಬೀಳುವ ಮಲಭಾಂಡ ದೇಹಿಗಳಿಗೆ ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ ॥೮॥

ಮತ್ತಂ॥ ಕಾಯಜೀವವನರಿದೆನೆಂಬವರೆಲ್ಲರು ಹೋದರಲ್ಲ ಹೊಲಬುದಪ್ಪಿ. ಹೊನ್ನು ಹೆಣ್ಣು ಮಣ್ಣಿಂಗೆ ಹೋರಿಯಾಡುವರೆಲ್ಲರು ಬಸವಣ್ಣನ ಬಾಗಿಲಲ್ಲಿ ಬಂಧಿತರಾಗಿ ನೊಂದವರಿಗೇಕೆ ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ ॥೯॥

ಮತ್ತಂ॥ ಬಸವ ಮಾಡಿಹನೆಂದು ಬಾಯಲ್ಲಿ ಬಸಿವ ಲೋಳೆಯ ನರಿಯದೆ ಎಸಕದಿಂದೆ ಮಾಡುವ ಹುಸಿ ಭಕ್ತಿಯನರಿಯದ ಈ ಕಿಸುಮಾಯರಿಗೇಕೆ ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ ॥೧೦॥

ಹೀಗೆಂದು ಘಟ್ಟಿವಾಳಯ್ಯಗಳು ಜಂಗಮ ಸಮೂಹಮಂ ವಿಡಂಬಿಸುತ್ತಿರಲು ಆ ಜಂಗಮ ದೇವರುಗಳು ಘಟ್ಟಿವಾಳಯ್ಯಗಳ ನೋಯಿಸಿ ಲಿಂಗಮಂ ತೆಗೆದುಕೊಳ್ಳಲು ಆ ಪ್ರಸ್ತಾವವಲ್ಲಿ ನುಡಿದ ವಚನ॥

ಗೋಕುಲರೆಲ್ಲರು ಕೂಡಿ, ಗೋಪತಿಯು ಬಸವಣ್ಣನ ಮನೆಗೆ ಉಣ ಬಂದರೆಲ್ಲರು ನಾವೀಸಕ್ಕೆ ಕೂಳ ಕೇಳಿದರೆ ವೇಷಧಾರಿಗಳು ಘಾಸಿ ಮಾಡಿದರೆನ್ನುವೆ. ಜಗದೀಶ ನೀನೆ ಬಲ್ಲೆ ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ. ॥೧೧॥

ಮತ್ತಂ॥ ಹಸಿದು ತಾರಕಕ್ಕೂಟವ ಕೇಳಹೋದರೆ ಕೂಟವೆದ್ದು ಬಡಿದರು. ಸಾಕಾರ ಮೊದಲು ಧಾತುಗೆಟ್ಟೆಯಲ್ಲ. ಪರಶಿವಾತ್ಮನಾಗಿ ಆದೇತಕ್ಕೆ ಬಂದೆ? ತನುವಿನಾಸೆಗಾಗಿ ಇದರಾಸೆಯ ಹೋಗದಿರು ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ ॥೧೨॥

ಹಾದಿಯ ಬೆಳ್ಳನ ಕಳ್ಳರು ತಾಗಿದರೆ ಇನ್ನಾರಿಗೆ ಮೊರೆ ಇಡುವ ? ತಾ ಸತ್ತು ಮತ್ತೆ ತನ್ನನರಿದವಂಗೆ ಇನ್ನಾರಿಗು ಮಿಥ್ಯವೇಕೆ? ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ ॥೧೩॥

ಬಾಯಿಕ್ಕಿ ಬೇಡುವರೆಲ್ಲರು ಬಡಪಾಯುವಂತರ ನೋವು ಬಲ್ಲರೆ? ಹಸಿವ ವಿಹಂಗ ಪಶುವಿನ ನೋವು ಬಲ್ಲುದೆ? ಇಂತೀದೆಸೆಯಂ ಕಂಡು ನಾನಂಜಿದೆ ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ ॥೧೪॥

ಮತ್ತಂ॥ ಹುಟ್ಟಿದ ಮರ ನೆಟ್ಟ ಕಲ್ಲು ಮತ್ತೇತರ ಇಷ್ಟದಲ್ಲಿ ಒತ್ತಿದ ಲಿಂಗಮುದ್ರೆ ಇರಲಿಕೆ ಕಿತ್ತುಕೊಂಡವ ದ್ರೋಹಿ ಎಂಬರು. ದೃಷ್ಟದಲ್ಲಿ ಜಂಗಮ ಭಕ್ತರ ಕೊಲುತ್ತ ಇಂತೀ ಉರುಳುಗಳ್ಳರ ಭಕ್ತರು ಜಂಗಮವೆಂದರೆ ಒಪ್ಪನಪ್ಪ ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ ॥೧೫॥

ಮತ್ತಂ॥ ಜಂಗಮವಾಗಿ ಜಂಗಮವ ಕೊಂದಾಗಲೆ ತನ್ನ ದೈವ ತನಗಿಲ್ಲ. ಭಕ್ತನಾಗಿ ಭಕ್ತರ ಸ್ತುತಿ ನಿಂದೆಯ ಮಾಡಲಾಗಿ ಸತ್ಯ ಸದಾಚಾರ ತನಗಿಲ್ಲದಿಹ ವಿಹಂಗ ಮೃಗಗಳಂತೆ, ಕುಲಿಶದ ಕಾವು ಕುಲಕ್ಕೆ ಮಿತ್ತಾದಂತೆ ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ ॥೧೬॥

ಮತ್ತಂ॥ ಇರಿವುದು ಕಡಿವುದು ಕೊಲುವುದು ದೇಹಿಗಳಿಗಲ್ಲದೆ ನಿರ್ಮಲ ದೇಹಿಗಳಿಗುಂಟೆ? ಸಮಯ ಸಮುದ್ರದಂತಿರಬೇಕು. ತಪ್ಪನರಸಿ

ಶಿಕ್ಷಿಸುವನ್ನಬರ ನರದೂತ ಕುಲಕ್ಕೆ ಪರಶಿವ ರೂಪುಂಟೆ? ಆ ಹರ ವರಿಯ ನುಡಿದಡೆನಗೇನು ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ ॥೧೭॥

ಇಂತು ಘಟ್ಟಿವಾಳಯ್ಯಗಳು ತಮ್ಮ ನೋಯಿಸಿ ಲಿಂಗವ ತೆಗೆದು ಕೊಂಡ ಜಂಗಮ ದೇವರುಗಳ ವಿಡಂಬಿಸುತ್ತಿರಲು, ಆ ಪ್ರಸ್ತಾವದೊಳು ಪ್ರಭುದೇವರು ಮಹಾಜ್ಞಾನಿಗಳಿಗೆ ಸಮಯವನ್ಯವಲ್ಲ. ಬಿರುನುಡಿ ಸಲ್ಲ ದೆಂದು ನಿರೂಪಿಸಿದ ಪ್ರಸ್ತಾವದ ವಚನ॥

ಅರಿವ ಬಲ್ಲೆನೆಂದು ಬಿರುನುಡಿಯ ನುಡಿವರೆ? ಸತ್ಯವನರಿದಂಗೆ ಮಿಥ್ಯಾಭಾವ ಉಂಟೆ? ತಥ್ಯ ಮಿಥ್ಯ ಉಭಯ ಭಾವವಳಿದಿರಬೇಕು. ಸಮಯವೆಂಬುದು ಸಂಪದ. ಅದು ನಿನಗನ್ಯವೆ? ಸರ್ವಮಯ ಸಂಪ ದನಾವಲ್ಲಿ ಗುಹೇಶ್ವರ ಲಿಂಗಕ್ಕೆ ತಥ್ಯಮಿಥ್ಯವಿಲ್ಲ ಮಡಿವಾಳಯ್ಯ ॥೧೮॥

ಹೀಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಘಟಿವಾಳಯ್ಯ ಗಳ ಪ್ರತ್ಯುತ್ತರ ॥

ಸರ್ಪಂಗೆ ಪಿಕಂಗೆ ಒಪ್ಪದ ಮನೆಯುಂಟೆ? ಎನಗೆ ಹೆಚ್ಚುಕುಂದೆಂಬ ಮಿಥ್ಯದ ಭಾವವಿಲ್ಲ. ಚಿಕ್ಕಯ್ಯ ಪ್ರಿಯಸಿದ್ಧಲಿಂಗ ಇಲ್ಲ ಇಲ್ಲ ಎಂದೆ ೧೯॥

ಮತ್ತಂ॥ ಚಿನ್ನವ ಕೊಂಬಲ್ಲಿ ಅದರ ಬಣ್ಣವ ಕಂಡು ಬಣ್ಣದ ವಾಸಿಯ ಕುರುಹಿಟ್ಟು ಅದು ತನಗೆ ಚನ್ನಾದಡೆ ಕೊಂಬ. ಅಲ್ಲದೊಡೊಲ್ಲ. ಇದಕ್ಕೆ ಗೆಲ್ಲ ಸೋಲ ವೇಕೆ? ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎನುತಿರ್ದೆನು ॥೨೦॥

ಇದಕ್ಕೆ ಪ್ರಭುದೇವರ ನಿರೂಪ ॥

ಸಮಯವ ಬಿಡಬಹುದೆ ಅಯ್ಯ? ಅಟ್ಟ ಅಶನವಾದಡೂ ಕಲಸುವ ದಕ್ಕೆ ಕೈ ಉಂಬುವದಕ್ಕೆ ಬಾಯಿ ಬೇಕು. ಉಂಬುದಿಲ್ಲವೆಂದು ಸಂದೇ ಹವ ಹರಿದಲ್ಲಿ ಸಮಯ ಒಂದು ಇಲ್ಲ ಎನಬೇಕು. ಗುಹೇಶ್ವರನೆಂಬನ್ನಕ್ಕ ಬಂಧ ಮೋಕ್ಷವನರಿಯ ಬೇಕು ಘಟ್ಟಿವಾಳಯ್ಯ ॥೨೧॥

ಹೀಗೆಂದು ಪ್ರಭುದೇವರು ನಿರೂಪಿಸಲು, ಅದಕ್ಕೆ ಘಟ್ಟಿವಾಳಯ್ಯ ಗಳ ಪ್ರತ್ಯುತ್ತರ॥

ದಗ್ಧ ವಾದ ಮರ ಇದ್ದಲಲ್ಲದೆ ಕಾಷ್ಠಕ್ಕೆ ಹೊದ್ದಿಗೆಯುಂಟೆ? ಕಿಗ್ಗಯ್ಯ ನೀರು ತಟಾಕಕ್ಕೆ ಹೊದ್ದಿದುದುಂಟೆ? ಅರಿದು ಮರೆದವಂಗೆ ಸಮಯದ ಹೊದ್ದುಗೆ ಏನು ? ಚಿಕ್ಕಯ್ಯ ಪ್ರೀಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ ॥೨೨॥

ಮತ್ತಂ॥ ಸತ್ತ ಶ್ರವ ಕಿಚ್ಚು ಬಲ್ಲುದೆ? ನಿಷ್ಠೆ ನಿಬ್ಬೆರಗಾದ ಕರ್ತೃ ಮರ್ತ್ಯರ ಹಂಗ ಬಲ್ಲನೆ? ತೊಟ್ಟು ಬಿಟ್ಟ ಹಣ್ಣು ಮತ್ತೆ ಹತ್ತುವದೆ? ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ ॥೨೩॥

ಮತ್ತಂ॥ ಒಡೆದ ಮಡಿಕೆಗೆ ಸರಿಯಿಂದ ಸಂದು ಕೂಡುವದೆ? ದಗ್ಧವಾದ ಸಟ ಅಸಗರ ಕಲ್ಲಿಗೆ ಹೊದ್ದುವದೇ? ಬದ್ಧ ಭವಿಗಳಿಂದು ಬಿಟ್ಟು ಮತ್ತೆ ಸಮಯದ ಹೊದ್ದಿಗೆ ಏಕೆ? ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ ॥೨೪॥

ಮತ್ತಂ॥ ಕೂಟವ ಮಾಡಿಹೆನೆಂದರೆ ಸಮಯದವನಲ್ಲ. ಮಾಟವ ಮಾಡಿಹೆನೆಂದರೆ ಹಿಂದು ಮುಂದಣ ದಂದುಗದವನಲ್ಲ. ಸಮಯಕ್ಕೆ ಮುನ್ನವೆ ಅಲ್ಲ. ಆರಾದಡೂ ಎನಲಿ. ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ. ॥೨೫॥

ಹೀಗೆಂದು ಘಟ್ಟಿವಾಳಯ್ಯಗಳು ನುಡಿಯಲು, ಅದಕ್ಕೆ ಪ್ರಭುದೇವರ ನಿರೂಪ. ಕುರುಹುಳ್ಳನ್ನಕ್ಕರ ಸಮಯದ ಹಂಗು, ಅರಿದಿಹೆನೆಂಬನ್ನಕ್ಕರ ಆತ್ಮನ ಹಂಗು, ಅಲ್ಲಹುದೆಂಬನ್ನಕ್ಕರ ಎಲ್ಲರ ಹಂಗು, ಗುಹೇಶ್ವರನೆಂಬನ್ನಕ್ಕರ ಲಿಂಗದ ಹಂಗು ಬೇಕು. ಘಟ್ಟಿವಾಳಣ್ಣಾ. ॥೨೬॥

ಇದಕ್ಕೆ ಘಟ್ಟಿವಾಳಯ್ಯಗಳ ಪ್ರತ್ಯುತ್ತರ॥ ಇಷ್ಟ ಬಾಹ್ಯವಾಯಿತ್ತೆಂದು ಸಮಯ ಒಸ್ಪದಿದೆ ನೋಡಾ. ಅರಿವು ಬಾಹ್ಯವಾಗಿ, ತ್ರಿವಿಧಕ್ಕೆ ಕಚ್ಚಾಡಲೇತಕ್ಕೆ? ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ. ॥೨೭॥

ಮತ್ತಂ॥ಸ್ಥಾವರವಾಗಿ ಭೂಮಿಯಲ್ಲಿ ಪೂಜಿಸಿಕೊಂಬುದು ಶೈವಲಿಂಗ. ಚರವಾಗಿ ಭೂಮಿಯಲ್ಲಿ ಪೂಜಿಸಿಕೊಂಬುದು ಇಷ್ಟಲಿಂಗ. ಅರಿವಿನ ಮನದ ಕೊನೆಯಲ್ಲಿ ನಿತ್ಯವಾಸವಾಗಿ ಪೂಜಿಸಿಕೊಂಬುದು ವೀರಶೈವಲಿಂಗ. ಇಂತೀ ಲಿಂಗತ್ರಯದ ಆದಿ ಆಧಾರವನರಿಯದೆ, ಹೋದರಲ್ಲ ಹೊಲಬುದಪ್ಪಿ. ಇನ್ನಾರಿಗೆ ಹೇಳುವೆ ? ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ. ॥೨೮॥

ಮತ್ತಂ॥ ಘಟ್ಟಿವಾಳಯ್ಯಗಳು ಪ್ರಭುದೇವರೊಡನೆ ನಿಜಜಂಗಮಸ್ಥಲವಪೂರ್ವವೆಂದು ನುಡಿದ ಪ್ರಸ್ತಾವದ ವಚನ.॥

ವೇಷವೆಂಬ ರುದ್ರನ ಪಾಶವ ಹೊತ್ತು ಈಷಣತ್ರಯಕ್ಕೆ ತಿರಿಗಾಡುವ ವೇಷಧಾರಿಗಳಿಗುಂಟೆ ಮಹಾಜ್ಞಾನದ ಸಂಪತ್ತಿನ ಸಂಬಂಧ? ಸ್ವಾದುದಕವಿದ್ದಲ್ಲಿ ಉಂಟೆ ಕ್ಷಾರದ ವಾರಿ? ಸಮಯದಲುಂಟೆ ನಿಜ ಶರಣರ ನೆಲೆ? ಎನಗಾ ಭ್ರಮೆ ಇಲ್ಲ. ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ ॥೨೯॥

ಮತ್ತಂ॥ ಆಸೆಗಾಗಿ ವೇಷವ ಹೊತ್ತು ತಿರುಗುವ ವೇಷದ ಗಂಡ. ಈಷಣತ್ರಯಕ್ಕಾಗಿ ಈಶನ ಪೂಜಿಸುವ ದಾಸರಗಂಡ. ಇಷ್ಟನರಿತು ತನುವಿಗೆ ಆಸೆಯ ಮಾಡುವ ಭಾಷೆವಂತರ ಗಂಡ. ನಾನಂಜುವೆ. ತ್ರಿವಿಧದ ಹಂಗಳಿದವರಿಗೆ ನಾನವರಿಗಿಳಿದ ಬಂಟ. ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ ॥೩೦॥

ಮತ್ತಂ॥ ಸಬಳದ ತುದಿಯಲ್ಲಿ ಬರಿದ ಕಟ್ಟಿದ ಮತ್ತೆ ಅದರ ತಲೆ ವಿಡಿಯತೊಡಗಿದರೆ ನಾನಲ್ಲ ಸಬಳಕ್ಕೆ ಬಿರಿದದೆಂಬವನಂತೆ ಹಾಗೆಂದು ತೊಡಗುವನೆಗ್ಗ. ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆನು ॥೩೧॥

ಮತ್ತಂ ॥ ಮೂರ ಬಿಟ್ಟವಂಗಲ್ಲದೆ ಸತ್ಯ ಸಾಗಿಸಬಾರದು. ಆರ ಬಿಟ್ಟವಂಗಲ್ಲದೆ ಆಧರಿಸಬಾರದು. ಎಂಟ ಬಿಟ್ಟವಂಗಲ್ಲದೆ ಸಾಕಾರದ ಕಂಟಕವನರಿಯಬಾರದು. ರಣದಲ್ಲಿ ಓಡಿ ಮನೆಯಲ್ಲಿ ಬಂಟನಾಡುವಂತೆ ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ ॥೩೨॥

ಹೀಗೆಂದು ಘಟ್ಟಿವಾಳಯ್ಯಗಳು ಅಲ್ಲಿಂದ ಪೋಗಿ ಒಂದು ಪಿರಿದಪ್ಪ ಗುಂಡಂ ತಂದು ಬಸವರಾಜದೇವರ ಮಠದ ಬಾಗಿಲ್ಲಲ್ಲಿ ನಿಲಿಸೆ ಹೊಡಕೆಯ ಕಣ್ಣಿಯಿಂದೆ ತಮ್ಮ ಕೊರಳಿಗೆ ಧರಿಸಿಕೊಂಡು ಆ ಜಂಗಮದೇವರುಗಳ ಮರಳಿ ವಿಡಂಬಿಸುವ ಪ್ರಸ್ಥಾವದ ವಚನ ॥

ಅಂಡಜ ಮುಕ್ತಿಯ. ಮಕ್ಕಳಿರೆ ಕೆಂಡದ ಮಳೆಯು ಕರೆವಲ್ಲಿ ನಿಮ್ಮ ಹೆಂಡಿರು ಹಳ್ಳ ಹೊಕ್ಕು ಹೋದಿರಲ್ಲ. ಜಂಗಮವೆಂಬುದಕ್ಕೆ ನಾಚಿರಿ. ನಿಮ್ಮ ಕಂಗಳ ಹೆಂಡಿರು ತಿಂಬಳೆಂಬುದನರಿಯರೆ? ಅವಳು ಒಮ್ಮೆ ತಿಂಬಳು. ಒಮ್ಮೆ ಕರುಣಿಸಿ ಬಿಡುವಳು. ಅವಳು ತಿಂದು ತಿಂದು ಉಗುಳುವ ಬಾಯೊಳಗಣದೆಲ್ಲ ಜಂಗಮವೆ? ಲೋಕವೆಲ್ಲ ಅವಳು ಅವಳು ವಿರಹಿತವಾದ ಜಂಗಮ ವಾರಯ್ಯಾ ಬಸವಣ್ಣಾ? ಅವಳು ವಿರಹಿತವಾದ ಭಕ್ತರಾರಯ್ಯ ಬಸವಣ್ಣಾ? ಅವಳ ಮಕ್ಕಳು ನಿನ್ನ ಕೈಯ್ಯಲ್ಲಿ ಆರಾಧಿಸಿಕೊಂಬ ಜಂಗಮ ಕಾಣಯ್ಯ ಬಸವಣ್ಣಾ. ಅವಳ ವಿರಹಿತವಾದ ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ನಲ್ಲದಿಲ್ಲ ಮಾಣು ॥೩೩॥

ಹೀಗೆಂದು ಘಟ್ಟಿವಾಳಯ್ಯಗಳು ನಿರೂಪಿಸಲು, ಅದಕ್ಕೆ ಸಮಯದ ವಾಕ್ಯ. ಘನವ ಸಲಿಸುವನ್ನಬರ ಬಿತ್ತು ಸಹ ಉಭಯ ವಿರಬೇಕು. ಸಾರವ ಸವಿವಲ್ಲಿ ಸಮಯ ಉಳಿಯಿತ್ತು. ಹಾಗರಿಯಬೇಕು ಘಟ್ಟಿವಾಳಣ್ಣಾ ॥೩೪॥

ಇದಕ್ಕೆ ಘಟ್ಟಿವಾಳಯ್ಯಗಳು ನೀವೆಲ್ಲರು ಘನಲಿಂಗದ ನಿಜವನರಿಯಿರಿ ಎಂದು ನಿರೂಪಿಸಿದ ಪ್ರಸ್ಥಾವದ ವಚನ ॥

ಇಷ್ಟಲಿಂಗವ ತಕ್ಕೊಂಡಲ್ಲಿ ದೃಷ್ಟವಾಯಿತ್ತೆ ನಿಮಗೆ? ಬಂಧಿಕಾನ ಬಂಧನವ ಮಾಡುವುದು, ಲಿಂಗದೇಹಿಗಳಿಗುಂಟೆ ಅಯ್ಯ? ಜಗದಲ್ಲಿ ಉಂಡು ಉಂಡು ಕೊಂಡಾಡುವವರಿಗೆ ಘನಲಿಂಗದ ಸುದ್ದಿ ಏಕೆ? ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ ॥೩೫॥

ಮತ್ತಂ॥ ಕೈಯ್ಯಲಿಂಗ ಕೈಯಲ್ಲಿ ಮೆಯ್ಯಲಿಂಗ ಮೆಯ್ಯಲ್ಲಿ ತಲೆಯ ಲಿಂಗ ತಲೆಯಲ್ಲಿ ಮತ್ತೆ ಹೊಲಬನರಸಲೇತಕ್ಕೆ? ಹೊಲಬುದಪ್ಪಿ ಬಿದ್ದಿರಿ. ಮೂರರ ಬಲೆಯಲ್ಲಿ ಬಲುಹೇತಕೆ? ಸಾಕು ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ ॥೩೬॥

ಮತ್ತಂ॥ ಅರ್ಥಿಗೆ ಕಟ್ಟಿದ ಲಿಂಗ ಕೈಯ್ಯೊಳಗಾಯಿತ್ತು. ನಿಶ್ಚಯದ ಲಿಂಗ ಆರ ಗೊತ್ತಿಗೆ ಸಿಕ್ಕದು. ಆ ಘನಲಿಂಗ ಉಳ್ಳನ್ನಕ್ಕ ನಾ ಜಂಗಮ ನೀವು ಜಂಗುಳಿಗಳು. ಎನಗಾ ಭೀತಿ ಇಲ್ಲ ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ ॥೩೭॥

ಮತ್ತಂ॥ ಅಂಗವ ಬಂಧಿಸಿದಲ್ಲಿ ನಾ ನೊಂದುದಿಲ್ಲ. ಅದು ಮಲ ದೇಹ. ಮಾಯೆಯ ಸೊಮ್ಮು. ಲಿಂಗವ ತೆಗದೆನೆಂದಡೆ, ಅದು ಜಗದ ಕುರುಹು. ನನ್ನದಲ್ಲ. ಆ ಗುಣ ನಿಮ್ಮ ಸಂದೇಹಕ್ಕೊಳಗಾಯಿತ್ತು. ಎನಗೆ ಉಭಯದ ಹಂಗಿಲ್ಲ. ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ ॥೩೮॥

ಮತ್ತಂ॥ ಎನಗೆ ಹಳ್ಳದ ಹೊಪಕೆ ಶಿವದಾರವಾಗಿ, ಬೆಟ್ಟದ ಗುಂಡೇ ಲಿಂಗವಾಗಿ, ಕಾಡ ಸೊಪ್ಪು ಹಾಕಿದ ಮಡಕೆಯ ಉದಕವೆ ಮಜ್ಜನವಾಗಿ ಪೂಜಿಸುತ್ತಿರ್ದೆ. ಬಸವನ ಮನೆಗೆ ಹೋಹ ವ್ರತಗೇಡಿಗಳ ನೋಡಿ ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ ॥೩೯॥

ಹೀಗೆಂದು ಘಟ್ಟಿವಾಳಯ್ಯಗಳು ನಿರೂಪಿಸಲು, ಅದಕ್ಕೆ ಸಮಯದ ವಾಕ್ಯ.

ಬಲ್ಲ ವಿರಕ್ತಂಗೆ ಗೆಲ್ಲ ಸೋಲದ ಹೋರಾಟ ಉಂಟೆ? ಒಳ್ಳಿತ್ತು ಹೊಲ್ಲಹವೆಂಬುದು ಭ್ರಾಂತರ ಮಾತು. ಸಮಯಕ್ಕೆ ನೀ ಹಂಗು ॥೪೦॥

ಇದಕ್ಕೆ ಘಟ್ಟಿವಾಳಯ್ಯಗಳ ಪ್ರತ್ಯುತ್ತರ ॥

ಮುನ್ನವೆ ಆಚಾರಕ್ಕೆ ಹೊರಗು. ನಾನನಾಚಾರಿಯಾದಕಾರಣ ನಿಮ್ಮ ಹಂತವನಲ್ಲ. ಸಮಯಕ್ಕೆ ಹೊರಗು. ಜಗದೊಳು ಎನ್ನರಿಕೆ ಎನಗೆ ನಿಮ್ಮ ಸಮಯ. ನಿಮಗೆ ಓಗರವನಿಕ್ಕುವಾತನ ಮನೆಯ ಬಾಗಿಲ ಮುಚ್ಚಿತ್ತು. ಹೋಗಿರಣ್ಣಾ! ಅನಾಚಾರಿಗಳ ಮುಖವ ಸದಾಚಾರಿಗಳು ನೋಡಿ ಕೆಡ ಬೇಡಾ. ಕೀಳ ಕೆಣಕಲಿಲ್ಲ ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ. ॥೪೧॥

ಇದಕ್ಕೆ ಸಮಯದ ಮಾತು॥ ಕೇಳಿದಡೆ ದೋಷ ಉಂಟೆ? ಮಾತ ನಾಡಿದಡೆ ಶಾಪ ಉಂಟೆ? ನಿನ್ನಯ ಅರಿವು ಮಹತ್ತ ಪದಕ್ಕೆ ಇದಿರು ನಿನ್ನ ಅರಿವಿನ ಭೇದ ದುರಾಳಿತನವಾವುದು ಹೇಳಣ್ಣಾ. ॥೪೨॥

ಇದಕ್ಕೆ ಘಟ್ಟಿವಾಳಯ್ಯಗಳ ಪ್ರತ್ಯುತ್ತರ. ॥

ಇರಿವ ಕೈದುವಿಂಗೆ ದಯ ಧರ್ಮದ ಮೊನೆಯುಂಟೆ? ಕಾಳೋರ ಗನ ದಾಡೆಯಲ್ಲಿ ಅಮೃತದ ಸುಧೆಯುಂಟೆ? ಕೂಟವ ಕೂಡಿ ಸಮಯ ನೊಂದಲ್ಲಿ ಅಜಾತನ ಬಲ್ಲರೆ ಎನಗೆ ನಿಮ್ಮೊಳಗೇತರಮಾತು? ವೇಷಧಾ ರಿಗಳಲ್ಲಿ ನಿಮ್ಮ ಕೂಟಕ್ಕೆ ಹೊರಗು. ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ. ॥೪೩॥

ಇದಕ್ಕೆ ಸಮಯದ ವಾಕ್ಯ. ॥

ಅಂಬು ತಾಗಿಹೆನೆಂದಡೆ ಧನುವಿನ ಸಂಗದಿಂದಲ್ಲದೆ ತಾಗದು. ಹಣ್ಣು ಸವಿ ಎಂದಡೆ ವೃಕ್ಷದ ಶಾಖೆಯ ಸಂಗದಿಂದಲ್ಲದೆ ಬೆಳೆಯದು. ಲಿಂಗವ ನರಿತೆನೆಂದು ಶರಣರ ಸಂಗವ ಬಿಟ್ಟರೆ ಅದು ಎದೆಯಲ್ಲಿ ಸಿಂಪ ಸಂಜು ಕಾಣಾ ಭಂಗಿತನಾದವನೆ. ॥೪೪॥

ಇದಕ್ಕೆ ಘಟ್ಟಿವಾಳಯ್ಯಗಳ ನಿರೂಪ,

ರೋಗಿಗೆ ಹಾಲು ಸಿಹಿಯಪ್ಪುದೆ? ಗೂಗೆಗೆ ರವಿ ಲೇಸಪ್ಪುದೆ? ಚೋರಂಗೆ ಬೆಳಗು ಗುಣವಪ್ಪುದೆ? ಭವಸಾಗರದ ಸಮಯದಲ್ಲಿದ್ದವರು

ನಿರ್ಭಾವನ ಭಾವವನೆತ್ತಬಲ್ಲರು? ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂಬೆ. ॥೪೫॥

ಇದಕ್ಕೆ ಸಮಯವಾಕ್ಯ॥

ಎಲೆ ಇಲ್ಲದ ವೃಕ್ಷ ಉಲಿಯಬಲ್ಲುದೆ? ಜಲವಿಲ್ಲದ ತಟಾಕ ತೆರೆಗೊಡಲುಂಟೆ? ಶಬ್ದ ಮುಗ್ಧವಾದವಂಗೆ ಸಮಯವ ಸಂಪಾದಿಸುವನ್ನಬರ ಭ್ರಾಂತ ಮರ್ಕಟ ವೃಶ್ಚಿಕವು ಹೊಯಿದಂತೆ ಮರೆದಾಡಬೇಡಾ ಭ್ರಾಂತನಾಗಿ. ॥೪೬॥

ಇದಕ್ಕೆ ಘಟ್ಟಿವಾಳಯ್ಯಗಳ ಪ್ರತ್ಯುತ್ತರ॥

ಉತ್ತರಕ್ಕೆ ನುಡಿವನ್ನಬರ ನಾನು ಚಿತ್ತದ ಕಲೆಯವನಲ್ಲ. ಮಚ್ಚರಕ್ಕೆ ಹೋರುವನ್ನಬರ ಕರಣೇಂದ್ರಿಯದ ಹೊತ್ತದ ವೊತ್ತದವನಲ್ಲ. ಮತ್ತೆ ಸಮಯದಲ್ಲಿ ಹೊತ್ತು ಹೋರಿಹೆನೆಂದಡೆ ಸಂಸಾರದ ಕತ್ತಲೆಯವನಲ್ಲ. ಎನ್ನ ನಿಶ್ಚಯದ ಗುಂಡು ಎನ್ನ ಬಚ್ಚ ಬಯಲ ಬೆಳಗು ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂದೆ. ॥೪೭॥

ಇಂತು ಆ ಘಟ್ಟಿವಾಳಯ್ಯಗಳು ಆ ಗುಂಡನೆ ತನಗೆ ಬಚ್ಚ ಬಯಲ ಪರಬ್ರಹ್ಮವೆನಲು, ಆದಡೆ ಆ ಲಿಂಗವು ನಿನ್ನ ಕೈಯೊಳಗೇಕೆ ಅಡಗದು ಎಂದ ಸಮಯದ ವಾಕ್ಯ.

ಲಿಂಗವು ನಿನ್ನದಾದಡೆ ಅಂಗೈಯೊಳಗೇಕೆ ಅಡಗದು? ನೀ ಮಂಗಳಮಯನಾದಡೆ ಸಂಸಾರದ ಅಂಗದ ಉಲುಹು ಏತಕ್ಕೆ? ಅದು ಲಿಂಗದ ಮಚ್ಚಲ್ಲ- ಭ್ರಾಂತಯೋಗಿ. ॥೪೮॥

ಹೀಗೆಂದು ಸಮಯ ನುಡಿದು, ಆ ಲಿಂಗವ ಕೊಡಲು, ಅದಕ್ಕೆ ಘಟ್ಟಿವಾಯ್ಯಗಳು ಆ ಗುಂಡನು ತಮ್ಮ ಕರಸ್ಥಲದ ಲಿಂಗದಲ್ಲಿ ಅಡಗಿಸಿಕೊಂಬ ಪ್ರಸ್ತಾವದ ವಚನ॥

ಲೀಲೆ ಹೊರಗಾದ ಲಿಂಗವೆ ಬಾರಯ್ಯ. ಎನ್ನಂಗದೊಳಗಾಗು. ಶೃತ ದೃಷ್ಟ ಅನುಮಾನದಲ್ಲಿ ನೋಡುವರಿಗೆಲ್ಲಕ್ಕು ಅತೀತವಾಗು. ಆಗೆಂಬುದಕ್ಕೆ ಮುನ್ನವೆ ಆ ಗುಂಡು ಕಾಯದ ಕರಸ್ಥಲದಲ್ಲಿ ನಿರ್ಭಾವವಾಗಿ ಕಾಯವಡಗಿ ಭಾವವೆಂಬ ಭಾವ ಬಯಲಾಯಿತ್ತು, ಚಿಕ್ಕಯ್ಯ ಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎಂಬುದಕ್ಕೆ ಮುನ್ನವೆ. ॥೪೯॥

ಇಂತ್ತು ಆ ಘಟ್ಟಿವಾಳಯ್ಯಗಳು ಆ ಗುಂಡನು ಪರಬ್ರಹ್ಮವೆಂದು ತಮ್ಮ ಕಾಯದ ಕರಸ್ಥಲದಲ್ಲಿ ಅಡಗಿಸಿಕೊಳ್ಳಲು, ಅದ ಕಂಡು, ಪ್ರಭು ದೇವರು, ಕೊಂಡಾಡಿದ ಪ್ರಸ್ಥಾವದ ವಚನ॥

ಅಂಗದ ಮೇಲಣ ಲಿಂಗ ಹಿಂಗಿದಾತನ ಭವಿ ಎಂಬರು. ಅಂಗದ ಮೇಲಣ ಲಿಂಗ ಇಪ್ಪಾತನ ಭಕ್ತನೆಂಬರು. ಅಂಗದೊಳಗೆ ಬೆರಸಿಪ್ಪ ಲಿಂಗದ ಹೊಲಬನರಿಯದೆ ಲಿಂಗವಿಲ್ಲದೆ ಒಂದು ಕ್ಷಣ ಒಂದಂಗ ಸುಳಿದುದುಂಟೆ ಜಗದೊಳಗೆ? ಅಂಗದೊಳಗಣ ಲಿಂಗವನು ಹಿಂಗದವರಿಗೆ ಭವಮಾಲೆಯುಂಟು. ಹಿಂಗಿದವರಿಗೆ ಭಾವಮಾಲೆ ಇಲ್ಲ ಗುಹೇಶ್ವರಾ ॥೫೦॥

ಇದಕ್ಕೆ ಚನ್ನಬಸವರಾಜದೇವರು ಕೊಂಡಾಡಿದ ಪ್ರಸ್ಥಾವದ ವಚನ॥

ಅಂಗದ ಮೇಲಣ ಲಿಂಗ ಹಿಂಗಿತ್ತೆಂದು ಆತ್ಮಘಾತವ ಮಾಡಬೇಕೆಂಬ ಅಜ್ಞಾನಿಗಳು ಅಂಗವಾವುದು ಲಿಂಗವಾವುದೆಂದವರೆತ್ತಬಲ್ಲರು? ಅಂಗವೆ ಆತ್ಮ ಲಿಂಗವೆ ಸಂವಿತ್ತು. ಈ ಎರಡರ ಸಂಬಂಧ ಸಂಚವ ತಿಳಿಯದೆ ಅಂಗ ಲಿಂಗ ಹಿಂಗಿತ್ತೆಂಬವರಿಗೆ ಪ್ರಾಣಲಿಂಗ ನಾಸ್ತಿ. ಪ್ರಸಾದವೆಲ್ಲಯದೊ ಕೂಡಲಸಂಗಮದೇವಯ್ಯ?. ॥೫೧॥

ಮತ್ತಂ॥ಸ್ತೋತ್ರ॥ ಅರಿವರತು ಮರಹು ನಷ್ಟವಾದ ಬಳಿಕ ಕುರುಹಿನ ಬಣ್ಣ ಅಂಗದ ಮೇಲೇಕೊ? ಘಟ್ಟಿವಾಳಂಗೆ ಅರಿವನಾರು ಅರುಹಿಸಿಕೊಂಬವನಾರು? ಬರಿಯ ಬಯಲು ಕಾಣಾ ಕೂಡಲಚನ್ನಸಂಗಮ ನಿಮ್ಮ ಶರಣ ಘಟ್ಟಿವಾಳನಲ್ಲದೆ ನೆರೆ ಅರಿವರಾರೊ? ॥೫೨॥

ಆ ಪ್ರಸ್ಥಾವದೊಳು ಸಿದ್ಧರಾಮಯ್ಯತಂದೆಗಳು ಸ್ತೋತ್ರವಂ ಮಾಡಿದ ವಚನ॥

ಆದಿ ಮಧ್ಯಾಂತರವ ಭೇದಿಸಿದ ಮಹಿಮನು ನಾದಕ್ಕತೀತನು. ಪರಬ್ರಹ್ಮದ ಭೇದಾದಿ ಭೇದದ ಪರತತ್ವ ಮೂಲವೆಯಾದ ಆದಿಗುರು ಘಟ್ಟಿವಾಳಯ್ಯ ಕಪಿಲಸಿದ್ಧಮಲ್ಲಿನಾಥ ॥೫೩॥

ಇಂತು ಪ್ರಭುದೇವರು ಚನ್ನಬಸವರಾಜದೇವರು ಸಿದ್ಧರಾಮಯ್ಯದೇವರು ಘಟ್ಟಿವಾಳಯ್ಯಗಳ ಸ್ತುತಿಸುತ್ತಿರಲು, ಆ ಘಟ್ಟಿವಾಳಯ್ಯಗಳು ಪ್ರಭುದೇವರ ಸ್ತೋತ್ರವಂ ಮಾಡಿದ ಪ್ರಸ್ಥಾವದ ವಚನ॥

ನೀರೊಳಗೆ ಕಿಚ್ಚಿದ್ದು ನೆಳಲ ಸುಟ್ಟಿತ್ತು. ನೆಳಲ ಸುಟ್ಟ ವಿಭೂತಿಯ ನಿಟ್ಟುಕೊಂಡರೆ ಭೂಮಿ ಸುತ್ತಿತ್ತು. ಆಕಾಶ ಹೊತ್ತಿತ್ತು. ದೇವನ ದೇವತ್ವ ಕೆಟ್ಟಿತ್ತು. ದೇವಿಯರ ಒಗತನ ಮುರಿಯಿತ್ತು. ಹೇಳಬಾರದ ಠಾವಿನಲ್ಲಿ ಕಾಣಬಾರದ ಲಿಂಗ ಮೂರ್ತಿಗೊಂಡರೆ ನೋಡಬಾರದ ಪೂಜೆಯಾಯಿತ್ತು. ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ. ಪ್ರಭುದೇವರ ನಿಲವ ಕಂಡು ಇಲ್ಲ ಇಲ್ಲ ಎನುತಿರ್ದೆನು ||೫೪||

ಮತ್ತಂ|| ಯೋಗದ ಹೊಲಬು ಸಾಧಿಸಬಾರದು. ಯೋಗ ಎಂಟರಹೊಲಬಲ್ಲ, ಯೋಗ ಒಂಬತ್ತರ ನಿಲವಲ್ಲ, ಯೋಗವಾರರ ಪರಿಯಲ್ಲ. ಧರೆಯ ಮೇಲಣ ಅಗ್ನಿ ಮುಗಿಲ ಮುಟ್ಟದೆ ಇಪ್ಪರೆ ಯೋಗ. ಜ್ಞಾನದ ಕಂಗಳ ಬೆಳಗು ಶಶಿಯ ಮುಟ್ಟದವೆಂದರೆ ಘನ ಮನವ ನೊಳಕೊಂಡದು ಯೋಗ ಮನುತೆಯುರರುವರನು ಪತಿಯೊಮ್ಮೆ ಕೂಡಿ ತಳುವಳಿದಿರಬಲ್ಲಡೆ ಅದು ಯೋಗ. ಘನ ಮಹಿಮ ಪ್ರಭುವಿನ ಸಮರಸವ ಕಂಡು, ಚಿಕ್ಕಯ್ಯಪ್ರಿಯ ಸಿದ್ಧಲಿಂಗ ಇಲ್ಲ ಇಲ್ಲ ಎನುತಿರ್ದೆನು ||೫೫||

ಇಂತು ಘಟ್ಟಿವಾಳಯ್ಯಗಳು ಪ್ರಭುದೇವರ ಸ್ತುತಿಯಿಸಿ ಆ ಪ್ರಭುದೇವರು ತಾವು ಬಸವರಾಜದೇವರು ಚನ್ನಬಸವರಾಜದೇವರು ಸಿದ್ಧರಾಮಯ್ಯದೇವರು ಮಹಾನುಭಾವಗೋಷ್ಠಿಯೊಳಿರುತಿರ್ದು ಮತ್ತೊಂದಾನೊಂದು ದಿನದಲ್ಲಿ ಘಟ್ಟಿವಾಳಯ್ಯಗಳಿಗೆ ಲಿಂಗೈಕ್ಯ ಸಮನಿಸಿ ಆ ಕಲ್ಯಾಣಪಟ್ಟಣದ ಬೀದಿಯಲ್ಲಿ ಲಿಂಗೈಕ್ಯವಾಗಿರಲು, ಅಲ್ಲಿಗೆ ಬಸವರಾಜದೇವರು ಮುಖ್ಯವಾದ ಗಣಂಗಳು ಬಂದು ಅವರ ಭಾಷೆ ಬೀಸರವಾದುದಲಾ ಎಂದು ನೊಂದು ಸಮಾಧಿಕ್ರಿಯೆಯ ಮಾಡಬೇಕೆಂದು ಎಲ್ಲ ಗಣಂಗಳು ಸರ್ವಾಂಗವ ಮುಟ್ಟಿ ಎತ್ತಿಕೊಳಲು, ಅವರು ಸರ್ವಾಂಗವ ಮುಟ್ಟದ ಮುನ್ನವೆ ಎಲ್ಲ ಶರಣರ ಹಸ್ತದಲ್ಲಿ ನಿರ್ವಯಲನೈದಲು, ಎಲ್ಲರು ಚೋದ್ಯಂಬಡುತ್ತಿರೆ ಆ ಪ್ರಸ್ಥಾವದಲ್ಲಿ ಬಸವರಾಜದೇವರು ಆ ಘಟ್ಟಿವಾಳಯ್ಯಗಳ ಸ್ತುತಿಸಿದ ವಚನ. ||

ಸತ್ತು ಹುಟ್ಟುವನಲ್ಲ. ಸಂದೇಹ ಸೂತಕಿಯಲ್ಲ. ಆಕಾರ ನಿರಾಕಾರನಲ್ಲ ನೋಡಯ್ಯ. ಕಾಯವಂಚಕನಲ್ಲ. ಜೀವವಂಚಕನಲ್ಲ. ನಿರಂತರ ಸಹಜ ನೋಡಯ್ಯ. ಶಂಕೆ ಇಲ್ಲದ ಮಹಿಮನು ಕೂಡಲಸಂಗಮದೇವನ ಶರಣನುಪಮಾತೀತ ನೋಡಯ್ಯ. ||೫೬||

ಮತ್ತಂ॥ ಪ್ರಭುದೇವರು ಘಟ್ಟಿವಾಳಯ್ಯಗಳ ಸ್ತುತಿಸಿದ ಪ್ರಸ್ತಾವದ ವಚನ. ॥

ಅಶನಕ್ಕಂಜಿ ವೇಷವ ಹೊತ್ತು ದೇಶವ ತೊಳಲುವ ಹಿರಿಯರ ಗಂಡ ಕಾಲದ ಗಂಡ, ಕರ್ಮದ ಗಂಡ, ಲಿಂಗವ ಹಿಡಿದು ಸಾವ ಹಿರಿಯರ ಗಂಡ, ಗುಹೇಶ್ವರ ನಿಮ್ಮ ಶರಣ ಘಟ್ಟಿವಾಳ ಅಲ್ಲಮನ ಅಂತಿಂತೆಂಬರ, ಗಂಡ. ॥೫೭॥

ಮತ್ತಂ॥ ಆ ಪ್ರಸ್ತಾವದೊಳು ಹಾಡಿ ಹೊಗಳಿದ ಪದಂಗಳು. ।

ರಾಗ ಚಾಳಿ॥ಪಲ್ಲ॥ ದೇಹ ಗುಣಗಳಳಿದು ಲಿಂಗದೇಹಿಯಾದ ಶರಣನು। ಬಾಹಿರಂಗನ ಬಳಕೆಯ ಮಾಯಾಮೋಹವನ್ನು ಜರಿದನು. ॥ಪದ॥

ಭಾವ ಬ್ರಹ್ಮಜ್ಞಾನ ಯತಿಗಿನ್ನಾವ ವೇಷವೇತಕೊ। ದೇಹಲಿಂಗವಾದ ಬಳಿಕಿನ್ನಾವ ಪದಗಳೇತಕೊ. ॥೧॥

ಮಲವ ತೊಳೆಯಲರಿಯದ ಮಲಜಲವ ತೊಳೆವೆನೆಂಬೆಯೋ । ಒಳಗೆ ಹೊರಗೆ ಲಿಂಗವಾಗಿ ತೊಳಲಿ ಬಳಲಲೇತಕೊ. ॥೨॥

ಮುತ್ತು ರತ್ನ ಸಿತಕೆ ಘೃತಕೆ ಮತ್ತೆ ಪೂರ್ವ ಕ್ರಿಯೆಗಳುಂಟೆ॥ ನಿತ್ಯ ಮುಕ್ತ ಶರಣಗುಂಟೆ ಮತ್ತೆ ಪೂರ್ವಚರಿತವು. ॥೩॥

ಬ್ರಹ್ಮ ವಿಷ್ಣು ರುದ್ರ ಪದದ ಪೇರ್ಮೆಯನ್ನು ಎಣಿಸದ। ನಿರ್ಮಳಾದಿ ಲಿಂಗದಿ ಸಂಬಂಧಿಸಿದ ಶರಣನು. ॥೪॥

ಅಪ್ರತಿಮನಗಮ್ಯವಲ್ಲಿ ನಿಷ್ಪತಿಯನೈದಿದ। ಅಪ್ರಮಾಣ ಗುಹೇಶ್ವರ ನೊಳಿಪ್ಪಗಮ್ಯ ಶರಣನು. ॥೫॥

ಆ ಪ್ರಸ್ತಾವದೊಳು ಚನ್ನಬಸವರಾಜದೇವರು ಆ ಘಟ್ಟಿವಾಳಯ್ಯಗಳ ಸ್ತೋತ್ರಮಂ ಮಾಡಿದ ಪದಂಗಳು. ॥

ರಾಗದೇಶಿ ॥ಪಲ್ಲ॥ ಭಾಪಿಸಿ ನಡೆದಿಹೆನೆಂದರೆ ತಾನಾ ಭಾವದೊಳಗೆ ತನ್ನೊಳು ಸದ್ಭಾವವು ಭಾವ ಭೇದವಿಲ್ಲದ ಶರಣನ ಸತ್ಪಥವ ನಾನೇ ನೆಂಬೆನು. ॥

ಮಾಡುವ ಕ್ರಿಗಳೊಳಗೆ ಸೀಪತಿಯಾಗಿ ದೇವ ಕ್ರಿವಿಡಿದ ಕಾರಣ ಭಿನ್ನ ಭಾವವಳಿದು ಶಿವಾಚಾರವೆ ಜೀವವಾಗಿ ಲಿಂಗದೊಳಗೆ ಬೆರಸಬ ಲ್ಲಡೆ ಯೋಗಿ ॥೧॥

ತದುಗತವಾಗಿ ನಿರಂತರ ನಿಜ ಲಿಂಗದಿ ಪರಮಾನಂದವನೈದಿ ಸದಮಲ ನಿರುಪಾಧಿಕನಾಗಿಪ್ಪ ಚರಿತದಾಚಾರವ ನಾನೇನೆಂಬೆನು ॥೨॥

ಧ್ಯಾನವೇ ನಿಶ್ಚಯವಾಗಿಪ್ಪ ಶರಣನ ಕಾಯಿಕ ಭಾವಿತ ಕ್ರಿಗಳು ತಾ ಮುನ್ನವೆ ಲಿಂಗದೊಳವಿರಳವಾಗಿ ಸೀಮೆಯ ನೀಕರಿಸಿರ್ಪನು. ॥೩॥

ಪ್ರಾಣನ ಹಸ್ತದೊಳಗಣ ಲಿಂಗ ಲಿಂಗ ಭಾವ ಹಸ್ತದೊಳಗಣ ಪ್ರಾಣಭಾವವೆನ್ನದಿಪ್ಪ ಶರಣನ ಆಚಾರ ವಿಚಾರವೇನೆಂಬೆನು ॥೪॥

ಒಡಲಳಿದು ಒಡಲಸಿಡಿದ ಕ್ರಿಯಗಳ ಗಡಣ ವಡಗಿ ಸಿರ್ದೇಹ ದೊಳೆಂಬ ಭಾವವಡಗೊಂಡ ನಿಷ್ಠೆಯಾಚರಣೆ ಕೂಡಲ ಚನ್ನ ಸಂಗ ನೊಳು ಸತ್ಪಥವು ॥೫॥

ಇತಿ ಶ್ರೀಮತ್ಸಕಲ ಪುರಾತನರೊಳ್ ಪ್ರಭುದೇವರು ಮಹಾನು ಭಾವ ಸದ್ಗೋಷ್ಠಿಯಂ ಮಾಡಿದ ಶೂನ್ಯಸಂಪಾದನೆಯೊಳ್ ಘಟ್ಟಿವಾ ಳಯ್ಯಗಳ ಸಂಪಾದನೆಗಂ ಪಂಚದಶೋಪದೇಶ ಸಮಾಪ್ತ.

# ಉಡುತಡಿ ಮಹಾದೇವಿಯಕ್ಕಗಳ ಸಂಪಾದನೆ.

## (ಷೋಡಶೋಪದೇಶ)



ಕಂದ॥ಪರಮ ನಿರ್ವಾಣದಿಂದಂ। ತರುಣಿಮಹಾದೇವಿಯುಬಂದು ಪ್ರಭುವಿನ ಕರುಣವ। ನಿರುತದಿಂ ಪಡೆದುಶಿವನೊಳು । ಬೆರಸಿದುದಂ ಪೇಳ್ವೆ ಶರಣ ಜನರಿಂಗೊಲವಿಂ॥

ಅದೆಂತೆಂದೊಡಾ ಪ್ರಭುದೇವರು ಬಸವರಾಜದೇವರು ಚಿಕ್ಕದಣ್ಣಾಯಕರು ಸಿದ್ಧರಾಮಯ್ಯದೇವರು ಘಟ್ಟಿವಾಳಯ್ಯಗಳು ನಿರ್ವಯಲ ಸಮಾಧಿಯನ್ನೈದುವದಂ ಕಂಡು ಹರುಷಾನಂದ ಶರಧಿಯೊಳು ತೇಂಕಾಡುತ್ತಂ ಮಹಾನುಭಾವಗೋಷ್ಠಿಯಂ ಮಾಡುತ್ತಿರಲು, ಕೆಲ ಬಲದಲ್ಲಿ ಸೊಡ್ಡಳ ಬಾಚರಸರು ಹಡಪದಪ್ಪಣ್ಣಗಳು ಪಡಿಹಾರಿ ಉತ್ತಣ್ಣ ಅಕ್ಕನಾಗಾಯಿಗಳು ಮೋಳಿಗೆಯ ಮಾರಯ್ಯ ಡೋಹರ ಕಕ್ಕಯ್ಯ ಕಿನ್ನರ ಬೊಮ್ಮಣ್ಣ ಕನ್ನದ ಮಾರಯ್ಯ ಮಿಂಡಮಲ್ಲಿನಾಥ ಕೋಲಶಾಂತಯ್ಯ ಮೊಗವಾಡದ ಕೇಶಿರಾಜದೇವರು ಖಂಡೆಯದ ಕೇಶಿರಾಜದೇವರು, ಮುಖ್ಯವಾದ ಅಸಂಖ್ಯಾತ ಮಹಾಗಣಂಗಳೆಲ್ಲರು ಮಹಾನುಭಾವ ಪ್ರಸಂಗಮಂ ಕೇಳಿ ನಿಜತತ್ವದಲ್ಲಿ ಸಮರಸವಾಗಿ, ಪರಮಾನಂದದಲ್ಲಿ ಓಲಾಡುತ್ತಿರಲು, ಇತ್ತಲು ಪರಮೇಶ್ವರನ ನಿರೂಪದಿಂದ ಒಬ್ಬ ರುದ್ರ ಕರ್ನಿಕೆ ಮರ್ತ್ಯದಲ್ಲಿ ಒಗೆದು ಉಡುತಡೆಯ ಮಹದೇವಿಯಕ್ಕನೆಂಬ ನಾಮಮಂ ಧರಿಸಿ, ಲಿಂಗಧಾರಣವಾಗಲೊಲ್ಲೆನೆಂದ ಭವಿಯ ಸೋಂಕದೆ ಅಂಗ ಸಂಗಮಂ ತೊರೆದು, ಲಿಂಗಸಂಗದೊಳು ಅವಿರಳ ಸಂಗಿಯಾಗಿ, ತನ್ನ ದಿವ್ಯ ರೂಪ ಲಾವಣ್ಯವನೆಡೆಗೊಂಡು, ಷೋಡಶ ಪ್ರಾಯದ ಯೌವ್ವನದ ಸುಖದ ಸುಗ್ಗಿ ಶಿವನೊಳ್ಪರವಶವನ್ನೈದಿ ಸರ್ವ ಕರಣಂಗಳ ಅರುವಿಂಗಾಹುತಿಯನಿಕ್ಕಿ ದಿಗಂಬರನುಡಿಗೆಯನುಟ್ಟು ತನ್ನ ಕೇಶವೆಂಬಂಬರವ ಮುಸುಕಿಟ್ಟು ಕರಸ್ಥಲದೊಳಗಿಪ್ಪ ಇಷ್ಟಲಿಂಗದೊಳು ದೃಷ್ಟಿ ನಟ್ಟು ಮನಮುಟ್ಟಿ ಭಾವ ಕರಿಗೊಂಡು ಲೌಕಿಕ ಲಜ್ಜಾಭಾವಮಂ ತೊರೆದು ಭವಸಾಗರಮಂ ದಾಂಟಿ ಚನ್ನಮಲ್ಲಿಕಾರ್ಜುನನ ವಿಕಳಾವಸ್ಥೆಯೊಳ್ ತನ್ನ ಮರೆದು ಮಹಾವೈರಾಗ್ಯಮಂ ಬೀರುತ್ತ ಕರುಣರಸಮಂ ಹೀರುತ್ತ ನಿಶ್ಚಲಬುದ್ಧಿಯನೆಡೆಗೊಂಡು ಭಕ್ತಿಯ ಭಾಗ್ಯವೆನಿಸಿಪ ಮುಕ್ತಿಯ ತವರ್ಮನೆ ಎನಿಸಿಪ ಶಿವಭಾವ ಸಂಪನ್ನೆ ಪ್ರಸಾದದ

ಮೇರುವೆ ತತ್ವಶಿಖಾಮಣಿ, ಪುಣ್ಯದ ಪುಂಜೆ ನೈಷ್ಠೆಯ ಕಣಿ, ಸತ್ಯದ ಸದನ, ಶಾಂತಿಯ ನಿಧಿ, ಚಿದಂಬರ ಸಂಯುತೆ, ಸ್ವಾನುಭಾವದ ಸಾಗರ, ನಿತ್ಯದ ನಿವಾಸೆ, ಎನಿಪ ಮಹದೇವಿಯಕ್ಕಗಳು ಶಿವ ಸುಖಾಳಾಪಂಗೈವುತ್ತ ಪ್ರತ್ಯಕ್ಷ ಮುಕ್ತಾಂಗನೆಯ ಸುಳುಹು ದಿಟ ದಿಟವೆನಿಸಿ ಸಕಲ ಲೋಕಂ ಗಳಂ ಪಾವನನ ಮಾಡುತ್ತ, ಮುಟ್ಟಿದುದು ಪರುಷ, ಮೆಟ್ಟಿದ ಧರೆ ಪಾವನ, ನೋಡಿತ್ತೆಲ್ಲ ಪವಿತ್ರ, ನುಡಿಮುದೆಲ್ಲ ಶಿವತತ್ವ, ನಡಮುದೆಲ್ಲ ಶಿವಮಾರ್ಗ ನೆರೆಮುದೆಲ್ಲ ದೇವಸಭೆಯಾಗಿ, ಸಕಲ ಕ್ಷೇತ್ರಂಗಳಂ ಪಾವನವ ಮಾಡುತ್ತ ತನ್ನ ಕೇಳ್ದು ಕಂಡು ಕೈಮುಗಿದ ಸಕಲ ಜನಂಗಳೆಲ್ಲರಂ ಕೃತಾರ್ಥರಂ ಮಾಡುತ್ತ ಬಪ್ಪಾಗಳು, ಇತ್ತ ಬಸವಣ್ಣ, ಚನ್ನಬಸವಣ್ಣ ಪ್ರಭುದೇವರು ಮುಖ್ಯವಾದ ಅಸಂಖ್ಯಾತರ ಮಧ್ಯದಲ್ಲಿ ಆ ಬಸವರಾಜದೇವರು ಪ್ರಭು ದೇವರೊಡನೆ ಎನ್ನ ಹೆತ್ತ ತಾಯಿ ಅಕ್ಕಮಹಾದೇವಿಯರು ವಿರಕ್ತಿಯಿಂದ ದಿಗಂಬರಿಯಾಗಿ ಕುಮಾರಿಯಾಗಿ ಬರುತ್ತಿರ್ದಪಳೆಂದು ಬಿನ್ನೈಸೆ, ಪ್ರಭು ದೇವರು ಸಕಲ ಪ್ರಮಥರ್ಗೆ ಕಾಮಸಂಹಾರಿ ಎಂಬುದನ್ನು ಪ್ರತ್ಯಕ್ಷವ ತೋರಬೇಕೆಂದು ಭಕ್ತಿವಿಸ್ತಾರದಿಂದ ಕಿನ್ನರಯ್ಯಗಳಂ ಒಪ್ಪಿ ಕಳುಹಲು ಆ ಪರಮಜ್ಞಾನಿಯಪ್ಪ ಕಿನ್ನರಯ್ಯಗಳು ದಳ ದಳನೆ ಇದಿರಿನಲ್ಲಿ ಬಂದು ಕಂಡು ಆ ಮಹಾದೇವಿಯಕ್ಕಗಳ ಒರೆದು ನೋಡುವ ಪ್ರಸ್ಥಾವದ ವಚನ॥

ಕಾಯದಲ್ಲಿ ಕಳವಳವಿರಲು, ಪ್ರಾಣದಲ್ಲಿ ಮಾಯೆ ಇರಲು, ಇದೇತರ ಮನ, ಇದೇತರ ನಿರ್ವಾಣ, ಮಹಾಲಿಂಗ ತ್ರಿಪುರಾಂತಕ ನಿನ್ನ ಸಂಸಾರಿ ಎಂಬನಲ್ಲದೆ ಸಜ್ಜನೆ ಎಂದು ಕೈವಿಡಿದನಲ್ಲ ಕೇಳಾ ಮರುಳೆ. ॥೧॥

ಮತ್ತಂ॥ ಆ ಕಿನ್ನರಯ್ಯಗಳು ಭಕ್ತಿಭಾವದಿಂದೆ ಸರ್ವಾಂಗಮಂ ಪರೀಕ್ಷಿಸಿ ನೋಡಲು ಆ ಮಹಾದೇವಿಯಕ್ಕಗಳು ತಮ್ಮಂತರಂಗದ ಜ್ಞಾನಾ ಗ್ನಿಯೊಳ್ ಕಾಮನಂ ಸುಟ್ಟು, ಭಸ್ಮಮಂ ಮಾಡಿ ತೋರಿದ ಪ್ರಸ್ಥಾವದ ವಚನ. ॥

ಅಂಗದ ಭಂಗವ ಲಿಂಗಸುಖದಿಂದೆ ಗೆಲಿದೆ. ಮನದ ಭಂಗವ ಅರಿವಿನ ಮುಖದಿಂದೆ ಗೆಲಿದೆ. ಜೀವದ ಭಂಗವ ಶಿವಾನುಭಾವದಿಂ ಗೆಲಿದೆ. ಕರಣದ ಕತ್ತಲೆಯ ಬೆಳಗನುಟ್ಟು ಗೆಲಿದೆ. ಜವ್ವನದ ಹೊರಮಿಂಚಿನಲ್ಲಿ ನಿಮ್ಮ ಕಣ್ಣಿಂಗೆ ತೋರುವ ಕಾಮನ ಸುಟ್ಟುರುಹಿದ ಭಸ್ಮವ ನೋಡಯ್ಯ. ಚನ್ನಮಲ್ಲಿಕಾರ್ಜುನ ಕಾಮನ ಕೊಂದು ಮನಸಿಜನಾಗುಳುಹಿದರೆ ಮನ ಸಿಜನ ತಲೆಯ ಬರಹವ ತೊಡೆದೆನು. ॥೨॥

ಇಂತು ಕಾಮನ ಸುಟ್ಟು ಭಸ್ಮವಂ ಮಾಡಿ ಎನಗೆ ಲಿಂಗಪತಿ ಪುರುಷ ನೀನೆ ಎನಗೆ ಒಡಹುಟ್ಟಿದನೆಂದು ನುಡಿವ ಪ್ರಸ್ಥಾವದ ವಚನ.॥

ಎನ್ನಂತೆ ಪುಣ್ಯಂಗೈದವರುಂಟೆ? ಎನ್ನಂತೆ ಭಾಗ್ಯಂಗೆಯ್ದವರುಂಟೆ? ಕಿನ್ನರನಂತಪ್ಪ ಸೋದರ ಎನಗೆ. ಏಳೇಳು ಜನ್ಮದಲಿ ಶಿವಭಕ್ತರೆ ಬಂಧುಗಳೆನಗೆ. ಚನ್ನಮಲ್ಲಿಕಾರ್ಜುನನಂತಪ್ಪ ಗಂಡ ನೋಡಾ ಎನಗೆ. ॥೩॥

ಹೀಗೆಂದು ಆ ಮಹಾದೇವಿಯಕ್ಕಗಳು ಆ ಕಿನ್ನರಯ್ಯಗಳಂ ಬೀಳ್ಕೊಂಡು ಕಲ್ಯಾಣದತ್ತಲಭಿಮುಖವಾಗಿ ನಡೆತಂದು ತತ್ಪುರಮಂ ಕಂಡ ಪ್ರಸ್ಥಾವದ ವಚನ. ॥

ಕಲ್ಯಾಣವೆಂಬುದಿನ್ನಾರಿಗು ಹೊಗಬಾರದು. ಅಸಾಧ್ಯವಯ್ಯ! ಆಸೆ ಆಮಿಷವನಳಿದವಂಗಲ್ಲದೆ ಕಲ್ಯಾಣವತ್ತಲಡಿ ಇಡಬಾರದು. ಒಳಹೊರಗು ಶುದ್ಧವಾದವರಿಗಲ್ಲದೆ ಕಲ್ಯಾಣವ ಹೊಗಬಾರದು. ನಾನೆಂಬುದ ಹರಿದವಂಗಲ್ಲದೆ ಕಲ್ಯಾಣವ ಹೊಗಬಾರದು. ಒಳಗೆ ತಿಳಿದು ಚನ್ನಮಲ್ಲಿಕಾರ್ಜುನಂಗೊಲಿದು ಉಭಯ ಲಜ್ಜೆಯಳಿದೆನಾಗಿ ಕಲ್ಯಾಣವ ಕಂಡು ನಮೋ ನಮೋ ಎನುತಿರ್ದೆನು. ॥೪॥

ಇಂತು ಕಲ್ಯಾಣವಂ ಕಂಡು ಒಳಪೊಕ್ಕು ಬರುತಿಪ್ಪಾಗಳು ಬಸವರಾಜದೇವರ ಮಹಾತ್ಮೆಯಂ ಕೊಂಡಾಡುತ್ತಿರ್ದ ಪ್ರಸ್ಥಾವದ ವಚನ. ॥

ಅಯ್ಯ ನಿಮ್ಮ ಶರಣರು ಮೆಟ್ಟಿದ ಧರೆ ಪಾವನವಯ್ಯ. ಅಯ್ಯ ನಿಮ್ಮ ಶರಣರು ಇದ್ದ ಪುರವೆ ಕೈಲಾಸವಯ್ಯ! ಅಯ್ಯ ನಿಮ್ಮ ಶರಣರು ನಿಂದುದೆ ನಿಜವಾಸವಯ್ಯ! ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ಶರಣ ಬಸವಣ್ಣನಿದ್ದ ಕ್ಷೇತ್ರ ಅವಿಮುಕ್ತ ಕ್ಷೇತ್ರವಾಗಿ ಆನು ಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು. ॥೫॥

ಇಂತು ಬಸವರಾಜದೇವರ ಮಹಾತ್ಮೆಯಂ ಕೊಂಡಾಡುತ್ತ ಬಂದು ಆ ಬಸವರಾಜದೇವರ ನಿಜವಾಸಮಂ ಪೊಕ್ಕು ಪ್ರಭುದೇವರು ಮುಖ್ಯವಾದ ಅಸಂಖ್ಯಾತ ಮಹಾಗಣಂಗಳೊಳು ಪರಮಾನಂದ ಸಂಗಿಯಾಗಿಪ್ಪ ಆ ಸಂಗನಬಸವಣ್ಣನ ಶ್ರೀಮೂರ್ತಿಯನು ಆ ಮಹಾದೇವಿಯಕ್ಕಗಳು ಕಂಡ ಪ್ರಸ್ಥಾವದ ವಚನ. ॥

ಅರಸಿ ತೊಳಲಿದರಿಲ್ಲ. ಬಯಸಿ ಹೊಕ್ಕರಿಲ್ಲ. ತಪಸ್ಸು ಮಾಡಿದರಿಲ್ಲ, ಅದು ತನ್ನ ಮಹಾ ಕಾಲಕ್ಕಲ್ಲದೆ ಸಾಧ್ಯವಾಗದು. ಶಿವನೊಲಿದಲ್ಲದೆ

ಕೈಗೂಡದು. ಚನ್ನಮಲ್ಲಿಕಾರ್ಜುನನೆನಗೊಲಿದನಾಗಿ ನಾನು ಸಂಗನಬಸವಣ್ಣನ ಶ್ರೀಪಾದವ ಕಂಡು ಬದುಕಿದೆನು. ॥೬॥

ಮತ್ತಂ॥ ಅಯ್ಯ ನಿಮ್ಮ ಸಜ್ಜನ ಸದಾಚಾರವ ಕಂಡೆನಾಗಿ ಎನ್ನ ಕಂಗಳ ಪಟಲ ಹರಿಯಿತ್ತಿಂದು. ಅಯ್ಯ ನಿಮ್ಮ ಸಜ್ಜನ ಸದ್ಭಾವರ ಶ್ರೀಚರಣಕ್ಕೆರಗಿದೆನಾಗಿ ಎನ್ನ ಹಣೆಯ ಲಿಖಿತ ತೊಡೆಯಿತ್ತಿಂದು. ಚನ್ನಮಲ್ಲಿಕಾರ್ಜುನ ನಿಮ್ಮ ಶರಣ ಸಂಗನಬಸವಣ್ಣನ ಪಾದವ ಕಂಡು ಮಿಗೆ ಮಿಗೆ ನಮೊ ನಮೊ ಎನುತಿರ್ದೆನು. ॥೭॥

ಇಂತೀ ಮಹಾದೇವಿಯಕ್ಕಗಳು ಬಸವರಾಜದೇವರ ಶ್ರೀಪಾದವಂ ದರ್ಶನವಾಗಿ, ನಮಸ್ಕರಿಸಿ ಕೈಮುಗಿದು, ನಿಂದಿರಲು, ಆ ಪ್ರಸ್ತಾವದೊಳು ಬಸವರಾಜದೇವರು ಮಹದೇವಿಯಕ್ಕನಂ ಕಂಡು, ಪ್ರಭುದೇವರಿಗೆ ತೋರಿ ನುಡಿದ ಪ್ರಸ್ತಾವದ ವಚನ. ॥

ಕಾಯದ ಲಜ್ಜೆಯ ಕಳ್ಳತನ ಕಳೆದು ಜೀವದ ಲಜ್ಜೆಯ ಮೋಹವನಳಿದು, ಮನದ ಲಜ್ಜೆಯ ನೆನಹು ಸುಟ್ಟು ಭಾವದ ಕೂಟ ಬತ್ತಲೆ ಎಂದರಿದು, ತವಕದ ಸ್ನೇಹ ವ್ಯವಹಾರಕ್ಕೆ ಹೊಗದು. ಕೂಡಲಸಂಗಮದೇವಯ್ಯ ಎನ್ನ ಹೆತ್ತತಾಯಿ ಮಹಾದೇವಿಯಕ್ಕನ ನಿಲವ ನೋಡಯ್ಯ ಪ್ರಭುವೆ. ॥೮॥

ಮತ್ತಂ॥ ರೂಹಿಲ್ಲದಂಗೆ ಒಲಿದವರಿಗೆ ತನುವಿನ ಹಂಗುಂಟೆ? ಮನವಿಲ್ಲದವರಿಗೆ ಮಚ್ಚಿದವರಿಗೆ ಅಭಿಮಾನದ ಹಂಗುಂಟೆ? ದಿಗಂಬರಗೆ ಒಲಿದವರಿಗೆ ಕೌಪೀನದ ಹಂಗುಂಟೆ? ಕೂಡಲಸಂಗಮದೇವಯ್ಯ ಮಹದೇವಿಯಕ್ಕನೆಂಬ ಭಕ್ತೆಗೆ ಆವ ಹೊರೆಯು ಇಲ್ಲ ನೋಡಾ ಪ್ರಭುವೆ. ॥೯॥

ಹೀಗೆಂದು ಬಸವರಾಜದೇವರು ಪ್ರಭುದೇವರಿಗೆ ಮಹದೇವಿಯಕ್ಕನ ನಿಲವನೊರೆದೊರೆದು, ಹೇಳಿ ಹಿಗ್ಗಿ ತೋರಲು, ಆ ಪ್ರಭುದೇವರು ಮಹದೇವಿಯಕ್ಕನ ಅನುಭವ ಸುಖ ಮುಖದಿಂ ನುಡಿದ ಪ್ರಸ್ತಾವದ ವಚನ॥

ಉದಯದ ಯೌವ್ವನವ ನೋಕಕೊಂಡು, ಸತಿ ನೀನು ಇತ್ತಲೇತಕ್ಕೆ ಬಂದೆಯವ್ವ? ಸತಿ ಎಂದರೆ ಮುನಿವರು ಎಮ್ಮ ಶರಣರು. ನಿನ್ನ ಪತಿಯ ಕುರುಹ ಹೇಳಿದರೆ ಬಂದು ಕುಳ್ಳಿರು ಅಲ್ಲದಿರೆ ತೊಲಗು ತಾಯೆ ನಮ್ಮ ಗುಹೇಶ್ವರನ ಶರಣರಲ್ಲಿ ಸಂಗಸುಖ ಸನ್ನಿಹಿತವ ಬಯಸುವರೆ ನಿನ್ನ ಪತಿಯಾರೆಂಬುದು ಹೇಳಾ ಎಲೆ ಅವ್ವಾ. ॥೧೦॥

ಮತ್ತಂ॥ಕಾಯ ಸತಿ ಎಂದು ಹೇಳಿ ಕಳೆದೆ. ಮಾಯದ ಮನ ಮಾಯೆ ಎಂದು ಹೇಸಿ ಬಿಟ್ಟೆ. ಮಾಯದ ಸತಿ ಎಂಬ ಸಂದೇಹವೆಮಗೇಕೆ? ಸತಿಯರ ಗೋಷ್ಠಿ ವಿಷ ಕಾಣವ್ವ ಗುಹೇಶ್ವರ ಲಿಂಗದಲ್ಲಿ ನಿನ್ನ ಪತಿಯ ಕುರುಹ ಹೇಳಾ ಎಲೆ ಅವ್ವಾ. ॥೧೧॥

ಹೀಗೆಂದು ಪ್ರಭುದೇವರು ಮಹದೇವಿಯಕ್ಕಗಳ ಬೆಸಗೊಳ್ಳಲು,

ಆ ಮಹಾದೇವಿಯಕ್ಕಗಳು ತನ್ನ ಪತಿಯ ಕುರುಹ ಬಿನ್ನಹಮಂ ಮಾಡುವ ಪ್ರಸ್ಥಾವದ ವಚನ.॥

ಹರನೆ ನೀನೆನಗೆ ಗಂಡನಾಗಬೇಕೆಂದು ಅನಂತ ಕಾಲ ತಪಸಿದ್ದೆ ನೋಡಾ! ಹಸೆಯ ಮೇಲಣ ಮಾತ ಬೆಸಗೊಳಲಟ್ಟಿದರೆ, ಶಶಿಧರನ ಹತ್ತಿರ ಕಳುಹಿದರೆಮ್ಮವರು. ಭಸ್ಮವನೆ ಹೂಸಿ ಕಂಕಣವನೆ ಕಟ್ಟಿ ಚನ್ನಮಲ್ಲಿಕಾರ್ಜುನ ತನಗೆ ನಾನಾಗಬೇಕೆಂದು. ॥೧೨॥

ಮತ್ತಂ॥ ಪಚ್ಚೆಯದ ನೆಲಗಟ್ಟು, ಕನಕದ ತೋರಣ, ವಜ್ರದ ಕಂಭ, ಪವಳದ ಚಪ್ಪರವಿಕ್ಕಿ, ಮದುವೆಯ ಮಾಡಿದರೆಮ್ಮವರೆನ್ನ ಮದುವೆಯಮಾಡಿದರು. ಕಂಕಣ ಕೈದಾರಿ ಸ್ಥಿರಸೇಸೆಯನಿಕ್ಕಿ ಚನ್ನಮಲ್ಲಿಕಾರ್ಜುನನೆಂಬ ಗಂಡಗೆನ್ನ ಮದುವೆಯ ಮಾಡಿದರು. ॥೧೩॥

ಮತ್ತಂ॥ ಗುರುವೇ ತೆತ್ತಿಗನಾದ, ಲಿಂಗವೆ ಮದವಳಿಗನಾದ, ನಾನೆ ಮದವಳಿಗೆಯಾದೆನು. ಈ ಭುವನವೆಲ್ಲರಿಯಲು ಅಸಂಖ್ಯಾತರೆನಗೆ ತಾಯಿ ತಂದೆಗಳು. ಕೊಟ್ಟರು ಪ್ರಭುವಿನ ಮನೆಗೆ ಸಾದೃಶ್ಯವಪ್ಪ ವರನ ನೋಡಿ. ಇದು ಕಾರಣ ಚನ್ನಮಲ್ಲಿಕಾರ್ಜುನ ಗಂಡನೆನಗೆ ಮಿಕ್ಕಿನ ಲೋಕದ ಗಂಡರೆನಗೆ ಸಂಬಂಧವಿಲ್ಲವಯ್ಯ ಪ್ರಭುವೆ. ॥೧೪॥

ಹೀಗೆಂದು ಮಹದೇವಿಯಕ್ಕಗಳು ತಮ್ಮ ಪತಿಯ ಕುರುಹ ಹೇಳಲು, ಆದರೆ ನೀನು ಕೌಶಿಕನೆಂಬ ಭವಿಯ ಮೇಲೆ ಲಿಂಗಧಾರಣವಾಗದ ತಪ್ಪ ಹೊರಿಸಿ ನಿರ್ವಾಣವಾಗಿ ಬಾಹಲ್ಲಿ ಕೇಶ ಮರೆಯಾದರೆ ಅಭಿಮಾನ ಹರಿಯದೆಂದು, ನಿರೂಪಿಸಿದ ಪ್ರಸ್ಥಾವದ ವಚನ॥

ತಪ್ಪ ಹೊರಿಸಿ ಹೊರಟೆನೆಂಬುದು ಸತ್ಯವೆ? ತನು ಸಿರಿಯನಳಿದು ನಿರ್ವಾಣವಾದಲ್ಲಿ ಮನದ ಭ್ರಾಂತು ನಿಶ್ಚಯವಾಗದು. ಕೇಶವೆಂಬ ಸೀರೆಯ

ಅಂಗಕ್ಕೆ ಮರೆಯಾಯಿತ್ತು. ಅಪಮಾನವೆಂತು ಹರಿಯಿತ್ತು. ಅದು ಗುಹೇಶ್ವರಲಿಂಗಕ್ಕೆ ಸಲ್ಲದವೇಷ. ॥೧೫॥

ಇದಕ್ಕೆ ಮಹದೇವಿಯಕ್ಕಗಳ ಬಿನ್ನಹ.

ಕಾಯ ಕರ್ರನೆ ಕಂದಿದರೇನಯ್ಯ? ಕಾಯ ಮಿರ್ರನೆ ಮಿಂಚಿದರೇನಯ್ಯ? ಅಂತರಂಗ ಶುದ್ಧವಾದ ಬಳಿಕ ಚನ್ನಮಲ್ಲಿಕಾರ್ಜುನ ಲಿಂಗವು ಒಲಿದ ಕಾಯವು ಹೇಗಿದ್ದಡೇನಯ್ಯ. ॥೧೬॥

ಇದಕ್ಕೆ ಪ್ರಭುದೇವರು ಕೊಟ್ಟ ಪ್ರತ್ಯುತ್ತರ॥

ದೇವನೊಲಿಯದೆ ನೀನೊಲಿಸಿದೆನೆಂಬುದು ಅದಾವುದಕ್ಕೆ? ಭಾವ ಶುದ್ಧವಾದಲ್ಲಿ ಸೀರೆಯನಳಿದು ಕೂದಿಲ ಮರೆಮಾಡಲೇತಕ್ಕೆ? ಅದು ಅಂತರಂಗದ ನಾಚಿಕೆ. ಬಾಹ್ಯದಲ್ಲಿ ತೋರಿತ್ತು. ಅದು ಗುಹೇಶ್ವರಲಿಂಗಕ್ಕೆ ಒಲವರವಲ್ಲ. ॥೧೭॥

ಇದಕ್ಕೆ ಮಹದೇವಿಯಕ್ಕಗಳ ಬಿನ್ನಹ॥

ಫಲ ಪಕ್ವವಾದಲ್ಲದೆ ಹೊರಗಣ ಸಿಪ್ಪೆ ಒಪ್ಪಗೆಡದು. ಕಾಮನ ಮುದ್ರೆಯ ಕಂಡು ನಿಮಗೆ ನೋವಾದಿತ್ತೆಂದು ಆ ಭಾವದಿಂದೆ ಮುಚ್ಚಿದೆ. ಇದಕ್ಕೆ ನೋವೇಕೆ? ಕಾಡದಿರಣ್ಣಾ ಚನ್ನಮಲ್ಲಿಕಾರ್ಜುನ ದೇವರ ದೇವನ ಒಳಗಾದವಳಾ. ॥೧೮॥

ಇದಕ್ಕೆ ಪ್ರಭುದೇವರು ನಿರೂಪಿಸಿದ ವಚನ. ॥

ನೀ ದೇವರೊಳಗೋ ದೇವರು ನಿನ್ನೊಳಗೋ, ಎಂಬ ಠಾವನರಿಯೆ. ಸಿಪ್ಪೆ ಒಪ್ಪಗೆಟ್ಟಾಗ, ಹಣ್ಣಿನ ರಸ ಕೊಳಕಾಯಿತ್ತು. ಅದು ಗುಹೇಶ್ವರಲಿಂಗ ಒಪ್ಪದಮಾತು. ॥೧೯॥

ಅದಕ್ಕೆ ಮಹದೇವಿಯಕ್ಕಗಳ ಬಿನ್ನಹ. ॥

ಗುಣದೋಷನ ಸಂಪಾದನೆಯ ಮಾಡುವನಕ್ಕರ ಕಾಮದ ಒಡಲು, ಕ್ರೋಧದ ಗೊತ್ತು, ಲೋಭದ ಇಕ್ಕೆ, ಮೋಹದ ಮಂದಿರ, ಆ ಭಾವವರತಲ್ಲದೆ ಚನ್ನಮಲ್ಲಿಕಾರ್ಜುನನ ಕೇಳುವದಕ್ಕೆ ಇಂಬಿಲ್ಲ ಎಲೆ ಅಣ್ಣಗಳಿರಾ. ॥೨೦॥

ಇದಕ್ಕೆ ಪ್ರಭುದೇವರು ಕೊಟ್ಟ ಪ್ರತ್ಯುತ್ತರ.॥

ಕಾಮದಿಂದ ಖಂಡ, ಕ್ರೋಧದಿಂದ ಅಸ್ತಿ, ಲೋಭದಿಂದ ಸಕಲ ವಿಷಯಂಗಳು, ಮೋಹದಿಂದೆ ನೋಡಿಹೆನೆಂಬುದೆಲ್ಲವು ಕಾಮನ ಬಲೆಯೊಳಗು, ಕಾಮನ ಗೆದ್ದ ಠಾವಾವುದು ಹೇಳಾಗುಹೇಶ್ವರಲಿಂಗಕ್ಕೆ? ॥೨೧॥

ಇದಕ್ಕೆ ಮಹಾದೇವಿಯಕ್ಕಗಳ ಬಿನ್ನಹ ॥

ಕೆಂಡದ ಶ್ರವದಂತೆ, ಸೂತ್ರ ತಪ್ಪಿದ ಬೊಂಬೆಯಂತೆ ಜಲವರತ ತಟಾಕವಂತೆ ಬೆಂದ ನುಲಿಯಂತೆ, ಮತ್ತೆ ಹಿಂದಣಹಂಗುಂಟೆ? ಅಣ್ಣ ಚನ್ನಮಲ್ಲಿಕಾರ್ಜುನನಂಗವೆ ಆಶ್ರಯವಾದವಳಿಗೆ? ॥೨೨॥

ಇಂತು ಮಹಾದೇವಿಯಕ್ಕಗಳು ನಾನು ನಿಃಕಾಮಿಯಾಗಿ ನಿರಾಕಾರ ಬ್ರಹ್ಮವನೆ ಕೈವಿಡಿದೆನೆಂದು, ನಿರೂಪಿಸುವ ಪ್ರಸ್ಥಾವದ ವಚನ॥

ಸಾವಿಲ್ಲದ ಕೇಡಿಲ್ಲದ, ರೂಹಿಲ್ಲದ ಚಲುವಂಗೆ, ಭವವಿಲ್ಲದ ಭಯವಿಲ್ಲದ ನಿರ್ಭಯದ ಚಲುವಂಗೆ ನಾನೊಲಿದೆನಯ್ಯ. ಚನ್ನಮಲ್ಲಿಕಾರ್ಜುನ ಗಂಡನೆನಗೆ ಮಿಕ್ಕಿನ ಲೋಕದ ಗಂಡರೆನಗೆ ಸಂಬಂಧವಿಲ್ಲವಯ್ಯ. ॥೨೩॥

ಹೀಗೆಂದು ಮಹಾದೇವಿಯಕ್ಕಗಳು ಬಿನ್ನೈಸಲು, ಇದಕ್ಕೆ ಪ್ರಭುದೇವರು ಆ ಉತ್ತರವಮಂ ಖಂಡಿಸಿ, ನುಡಿದ ಪ್ರಸ್ಥಾವದ ವಚನ॥

ರೂಹಿಂಗೆ ಕೇಡುಂಟು. ನಿರೂಪಿಂಗೆ ಕೇಡಿಲ್ಲ. ರೂಪು ನಿರೂಪವನೊಡಗೂಡುವ ಪರಿ ಎಂತು ಹೇಳಾ? ಆ ಸಂಬಂಧ ಸಂಬಂಧವಾಗಿದೆ ದೇಹ. ಇಂದ್ರಿಯವೆಂಬ ಜಾತಿಸೂತಕವಿರಲು, ಗುಹೇಶ್ವರಲಿಂಗವ ಮುಟ್ಟಬಾರದು ಕೇಳವ್ವಾ. ॥೨೪॥

ಹೀಗೆಂದು ಪ್ರಭುದೇವರು ನಿರೂಪಿಸಲು, ಆ ಮಹಾದೇವಿಯಕ್ಕಗಳು ಬಿನ್ನೈಸುವ ಪ್ರಸ್ಥಾವದ ವಚನ. ॥

ಹಾವಿನ ಹಲ್ಲ ಕಳೆದು, ಹಾವನಾಡಿಸಬಲ್ಲಡೆ ಹಾವಿನ ಸಂಗವೇ ಲೇಸು ಕಂಡಯ್ಯ. ಕಾಯದ ಸಂಗವ ವಿವರಿಸಬಲ್ಲಡೆ ಕಾಯದ ಸಂಗವೆ ಲೇಸು ಕಂಡಯ್ಯ. ತಾಯಿ ರಕ್ಕಸಿಯಾದಂತೆ ಕಾಯ ವಿಕಾರವು ಚನ್ನಮಲ್ಲಿಕಾರ್ಜುನಯ್ಯ ನೀನೊಲಿದವರು ಕಾಯಗೊಂಡಿದ್ದರೆನಬೇಡಾ. ॥೨೫॥

ಈ ಉತ್ತರಕ್ಕೆ ಪ್ರಭುದೇವರ ವಚನ. ॥

ತನು ಗುಣ ವಿವರಿಸಿಹೆನೆಂದರೆ ಮನ ಶುದ್ಧವಾಗಬೇಕು. ಮನ ಗುಣ ವಿವರಿಸಿಹೆನೆಂದರೆ ಇಂದ್ರಿಯ ಶುದ್ಧವಾಗಬೇಕು. ತನು ಮನ ಇಂದ್ರಿಯಂಗಳು ಶುದ್ಧ ಸುಯಿಧಾನವಾಗಿ ಲಿಂಗಮುಖಕ್ಕೆ ವೇದ್ಯವಾದಲ್ಲದೆ ಗುಹೇಶ್ವರಲಿಂಗವ ಬೆಸಗೊಳಬಾರದು ಕೇಳಾ ತಾಯೆ. ॥೨೬॥

ಈ ಉತ್ತರಕ್ಕೆ ಮಹಾದೇವಿಯಕ್ಕಗಳು ಕೊಟ್ಟ ಪ್ರತ್ಯುತ್ತರ॥

ತನು ಶುದ್ಧವಾಯಿತ್ತು ಶಿವಭಕ್ತರೊಕ್ಕುದ ಕೊಂಡೆನ್ನ ಮನ ಶುದ್ಧವಾಯಿತ್ತು. ಅಸಂಖ್ಯಾತರ ನೆನೆದೆನ್ನ ಕಂಗಳು ಶುದ್ಧವಾಯಿತ್ತು. ಸಕಲ ಪುರಾತನರನೋಡಿ ಎನ್ನ ಶ್ರೋತ್ರ ಶುದ್ಧವಾಯಿತ್ತು. ಅವರ ಕೀರ್ತಿಯ ಕೇಳಿ ಎನ್ನ ಭಾವನೆಯುನಗಿದು, ಜೀವನವು ಕೇಳಾ ಲಿಂಗತಂದೆ. ನೆಟ್ಟನೆ ನಿಮ್ಮುವ ಪೂಜಿಸಿ ಭವಗೆಟ್ಟೆ ಕಾಣಾ ಚನ್ನಮಲ್ಲಿಕಾರ್ಜುನ. ॥೨೭॥

ಮತ್ತಂ॥ ಬಸವಣ್ಣನ ಪಾದವ ಕಂಡೆನಾಗಿ ಎನ್ನಂಗ ನಾಸ್ತಿಯಾಯಿತ್ತು. ಚನ್ನಬಸವಣ್ಣನ ಪಾದವ ಕಂಡೆನಾಗಿ ಎನ್ನ ಪ್ರಾಣ ಬಯಲಾಯಿತ್ತು. ಪ್ರಭುದೇವ ನಿಮ್ಮ ಶ್ರೀಪಾದಕ್ಕೆ ಶರಣೆಂದೆನಾಗಿ ಎನ್ನರಿವು ಸ್ವಯವಾಯಿತ್ತು. ಚನ್ನಮಲ್ಲಿಕಾರ್ಜುನದೇವಯ್ಯ ನಿಮ್ಮ ಶರಣರ ಕರುಣವ ಪಡೆದೆನಾಗಿ ಎನಗೆ ಮತ್ತಾವುದಿಲ್ಲವಾಗಿ, ಪ್ರಭುವೇ. ॥೨೮॥

ಹೀಗೆಂದು ಮಹದೇವಿಯಕ್ಕಗಳು ಬಿನ್ನೈಸಲು, ಪ್ರಭುದೇವರು ಕೊಟ್ಟ ಪ್ರತ್ಯುತ್ತರ.

ಕಾಯ ಶುದ್ಧವಾಯಿತ್ತೆಂದರೆ ಲಿಂಗ ನೆಲೆಗೊಳ್ಳದು. ಜೀವ ಶುದ್ಧವಾಯಿತ್ತೆಂದರೆ ಲಿಂಗ ನೆಲೆಗೊಳ್ಳದು. ಭಾವ ಶುದ್ಧವಾಯಿತ್ತೆಂದರೆ ಲಿಂಗ ನೆಲೆಗೊಳ್ಳದು. ಗುಹೇಶ್ವರ ಲಿಂಗದಲ್ಲಿ ಶುದ್ಧ ಸುಯಿಧಾನಿಯಾದೆನೆಂದರೆ ನಿಜವು ಸಾಧ್ಯವಾಗದು ಕೇಳಾ ಅವ್ವಾ ॥೨೯॥

ಇದಕ್ಕೆ ಅಕ್ಕಗಳ ಪ್ರತ್ಯುತ್ತರ

ಕಾಯದೊಳಗೆ ಅಕಾಯವಾಯಿತ್ತು. ಜೀವದೊಳಗೆ ನಿರ್ಜೀವವಾಯಿತ್ತು. ಭಾವದೊಳಗೆ ನಿರ್ಭಾವವಾಯಿತ್ತು. ಎನ್ನ ಮನದೊಳಗೆ ಘನ ನೆನಹಾಯಿತ್ತು. ಎನ್ನ ತಲೆ ಮೊಲೆಗಳ ನೋಡಿ ಸಲಹಿದಿರಾಗಿ ಚನ್ನಮಲ್ಲಿಕಾರ್ಜುನ ಧರ್ಮದವಳನು. ॥೩೦॥

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ ॥

ಕೂಡಲಿಲ್ಲದ ಘನವ ಕೂಡುವ ಪರಿ ಎಂತವ್ವ? ಹೇಳಿದರೆ ಅದಕ್ಕದೆ ಕೊರತೆ. ಗುಹೇಶ್ವರ ಲಿಂಗವ ಬೇರು ಮಾಡಿ, ಬೆರಸುವ ಪರಿ ಎಂತು ಹೇಳಾ ॥೩೧॥

ಇದಕ್ಕೆ ಅಕ್ಕಗಳ ಪ್ರತ್ಯುತ್ತರ॥

ಗಟ್ಟಿದುಪ್ಪಕ್ಕೆ ತಿಳಿದುಪ್ಪಕ್ಕೆ ಹಂಗುಂಟೆ? ಅಯ್ಯ ದೀಪಕ್ಕೆ ದೀಪ್ತಿಗೆ ಭೇದ ಉಂಟೆ ಅಯ್ಯ? ಆತ್ಮಕ್ಕೆ ಅಂಗಕ್ಕೆ ಭೇದ ಉಂಟೆ ಅಯ್ಯ? ಎನ್ನಂಗ

ವನು ಶ್ರೀಗುರು ಮಂತ್ರವ ಮಾಡಿ, ತೋರಿದನಾಗಿ ಸಾವಯಕ್ಕೆ ನಿರವಯಕ್ಕೆ ಭಿನ್ನವಿಲ್ಲವಯ್ಯ. ಚನ್ನಮಲ್ಲಿಕಾರ್ಜುನ ದೇವರ ಬೆರಿಸಿ ಮತಿಗೆಟ್ಟವಳನೇತಕ್ಕೆ ನುಡಿಸುವಿರಯ್ಯ ಪ್ರಭುವೇ॥

ಅಂಗವ ಲಿಂಗಮುಖದಿಂದರ್ಪಿಸಿ ಅಂಗ ಅನಂಗವಾಯಿತ್ತು. ಮನವ ಅರಿವಿಂಗರ್ಪಿಸಿ ಮನ ಲಯವಾಯಿತ್ತು. ಭಾವವ ತೃಪ್ತಿಗರ್ಪಿಸಿ, ಭಾವ ಬಯಲಾಯಿತ್ತು. ಅಂಗ ಮನ ಭಾವವಳಿದ ಕಾರಣ ಕಾಯ ಅಕಾಯವಾಯಿತ್ತು. ಎನ್ನ ಕಾಯದ ಸುಖದ ಭೋಗವ ಲಿಂಗವೆ ಭೋಗಿಸುವದಾಗಿ, ಶರಣ ಸತಿ ಲಿಂಗ ಪತಿಯಾದೆನು. ಇದು ಕಾರಣ ಚನ್ನಮಲ್ಲಿಕಾರ್ಜುನನೆಂಬ ಗಂಡನ ಒಳ ಹೊಕ್ಕು ಬೆರಿಸಿದೆನು. ॥೩೩॥

ಹೀಗೆಂದು ಮಹದೇವಿಯಕ್ಕಗಳು ಚಿದಹಂತೆಯ ಪ್ರಭುದೇವರು ಖಂಡಿಸಿ ನುಡಿವ ಪ್ರಸ್ಥಾವದ ವಚನ. ॥

ನಾ ಸತ್ತೆನೆಂದು, ಹೆಣ ಕೂಗಿದುದುಂಟೇ? ಬಯಚಿಟ್ಟು ಬಯಕೆ ಕರೆದುದುಂಟೇ? ಹೆಪ್ಪಿಟ್ಟ ಹಾಲು ಸಿಹಿಯಪ್ಪುದೇ? ಈ ಮಾತು ಒಪ್ಪವಪ್ಪುದೆ ಗುಹೇಶ್ವರಲಿಂಗಕ್ಕೆ? ॥೩೪॥

ಇದಕ್ಕೆ ಅಕ್ಕಗಳ ಪ್ರತ್ಯುತ್ತರ. ॥

ಸತ್ತ ಹೆಣ ಕೂಗಿದುದುಂಟು, ಬಯಚಿಟ್ಟ ಬಯಕೆ ಕರೆದುದುಂಟು. ಹೆಪ್ಪಿಟ್ಟ ಹಾಲು ಗಟ್ಟಿಗೊಂಡು ಸಿಹಿಯಾದುದುಂಟು. ಇವ ನಿಶ್ಚೈಸಿ ನೋಡಿ ಚನ್ನಮಲ್ಲಿಕಾರ್ಜುನ ದೇವರಲ್ಲಿ. ॥೩೫॥

ಇದಕ್ಕೆ ಪ್ರಭುದೇವರ ವಚನ. ॥

ಇದು ಎನಗೆ ಆಶ್ಚರ್ಯ ಹೇಳವ್ವಾ. ಕಾಯವಿಲ್ಲದ ಸುಖವ ಜೀವವಿಲ್ಲದ ಭಾವವ ಆ ಠಾವ ಹೇಳಾ ಗುಹೇಶ್ವರಲಿಂಗಕ್ಕೆ. ॥೩೬॥

ಇದಕ್ಕೆ ಅಕ್ಕಗಳ ಪ್ರತ್ಯುತ್ತರ. ॥

ಮರೆದೊರಗಿ ಕನಸ ಕಂಡು ಹೇಳುವಲ್ಲಿ ಸತ್ತ ಹೆಣ ಎದ್ದಿತ್ತು. ತನ್ನ ಗುಣ ನಿಧಾನ ಎದ್ದು ಕರೆಯಿತ್ತು. ಹೆಪ್ಪಿಟ್ಟ ಹಾಲು ಗಟ್ಟಿದುಪ್ಪವಾಗಿ ಸಿಹಿಯಾಯಿತ್ತು. ಇದಕ್ಕೆ ತಪ್ಪ ಸಾಧಿಸಲೇಕೆ ಚನ್ನಮಲ್ಲಿಕಾರ್ಜುನ ದೇವರ ದೇವನಣ್ಣಗಳಿರಾ. ॥೩೭॥

ಇದಕ್ಕೆ ಪ್ರಭುದೇವರು ಒಡಂಬಟ್ಟ ಪ್ರಸ್ಥಾವದ ವಚನ.

ಇದು ಲೇಸಾಯಿತ್ತು. ತುಂಬಿದ ಲೆಕ್ಕಕ್ಕೆ ಮತ್ತೊಂದೆಂದು ಕಡೆಗಾಣಿಸುವಂತೆ, ಸ್ಥಾಣುವಿನ ಮರೆಯಂತೆ, ಅಂಬುಧಿಯ ಕೊಂಬಿನಲ್ಲಿರ್ದ ವಿಹಂಗನಂತೆ ಎಲ್ಲಿ ಬಂದಡು ಗುಹೇಶ್ವರನೆಂಬ ಭಾವ ಒಂದಾಯಿತ್ತು. ॥೩೮॥

ಇದಕ್ಕೆ ಮಹದೇವಿಯಕ್ಕಗಳ ನಿರಹಂಭಾವದ ವಚನ. ॥

ಎನಗೇಕಯ್ಯ? ನಾ ಪ್ರಪಂಚಿನ ಪುತ್ಥಳಿ, ಮಾಯಕದ ಮಲ ಭಾಂಡ, ಆತುರದ ಭವನಿಳಯ ಜಲಕುಂಭದ ವಡೆಯಲ್ಲಿ ಒಸರುವ ನೆಲೆಮನೆಗೇಕಯ್ಯ? ಬೆರಳು ತಾಳಹಣ್ಣ ಹಿಸುಕಿವಡೆ ಮೆಲಲುಂಟೆ? ಬಿತ್ತಲ್ಲಿ ಜೀವ ಅದರೊಪ್ಪದ ತೆರ ಎನಗೆ ಎನ್ನ ತಪ್ಪ ಒಪ್ಪುಗೊಳ್ಳಾ ಚನ್ನಮಲ್ಲಿಕಾರ್ಜುನದೇವರ ದೇವ ನೀವೆ ಅಣ್ಣಗಳಿರಾ. ॥೩೯॥

ಮತ್ತ॥ ಚಂಪನವ ಕಡಿದು, ಕೊರೆದು, ತೇದಡೆ ನೊಂದೆನೆಂದು ಕಂಪ ಬಿಟ್ಟಿತ್ತೆ? ತಂದು ಸುವರ್ಣವ ಕಡಿದೊರೆದಡೆ ಬೆಂದು ಕಳಂಕ ಹಿಡಿದಿತ್ತೆ? ಸಂದು ಸಂದು ಕಡಿದು ಕಬ್ಬನು ತಂದು ಗಾಣದಲಿಕ್ಕಿ ಬೆಂದ ಪಾಕಗಳು ಸಕ್ಕರೆಯಾಗ ನೊಂದೆನೆಂದು ಸವಿಯ ಬಿಟ್ಟಿತ್ತೆ? ನಾ ಹಿಂದೆ ಮಾಡಿದ ಹೀನಂಗಳೆಲ್ಲವ ತಂದು ಮುಂದಿಳುಹಲು ನಿಮಗೆ ಹಾನಿಯೆ? ಎನ್ನ ತಂದೆ ಚನ್ನಮಲ್ಲಿಕಾರ್ಜುನದೇವಯ್ಯ ಕೊಂದಡೆ ಶರಣೆಂಬುದ ಮಾಣೆ. ॥೪೦॥

ಇದಕ್ಕೆ ಪ್ರಭುದೇವರು ಸಂತೋಷಿಸಿ, ಕೊಂಡಾಡಿದ ಪ್ರಸ್ಥಾವದ ವಚನ. ॥

ಅಂಗನೆ ಅಂಗನೆಯ ರೂಪಲ್ಲದೆ ಮನ ವಸ್ತು ಭಾವದಲ್ಲಿ ಬೆಚ್ಚಂತೆ ಇಪ್ಪುದು. ಬಂದ ಕಥನದಲ್ಲಿ ಬಂದು ಹಿಂಗಿದೆಯಲ್ಲ. ಅಕ್ಕ ಗುಹೇಶ್ವರ ಲಿಂಗದಲ್ಲಿ ಉಭಯ ನಾಸ್ತಿ ಮನವಳಿದೆ ಎನ್ನಕ್ಕಾ. ॥೪೧॥

ಇಂತು ಪ್ರಭುದೇವರು ಉಭಯ ನಾಮವಳಿದೆ ಎಂದು ಕೊಂಡಾಡಲು, ಆ ಮಹದೇವಿಯಕ್ಕಗಳ ಎರಡಿಲ್ಲದೆ ಬೆರಸಿದುದಂ ಬಿನ್ನೈಸುವ ಪ್ರಸ್ಥಾವದ ವಚನ ॥

ಅಂಗಸಂಗದಲ್ಲಿ ಲಿಂಗಸಂಗಿಯಾದೆ. ಲಿಂಗಸಂಗದಲ್ಲಿ ಅಂಗಸಂಗಿಯಾದೆ. ಉಭಯ ಸಂಗವನು ಅರಿಯದೆ ಪರಿಣಾಮಿಯಾದೆನು. ನುಡಿಯು ಗಡಣವ ಮರೆದು, ತೆರಹಿಲ್ಲದಿದ್ದರೇನು? ಎನ್ನ ದೇವ ಚನ್ನಮಲ್ಲಿಕಾರ್ಜು

ನದೇವರ ಬೆರಸಿದ ಬಳಿಕ ಎನ್ನ ನಾನು ಏನೆಂದು ಅರಿಯೆನೆಂದು ಅರಿಯೆನಯ್ಯ ॥೪೨॥

ಹೀಗೆಂದು ಪ್ರಭುದೇವರೊಡನೆ ಅಕ್ಕಗಳು ಪ್ರಸಂಗಿಸುತ್ತಿರಲು, ಬಸವರಾಜದೇವರು ಮಹದೇವಿಯಕ್ಕಗಳ ನುಡಿಸಿ ನೋಡುವ ಪ್ರಸ್ಥಾವದ ವಚನ॥

ಅಂಗದಲ್ಲಿ ಲಿಂಗ ಸಂಗ. ಲಿಂಗದಲ್ಲಿ ಅಂಗಸಂಗವ ಮಾಡಿದೆನೆಂದರೆ ಸಂದು ಭೇದವಳಿವ ಪರಿ ಎಂತು ಹೇಳಾ! ಅಂಗದಲ್ಲಿ ಸಂಗವ ಮಾಡಿಹೆನೆಂದರೆ ಮುಂದುಗೆಡಿಸಿ ಕಾಡುವನು ಶಿವನು. ಕಾಮನೆಂಬ ಬಯಕೆಯಲ್ಲಿ ಅಳಲಿಸುವ ಬಳಲಿಸುವ ಶಿವನು. ಲಿಂಗವಲ್ಲಿ ಅಂಗವ ತಂದು ನಿಕ್ಷೇಪಿಸಿಹೆನೆಂದರೆ ಅಂಗದಿಂದಲತ್ತತ್ತ ಓಸರಿಸಿ ಓಡವನಯ್ಯ ಶಿವನು. ಹೆಣ್ಣು ಗಂಡಾದರೆ ಸಂಗಕ್ಕೆ ಒಲಿವನು ಕೇಳಾ ಶಿವನು. ಕೂಡಲ ಸಂಗಮದೇವರ ಬೆರಸುವರೆ ಭಿನ್ನವಿಲ್ಲದೆ ಕಲಿಯಾಗಬೇಕು ಕೇಳಾ ಅವ್ವಾ ॥೪೩॥

ಇದಕ್ಕೆ ಅಕ್ಕಗಳ ಬಿನ್ನಹ.

ಕಾಮನ ಗೆಲಿದೆನಯ್ಯ ಬಸವಣ್ಣ ನಿಮ್ಮ ದಯದಿಂದ. ಸೋಮಧರನ ಹಿಡಿತಪ್ಪೆನಯ್ಯ ಬಸವಣ್ಣ ನಿಮ್ಮ ದಯದಿಂದ. ನಾಮದಲ್ಲಿ ಹೆಣ್ಣು ರೂಪಲ್ಲದೆ ಭಾವಿಸಲು ಗಂಡು ರೂಪು ನೋಡಾ ಬಸವಣ್ಣ. ನಿಮ್ಮ ದಯದಿಂದ ಅತಿಕಾಮಿ ಚನ್ನಮಲ್ಲಿಕಾರ್ಜುನಂಗೆ ತೊಡರನಿಕ್ಕಿ ಕೂಡಿ ಎರಡರಿಯದೆ ಮರೆದೆನಯ್ಯ ಬಸವಣ್ಣ ನಿಮ್ಮ ದಯದಿಂದ. ॥೪೪॥

ಇಂತು ಅಂಗವಿಕಾರವ ಗೆಲಿದು ಲಿಂಗವನು ಎನ್ನೊಳಗೆ ದೃಢವಿಡಿದು ಸರ್ವಾಂಗದೊಳು ಐಕ್ಯವ ಮಾಡಿಕೊಂಡು ನಿಜಗಲಿಯಾಗಿ ಗೆಲಿದೆನೆಂದು ಬಿನ್ನೈಸುವ ಪ್ರಸ್ಥಾವದ ವಚನ. ॥

ಭಾವಿಸಿ ನೋಡಿದರೆ ಅಂಗವಾಯಿತ್ತು. ಅಂಗಗುಣವಳಿದುಳಿದ ಬಳಿಕ ನಾ ನಿನಗಂಗವಾದೆ. ಭಿನ್ನರುಚಿಯ ಬಿಟ್ಟು ಲಿಂಗರುಚಿಯಾದ ಬಳಿಕ ಚನ್ನಮಲ್ಲಿಕಾರ್ಜುನನ ಕೊಂದು ಸಾವ ಭಾಷೆ. ॥೪೫॥

ಇದಕ್ಕೆ ಬಸವರಾಜದೇವರು ನಿರೂಪಿಸಿದ ಪ್ರಸ್ಥಾವದ ವಚನ.॥

ಅಳಿವನಲ್ಲ. ಉಳಿವನಲ್ಲ. ಪ್ರಳಯವೆಂಬುದ ಮುನ್ನರಿಯನು. ಕಳಾಕುಳ ರಹಿತನು. ಉಭಯ ಕುಳ ರಹಿತನು. ಅರಿವ ಬೈಚಿಟ್ಟು ಮರೆವ ಗಮನಿಯಲ್ಲ, ನಿರ್ಗಮನ ಕೂಡಲಸಂಗಯ್ಯನೆಂಬ ಶಬ್ದ ಮುಗ್ಧನ ಭಾವದ ಬಳಕೆಯಲ್ಲಿ ಗೆಲಬಹುದೆ ಹೇಳಾ? ॥೪೬॥

ಇವಕ್ಕೆ ಮಹದೇವಿಯಕ್ಕಗಳು ಬಿನ್ನೈಸಿದ ಪ್ರಸ್ಥಾವದ ವಚನ. ॥

ಅಂಗದೊಳಗೆ ಅಂಗವಾಗಿ, ಲಿಂಗೈಕ್ಯವ ಮಾಡಿದೆ. ಮನದೊಳಗೆ ಮನವಾಗಿ ಮನ ಲಿಂಗೈಕ್ಯವ ಮಾಡಿದೆ. ಭಾವದೊಳಗೆ ಭಾವವಾಗಿ ಭಾವ ಲಿಂಗೈಕ್ಯವ ಮಾಡಿದೆ. ಅರಿವಿನೊಳಗೆ ಅರಿವಾಗಿ ಅರಿವ ಲಿಂಗೈಕ್ಯವ ಮಾಡಿದೆ. ಕ್ರಿಯೆಗಳೆಲ್ಲವ ನಿಲಿಸಿ ಕ್ರಿಯಾತೀತವಾಗಿ, ನಿಷ್ಪತ್ತಿ ಲಿಂಗೈಕ್ಯವಾದೆ. ನಾನೆಂಬುದ ನಿಲಿಸಿ ನೀನೆಂಬುದ ಕೆಡಿಸಿ ಉಭಯ ಲಿಂಗೈಕ್ಯವ ಮಾಡಿದೆ. ಚನ್ನಮಲ್ಲಿಕಾರ್ಜುನನೊಳಗೆ ನಾನಳಿದೆನಾಗಿ ಲಿಂಗವೆಂಬ ಘನವು ಎನ್ನಲ್ಲಿ ಅಳಿಯಿತ್ತು ಕಾಣಾ ಸಂಗನಬಸವಣ್ಣಾ. ॥೪೭॥

ಹೀಗೆಂದು ಅಕ್ಕಗಳು ಬಿನ್ನೈಸಲು, ಬಸವರಾಜದೇವರು ಮೆಚ್ಚಿ ನಿರೂಪಿಸಿದ ಪ್ರಸ್ಥಾವದ ವಚನ. ॥

ಹೆಂಗುಸಿನಂಗವ ನೋಡಿರೆ ಪುರಾತನರು. ಬಾಲತನದಂಗವ ನೋಡಿರೆ. ಪುರಾತನರು ಬ್ರಹ್ಮವನಾಚರಿಸಿ, ತನ್ನ ಮರೆದಿಪ್ಪುದ ನೋಡಿರೆ. ಲಿಂಗವಂತರು ತನ್ನಲ್ಲಿ ತಾನು ನಿಶ್ಚಯವಾಗಿ ಭಾಷೆ ಬೀಸರವೋಗದೆ ಇಪ್ಪ ಇರವು ಕೂಡಲಸಂಗಮದೇವರಲ್ಲಿ ನಮ್ಮ ಮಹದೇವಿಯಕ್ಕಂಗಾಯಿತ್ತು. ॥೪೮॥

ಹೀಗೆಂದು ಬಸವರಾಜದೇವರು ನಿರೂಪಿಸಲು, ಇದಕ್ಕೆ ಅಕ್ಕಗಳ ಬಿನ್ನಹ,

ನಿನ್ನ ಅಂಗದ ಆಚಾರವ ಕಂಡು, ಎನಗೆ ಲಿಂಗ ಸಂಗವಾಯಿತ್ತು. ಅಯ್ಯ ಬಸವಣ್ಣ ನಿಮ್ಮ ಮನದ ಸುಜ್ಞಾನವ ಕಂಡು ಎನಗೆ ಜಂಗಮ ಸಂಬಂಧವಾಯಿತ್ತಯ್ಯ ಬಸವಣ್ಣಾ. ನಿನ್ನ ಸದ್ಭಕ್ತಿಯ ತಿಳಿದು ಎನ್ನ ನಿಜ ಸಾಧ್ಯವಾಯಿತ್ತಯ್ಯ ಬಸವಣ್ಣ. ಚನ್ನಮಲ್ಲಿಕಾರ್ಜುನನ ಹೆಸರಿಟ್ಟ ಗುರು ನೀನಾದ ಕಾರಣ ನಾನೆಂಬುದಿಲ್ಲವಯ್ಯ ಬಸವಣ್ಣಾ. ॥೪೯॥

ಮತ್ತಂ॥ ಅಂಗದಲ್ಲಿ ಆಚಾರವ ತೋರಿದ. ಆಚಾರವೆ ಲಿಂಗವೆಂದರುಹಿದ. ಪ್ರಾಣದಲ್ಲಿ ಅರಿವನೆಲೆಗೊಳಿಸಿದ. ಆ ಅರಿವೆ ಜಂಗಮವೆಂದು ತೋರಿದ. ಚನ್ನಮಲ್ಲಿಕಾರ್ಜುನನ ಹೆತ್ತ ತಂದೆ ಸಂಗನಬಸವಣ್ಣನು ಎನಗೀ ಕ್ರಮವನರುಹಿದನಯ್ಯಾ. ॥೫೦॥

ಮತ್ತಂ॥ ಅಕ್ಕಗಳು ಅನಾದಿ ಪರಶಿವನು ತಾನೆ ಜಗದ್ಧಿತಾರ್ಥವಾಗಿ ಮರ್ತ್ಯಕ್ಕವತರಿಸಿ, ಬಸವನೆಂಬ ನಾಮಕರಣವ ಧರಿಸಿ, ವೀರಶೈವ ಮಾರ್ಗ

ವನರುಹುವದಕ್ಕೆ ಬಾವನ್ನ ವಿವರವನೊಳಕೊಂಡು, ಚರಿಸಿದನೆಂದು ಬಸವೇಶ್ವರ ದೇವರ ಮಹಾತ್ಮೆಯಂ ಕೊಂಡಾಡುವ ಪ್ರಸ್ಥಾವದ ವಚನ. ||

ಶಿವಶಿವ ಆದಿಅನಾದಿಗಳೆಂಬವೆರಡಿಲ್ಲದ ನಿರವಯುವಾಗಿಪ್ಪ ಶಿವ ನಿಮ್ಮ ನಿಜವನಾರಯ್ಯ ಬಲ್ಲವರು? ವೇದಂಗಳಿಗಭೇದ್ಯನು, ಶಾಸ್ತ್ರಕ್ಕಸಾಧ್ಯನು, ಪುರಾಣಕ್ಕೆ ಪುಣ್ಯನು, ಆಗಮಕ್ಕಗೋಚರನು, ತರ್ಕಕ್ಕೆ ಅತರ್ಕ್ಯನು, ವಾಙ್ಮನಾತೀತನೆಂಬ ಪರಶಿವ ಲಿಂಗವನು ಕೆಲಬರು ಸಕಲನೆಂಬರು, ಕೆಲಬರು ನಿಃಕಲನೆಂಬರು, ಕೆಲಬರು ಸೂಕ್ಷ್ಮನೆಂಬರು, ಕೆಲಬರು ಸ್ಥೂಲನೆಂಬರು, ಈ ಬಗೆಯ ಭಾವದಿಂದೆ ಹರಿ ಬ್ರಹ್ಮರು ಇಂದ್ರ ಚಂದ್ರ ರವಿ ಕಾಲ ಕಾಮ ದಕ್ಷ ದೇವ ದಾನವ ಮಾನವರೊಳಗಾದವರೆಲ್ಲರು ಕಾಣಲರಿಯದೆ ಅಜ್ಞಾನದಿಂದೆ ಭವಭಾರಿಗಳಾಗಿ ಹೋದರು. ಈ ಪರಿಯಲ್ಲಿ ಬರಿದೆ ಬಂದು ಹೋಗಬಾರದೆಂದು, ನಮ್ಮ ಬಸವಣ್ಣನು ಜಗ ಹಿತಾರ್ಥವಾಗಿ, ಮರ್ತ್ಯಕ್ಕವತರಿಸಿ ವೀರಶೈವ ಮಾರ್ಗವನರುಪುವದಕ್ಕೆ ಬಾವನ್ನ ವಿವರವನೊಳಕೊಂಡು ಚರಿಸಿದನೆಂತೆಂದೊಡೆ, ಗುರು ಕಾರುಣ್ಯ ವೇದ್ಯನು. ವಿಭೂತಿ ರುದ್ರಾಕ್ಷ ಧಾರಕನು. ಪಂಚಾಕ್ಷರೀ ಭಾಷಾ ಸಮೇತನು. ಲಿಂಗಾಂಗಸಂಬಂಧಿ. ನಿತ್ಯಲಿಂಗಾರ್ಚಕನು. ಅರ್ಪಿತದಲ್ಲಿ ಅವಧಾನಿ. ಪಾದೋದಕ ಪ್ರಸಾದ ಗ್ರಾಹಕನು. ಗುರುಭಕ್ತಿ ಸಂಪನ್ನನು. ಏಕಲಿಂಗನಿಷ್ಠಾಪರನು. ಚರಲಿಂಗ ಲೋಲುಪ್ತನು. ಶರಣ ಸಂಗಮೇಶ್ವರನು. ತ್ರಿವಿಧಕ್ಕಾಯಃತನು. ತ್ರಿಕರಣಶುದ್ಧನು. ತ್ರಿವಿಧ ಲಿಂಗಾಂಗ ಸಂಬಂಧಿ. ಅನ್ಯ ದೈವ ಸ್ಮರಣೆಯ ಹೊದ್ದ. ಭವಿಯ ಸಂಗವಮಾಡ. ಭವಿಪಾಕವ ಮುಟ್ಟ. ಪರಸ್ತ್ರೀಯರ ಬೆರಸ. ಪರಧನವನೊಲ್ಲ. ಪರನಿಂದೆಯನಾಡ. ಅನೃತವ ನುಡಿಯ. ತಾಮಸ ಭಕ್ತರ ಸಂಗವಮಾಡ. ಗುರು ಲಿಂಗಜಂಗಮಕ್ಕೆ ಅರ್ಥಪ್ರಾಣಾಭಿಮಾನ ಮುಂತಾದವೆಲ್ಲವ ಸಮರ್ಪಿಸಿ ಪ್ರಸಾದ ಮುಂತಾಗಿ ಭೋಗಿಸುವ. ಜಂಗಮನಿಂದೆಯ ಸೈರಿಸ. ಪ್ರಸಾದ ನಿಂದೆಯ ಕೇಳ. ಅನ್ಯರನಾಸೆಗೆಯ್ಯ. ಪಾತ್ರ ಸತ್ಪಾತ್ರವನರಿವ. ಚತುರ್ವಿಧ ಪದವಿಯ ಹಾರ. ಅರಿ ಷಡ್ವರ್ಗಕ್ಕೆ ಅಳುಕ. ಕುಲಾದಿ ಮದಂಗಳ ಬಗೆಗೊಳ್ಳ. ದ್ವೈತಾದ್ವೈತವ ನುಡಿವನಲ್ಲ. ಸಂಕಲ್ಪ ವಿಕಲ್ಪವ ಮಾಡುವನಲ್ಲ. ಕಾಲೋಚಿತವ ಬಲ್ಲ. ಕ್ರಮ ಯುಕ್ತನಾಗಿ ಷಟ್‌ಸ್ಥಲ ಭರಿತ. ಸರ್ವಾಂಗಲಿಂಗಿ. ದಾಸೋಹ ಸಂಪನ್ನ, ಇಂತೀ ಐವತ್ತೆರಡು ವಿಧದಲ್ಲಿ ನಿಪುಣನಾಗಿ ಮೆರೆವ ನಮ್ಮ ಬಸವಣ್ಣನು. ಆ ಬಸವಣ್ಣನ ಶ್ರೀಪಾದಕ್ಕೆ

ಅಹೋರಾತ್ರಿಯಲ್ಲಿ ನಮೋ ನಮೋ ಎಂದು ಬದುಕಿದೆನು ಕಾಣಾ ಚನ್ನ ಮಲ್ಲಿಕಾರ್ಜುನ ॥೫೧॥

ಮತ್ತಂ॥ ಎನ್ನ ಭಕ್ತಿ ನಿಮ್ಮ ಧರ್ಮ. ಎನ್ನ ಜ್ಞಾನ ಪ್ರಭುದೇವರ ಧರ್ಮ. ಎನ್ನ ಪರಿಣಾಮ ಚನ್ನಬಸವಣ್ಣನ ಧರ್ಮ. ಈ ಮೂವರು ಒಂದೊಂದ ಕೊಟ್ಟರೆನಗೆ ಮೂರು ಭಾವವಾಯಿತ್ತು. ಆ ಮೂರನು ನಿಮ್ಮಲ್ಲಿ ಸಮರ್ಪಿಸಿದ ಬಳಿಕ ಎನಗಾವ ಜಂಜಡವಿಲ್ಲ. ಚನ್ನಮಲ್ಲಿಕಾರ್ಜುನದೇವರ ನೆನಹಿನಲ್ಲಿ ನಿನ್ನ ಕರುಣದ ಶಿಸು ನಾನು ಕಾಣಾ ಚನ್ನಬಸವಣ್ಣಾ ॥೫೨॥

ಹೀಗೆಂದು ಮಹಾದೇವಿಯಕ್ಕಗಳು ಬಿನ್ನೈಸಲು, ಆ ಸಮಯದಲ್ಲಿ ಪ್ರಭುದೇವರು ಆ ಮಹಾದೇವಿಯಕ್ಕಗಳಿಗೆ ನಮಸ್ಕರಿಸಿದ ಪ್ರಸ್ಥಾವದ ವಚನ ॥

ಆದಿ ಅನಾದಿ ಶಕ್ತಿ ಎಂಬರು. ಅದನಾರು ಬಲ್ಲರಯ್ಯ? ಆದಿ ಎಂದರೆ ಕುರುಹಿಂಗೆ ಬಂದಿತ್ತು. ಅನಾದಿ ಎಂದರೆ ನಾಮಕ್ಕೆ ಬಂದಿತ್ತು. ಆದಿಯಲ್ಲ, ಅನಾದಿಯಲ್ಲ. ನಾಮವಿಲ್ಲ ಸೀಮೆ ಇಲ್ಲ. ನಿಜಶಕ್ತಿ ಚಿಚ್ಛಕ್ತಿಯಾಯಿತ್ತು ನೋಡಾ! ಅಂತರಂಗದ ಪ್ರಭೆ ಬಹಿರಂಗವೆಲ್ಲ ತಾನೆಯಾಗಿ ಗುಹೇಶ್ವರಲಿಂಗದಲ್ಲಿ ಸಂದಿಲ್ಲದಿಪ್ಪ ಮಹಾದೇವಿಯಕ್ಕನ ಶ್ರೀಪಾದಕ್ಕೆ ನಮೋ ನಮೋ ಎಂಬೆನು ಕಾಣಾ ಚನ್ನಬಸವಣ್ಣಾ ॥೫೩॥

ಮತ್ತಂ॥ ಅಂಗೈಯ್ಯ ಲಿಂಗದಲ್ಲಿ ಕಂಗಳ ನೋಟ ಸ್ವಯವಾದ ಇರವ ನೋಡಾ. ತನ್ನ ಸ್ವಾನುಭಾವದ ಉದಯದಿಂದೆ ತನ್ನನರಿದ ನಿಜಶಕ್ತಿಯ ನೋಡಾ. ಭಿನ್ನವಿಲ್ಲದಿರವು ಮನ್ನಣೆಯ ಮಮಕಾರವ ಮೀರಿದ ಭಾವ ತನ್ನಿಂದ ತಾನಾದಳು. ನಮ್ಮ ಗುಹೇಶ್ವರ ಲಿಂಗದಲ್ಲಿ ಸಂದಿಲ್ಲದಿಪ್ಪ ಮಹಾದೇವಿಯಕ್ಕನ ನಿಲವಿಂಗೆ ನಮೋ ನಮೋ ಎನುತಿರ್ದೆ ಕಾಣಾ ಚನ್ನಬಸವಣ್ಣಾ ॥೫೪॥

ಹೀಗೆಂದು ಪ್ರಭುದೇವರು ನಿರೂಪಿಸಲು, ಚಿಕ್ಕದಣ್ಣಾಯಕರು ಮಹದೇವಿಯಕ್ಕಂಗೆ ಪ್ರಸನ್ನರಾಗಿ, ಸ್ತುತಿಸಿದ ವಚನ॥

ಅಜ ಕೋಟಿ ವರುಷದವರೆಲ್ಲರು ಹಿರಿಯರೆ? ಹುತ್ತೇರಿ ಬೆತ್ತ ಬೆಳೆದ ತಪಸ್ವಿಗಳೆಲ್ಲರು ಹಿರಯರೆ? ನಡು ಮುರಿದು ಗುಡಗೂರಿ ತಲೆ ನಡುಗಿ ನರೆ ತೆರೆ ಹೆಚ್ಚಿ ಮತಿಗೆಟ್ಟು ಒಂದ ನಾಡ ಹೋಗಿ ಒಂಬತ್ತ ನಾಡುವ

ಅಜ್ಞಾನಿಗಳೆಲ್ಲರು ಹಿರಿಯರೆ? ಅನುವರಿದು ಘನವ ತಿರಿಸಿ ಹಿರಿದು ಕಿರಿದೆಂಬ ಭೇದವ ಮರೆದು ಕೂಡಲಚನ್ನಸಂಗಯ್ಯನಲ್ಲಿ ಬೆರಿಸಿ ಬೇರಿಲ್ಲದಿಪ್ಪ ಹಿರಿಯತನ ನಮ್ಮ ಮಹದೇವಿಯಕ್ಕಂಗಾಯಿತ್ತು ॥೫೫॥

ಆ ಸಮಯದಲ್ಲಿ ಸಿದ್ಧರಾಮಯ್ಯ ತಂದೆಗಳು ಮಹದೇವಿಯಕ್ಕಗಳ ಸ್ತುತಿಸಿದ ವಚನ ॥

ಅಹುದಹುದು. ಮತ್ತೇನು? ಮರಹಿಂಗೆ ಹಿರಿದು ಕಿರಿದುಂಟಲ್ಲದೆ ಅರುಹಿಂಗೆ ಹಿರಿದು ಕಿರಿದುಂಟೆ ಹೇಳಯ್ಯಾ? ಸಾವಿಂಗೆ ಭಯ ಉಂಟಲ್ಲದೆ ಅಜಾತಂಗೆ ಭಯ ಉಂಟೆ ಹೇಳಯ್ಯ? ಕಪಿಲಸಿದ್ಧ ಮಲ್ಲಿನಾಥಯ್ಯನಲ್ಲಿ ಮಹದೇವಿಯಕ್ಕನ ನಿಲವಿಂಗೆ ಶರಣೆಂದು ಶುದ್ಧನಾದೆನು ಕಾಣಾ ಚನ್ನಬಸವಣ್ಣಾ ॥೫೬॥

ಇದಕ್ಕೆ ಅಕ್ಕಗಳ ಬಿನ್ನಹ. ಮರ್ತ್ಯಲೋಕದ ಭಕ್ತರ ಮನವ ಬೆಳಗಲೆಂದು ಇಳೆಗೈತಂದ ಶಿವನು ಕತ್ತಲೆಯ ಪಾಳೆಯುವ ರವಿ ಹೊಕ್ಕಂತಾಯಿತ್ತಯ್ಯ. ಚಿತ್ತದ ಪ್ರಕೃತಿಯ ಹಿಂಗಿಸಿ ಮುಕ್ತಿಪಥವ ತೋರಿದನಲ್ಲಯ್ಯ. ಅಸಂಖ್ಯಾತ ಗಣಂಗಳಿಗೆ ತನುವೆಲ್ಲ ಸ್ವಯ ಲಿಂಗ ಮನವೆಲ್ಲ ಚರಲಿಂಗ ಭಾವವೆಲ್ಲ ಮಹಾಘನ ಬೆಳಗು. ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ಶರಣ ಸಮ್ಯಜ್ಞಾನಿ ಚನ್ನಬಸವಣ್ಣನ ಶ್ರೀಪಾದಕ್ಕೆ ಶರಣೆಂದು ಎನ್ನ ಭವಂ ನಾಸ್ತಿಯಾಯಿತ್ತಯ್ಯ ಪ್ರಭುವೆ ॥೫೭॥

ಇದಕ್ಕೆ ಪ್ರಭುದೇವರ ನಿರೂಪ॥

ತನು ಗುಣ ನಾಸ್ತಿಯಾಗಿ, ಲಿಂಗಸಂಗಿಯಾದಳು. ಮನಗುಣ ನಾಸ್ತಿಯಾಗಿ ಅರಿವು ಸಂಗಿಯಾದಳು. ಭಾವಗುಣ ನಾಸ್ತಿಯಾಗಿ ಮಹಾಪ್ರಭೆ ತಾನಾದಳು. ತಾನಿದಿರೆಂಬೆರಡಳಿದು ನಮ್ಮ ಗುಹೇಶ್ವರ ಲಿಂಗದಲ್ಲಿ ಸ್ವಯ ಲಿಂಗವಾದ ಮಹಾದೇವಿಯಕ್ಕಗಳ ನಿಲವಿಂಗೆ ಶರಣೆನುತ್ತಿರ್ದೆನು ॥೫೮॥

ಇದಕ್ಕೆ ಅಕ್ಕಗಳ ಬಿನ್ನಹ,

ನೀರು ಕ್ಷೀರದಂತೆ ನೀನಿಪ್ಪೆಯಾಗಿ, ಆವುದು ಮುಂದು ಆವುದು ಹಿಂದು ಎಂದರಿಯೆನು. ಆವುದು ಕರ್ತೃ ಆವುದು ಭೃತ್ಯನೆಂದರಿಯೆನು. ಆವುದು ಘನ, ಆವುದು ಕಿರಿದೆಂದರಿಯೆನು. ಚನ್ನಮಲ್ಲಿಕಾರ್ಜುನಯ್ಯ ನೀನೊಲಿದು ಕೊಂಡಾಡಿದರೆ ಇರುಹೆ ರುದ್ರನಾಗದೆ ಹೇಳಯ್ಯ. ॥೫೯॥

ಇದಕ್ಕೆ ಚನ್ನಬಸವರಾಜದೇವರ ನಿರೂಪ. ॥

ಆದ್ಯರ ಅರುವತ್ತು ವಚನಕ್ಕೆ ದಣ್ಣಾಯಕರ ಇಪ್ಪತ್ತು ವಚನ. ದಣ್ಣಾಯಕರ ಇಪ್ಪತ್ತು ವಚನಕ್ಕೆ ಪ್ರಭುದೇವರ ಹತ್ತುವಚನ. ಪ್ರಭುದೇವರ ಹತ್ತು ವಚನಕ್ಕೆ ಅಜಗಣ್ಣನ ಐದು ವಚನ. ಅಜಗಣ್ಣನ ಐನು ವಚನಕ್ಕೆ ಕೂಡಲ ಚನ್ನಸಂಗಯ್ಯನಲ್ಲಿ ಮಹದೇವಿಯಕ್ಕಗಳ ಒಂದು ವಚನ ನಿರ್ವಚನ ಕಾಣಾ ಸಿದ್ಧರಾಮಯ್ಯ. ॥೬೦॥

ಆ ಸಮಯದಲ್ಲಿ ಬಸವರಾಜದೇವರ ವಚನ. ॥

ಎನ್ನ ಭಕ್ತಿಯ ಶಕ್ತಿಯು ನೀನೆ. ಎನ್ನ ಯುಕ್ತಿಯ ಶಕ್ತಿಯು ನೀನೆ. ಎನ್ನ ಮುಕ್ತಿಯ ಶಕ್ತಿಯು ನೀನೆ. ಎನ್ನ ಮಹಾ ಘನದ ನಿಲವಿನ ಪ್ರಭೆಯನುಟ್ಟ ತಳವೆಳಗಾದ ಸ್ವಯಜ್ಞಾನಿ ಕೂಡಲಸಂಗಯ್ಯನಲ್ಲಿ ಮಹದೇವಿಯಕ್ಕಗಳ ನಿಲವ ಮಡಿವಾಳನಿಂದರಿದು ಬದುಕಿದೆನಯ್ಯ ಪ್ರಭುವೆ. ॥೬೧॥

ಆ ಸಮಯದಲ್ಲಿ ಮಡಿವಾಳತಂದೆಗಳು ಮಹಾದೇವಿಯಕ್ಕಗಳ ಸ್ತುತಿಸುವ ಪ್ರಸ್ತಾವದ ವಚನ. ॥

ಕಾಮಿಯಾಗಿ ನಿಃಕಾಮಿಯಾದಳು. ಸೀಮೆಯಲ್ಲಿರ್ದು ನಿಸ್ಸೀಮೆಯಾದಳು. ಭವಿಯ ಸಂಗವ ತೊರೆದು, ಭವಬಾಧೆಯ ಹರಿದಳು. ಬಸವಣ್ಣ ಗತಿ ಎಂದು ಬರಲು, ನಾನು ಮಡಿಯ ಹಾಸಿ ನಡಿಸಿದೆ. ನಡೆವುದಕ್ಕೆ ಹಾಸಿದ ಮಡಿಯ ಸರ್ವಾಂಗಕ್ಕೆ ಹೊದ್ದಳು. ಆ ಮಡಿಯ ಬೆಳಗಿನೊಳಗೆ ನಿರ್ವಯಲಾದಳು. ಕಲಿದೇವರದೇವಯ್ಯ ಮಹದೇವಿಯಕ್ಕಗಳ ನಿಲವ ಬಸವಣ್ಣನ ಕೃಪೆಯಿಂದಲರಿದೆನಯ್ಯ ಪ್ರಭುವೆ. ॥೬೨॥

ಆ ಸಮಯದಲ್ಲಿ ಪ್ರಭುದೇವರ ವಚನ. ॥

ನುಡಿಗೆಡೆಗುಡದ ಘನವ ಹಿಡಿದು, ವಡಬಂದಿಯಾದಳು. ಎಡೆ ಇಲ್ಲದ ಪರಿಪೂರ್ಣದೊಳಗೆ ನುಡಿಗೆಟ್ಟಳು. ತನ್ನ ನಿಲುಕಡೆಯ ನಿಜವ ತಾನರಿಯದಂತೆ ತನ್ನಿಂದ ಕೇಳಿ ಸ್ವಯವಾದಳು. ಗುಹೇಶ್ವರ ಸಾಕ್ಷಿಯಾಗಿ ಮಹದೇವಿಯಕ್ಕನ ನಿಲವ ಕೊಂಡಾಡುವದಕ್ಕೆ ತೆರಹಿಲ್ಲ ಕಾಣಾ ಮಡಿವಾಳಯ್ಯ. ॥೬೩॥

ಇದಕ್ಕೆ ಅಕ್ಕಗಳ ಬಿನ್ನಹ.

ಎಲ್ಲ ಎಲ್ಲವನರಿದು, ಘನವೇನಯ್ಯ ತನ್ನ ತಾನರಿಯಬೇಕಲ್ಲದೆ? ತನ್ನಲ್ಲಿ ಅರಿವು ಸ್ವಯವಾಗಿರಲು, ಅನ್ಯರ ಕೇಳಲುಂಟೆ? ಚನ್ನಮಲ್ಲಿಕಾರ್ಜುನ ನೀ ಅರಿವಾಗಿ ಮುಂದುದೋರಿದ ಕಾರಣ ನಿಮ್ಮಿಂದಲರಿದೆನಯ್ಯಾ ಪ್ರಭುವೆ. ॥೬೪॥

ಮತ್ತಂ॥ ಅಕ್ಕಗಳು ಶರಣರ ಸಂಗದಿಂದೆ ನಿಮ್ಮ ನಿಜದವಿರಳ ಸುಖವಾಯಿತ್ತೆಂದು ಬಿನ್ನೈಸುವ ಪ್ರಸ್ಥಾವದ ವಚನ.॥

ಸಂಗದಿಂದಲ್ಲದೆ ಅಗ್ನಿ ಹುಟ್ಟದು. ಸಂಗದಿಂದಲ್ಲದೆ ಬೀಜ ಮೊಳೆದೋರದು. ಸಂಗದಿಂದಲ್ಲದೆ ದೇಹವಾಗದು. ಸಂಗದಿಂದಲ್ಲದೆ ಸರ್ವ ಸುಖದೋರದು. ಚನ್ನಮಲ್ಲಿಕಾರ್ಜುನದೇವಯ್ಯ ನಿಮ್ಮ ಶರಣರ ಅನುಭಾವ ಸಂಗದಿಂದೆ ಆನು ಪರಮ ಸುಖಿಯಾಗಿ ಬದುಕಿದೆನಯ್ಯ ಪ್ರಭುವೆ॥೬೫॥

ಮತ್ತಂ॥ ಅಯ್ಯ ನಿಮ್ಮ ಅನುಭಾವಿಗಳ ಸಂಗದಿಂದ ಎನ್ನ ತನು ಶುದ್ಧವಾಯಿತ್ತು. ಅಯ್ಯ ನಿಮ್ಮ ಅನುಭಾವಿಗಳು ಎನ್ನ ಒರದೊರದು ಕಡಿಕಡಿದು ಅರದರದು ಆನು ಮಾಡಿದ ಕಾರಣ ಎನ್ನ ಮನ ಶುದ್ಧವಾಯಿತ್ತು. ಎನ್ನ ಸರ್ವ ಭೋಗಾದಿ ಭೋಗಂಗಳೆಲ್ಲ ನಿಮ್ಮ ಶರಣರಿಗರ್ಪಿತವಾಗಿ ಎನ್ನ ಪ್ರಾಣ ಶುದ್ಧವಾಯಿತ್ತು. ಎನ್ನ ಸರ್ವೇಂದ್ರಿಯಂಗಳೆಲ್ಲವು ನಿಮ್ಮ ಶರಣರ ಪ್ರಸಾದವ ಕೊಂಡ ಕಾರಣ ಎನ್ನ ಸರ್ವಾಂಗ ಶುದ್ಧವಾಯಿತ್ತು ಅಯ್ಯಾ. ನಿಮ್ಮ ಶರಣರಿಂತು ಎನ್ನನಾಗು ಮಾಡಿದ ಕಾರಣ ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ಶರಣರಿಗೆ ತೊಡಿಗೆಯಾದೆನಯ್ಯಾ ಪ್ರಭುವೆ ॥೬೬॥

ಮತ್ತಂ॥ ಮಹದೇವಿಯಕ್ಕಗಳು ಬಸವಣ್ಣ ಚನ್ನಬಸವಣ್ಣ ಮಡಿವಾಳಯ್ಯ ಸಿದ್ಧರಾಮಯ್ಯದೇವರು ಪ್ರಭುದೇವರು ಮುಖ್ಯವಾದ ಏಳುನೂರೆಪ್ಪತ್ತು ಅಮರಗಣಂಗಳಿಂದೆ ಕೃತಾರ್ಥಳಾಗಿಹೆನೆಂದು ಬಿನ್ನೈಸುವ ಪ್ರಸ್ಥಾವದ ವಚನ॥

ಬಸವಣ್ಣನ ಮನೆಯ ಮಗಳಾಗಿ ಬದುಕಿದೆನಾಗಿ ತನ್ನ ಕರುಣ ಭಕ್ತಿಪ್ರಸಾದವ ಕೊಟ್ಟನು. ಚನ್ನಬಸವಣ್ಣನ ತೊತ್ತಿನ ಮಗಳಾದ ಕಾರಣ ಒಕ್ಕ ಪ್ರಸಾದವ ಕೊಟ್ಟನು. ಪ್ರಭುದೇವರ ತೊತ್ತಿನ ಮಗಳಾದ ಕಾರಣ ಜ್ಞಾನ ಪ್ರಸಾದವ ಕೊಟ್ಟನು. ಸಿದ್ಧರಾಮಯ್ಯನ ಶಿಶುವಿನ ಮಗಳಾದ

ಕಾರಣ ಪ್ರಾಣಪ್ರಸಾದವ ಕರುಣಿಸಿ ಕೊಟ್ಟನು. ಮಡಿವಾಳಮಾಚಿತಂದೆಯ ಮನೆಯ ಮಗಳಾದ ಕಾರಣ ನಿರ್ಮಳ ಪ್ರಸಾದವ ನಿಕ್ಷೈಸಿ ಕೊಟ್ಟನು. ಇಂತೀ ಅಸಂಖ್ಯಾತರೆಲ್ಲರು ತಮ್ಮ ಕರುಣದ ಕಂದನೆಂದು ತಲೆದಡವಿ ರಕ್ಷಿಸಿದ ಕಾರಣ ಚನ್ನಮಲ್ಲಿಕಾರ್ಜುನನ ಪಾದಕ್ಕೆ ಯೋಗ್ಯಳಾದೆನು. ॥೬೭॥

ಮತ್ತಂ॥ ಮಹದೇವಿಯಕ್ಕಗಳು ತಮ್ಮ ಐಕ್ಯಸ್ಥಲವಾವುದೆಂದು ಪ್ರಭುದೇವರ ಕೇಳುವ ಪ್ರಸ್ಥಾವದ ವಚನ ॥

ಕರ್ಮವೆಂಬ ಕದಳಿ ಎನಗೆ, ಕಾಯುವೆಂಬ ಕದಳಿ ನಿಮಗೆ, ಮಾಟವೆಂಬ ಕದಳಿ ಬಸವಣ್ಣಂಗೆ, ಭಾವವೆಂಬ ಕದಳಿ ಚನ್ನಬಸವಣ್ಣಂಗೆ, ಬಂದ ಬಂದ ಭಾವ ಸಲೆ ಸಂದಿತ್ತು. ಎನ್ನಂಗದವಸಾನವ ಹೇಳಾ ಚನ್ನಮಲ್ಲಿಕಾರ್ಜುನ ॥೬೮॥

ಇದಕ್ಕೆ ಪ್ರಭುದೇವರ ನಿರೂಪ. ಕಾಯವುಳ್ಳನ್ನಕ್ಕ ಶರಣರ ಸಂಗದಿಂದೆ ಅರಿಯಬೇಕು. ಜೀವವುಳ್ಳನ್ನಕ್ಕ ಅರಿವಿನ ಮುಖದಿಂದ ಅರಿಯಬೇಕು. ಅರಿವನ್ನಬರ ಗುಹೇಶ್ವರನೆಂಬ ಕುರುಹಾಯಿತ್ತು. ॥೬೯॥

ಇದಕ್ಕೆ ಅಕ್ಕಗಳ ಬಿನ್ನಹ ॥

ಲಿಂಗ ಸುಖಸಂಗದಲ್ಲಿ ಮನವೇದ್ಯವಾಯಿತ್ತು. ಇನ್ನೆಲ್ಲಿಯಯ್ಯ ಎನಗೆ ನಿಮ್ಮಲ್ಲಿ ನಿರವಯವು? ಇನ್ನೆಲ್ಲಿಯಯ್ಯ ನಿಮ್ಮಲ್ಲಿ ಕೂಡುವದು? ಪರಮ ಸುಖ ಪರಿಣಾಮ ಮನವೇರೆದಪ್ಪಿ ನಾನು ನಿಜವನೈದುವ ಠಾವ ಹೇಳಾ ಚನ್ನಮಲ್ಲಿಕಾರ್ಜುನಯ್ಯ ॥೭೦॥

ಇಂತು ಮಹಾದೇವಿಯಕ್ಕಗಳು ತಮ್ಮ ಲಿಂಗೈಕ್ಯದ ಸ್ಥಾನದ ಕಾಲಸ್ಥಿತಿಗತಿ ಯಾವುದೆಂದು ಬೆಸಗೊಳಲು, ಇದಕ್ಕೆ ಪ್ರಭುದೇವರು ತತ್ಕಾಲ ಸ್ಥಾನ ಸಮರಸಮಂ ನಿರೂಪಿಸಿದ ವಚನ. ॥

ನೀ ನಾನೆಂಬುಭಯ ಸಂಗವಳಿದು, ತಾನು ತಾನಾದ ತ್ರಿಕೂಟವೆಂಬ ಮಹಾಗಿರಿಯ ತುಟ್ಟತುದಿಯ ಮೆಟ್ಟಿ ನೋಡಲು, ಬಟ್ಟ ಬಯಲು ಕಾಣಬಹುದು ನೋಡಾ! ಆ ಬಯಲ ಬೆರಿಸುವರೆ ತ್ರಿಕೂಟ ಗಿರಿಯೊಳಗೊಂದು ಕಾಣಬಾರದ ಕದಳಿಯುಂಟು ನೋಡಾ! ಆ ಕದಳಿಯ ಕಳದಲ್ಲಿ ಒಳಹೊಕ್ಕು ನೋಡಲು, ತೊಳಗಿ ಬೆಳಗುವ ಜ್ಯೋತಿಯುಂಟು ನೋಡಾ! ನಡೆಯಲ್ಲಿಗೆ ತಾಯೆ. ಗುಹೇಶ್ವರ ಲಿಂಗದಲ್ಲಿ ಪರಮ ಪದವಿ ನಿನಗೆ ಸ್ವಯವಹುದು ನೋಡಾ. ॥೭೧॥

ಹೀಗೆಂದು ಪ್ರಭುದೇವರು ನಿರೂಪಿಸಲು, ಮಹದೇವಿಯಕ್ಕಗಳು ಬಸವಣ್ಣ ಮೊದಲಾದ ಗಣಂಗಳಿಗೆ ಲಿಂಗೈಕ್ಯವ ಹವಣಿಸಿ ತನ್ನ ನಿಜ ದೈಕ್ಯವ ನಿಶ್ಚೈಸಿದ ಪ್ರಸ್ಥಾವದ ವಚನ.॥

ಮಾಟ ಕೂಟವಾಯಿತ್ತಯ್ಯಾ ಬಸವಣ್ಣಂಗೆ, ನೋಟ ಕೂಟವಾಯಿತ್ತಯ್ಯ ಅಲ್ಲಮಪ್ರಭುದೇವಂಗೆ, ಭಾವ ಕೂಟವಾಯಿತ್ತಯ್ಯ ಅಜಗಣ್ಣಂಗೆ, ಸ್ನೇಹ ಕೂಟವಾಯಿತ್ತಯ್ಯ ಸೊಡ್ಡಳಬಾಚರಸರಿಗೆ, ಇವರೆಲ್ಲರ ಕೂಟವಾಯಿತ್ತಯ್ಯ ಚನ್ನಬಸವಣ್ಣಂಗೆ, ಎನಗೆ ನಿಮ್ಮಲ್ಲಿ ಅವಿರಳದ ಕೂಟ ಚನ್ನಮಲ್ಲಿಕಾರ್ಜುನ. ॥೭೩॥

ಮತ್ತಂ ಅಕ್ಕಗಳು ಆ ಶರಣರಿಗು ತನಗು ಐಕ್ಯ ನಿಃಪತಿಯಿಂ ಬಿನ್ನೈಸುವ ವಚನ ॥

ಮಾಟಕೂಟವೆಂಬುದಿಲ್ಲ ಬಸವಣ್ಣಂಗೆ, ನೋಟಕೂಟವೆಂಬುದಿಲ್ಲ ಪ್ರಭುದೇವರಿಗೆ, ಭಾವ ಕೂಟವೆಂಬುದಿಲ್ಲ ಅಜಗಣ್ಣಂಗೆ, ಸ್ನೇಹಕೂಟವೆಂಬುದಿಲ್ಲ ಬಾಚರಸಗೆ, ಇವರೆಲ್ಲರ ಕೂಟವೆಂಬುದಿಲ್ಲ ಚನ್ನಬಸವಣ್ಣಂಗೆ, ಎನಗೆ ನಿಮ್ಮ ಕೂಟವೆಂಬುದಿಲ್ಲ ಚನ್ನಮಲ್ಲಿಕಾರ್ಜುನಾ ॥೭೩॥

ಮತ್ತಂ॥ ಅಕ್ಕಗಳು ತಮ್ಮ ಲಿಂಗೈಕ್ಯವ ನಿಶ್ಚೈಸಿ ತಮ್ಮ ಷಟ್‌ಸ್ಥಲ ನಿಷ್ಪತ್ತಿಯ ನಿರೂಪಿಸುವ ವಚನ ॥

ಭಕ್ತೆಯಾನಪ್ಪೆನಯ್ಯ ಕರ್ತೃಭೃತ್ಯತ್ವವನರಿಯೆ. ಮಹೇಶ್ವರಿಯಾನಪ್ಪೆನಯ್ಯ ವ್ರತ ನಿಯಮ ಫಲವನರಿಯೆ. ಪ್ರಸಾದಿಯಾನಪ್ಪೆನಯ್ಯ ಅರ್ಪಿತ ಅನರ್ಪಿತವ ಮುನ್ನರಿಯೆ. ಪ್ರಾಣಲಿಂಗಿಯಾನಪ್ಪೆನಯ್ಯ ಅನುಭಾವದ ಗಮನವ ನಾನರಿಯೆ. ಶರಣೆಯಾನೆಪ್ಪೆನಯ್ಯ ಸತಿಪತಿಯೆಂಬ ಭಿನ್ನಭಾವವನರಿಯೆ. ಐಕ್ಯಳಾನಪ್ಪೆನಯ್ಯ ಬೆರಸಿ ಭೇದವನರಿಯೆ. ಚನ್ನಮಲ್ಲಿಕಾರ್ಜುನಯ್ಯ ಷಟ್‌ಸ್ಥಲದಲ್ಲಿ ನಿಃಸ್ಥಲದ ವರ್ತನೆ ಪರಿಜ್ಞಾನಿಯಾಗಿಪ್ಪೆನಯ್ಯ ॥೭೪॥

ಹೀಗೆಂದು ಮಹಾದೇವಿಯಕ್ಕಗಳು ಆ ಪ್ರಭುದೇವರು ಮುಖ್ಯವಾದ ಎಲ್ಲ ಪುರಾತನರ ಬೀಳ್ಕೊಂಡ ಪ್ರಸ್ಥಾವದ ವಚನ ॥

ಒಡಲಿಲ್ಲದ, ನುಡಿ ಇಲ್ಲದ, ಕಡೆ ಇಲ್ಲದ, ನಲ್ಲನ ಒಡಗೂಡಿ ಸುಖಿಯಾದೆ ಕೇಳಿರಯ್ಯ. ಭಾಷೆ ಪೈಸರವಿಲ್ಲ. ಓಸರಿಸೆನಯ್ಯಕ್ಕೆ. ಆಶೆ ಮಾಡೆನು ಮತ್ತೆ

ಭಿನ್ನಸುಖಕ್ಕೆ. ಆರಳಿದು ಮೂರಾಗಿ, ಮೂರಳಿದು ಎರಡಾಗಿ, ಎರಡಳಿದು ಒಂದಾಗಿ ನಿಂದೆನಯ್ಯ. ಬಸವಣ್ಣ ಮೊದಲಾದ ಶರಣರಿಗೆ ಶರಣಾರ್ಥಿ. ಪ್ರಭುವಿಂದ ಕೃತಕೃತ್ಯಳಾದೆ. ನಾನು ಮರೆಯಲಾಗದೆಂದು ನಾನು ನಿಮ್ಮ ಶಿಸುವೆಂದು ಎನ್ನನು ಚನ್ನಮಲ್ಲಿಕಾರ್ಜುನನ ಬೆರೆಸೆಂದು ಹರಸುತ್ತಿಹುದು. ॥೭೫॥

ಮತ್ತಂ॥ ಹುಟ್ಟಿದೆ ಶ್ರೀ ಗುರುವಿನ ಹಸ್ತದಲ್ಲಿ. ಬೆಳೆದೆ ನಾನು ಅಸಂಖ್ಯಾತರ ಕರುಣದಿಂದೆ. ಭಾವವೆಂಬ ಹಾಲು, ಸುಜ್ಞಾನವೆಂಬ ತುಪ್ಪ, ಪರಮಾರ್ಥವೆಂಬ ಸಕ್ಕರಿಯನಿಕ್ಕಿದರುನೋಡಾ! ಇಂತಪ್ಪ ತ್ರಿವಿಧಾಮೃತವನು ದಣಿಯಲೆರೆದು ಸಲಹಿದರೆನ್ನ; ವಿವಾಹವ ಮಾಡಿದಿರಿ; ಸಯುವಪ್ಪ ಗಂಡಂಗೆ ಕೊಟ್ಟಿರಿ; ಕೊಟ್ಟ ಮನೆಗೆ ಕಳುಹಲೆಂದು ಅಸಂಖ್ಯಾತರೆಲ್ಲರು ನೆರೆದು ಬಂದಿರಿ; ಬಸವಣ್ಣ ಮೆಚ್ಚಲೊಗೆತನವ ಮಾಡುವೆ. ಚನ್ನಮಲ್ಲಿಕಾರ್ಜುನನ ಕೈವಿಡಿದು ನಿಮ್ಮ ತಲೆಗೆ ಹುವ್ವ ತಹೆನಲ್ಲದೆ, ಹುಲ್ಲ ತಾರೆನವಧರಿಸಿ ನಿಮ್ಮಡಿಗಳೆಲ್ಲರು ಮರಳಿ ಬಿಜಯಂಗೈವುದು ಶರಣು ಶರಣಾರ್ಥಿ. ॥೭೬॥

ಇಂತು ಮಹದೇವಿಯಕ್ಕಗಳು ಬಸವರಾಜದೇವರು ಚನ್ನಬಸವರಾಜದೇವರು ಪ್ರಭುದೇವರು ಮುಖ್ಯವಾದ ಅಸಂಖ್ಯಾತರ ಬೀಳ್ಕೊಂಡು ಕಲ್ಯಾಣಪುರಮಂ ಪೊರಮಟ್ಟು ಬರುತ ಅಸಂಖ್ಯಾತರ ವಿಯೋಗದಿಂದೆ ಅವಸ್ಥೆಯಲ್ಲಿ ನುಡಿದ ಪ್ರಸ್ಥಾವದ ವಚನ. ॥

ಅಯ್ಯ ನಿಮ್ಮ ಮಹಂತರ ಕೂಡಿದ ಸುಖವನುಪಮೆಗೆ ತರಬಾರದಯ್ಯ. ಅಯ್ಯ ನಿಮ್ಮ ಮಹಂತರ ಕೂಡಿ ಅಗಲುವ ಧಾವತಿಯಿಂದ ಸಾವುದೆ ಕರಲೇಸಯ್ಯ. ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ನಿಜವನರಿದ ಮಹಾಮಹಿಮರನಗಲಿ ನಿಲಲಾರೆನಯ್ಯ. ॥೭೭॥

ಹೀಗೆಂದು ಮಹದೇವಿಯಕ್ಕಗಳು ಶರಣರನಗಲ್ದ ದುಃಖಮಂ ತನ್ನ ತಾವೆ ಸಂತೈಸಿಕೊಂಡು, ಶ್ರೀಗಿರಿಯತ್ತಲಭಿಮುಖವಾಗಿ ಬರುತ್ತ ಮಹಾರಣ್ಯಮಂ ಪೊಕ್ಕು ಚನ್ನಮಲ್ಲಿಕಾರ್ಜುನನ ವಿಕಳಾವಸ್ಥೆಯಿಂ ಸುಳಿದಾಡುತ್ತಿರ್ದ ಪ್ರಸ್ಥಾವನ ವಚನ. ॥

ಇಂದ್ರನೀಲದ ಗಿರಿಯನೇರಿಕೊಂಡು ಚಂದ್ರಕಾಂತದ ಸಿಲೆಯನಪ್ಪಿಕೋಡು ಕೊಂಬ ಬಾರಿಸುತ್ತೆ ಶಿವನೆ ನಿಮ್ಮ ನೆನವುತ್ತ ಎಂದಿಪ್ಪೆನೊ?

ಅಂಗ ಭಂಗ ಮನ ಭಂಗವಳಿದು ನಿಮ್ಮನೆಂದಿಂಗೆ ನೆರೆವೆನಯ್ಯ ಚನ್ನಮಲ್ಲಿಕಾರ್ಜುನ ॥೭೮॥

ಮತ್ತಂ ಒಡಲ ಕಳವಳಕ್ಕಾಗಿ ಅಡವಿಯ ಪೊಕ್ಕೆ. ಗಿಡು ಗಿಡುದಪ್ಪದೆ ಬೇಡಿದೆನೆನ್ನಂಗಕ್ಕೆಂದು. ಅವು ನೀಡಿದವು ತಮ್ಮ ಲಿಂಗಕ್ಕೆಂದು. ಆನು ಬೇಡಿ ಭವಿಯಾದೆನು. ಅವು ನೀಡಿ ಭಕ್ತರಾದವು. ಇನ್ನು ಬೇಡಿದೆನಾದರೆ, ಚನ್ನಮಲ್ಲಿಕಾರ್ಜುನಯ್ಯ ನಿಮ್ಮಾಣೆ ॥೭೯॥

ಇಂತು ಮಹದೇವಿಯಕ್ಕಗಳು ಶ್ರೀ ಗಿರಿಯತ್ತ ಬರುತ್ತ ವನಾಂತರದೊಳು ಖಗಮೃಗಂಗಳ ಕಂಡು, ನುಡಿಸುತ್ತಿರ್ದ ಪ್ರಸ್ಥಾವದ ವಚನ॥

ಅಳಿಸಂಕುಳವೆ, ಮಾಮರವೆ, ಬೆಳುದಿಂಗಳೆ, ಕೋಗಿಲೆಯೆ, ನಿಮ್ಮನೆಲ್ಲರನು ಬಂದು ಬೇಡುವೆನು. ಎನ್ನೊಡೆಯ ಚನ್ನಮಲ್ಲಿಕಾರ್ಜುನ ದೇವರ ಕಂಡರೆ ಕರೆದು ತೋರಿರೆ ॥೮೦॥

ಮತ್ತಂ, ಚಿಲಿಮಿಲಿ ಎಂದೋದುವ ಗಿಳಿಗಳಿರಾ, ನೀವು ಕಾಣಿರೆ, ಸ್ವರವೆತ್ತಿ ಪಾಡುವ ಕೋಗಿಲೆಗಳಿರಾ, ನೀವು ಕಾಣಿರೆ? ಎರಗಿ ಬಂದಾಡುವ ತುಂಬಿಗಳಿರಾ, ನೀವು ಕಾಣಿರೆ? ಸರವರದೊಳಗಾಡುವ ಹಂಸಗಳಿರಾ, ನೀವು ಕಾಣಿರೆ? ಗಿರಿಗಂಹರದೊಳಗಾಡುವ ಪುಳಿಂದರೆ, ನೀವು ಕಾಣಿರೆ? ಚನ್ನಮಲ್ಲಿಕಾರ್ಜುನನೆಲ್ಲಿದ್ದಾನೆಂದು ಹೇಳಿರೆ? ॥ ೮೧॥

ಮತ್ತಂ, ವನವೆಲ್ಲ ನೀವೆ. ವನದೊಳಗಣ ದೇವತರುವೆಲ್ಲ ನೀವೆ. ತರುವಿನೊಳಗಾಡುವ ಖಗಮೃಗವೆಲ್ಲ ನೀವೆ. ಚನ್ನಮಲ್ಲಿಕಾರ್ಜುನ ಸರ್ವಭರಿತನಾಗಿ, ಎನಗೆ ಮುಖದೋರೆ ॥೮೨॥

ಇಂತು ಮಹದೇವಿಯಕ್ಕಗಳು ವನಾಂತರದೊಳೈತರುತ್ತ ಪರ್ವತವನೇರುತ್ತಿರ್ದ ಪ್ರಸ್ಥಾವದ ವಚನ.

ಮೂಲದ್ವಾರದ ಬೇರಮೆಟ್ಟಿ ಭೂಮಂಡಲವನೇರಿದೆ; ಆಚಾರದ ಬೇರ ಹಿಡಿದು ಐಕ್ಯದ ತುದಿಯನೇರಿದೆ; ವೈರಾಗ್ಯದ ಸೋಪಾನದಿಂದೆ ಶ್ರೀಗಿರಿಯನೇರಿದೆ; ಕೈವಿಡಿದು ತೆಗೆದುಕೊಳ್ಳಾ ಚನ್ನಮಲ್ಲಿಕಾರ್ಜುನ ॥೮೩॥

ಇಂತು ಶ್ರೀಗಿರಿಯನೇರಿ ಶಿವನೊಳಗೆ ಐಕ್ಯವಾಗಬೇಕೆಂದು ನೊಂದು ಬಿನ್ನೈಸುವ ಪ್ರಸ್ಥಾವದ ವಚನ.

ಕ್ರೀಯುಳ್ಳೊಡಂತೊಂದಾಸೆಸದ್ಭಕ್ತರ ನುಡಿ ಗಡಣವುಳ್ಳೊಡಂತೊಂದಾಸೆ ಶ್ರೀಗಿರಿಯನೇರಿ ನಿಮ್ಮ ಬೆರಸಿವರೆ ಎನ್ನಾಸೆಗೆ ಕಡೆಯು ಆಯ್ಯ? ಆವಾಸೆಯು ಇಲ್ಲದೆ ನಿಮ್ಮ ನಂಬಿ ಕೆಟ್ಟೆನಯ್ಯ ಚನ್ನಮಲ್ಲಿಕಾರ್ಜುನ ॥೮೪॥

ಮತ್ತಂ ಬಯಲು ಲಿಂಗವೆಂಬೆನೆ? ಬಗೆದು ನಡೆವಲ್ಲಿ ಹೋಯಿತ್ತು. ಬೆಟ್ಟ ಲಿಂಗವೆಂಬೆನೆ? ಮೆಟ್ಟಿ ನಿಂದಲ್ಲಿ ಹೋಯಿತ್ತು. ತರುಮರಾದಿಗಳು ಲಿಂಗವೆಂಬೆನೆ? ತರದಲ್ಲಿ ಹೋಯಿತ್ತು. ಲಿಂಗಜಂಗಮದ ಪಾದವೆ ಗತಿ ಎಂದು ನಂಬಿ ಸಂಗನಬಸವಣ್ಣನ ಮಾತ ಕೇಳದೆ ಕೆಟ್ಟೆನಯ್ಯ ಚನ್ನಮಲ್ಲಿಕಾರ್ಜುನ ॥೮೫॥

ಮತ್ತಂ ಬೆರಸುವರೆ ಬೇಗ ತೋರಾ. ಹೊರ ಹಾಕದಿರಯ್ಯ. ನಿಮ್ಮಲ್ಲಿಗೆ ಸಲೆ ಸಂದ ತೊತ್ತಾನು. ಎನ್ನ ಹೊರಹಾಕದಿರಯ್ಯಾ. ಚನ್ನಮಲ್ಲಿಕಾರ್ಜುನಯ್ಯ ನಿಮ್ಮ ನಂಬಿ ಬೆಂಬಳಿ ಬಂದೆನು. ಇಂಬುಗೊಳ್ಳಯ್ಯ ॥೮೬॥

ಇಂತು ಮಹದೇವಿಯಕ್ಕಗಳು ಚನ್ನಮಲ್ಲಿಕಾರ್ಜುನನೊಳಗೆ ಸಮರಸೈಕ್ಯಮಂ ಶೀಘ್ರದಿಂ ಬಯಸಿ ಉಪಾವಸ್ಥೆಗೈದು ಬಂದು ಕದಳಿಯಂ ಕಂಡ ಪ್ರಸ್ತಾವದ ವಚನ.

ವನವೆಲ್ಲ ಕಲ್ಪತರು, ಗಿಡವೆಲ್ಲ ಮರುಜೀವಣಿ, ಶಿಲೆಗಳೆಲ್ಲ ಪರುಷ, ನೆಲನೆಲ್ಲ ಅವಿಮುಕ್ತಿ ಕ್ಷೇತ್ರ, ಜಲವೆಲ್ಲ ನಿರ್ಜರಾಮೃತ, ಮೃಗವೆಲ್ಲ ಪರುಷ, ಮೃಗ, ಎಡಹುವ ಹರಳೆಲ್ಲ ಚಿಂತಾಮಣಿ, ಚನ್ನಮಲ್ಲಿಕಾರ್ಜುನಯ್ಯನ ಮಚ್ಚಿನ ಗಿರಿಯ ಸುತ್ತಿ ನೋಡುತ್ತ ಬಂದು ಕದಳಿಯ ಬನವ ಕಂಡೆ ನಾನು ॥೮೭॥

ಇಂತು ಮಹದೇವಿಯಕ್ಕಗಳು ಕದಳಿಯ ಬಾಗಿಲಲ್ಲಿ ನಿಂದು ಕರ ಕಮಲದಿಷ್ಟಲಿಂಗಮಂ ತೂರ್ಯದಿಂ ಜ್ಞಾನ ಪ್ರಭಾವದೊಳು ಸ್ತುತಿಸುತ್ತಿರಲು, ಅಂತರಂಗದ ಚಿತ್ಪ್ರಕಾಶವೆ ಬಹಿಸ್ಕರಿಸಿ ಜಂಗಮ ಸ್ವರೂಪವನೈದಿ ಹೊಳೆವ ಕೆಂಜೆಡೆಗಳಿಂ ಸುಲಿಪಲ್ಲಗಳಿಂ ಕಂಗಳ ಕಾಂತಿಯಿಂ ದರ ಹಸಿತ ವದನದಿಂ ಮಾಣಿಕ್ಯ ಮಕುಟದಿಂ ತೊಳಗಿ ಬೆಳಗುತ್ತೆ ಮುಂದೆ ಪ್ರಸನ್ನವಾಗಲು, ಮಹದೇವಿಯಕ್ಕಗಳು ಆ ಶ್ರೀಮೂರ್ತಿಯಂ ಕಂಡ ಪ್ರಸ್ಥಾವದ ವಚನ॥

ಹೊಳೆವ ಕೆಂಜೆಡೆಗಳ, ಮಣಿಮುಕುಟದ ಒಪ್ಪುವ ಸುಲಿಪಲ್ಲ, ನಗೆ, ಮೊಗದ ಕಂಗಳ ಕಾಂತಿಯಿಂ ಈರೇಳು ಭುವನಮಂ ಬೆಳಗುವ ದಿವ್ಯ

ಸ್ವರೂಪನ ಕಂಡೆ ನಾನು! ಕಂಡೆನ್ನ ಕಂಗಳ ಬರ ಹಿಂಗಿತ್ತಿಂದು! ಗಂಡ ಗಂಡರೆಲ್ಲರ ಹೆಂಡರಾಗಿ ಆಳುವ ಗರುವನ ಕಂಡೆ! ನಾನು ಜಗದಾದಿ ಶಕ್ತಿಯೊಳು ಬೆರಿಸಿ ಮಾತನಾಡುವ ಪರಮ ಗುರು ಚನ್ನಮಲ್ಲಿಕಾರ್ಜುನನ ನಿಲವ ಕಂಡು ಬದುಕಿದೆನು ||೮೮||

ಇಂತು ಮಹದೇವಿಯಕ್ಕಗಳು ಆ ಚರಮೂರ್ತಿಯುಂ ಕಂಡು ಸ್ತುತಿಸಿ ನಮಸ್ಕಾರಮಂ ಮಾಡಿ ಎಲೆ ದೇವ, ಸಕಲ ಗಣಂಗಳುಪಟಳಕ್ಕಂಜಿ ನಿಮ್ಮ ಶರಣರ ಮರೆಹೊಕ್ಕೆ. ಅವರ ಕಾರುಣ್ಯಮಂ ಪಡೆದು ಬಂದ್ನು ನಿಮ್ಮ ಶ್ರೀಮೂರ್ತಿಯಂ ಕಂಡೆ. ಇನ್ನು ಎನ್ನ ನಿಮ್ಮೊಳಗೆ ಐಕ್ಯವ ಮಾಡಿ ಕೊಳ್ಳಾ ಚನ್ನಮಲ್ಲಿಕಾರ್ಜುನಾ ಎಂದು ಬಿನ್ನೈಸಲು, ಆ ಚಿತ್ಸ್ವರೂಪನಪ್ಪ ಜಂಗಮವು ಭವಗೆಟ್ಟು ಬಂದೆಯಾ ಮಗಳೆ ಬಾರೆಂದು ತೆಗೆದು ಬಿಗಿದಪ್ಪಲು, ಆ ಮಹಾದೇವಿಯಕ್ಕಗಳು ಲಿಂಗೈಕ್ಯವಾದ ವಚನ||

ಕದಳಿ ಎಂಬುದು ತನು, ಕದಳಿ ಎಂಬುದು ಮನ, ಕದಳಿ ಎಂಬುದು ವಿಷಯಂಗಳು, ಕದಳಿ ಎಂಬುದು ಭವ ಘೋರಾರಣ್ಯ, ಕದಳಿ ಎಂಬುದ ಗೆದ್ದು, ತವೆ ಬದುಕಿ ಬಂದು ಕದಳಿಯ ಬನದಲ್ಲಿ ಭವಹರನ ಕಂಡೆನು. ಭವಗೆಟ್ಟು ಬಂದೆಯಾ ಮಗಳೇ ಎಂದು ಕರುಣದಿಂ ತೆಗೆದು ಬಿಗಿದಪ್ಪಿದರೆ ಚನ್ನಮಲ್ಲಿಕಾರ್ಜುನನ ಹೃದಯ ಕಮಲದಲ್ಲಿ ಅಡಗಿದೆನು ||೮೯||

ವೃತ್ತಂ|| ಅಕ್ಕಗಳು ನಿಜೈಕ್ಯವನೈದಿ ಶಬ್ದಮುಗ್ಧವಾದೆನೆಂದು ಬಿನ್ನೈಸುವ ವಚನ||

ಲಿಂಗವೆನ್ನೆ ಲಿಂಗೈಕ್ಯವೆನ್ನೆ ಸಂಗವೆನ್ನೆ ನಿಸ್ಸಂಗವೆನ್ನೆ ಆಯಿತ್ತೆನ್ನೆ ಆಗದೆನ್ನೆ ನೀನೆನ್ನೆ ನಾನೆನ್ನೆ. ಚನ್ನಮಲ್ಲಿಕಾರ್ಜುನಲಿಂಗದಲ್ಲಿ ಘನಲಿಂಗೈಕ್ಯವಾದ ಬಳಿಕ ಮತ್ತೇನು ಎನಲೊಲ್ಲದೆ ಇದ್ದೆನು ||೯೦||

ಇಂತೀ ಮಹದೇವಿಯಕ್ಕಗಳು ಚನ್ನಮಲ್ಲಿಕಾರ್ಜುನನು ತನ್ನ ಹೃತ್ಕಮಲ ಮಧ್ಯದಲ್ಲಿ ವಾರಿಕಲ್ಲು ವಾರಿಯ ಬೆರೆದಂತೆ ಉಪ್ಪಿನ ಪೊಟ್ಟಣವು ಉದಕದಲ್ಲಿ ಬೈಚಿಟ್ಟಂತೆ ಕ್ಷೀರ ಕ್ಷೀರ ಬೆರೆದಾತೆ ಅಡಗಿಸಿಕೊಂಡು ನಿರವಯುವಾಗಲು, ಇತ್ತ ಕಲ್ಯಾಣದೊಳಗೆ ಚನ್ನಬಸವರಾಜದೇವರು ಬಸವಾದಿ ಪ್ರಮಥರ ಮಧ್ಯದಲ್ಲಿ ಅಕ್ಕಗಳು ಪ್ರಭುದೇವರೊಳಗೆ ನಿರವಯುವಾದಳೆಂದು ಆ ಅಕ್ಕಗಳ ಸ್ತೋತ್ರಮಂ ಮಾಡಿದ ಪ್ರಸ್ತಾವದ ವಚನ||

ತನುವಿನೊಳಗಿದ್ದು ತನುವ ಗೆದ್ದಳು. ಮನದೊಳಗಿದ್ದು ಮನವ ಗೆದ್ದಳು. ವಿಷಯದೊಳಗಿದ್ದು ವಿಷಯಂಗಳ ಗೆದ್ದಳು. ಅಂಗ ಸಂಗವ ತೊರೆದು, ಭವವ ಗೆದ್ದಳು. ಕೂಡಲಚನ್ನಸಂಗಯ್ಯನ ಹೃದಯ ಕಮಲವ ಬಗೆದು ಹೊಕ್ಕು ನಿಜಪದವನೈದಿದ ಮಹದೇವಿಯಕ್ಕನ ಶ್ರೀ ಪಾದಕ್ಕೆ ನಮೋ ನಮೋ ಎಂಬೆನು. ॥೯೧॥

ಆ ಸಮಯದಲ್ಲಿ ಮಡಿವಾಳ ತಂದೆಗಳು ಮಹದೇವಿಯಕ್ಕಗಳಿಗೆ ಉರಿ ಕರ್ಪುರ ಸಂಯೋಗವಾಯಿತೆಂದು ಸ್ತುತಿಸಿದ ವಚನ. ॥

ಕಂಗಳ ನೋಟ ಕರಸ್ಥಲದ ಪ್ರಾಣ. ಅಂಗ ವಿಕಾರ ನಿರ್ವಿಕಾರ ವಾಯಿತ್ತು. ಸಂಗ ಸುಖ ನಿಸ್ಸಂಗವಾಯಿತ್ತು. ಹೆಂಗುಸೆಂಬ ಭಾವ ಬಯಲು ಬೆರಿಸಿತ್ತು. ಕಲಿದೇವರ ದೇವ ನಿಮ್ಮನೊಲಿಸಿ ಒಚ್ಚತವಾದ ಮಹದೇವಿಯಕ್ಕನ ಪಾದವ ನೆನೆದು ಆನು ಬದುಕಿದೆನು. ॥೯೨॥

ಇತಿ ಶ್ರೀಮತ್ಸಕಲ ಗಣ ಪುರಾತನರೊಳ್ ಪ್ರಭುದೇವರು ಮಹಾನುಭಾವ ಸದ್ಗೋಷ್ಠಿಯಂ ಮಾಡಿದ ಶೂನ್ಯ ಸಂಪಾದನೆಯೊಳ್ ಮಹದೇವಿಯಕ್ಕಗಳ ಸಂಪಾದನೆಗಂ ಷೋಡಶೋಪದೇಶ ಸಮಾಪ್ತ.

---

# ಪ್ರಭುಪರ್ಯಟಣ ಸಂಪಾದನೆ

## (ಸಪ್ತಾದಶೋಪದೇಶ)



ಕಂದ॥ ಎಲ್ಲ ಗಣಂಗಳ ಬೀಳ್ಕೊಂ। ಡಲ್ಲಮ ಪ್ರಭು ದೇಶ ಪಾವನಾರ್ಥಂ ಚರಿಸಿ ತಾ। ಸಲ್ಲೀಲೆಯಿಂದ ಮುದದಿಂ। ಕಲ್ಯಾಣಕ್ಕೆ ಬಂದ ಪರಿಯದೆಂತೆನಲುಸುರ್ವೆಂ॥

ಅದೆಂತೆಂದೊಡಾ ಚನ್ನಬಸವರಾಜದೇವರು ಮಡಿವಾಳಮಾಚಿತಂದೆಗಳು ಮಹದೇವಿಯಕ್ಕನ ಐಕ್ಯಸ್ಥಲಮಂ ಕೊಂಡಾಡುತ್ತಿರಲು ಆ ಸಮಯದಲ್ಲಿ ಪ್ರಭುದೇವರು ಎಲ್ಲರ ಸ್ತುತಿಗಳಂ ಸಂತಯಿಸಿ ಮತ್ತೊಮ್ಮೆ ಬಂದೆಪೆನೆಂದು ಎಲ್ಲರ ಕೈಯಲ್ಲಿ ಕಳುಹಿಸಿಕೊಂಬ ಪ್ರಸ್ಥಾವದ ವಚನ॥

ನಚ್ಚು ಮಚ್ಚಿನಸುಖ ಪರಿಣಾಮ ಸನ್ನಿಹಿತವಾದ ಬಳಿಕ ಇನ್ನುಅನುಭಾವ ವೆಂಬುದಿಲ್ಲ. ಅದಂತಿರಲಿ. ನುಡಿಯ ಗಡಣದ ಶಶಿಧರ ನಟ್ಟದ ಬೆಸನ ಮಾಡ ಬಂದ ಬಳಿಕ ಹೇಳಿದ ಮಣಿಹವ ಮಾಡುತ್ತಿಹುದಲ್ಲದೆ ಅದು ತನ್ನ ಲೀಲೆ ತಾನು ಬೆರಿಸುವಂದಿಂಗೆ ಬೆರಸಲಿ. ಆ ದಿನಕ್ಕೆ ಬಂದು ಹೇಳುವ ನಿರ್ಣಯವ ಗುಹೇಶ್ವರ ಲಿಂಗದ ಆಣತಿ ಬಪ್ಪನ್ನಬರ ಶರಣರೆಲ್ಲರು ಸಂಗನ ಬಸವಣ್ಣ ಸನ್ನಿಹಿತ ಸ್ಥಿತ್ಯರಾಗಿರಯ್ಯ ॥೧॥

ಆ ಸಮಯದಲ್ಲಿ ಸಿದ್ಧರಾಮಯ್ಯ ದೇವರು ಅನುಜ್ಞೆಯಂ ಪಡೆದು ಬೀಳ್ಕೊಂಬ ಪ್ರಸ್ಥಾವದ ವಚನ॥

ಎಲೆ ಎಲೆ ಅಯ್ಯ, ನೀ ಹೇಳಯ್ಯ ಎನಗೆ ಗತಿಯನು ಮತಿಯನು. ನಿಮ್ಮಲ್ಲಿ ಸಮರಸವೆಂತು ಹೇಳಾ? ಮೂರನೆಯ ಕರುವಾಡದ ಮೇಲುವಾಗಿಲ ಮನೆಯೊಳಗಿಪ್ಪೆನೋ ನಾನು? ಚೌಕ ಮಧ್ಯದ ಎಂಟೆಸಳ ಮನೆಯ ಮೋಹರದ ನಡುವಣ ಕೋಣೆಯೊಳಗಿಪ್ಪೆನೋ ನಾನು? ಕಾಮನ ಸುಟ್ಟ ಪಂಜರವ ಬಿಟ್ಟು ನಿಲುವೆನೊ? ಹೇಳು, ಹೇಳಾ ನಿರ್ಣಯವ, ಎಲೆ ಎಲೆ ಕಪಿಲಸಿದ್ಧಮಲ್ಲಿನಾಥಯ್ಯ ॥೨॥

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ॥

ಗುರುತತ್ವದಲ್ಲಿ ಹುಟ್ಟಿ, ಶಿವತತ್ವದಲ್ಲಿ ಬೆಳೆದು, ಪರತತ್ವದಲ್ಲಿ ಮಗ್ನವಾದ ಶರಣಂಗೆ ಕಾಯವಳಿದು ನಿರ್ವಯಲಾದಡೇನು? ಕಾಯಸಮಾಧಿ,

ಕರಣಸಮಾಧಿ, ಭಾವ ಸಮಾಧಿಯಾದ ಬಳಿಕ ಗುಹೇಶ್ವರ ಲಿಂಗದಲ್ಲಿ ಬಯಲ ಭ್ರಮೆಯ ಕಳೆದು ಸುಜ್ಞಾನ ಸಮಾಧಿಯನೈದಬಲ್ಲರೆ, ಅದು ನಿಜ ಸಮಾಧಿ ಕೇಳಾ ಸಿದ್ಧರಾಮಯ್ಯ ॥೩॥

ಇಂತು ಸಿದ್ಧರಾಮಯ್ಯ ದೇವರಿಗೆ ನಿಜಯೋಗದ ನಿಲುಕಡೆಯ ನಿರೂಪಿಸಿ ಬಿಜಯಂಗೈಯ್ಯಲು ಬಸವರಾಜದೇವರು ಪ್ರಭುದೇವರನಗಲಿ ಪ್ರಳಾಪಿಸುತ್ತಿರ್ದ ಪ್ರಸ್ಥಾವದ ವಚನ॥

ನಿಮ್ಮ ನೋಡ ನೋಡಲಿಕೆ ಎನ್ನ ಹರಣವಿದ್ದುದ ಕಂಡೆ. ನಿಮ್ಮ ನಗಲಲೆನ್ನ ಹರಣವಿಲ್ಲಯ್ಯ. ಇರುಳೊಂದು ಜುಗ ಮೇಲೆ ಕೆಡೆದಂತೆ ಆದೆ. ಎಂತು ಆಳವಾಡಿ ಕಳೆದೆನಯ್ಯ? ಹಲವನೆಲ್ಲವ ಹಂಬಲಿಸಿ ಹಲುಬುವೆನಯ್ಯ. ಕೂಡಲ ಸಂಗನ ಶರಣರನಗಲುವ ಧಾವತಿಯಿಂದ ಮರಣವೇ ಲೇಸಯ್ಯಾ ॥೪॥

ಮತ್ತಂ॥ ಅಯ್ಯ ನಿಮ್ಮ ಮಹಾನುಭಾವರನಗಲಿ ಬದುಕಲಾರೆ. ಶಿವಧೋ. ಕಂಗಳಶ್ರುಗಳಿಂದ ಮುಂದುಗಾಣೆ. ಲಿಂಗಸಂಗಿಗಳನಗಲಿ ನಾನೆಂತು ಬದುಕುವೆ ಕೂಡಲ ಸಂಗಮದೇವಾ? ॥೫॥

ಮತ್ತಂ॥ ಜಜ್ಜನೆ ಜರಿದೆನು ಜಜ್ಜನೆ ಜರಿದೆನು ನೋಡಯ್ಯ! ಬಿಬ್ಬನೆ ಬಿರಿದೆನು ಬಿಬ್ಬನೆ ಬಿರಿದೆನು ಬಿಬ್ಬನೆ ಬಿರಿದೆನು ನೋಡಯ್ಯ! ನಾನೊಬ್ಬನೆ ಉಳಿದೆನು ನಾನೊಬ್ಬನೆ ಉಳಿದೆನು ನಾನೊಬ್ಬನೆ ಉಳಿದೆನು ನೋಡಯ್ಯ ಕೂಡಲ ಸಂಗಮದೇವ ನಿಮ್ಮ ಶರಣರನಗಲಿದ ಕಾರಣ!

ಮತ್ತಂ॥ ಕಂಡಡೆ ಮನೋಹರವು. ಕಾಣದಿರ್ದಡೆ ಅವಸ್ಥೆ ನೋಡಯ್ಯ. ಹಗಲು ಇರುಳಹುದು ಇರುಳು ಹಗಲಹುದು. ಇರುಳು ಹಗಲೊಂದು ಜುಗ ಮೇಲೆ ಕೆಡೆದಂತೆ ಇಹುದು. ಕೂಡಲ ಸಂಗನ ಶರಣರನಗಲುವ ಧಾವತಿಯಿಂದ ಮರಣವೆ ಲೇಸು ಕಂಡಯ್ಯ ॥೭॥

ಚಿಕ್ಕ ದಣ್ಣಾಯಕರ ವಿಯೋಗಾವಸ್ಥೆಯ ವಚನ ॥

ಮನಕ್ಕೆ ಮನವೇಕಾರ್ಥವಾಗಿ ಪ್ರಾಣಕ್ಕೆ ಪ್ರಾಣವೇಕಾರ್ಥವಾಗಿ ಭಾವಕ್ಕೆ ಭಾವವೇಕಾರ್ಥವಾಗಿ, ಸಂಗಕ್ಕೆ ಸಂಗ ಸಮರತಿಯಾಗಿ ಕೂಡಿದ ಕೂಟವನಗಲಬಾರದಯ್ಯ! ಅಗಲಿ ಒಂದು ನಿಮಿಷ ಸೈರಿಸಬಾರದಯ್ಯ! ಕೂಡಲಚೆನ್ನಸಂಗ ನಿಮ್ಮ ನಚ್ಚು ಮಚ್ಚಿನ ಶರಣರ ನಗಲುವ ಅಗಲಿಕೆ ಎನ್ನ ಪ್ರಾಣದ ಹೋಕಯ್ಯ ॥೮॥

ಇಂತು ಚನ್ನಬಸವರಾಜದೇವರು ವಿಯೋಗಾವಸ್ಥೆಯೊಳಿರಲು, ಮಡಿವಾಳ ತಂದೆಗಳು ಸಂತೈಸುವ ವಚನ॥

ಹೊರಗಿದ್ದಾನೆಂಬೆನೆ? ಒಳಗು ತಾನೆ ನೋಡಾ; ಒಳಗಿದ್ದಾನೆಂಬೆನೆ? ಹೊರಗು ತಾನೆ ನೋಡಾ; ಒಳಗು ಹೊರಗು ಸರ್ವ ಸನ್ನಿಹಿತವಾಗಿರ್ದ ಸಮರಸದ ಮಹಿಮನ ತಿಳಿದು ನೋಡಾ; ಅಗಲಲಿಲ್ಲದೆ ಘನವ ಅಗಲಿದೆನೆಂಬ ಮಾತು ಶಿವ ಶರಣರ ಮನಕ್ಕೆ ಬಹುದೆ? ಮರಣವಿಲ್ಲದ ಮಹಿಮನ ನಿಲವ ತನ್ನಲ್ಲಿ ನೋಡಿ ಶರಣೆಂಬುದಲ್ಲದೆ ಮರೆಯಲಹುದೆ? ತೆರಹಿಲ್ಲದ ನಿಲವು ಕಲಿ ದೇವರ ದೇವನು ಕರಸ್ಥಲದೊಳೈದಾನೆ ಕಾಣಾ ಚನ್ನಬಸವಣ್ಣಾ ॥೯॥

ಮತ್ತಂ॥ ಮಡಿವಾಳಯ್ಯಗಳು ಪ್ರಭುದೇವರ ದೇಶಾಂತರಮಂ ಕೊಂಡಾಡಿದ ವಚನ॥

ದೇಶ ವಿನೋದಿಗಳಲ್ಲ, ದೇಶ ಭಾಷಿತರಲ್ಲ, ದೇಶಾಶ್ರಯುವ ತಮ್ಮದೆಂದೆನ್ನರು. ದಾಸ ಭಾವದಲ್ಲಿಪ್ಪ ಸದ್ಭಕ್ತರಲ್ಲಿ ದೇಶಾಂತರವ ಮಾಡುವವರು ಭಕ್ತವತ್ಸಲರು ಭಕ್ತಿವತ್ಸಲರು ಕಲಿದೇವಾ ನಿಮ್ಮ ಶರಣರು ॥೧೦॥

ಮತ್ತಂ॥ ಭಕ್ತವತ್ಸಲರು ಕಲಿದೇವನ ಶರಣರು; ಮಹ ಪುರುಷರು; ಕಾಮ ಕ್ರೋಧಾದಿಗಳ ನಂದಿಸುವರು! ಮದ ಮತ್ಸರವ ಸಿಂಹಾಸನವ ಮಾಡಿಕೊಂಬರು; ಆಸೆಯ ಹಾರಕ್ಕೆ ಕೈಯ್ಯಾನರು; ದೇಶವೆನ್ನರು! ದೇಶಾಂತರವ ಮಾಡುವರು ಕಲಿದೇವ ನಿಮ್ಮ ಶರಣರು. ॥೧೧॥

ಇಂತು ಪ್ರಭುದೇವರು ಬಸವಣ್ಣ ಚನ್ನಬಸವಣ್ಣ ಮಡಿವಾಳ ಮಾಚಿತಂದೆಗಳಿಗೆ ಮಹಾಜ್ಞಾನಮಂ ಬೋಧಿಸಿ, ಸಕಲ ಪುರಾತನರ ಕೃತಾರ್ಥರಂ ಮಾಡಿ, ಮಹದೇವಿಯಕ್ಕಗಳ ಶಿವತತ್ವಮಂ ನಿರ್ವಹಿಸಿ ತೋರಿಕೊಟ್ಟು, ಪರ್ವತಕ್ಕೆ ಕಳುಹಿ, ಸಿದ್ಧರಾಮಯ್ಯ ದೇವರಿಗೆ ನಿಜ ಸಮಾಧಿ ನಿರ್ಣಯಮಂ ತಿಳುಹಿ ಸೊನ್ನಲಿಗೆಯ ಪುರಕ್ಕೆ ಕಳುಹಿ, ತಾನು ನಿರ್ಗಮನ ನಡೆವಿಡಿದು ನಾನಾ ದೇಶ, ನಾನಾ ಗಿರಿ, ಗುಹಾಂತರಂಗಳೊಳು ಸುಳಿದಾಡುತಿರ್ದನದೆಂತೆಂದೊಡೆ,

ವಚನ॥ ನಡೆದಡೆ ನಿರ್ಗಮನಿ, ಸುಳಿವಡೆ ಗತಿರಹಿತನನೇನೆಂಬೆನೆಂತೆಂಬೆ? ಅಘಟಿತ ಘಟಿತನ ನೇನೆಂಬೆನೆಂತೆಂಬೆ? ಅಖಂಡಿತ ಮಹಿಮನ ನೇನೆಂಬೆ? ಆದಿಯಿಂದತ್ತತ್ತ ಗುಹೇಶ್ವರನ ಶರಣ ಅಲ್ಲಯ್ಯನ ಸುಳುಹು ಜಗಕ್ಕೆ ಪಾವನ. ॥೧೨॥

ಮತ್ತಂ॥ ನಡೆವಡೆ ನಡೆಗೆಟ್ಟ ನಡೆಯ ನಡೆವುದಯ್ಯ! ನುಡಿವಡೆ ನುಡಿಗೆಟ್ಟ ನುಡಿಯ ನುಡಿವುದಯ್ಯ! ಒಡಲ ಹಿಡಿದಡೆ ಹಿಡಿಯದೆ ಹಿಡಿವುದಯ್ಯ! ಕೂಡುವರೆ ಕೇಡಿಲ್ಲದ ಕೂಟವ ಮಾಡುವದಯ್ಯ ಗುಹೇಶ್ವರ ನಿಮ್ಮಲ್ಲಿ ನಿಲವುದಯ್ಯ. ॥೧೩॥

ಗಿರಿಗಳ ಗುಹೆಗಳ ಕಂದರದಲ್ಲಿ ನೆಲಹೊಲನ ಮುಟ್ಟದೆ ಇಪ್ಪೆ ದೇವ. ಎಲ್ಲಿ ನೋಡಿದಡಲ್ಲಿ ಇಪ್ಪೆ ದೇವಾ. ಮನಕ್ಕಗಮ್ಯ ಅಗೋಚರನಾಗಿ ಅಲ್ಲಲ್ಲಿ ಎಲ್ಲಿಯು ನೀನೆ ಇಪ್ಪೆಯಯ್ಯ! ಗುಹೇಶ್ವರ ನಿಮ್ಮ ನಗಲಕ್ಕೆ ಹರಿವರಿದು ಕಂಡೆ ನಾನು ॥೧೪॥

ಇಂತು ಸುಳಿದು ಬರುತ್ತಿಪ್ಪ ಪ್ರಭುದೇವರು ಪೊನ್ನಾಂಬಲನಾಥನ ನಿರೀಕ್ಷಿಸಿ ಅಲ್ಲಿಯುಳ್ಳ ಸದ್ಭಕ್ತಿಯುಕ್ತರಂ, ಸದಾಚಾರಿ ಸನ್ಮಾರ್ಗಿಗಳಂ, ಶಿವಲಿಂಗಾರ್ಚನ ಪರಾಯಣರಂ ಶಿವಧ್ಯಾನೈಕನಿಷ್ಠರಂ ಶಿವಪ್ರಸಾದ ಪಾದೋದಕಸೇವ್ಯರಂ, ಶಿವಲಿಂಗಾಂಗ ಸಂಬಂಧಿಗಳಂ, ಶಿವಾನುಭವ ಸಂಪನ್ನರಂ, ಶಿವಾದ್ವೈತವೇದ್ಯರಂ ಶಿವಜ್ಞಾನೋದಯ ಸಂಪನ್ನರೊಳು ಸದ್ಗೋಷ್ಠಿ ಸಮ್ಮಪವಮಂ ಸಮವೇಧಿಸಿ ಸರ್ವರಂ ಜೀವನ್ಮುಕ್ತರಂ ಮಾಡಿ, ಪೂರ್ವಾಬಿಯ ತೀರಂಗೊಂಡು ರಾಮೇಶ್ವರಕ್ಕೆ ಬಂದು ಆ ರಾಮನಾಥನೊಳು ಸುಖಸಂಕಥಾ ಪ್ರಸಂಗವಂ ಮಾಡಿ, ಆ ರಾಮನಾಥನಿಂ ಪೂಜೆಯಂ ಕೈಕೊಂಡು ಅಲ್ಲಿಂದ ದಕ್ಷಿಣಸಮುದ್ರವಂ ನಿರೀಕ್ಷಿಸಿ ಪಶ್ಚಿಮಾಂಬುಧಿಯಲ್ಲಿ ನಿಂದು ಮಹಾಬಲೇಶ್ವರನಾಸ್ಥಾನಮಂ ಪೊಕ್ಕು ಸಲ್ಲೀಲೆಯಿಂ ತಿರುಗಿ ಉತ್ತರಾಬ್ಧಿ ಮುಖವಾಗಿ ಸೌರಾಷ್ಟ್ರ ಸೋಮನಾಥನಂ ನೋಡುತ್ತ ತನ್ನ ಕಂಡು ಕೇಳ್ದು ಪೆಸಗೊಂಡು ನುಡಿದು ವಂದಿಸಿದ ಸರ್ವ ಜನಂಗಳ ಭವಪಾಶ ಬಂಧನಂಗಳಂ ಪರಿವುತ್ತ ಅಲ್ಲಿಂದ ಪೊರಮಟ್ಟು ನಾನಾ ಪುಣ್ಯಕ್ಷೇತ್ರಂಗಳಂ ನಿರೀಕ್ಷಿಸಿ ಆ ಕ್ಷೇತ್ರಂಗಳಿಗೆ ಅಗಮ್ಯ ಪುಣ್ಯ ವರಂಗಳಂ ಕೊಡುತ್ತ ಅಷ್ಟಾಷಷ್ಟಿ ತೀರ್ಥಂಗಳಂ ಸಮಸ್ತ ನಿಕರಂ ಮೆಟ್ಟಿ ನೋಡಿ, ಮಹಾ ತೀರ್ಥಗಳಿಂ ಪೂಜೆಗೊಂಡು, ತನ್ನ ಪರಮಾನಂದ ರಸನೆಂಬ ನಿರ್ಮಲ ಗಂಗಾಬು ಕಣಮಂ ಆ ಸಕಲ ತೀರ್ಥಂಗಳಿಗೆ ಕಾರುಣ್ಯದಿಂದಿತ್ತು ನಿತ್ಯ ನಿರ್ಮಳ ಪದಮಂ ಕೊಟ್ಟು ಅಲ್ಲಿ ನಾನಾ ದೇಶಂಗಳೊಳು ಸುಳಿದು ಬರುತ್ತ ತದ್ದೇಶಂಗಳಂ ಪಾವನವ ಮಾಡುತ್ತೆ ಶ್ರೀ ಕೇದಾರಮಂ ಪೊಕ್ಕು ಅತ್ಯುತ್ಕಟ ಹಿಮವಂ ಗೆಲಿದು ಸಪ್ಪಾಲಕ್ಷ ಪರ್ವತಂಗಳಂ ತಿರುಗಿ ತದ್ಗಿರಿ ಗುಹಾಂತರದೊಳು ಅಲ್ಲಲ್ಲಿ ವಿಶ್ರಮಂಗೆಯ್ಯುತ್ತೆ ಒಂದು ಪಿರಿದಪ್ಪ ಗುಹೆಯಂ

ಕಂಡು, ಆ ನಿವಾಸದೊಳು ಸಲ್ಲೀಲೆಯಿಂ ಪದ್ಮಾಸನದೊಳ್ಕುಳ್ಳಿರ್ದು ಏಕಾಗ್ರಚಿತ್ತ ಮನ ಪವನ ಜ್ಞಾನ ಧ್ಯಾನ ಸಮ್ಮತ ಸಮರಸಭಾವದಿಂ ನಿರ್ಭಾವ ಪದದೊಳು ನಿಂದು ನಿಃಶೂನ್ಯಮಂ ನಿರೀಕ್ಷಿಸಿ ನಿಜಸಮಾಧಿಯೊಳು ಮೂರ್ತಿಗೊಂಡು ಇದ್ದರದೆಂತೆಂದೊಡೆ ತತ್ಸಮಾಧಿಯ ಪ್ರಸ್ತಾವದ ವಚನ॥

ಅಚಲ ಸಿಂಹಾಸನದಲ್ಲಿ ನಿಶ್ಚಲವೆಂಬ ಮಂಟಪವು ಸಂಚಲದೋವರಿಯೊಳಗೆ ರುಚಿಗಳೆಲ್ಲವ ನಿಲಿಸಿ ಪಂಚರತ್ನ ಶಿಖರ ಮಿಂಚುವ ಕೋಟಿ ಕಳಸ ವಚನದ ವಿಚಿತ್ರ ಪುಷ್ಪದ ರಚನೆ ನವರಂಗದಲ್ಲಿ ಖೇಚರಾದಿ ಗಮನವನು ವಿಚಾರಪರ ನುಂಗಿ ಗುಹೇಶ್ವರ ನಿಂದ ನಿಲವು ಸಚರಾಚರವ ಮೀರಿತ್ತು ॥೧೫॥

ಮತ್ತಂ ಸ್ವಸ್ಥಾನ ಸ್ವಸ್ಥಿರದ ಸುಮನ ಮಂಟಪ ದೊಳಗೆ ನಿತ್ಯ ನಿರಂಜನ ಪ್ರಭೆಯ ಬೆಳಗು ಶಿವಯೋಗದನುಭಾವ ಏಕಾರ್ಥವಾಗಿ ಗುಹೇಶ್ವರ ನಿಮ್ಮ ಶರಣನು ಉಪಮಾತೀತನು ॥೧೬॥

ಮತ್ತಂ ಸ್ಥೂಲ ಸೂಕ್ಷ್ಮದೊಳಗೆ ಬೆಳಗುವ ಮಹ ಬೆಳಗಾಗಿ ಹೊಳೆವ ಜ್ಞಾನ ಜ್ಯೋತಿದಳಗಳೆಲ್ಲವ ಮೀರಿ, ನೆಳಲನೆಲ್ಲವ ನುಂಗಿದ ಬಿಸಿಲಿನೊಳಗೆ ಚಂದ್ರಮನುದಯ ಜಲಧಿ ವಳಯದ ಬೆಳಸ ಹೇಳಲಾರಳವಯ್ಯ? ಆಳು ಆಳ್ದನ ನುಂಗಿ ಈರೇಳು ಭುವನವ ದಾಂಟಿ ಗುಹೇಶ್ವರ ನಿಂದ ನಿಲವು ಹೊರಗು ಒಳಗು ನುಂಗಿತ್ತು ॥೧೭॥

ಮತ್ತಂ॥ ಜಲದೊಳಗೆ ಹುಟ್ಟಿದ ಹಲವು ಬಣ್ಣದ ವೃಕ್ಷ ಕೊಂಬಿಲ್ಲದೆ ಹುವ್ವಾಯಿತ್ತು. ಇಂಬಿನಲ್ಲಿ ಫಲದೋರಿ ಜಂಬುದ್ವೀಪದ ಮುಗ್ಧೆ ಅಗಮ್ಯ ಅರಳುದಲೆ ಇಂದ್ರವಾಹನವ ನುಂಗಿ ಬ್ರಹ್ಮರಂಧ್ರದೊಳಗೆ ಆಸನ ಪವನವ ಸೂಸಿ ಬೀಸರವೋಗದ ಶಿವಯೋಗ ಸಾಕ್ಷಿ ಭೂತಾತ್ಮದ ಮಾತು ಮಥನವ ನುಂಗಿ ಜ್ಯೋತಿಯೊಳಗಣ ಕರ್ಪೂರದ ಬೆಳಗಿನಂತಿದ್ದಿತ್ತು ಗುಹೇಶ್ವರಲಿಂಗದಲ್ಲಿ ಯೋಗವು ॥೧೮॥

ಮತ್ತಂ, ಸಹಸ್ರ ಪೆಂಟನೆಯ ದಳದಲ್ಲಿ ಖೇಚರ ಚಲ್ಲಣಗಟ್ಟಿ ವಾಸುಗಿ ಫಣಿ ಪ್ರಜ್ವಲಿಸುವುದ ಕಂಡೆ. ಆ ಸುರರೆಲ್ಲ ತಮತಮಗಂಜಿ ಓಸರಿಸಿ ಮುಂದೆ ನಡೆವಲ್ಲಿ ನಾಸಿಕ ಮನ ಮುಸುಕುವುದ ಕಂಡೆ. ತಾನು ಸುಖಿಯಾದ ಸುಖಮುಖ ಪ್ರವೇಶದಿಂದ ಗೋಸಾಸಿರ ನಡೆಗೆಟ್ಟವು ಗುಹೇಶ್ವರ ನಿಮ್ಮ ನೆರೆದೆನಾಗಿ ॥೧೯॥

ಮತ್ತಂ॥ ಜಗದಗಲದ ಮಂಟಪಕ್ಕೆ ಮುಗಿಲಗಲದ ಮೇಲುಕಟ್ಟಿನಲ್ಲಿ ವಿಚಿತ್ರವ ನೋಡುತ್ತೆ, ನೋಡುತ್ತೆ, ಧ್ಯಾನ ವಿಶ್ರಾಂತಿಯಲ್ಲಿ ದಿಟದಿಟವೆಂಬುದೊಂದು ದರುಶನವ ನೋಡುತ್ತ ಗಗನ ಗಂಭೀರದಲ್ಲಿ ಉದಯವಾಯಿತ್ತ. ಕಂಡೆ ಗುಹೇಶ್ವರಲಿಂಗವು ತಾನಾಗಿ ॥೨೦॥

ಮತ್ತಂ॥ ಏಳು ತಾಳದ ಮೇಲೆ ಕೇಳುವ ಸುನಾದ ಸ್ಥೂಲ ಸೂಕ್ಷ್ಮ ಕೈಲಾಸದ ರಭಸಗಂಗೆ ವಾಳುಕ ಸಮುದ್ರುದ್ರ ತಿಂಥಿಣಿ ಗಗನ ಗಂಭೀರದ ಶಿವಸ್ತುತಿಯ ನೋಡ ನೋಡಲು, ಪಿಂಡ ಬ್ರಹ್ಮಾಂಡವಾಯಿತ್ತು. ಅಖಂಡಿತ ನಿರಾಳ ಗುಹೇಶ್ವರ ॥೨೧॥

ಮತ್ತಂ॥ ಪಂಚ ಬ್ರಹ್ಮಮೂರ್ತಿ ಪ್ರಣವ ಮಂತ್ರರೂಪ ಪಂಚಮುಖ ದಶಭುಜ ಫಣಿಮಣಿಯ ಮೇಲೆ ನೋಡುತ್ತೈದಾನೆ. ಈರೇಳು ಭುವನವೆಲ್ಲ ತಾನಾಗಿ ಸಮತೆ ಸಮಾಧಿ ಎಂಬ ಸಮರಸದೊಳಗೆ ಚಂದ್ರಕಾಂತದ ಕೊಡದೊಳಗೆ ಅಮೃತವ ತುಂಬಿ ಕೊಡನೊಡೆಯದೆ ಬೆಳಗುತಿದ್ದೆನು ಗುಹೇಶ್ವರಾ ॥೨೨॥

ಮತ್ತಂ॥ ಬಂದು ಬಾರದು. ಹೊಂದಿಯು ಹೊಂದದು. ನಿಂದು ನಿಲ್ಲದ ಪರಿಯ ನೋಡಾ. ಅಖಂಡಿತ ಚರಿತನನೇನೆಂದು ಪಮಿಸುವೆ? ನವಖಂಡ ಪೃಥ್ವಿಯನೊಳಕೊಂಡ ಬಯಲು ಅಗಮ್ಯ ಸಂಯೋಗದ ಸಮಾಧಿಯಲ್ಲಿ ಗುಹೇಶ್ವರಲಿಂಗವನೇನೆಂದುಪಮಿಸುವೆ? ॥೨೩॥

ಮತ್ತಂ॥ ಖೇಚರ ಪವನದಂತೆ, ಜಾತಿಯೋಗಿಯ ನಿಲವು ಮಾತಿನೊಳು ಧಾತು ನುಂಗಿ ಉಗುಳದಿನ್ನೆಂತೊ? ಭೂಚಕ್ರವಳಯುವನು ಆಚಾರ್ಯ ರಚಿಸಿದ ಗ್ರಾಮುವೆಲ್ಲವ ಸುಟ್ಟು ನೇಮ ನೆಲಗತವಾಯಿತ್ತು. ನಾಮ ನೇಮವ ನುಂಗಿ ಗ್ರಾಮ ಪ್ರಭುವನೆ ನುಂಗಿ ಗುಹೇಶ್ವರ ಗುಹೇಶ್ವರ ಎನುತ್ತ ನಿರ್ವಯಲಾಯಿತ್ತು ॥೨೪॥

ಮತ್ತಂ॥ ಇಹಲೋಕ ಪರಲೋಕ ತಾನಿದ್ದಲ್ಲಿ, ಗಗನ ಮೇರು ಮಂದಿರ ತಾನಿದ್ದಲ್ಲಿ, ಸಕಲ ಭುವನ ಸತ್ಯಲೋಕ ತಾನಿದ್ದಲ್ಲಿ, ನಿತ್ಯ ನಿರಂಜನ ತತ್ವ ತಾನಿದ್ದಲ್ಲಿ, ಉತ್ತರೋತ್ತರ ಪದವು ತಾನಿದ್ದಲ್ಲಿ, ಚಂದ್ರ ಸೂರ್ಯ ತಾರಾಮಂಡಲ ತಾನಿದ್ದಲ್ಲಿ, ಅಂತರ ಮಹದಂತರ ತಾನಿದ್ದಲ್ಲಿ ಸ್ವತಂತ್ರ ಗುಹೇಶ್ವರ ತಾನಿದ್ದಲ್ಲಿ ॥೨೫॥

ಇಂತು ಪರಶಿವಯೋಗದಲ್ಲಿ ನಿಂದು ನಿರವಯನಾಗಿ ಅನಂತ ಕೋಟಿ ಬ್ರಹ್ಮಾಂಡಗಳೆಲ್ಲವನು ತನ್ನ ಮಹಾಜ್ಞಾನ ಪ್ರಕಾಶದಲ್ಲಿ ಆಲಿಂಗಿಸಿ ತೊಳಗಿ ಬೆಳಗಿ ಒಪ್ಪುತ್ತಿಪ್ಪ ಪ್ರಭುದೇವರು ತಮ್ಮ ಲೀಲೆಯವಸಾನಕಾಲಮಂ ವಿವೇಕದಿಂ ತಿಳಿದೆದ್ದು ಕಲ್ಯಾಣದತ್ತಲಭಿಮುಖನಾಗಿ ಬರುತಿರ್ಪಾಗಳು ಇತ್ತಲು ಬಸವರಾಜದೇವರು ಪ್ರಭುದೇವರು ಬರಬೇಕೆಂದು ಶೂನ್ಯಸಿಂಹಾಸನಮಂ ರಚಿಸಿ, ಬರವ ಹಾರೈಸುತ್ತಿರ್ದರದೆಂತೆಂದೊಡೆ॥

ಆ ಪ್ರಸ್ಥಾವದೊಳು ಹಡಪದಪ್ಪಣ್ಣಗಳ ವಚನ. ॥

ಅಷ್ಟದಳ ಕಮಲದ ಹೂಗಲ್ಲ ವಿಡಿದು ಶೂನ್ಯ ಸಿಂಹಾಸನ ಧವಳಾಲಯವೆತ್ತಿತ್ತು. ಚಂದ್ರಕಾಂತದ ಶಿಲೆಯಲ್ಲಿ ಪಶ್ಚಿಮದ್ವಾರವಂ ತೆಗೆದು ನೋಡುವರೆ ವಿಪರೀತ ಏಕೋಭಾವನೆಂಬುದೊಂದು ಕಂಭ ಆದಕ್ಕೆ ಅನೇಕ ಚಿತ್ರಂಗಳಡಗಿದ ಆ ಪ್ರಭೆಯೊಳಗೆ ಬ್ರಹ್ಮರಂಧ್ರವೆಂಬ ಮಸ್ತಕದ ಮೇಲೆ ಪಂಚಮೌಕ್ತಿಕದ ಮಾಲೆಯನಿಳಿವಿಟ್ಟು ಮೂಲೆ ಮೂಲೆಗಳ ನಡುವೆ ಕಟ್ಟಿದವು ನವರತ್ನದ ಗೊಂಡೆಯಂಗಳು. ಕಾಳಿಕೆಯ ಕಪ್ಪಡವದಕೆ ಮೇಲುಹೊದಕೆ. ಉಲುಹಿನ ಅರಳೆಲೆಯ ಬಳಸುದೋರಣವ ಕಟ್ಟಿ ದಶವಾಯುವನೆಲ್ಲವನೊಂದು ಮಾಡಿ, ಲಿಂಗಸುಖವಾಯುವ ಸಂತೈಸಿ ಆಲವಟ್ಟವಂ ಮಾಡಿ ಲಂಬಿಸಿದ ಮಂದಾನಿಲನಂ ಮಲಗಂ ಮಾಡಿ ಹರುಷವನೆ ವಸಂತನ ಚೌಕದ ಆಸನವಟ್ಟಿಗೆಯ ಮಾಡಿ ನವನಾಳದೊಳು ಮೊರೆವ ಶಬ್ದಮಂ ಶುಕಪಿಕ ಭ್ರಮರಂಗಳ ಆಮೋದವಂ ಮಾಡಿ, ಪರಮಶಾಂತಿ ಎಂಬ ಶೈತ್ಯಾಕಾರದ ಸೋಂಕಿನ ಚೂತ ಪಲ್ಲವಂಗಳಂ ಹಾಸಿ, ಉತ್ತರ ದ್ವಾರವೆಂಬ ನುಸುಳುಗಂಡಿಯ ರಚಿಸಿ, ಪೂರ್ವಯೋಗವೆಂಬ ಸೋಪಾನವಂ ಮಾಡಿ, ಪಶ್ಚಿಮದ್ವಾರವೆಂಬ ನಿಜದ್ವಾರವಟ್ಟವಂ ಮಾಡಿ, ಸಪ್ತ ವ್ಯಸನ ಪಂಚೇಂದ್ರಿಯಂಗಳೆಂಬ ಪೌಳಿಗವಾಕ್ಷಿಯನಿಕ್ಕಿ, ಆಸೆಯಾಮಿಷವಂ ಕೆಡಿಸಿ, ಊರ್ಧ್ವಚಕ್ರವೆಂಬ ಮೇಲುಪ್ಪರಿಗೆಯಂ ಮಾಡಿ, ಚಂದ್ರಸೂರ್ಯರೆಂಬ ದೀಪಮಂ ಬೆಳಗಿ ಸೋಹಂ ಎಂಬ ಶಿಖರಿಯ ಮೇಲೆ ಮಹಾಜ್ಞಾನ ಪ್ರಕಾಶವೆಂಬ ಹೊನ್ನ ಕಲಶವಂ ಮಾಡಿ ನಿಃಶೂನ್ಯ ನಿರಾಳವೆಂಬ ಶೂನ್ಯಸಿಂಹಾಸನವಂ ಮಾಡಿದ ಬಸವ ಪ್ರಿಯ ಕೂಡಲ ಚನ್ನಸಂಗಯ್ಯನಲ್ಲಿ ಎನ್ನ ಪರಮ ಗುರು ಸಂಗನ ಬಸವಣ್ಣನು ॥೨೬॥

ಮತ್ತಂ, ಅಂಗದ ಪ್ರಕೃತಿಯು ಲಿಂಗದಲ್ಲಿ ಅಳಿದು, ಮನದ ವಿಕೃತಿಯು ಅರಿವಿನಲ್ಲಿ ಅಳಿದು, ಜೀವಭ್ರಾಂತಿಯು ನಿಶ್ಚಿಂತ ಪದದಲ್ಲಿ ಅಳಿದು, ನಿಃಶೂನ್ಯ ನಿರಾಮಯವಾದ ನಿವಾಸಕ್ಕೆ ಸದಾಚಾರವೆಂಬ ಕೆಸರುಗಲ್ಲನಿಕ್ಕಿ, ಸರ್ವಾಚಾರ ಸಂಪತ್ತೆಂಬ ಹೂಗಲ್ಲ ಮುಚ್ಚಿ, ಅಂತಃಕರಣ ಚತುಷ್ಟಯವೆಂಬ ನಾಲ್ಕು ಕಂಭಗಳನು ನಿಲಿಸಿ ಜ್ಞಾತೃವೆಂಬ ಭಿತ್ತಿಯ ಮೇಲೆ ಜ್ಞಾನವೆಂಬ ಶಿಖರಿಯುನನುಗೊಳಿಸಿ, ಜ್ಞೇಯವೆಂಬ ಹೊನ್ನ ಕಲಶಮಂ ಶೃಂಗಾರವಮಂ ಮಾಡಿ, ಬ್ರಹ್ಮರಂಧ್ರದ ಊರ್ಧ್ವದ್ವಾರವೆಂಬ ನಿಜದ್ವಾರವಮಂ ಮಾಡಿ ನಿರ್ವಯಲಲ್ಲಿ ನೆಲೆಗೊಳಿಸಿ ಬಸವ ಪ್ರಿಯ ಕೂಡಲಚನ್ನಸಂಗಯ್ಯನ ಶರಣ ಪ್ರಭುದೇವರ ಬರವಿಂಗೆ ಶೂನ್ಯಸಿಂಹಾಸನಮಂ ರಚಿಸಿ ಬರವ ಹಾರೈಸುತ್ತಿರ್ದರೆನ್ನ ಪರಮ ಗುರು ಬಸವಣ್ಣನು ॥೨೭॥

ಆ ಪ್ರಸ್ಥಾವದೊಳು ಪ್ರಭುದೇವರ ಬರವಿಂಗೆ ಗುಡಿ ತೋರಣಮಂ ಕಟ್ಟಿ ಸಂಭ್ರಮಿಸುತ್ತಿರ್ದ ವಚನ॥

ಉಪ್ಪರಗುಡಿ ತೋರಣಗಟ್ಟಿತ್ತು. ಕಲ್ಯಾಣದಲ್ಲಿ ಅಷ್ಟದ್ವಾರದಂಗಡಿ ರಾಜಬೀದಿಯೊಳೆಲ್ಲ ವ್ಯಾಸನ ಬಾಹುಗಳುಪ್ಪರಿಸಿದವು. ಎಂಟು ಬಾಗಿಲಲ್ಲಿ ನಡೆಮಡಿಯ ಹಾಸಿ, ಸಂಕಲ್ಪ ಸಂತೋಷವ ಮಾಡಿದನು ವೃಷಭೇಶ್ವರನು ಬಸವಪ್ರಿಯ ಕೂಡಲಚನ್ನಸಂಗಯ್ಯ ಬಂದಹನೆಂದು ॥೨೮॥

ಇಂತು ಶೂನ್ಯಸಿಂಹಾಸನವ ರಚಿಸಿ ಬಸವರಾಜದೇವರು ಪ್ರಭುದೇವರ ಬರವ ಹಾರೈಸುತ್ತಿರ್ದ ಪ್ರಸ್ಥಾವದ ವಚನ॥

ಹಮ್ಮಿ ಹನ್ನೆರಡು ಸಂವತ್ಸರ ಹಿಂದಾಯಿತ್ತು. ಏನ ಮಾಡಿದಡೇನಯ್ಯ ಎನ್ನಲ್ಲಿ ದಿಟವಿಲ್ಲದನ್ನಕ್ಕರ? ಏನ ಹಮ್ಮಿದರೇನಯ್ಯ ಎನ್ನಲ್ಲಿ ದಿಟವಿಲ್ಲದನ್ನಕ್ಕರ? ಎನ್ನ ಪುಣ್ಯದ ಫಲ ಕೂಡಲಸಂಗಮದೇವ ಬಾ ಎನ್ನ ಮುಂಡಿಗೆ ತೋಯಿನಟ್ಟಂತಾಯಿತ್ತು ॥೨೯॥

ಸಮುದ್ರಕ್ಕೆ ಚಂದ್ರಮನ ಬರವೆ ಜೀವಾಳವಯ್ಯ! ಬತ್ತಿದ ಕೆರೆಯ ಕಮಲಕ್ಕೆ ಉದಕವೆ ಜೀವಾಳವಯ್ಯ! ಚಕೋರಂಗೆ ಚಂದ್ರಮನ ಬರವೆ ಜೀವಾಳವಯ್ಯ! ಕೂಡಲಸಂಗಮದೇವ ಎನಗೆ ನಿಮ್ಮ ಶರಣರ ಬರವೆ ಜೀವಾಳವಯ್ಯ ॥೩೦॥

ಕಾಣಬಹುದೆ ಆ ಪರುಷದ ಗಿರಿ ಅಂಧಕಂಗೆ? ಮೊಗೆಯಬಹುದೆ ರಸದ ಬಾವಿಯ ನಿರ್ಭಾಗ್ಯಂಗೆ? ತೆಗೆಯಬಹುದೆ ಕಡವರವ ದರಿದ್ರಂಗೆ?

ಕರವುದೆ ಕಾಮಧೇನು ಅಶುದ್ಧಂಗೆ? ಕೂಡಲಸಂಗನ ಶರಣರ ಪುಣ್ಯವಿಲ್ಲದ ಕಾಲಕ್ಕೆ ಎನಗೆ ಕಾಣಬಹುದೆ? ॥೩೧॥

ಮತ್ತಂ ಸೂರ್ಯನ ಬರವು ತಾವರೆಗೆ ಜೀವಾಳವಯ್ಯ! ಚಂದ್ರಮನ ಬರವು ನೈದಿಲೆಗೆ ಜೀವಾಳವಯ್ಯ! ಕೂಪರ ಠಾವಿನಲ್ಲಿ ನೋಟವೆ ಜೀವಾಳವಯ್ಯ! ಕೂಡಲಸಂಗನ ಶರಣರ ಬರವು ಎನಗೆ ಜೀವಾಳವಯ್ಯ ॥೩೨॥

ಹೊಲಬು ಗೆಟ್ಟ ಶಿಸು ತನ್ನ ತಾಯ ಬಯಸುವಂತೆ, ಬಳಿದಪ್ಪಿದ ಕರು ತನ್ನ ಹಿಂಡ ಬಯಸುವಂತೆ ಬಯಸುತ್ತಿರ್ದೆನಯ್ಯ ನಿಮ್ಮ ಶರಣರ ಬರವನು! ದಿನಕರನುದಯಕ್ಕೆ ಕಮಲ ವಿಕಸಿತವಪ್ಪಂತೆ ಎನಗೆ ನಿಮ್ಮ ಶರಣರ ಬರವು ಕೂಡಲ ಸಂಗಮದೇವಾ ॥೩೩॥

ಮತ್ತಂ ಎಡದ ಕೈಯ್ಯಲ್ಲಿ ಹಾಲುಬಟ್ಟಲು, ಬಲದ ಕೈಯ್ಯಲ್ಲಿ ಓಜು ಗಟ್ಟಿಗೆ, ಆವಾಗ ಬಂದಾನೆಮ್ಮಯ್ಯ ಬಡಿದು ಹಾಲು ಕುಡಿಸುವ ತಂದೆ? "ದಂಡ ಕ್ಷೀರ ದ್ವಯಾಹಸ್ತಂ, ಜಂಗಮಂ ಭಕ್ತಿಮಂದಿರಂ॥ ಅತಿ ಭಕ್ತಿ ಲಿಂಗಸುಂತುಷ್ಟಂ। ಅಪಹಾಸ್ಯಂ ಯಮ ದಂಡನಂ॥ ಇಂತೆಂದುದಾಗಿ, ಕೂಡಲಸಂಗಮದೇವ ಭಕ್ತಿಪಥವ ತೋರುವ ತಂದೆ, ಆವಾಗ ಬಂದಹನೊ? ॥೩೪॥

ಇದಕ್ಕೆ ಚಿಕ್ಕದಣ್ಣಾಯಕರ ಉತ್ತರ. ॥

ಮನದಂತೆ ಮಂಗಳವೆಂಬುದು ತಪ್ಪದು ನೋಡಾ ಬಸವಣ್ಣ! ಅರಸುವಂಗೆ ಅರಿಕೆ ಸಾಧ್ಯವಪ್ಪುದು ನೋಡಾ ಬಸವಣ್ಣ! ನಿಮ್ಮ ಮನದರ್ಥವನಡಗಿಸುವರೆ ಕೂಡಲ ಚನ್ನಸಂಗಮದೇವರ ಶರಣರ ಪ್ರಭುದೇವರು ಬಾಹುದು ತಪ್ಪಲರಿಯದು, ಕೇಳಾ ಸಂಗನಬಸವಣ್ಣಾ. ॥೩೫॥

ಇದಕ್ಕೆ ಮಡಿವಾಳತಂದೆಗಳ ಉತ್ತರ. ॥

ಮಾಡುವ ಭಕ್ತಂಗೆ, ಒಲಿವ ದೇವಂಗೆ, ಭಿನ್ನ ಉಂಟೆ ಅಯ್ಯ? ಕಾಯದೊಳಗೆ ಕಾಯವಾಗಿಪ್ಪ, ಪ್ರಾಣದೊಳಗೆ ಪ್ರಾಣವಾಗಿಪ್ಪ ಅರುಹಿಸಿಹೆನೆಂದರೆ ಅರಸಿ ಬಯಸಿದರೆ ಕರುಣದಿಂದೆ ನಡೆದು ಬಾಹನು ಕಲಿದೇವರ ದೇವನ ಬರವನೀಗಳೆ ತೋರಿ ಕೊಟ್ಟಹೆನು ಕೇಳಾ ಸಂಗನಬಸವಣ್ಣಾ. ॥೩೬॥

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ. ॥

ಹಸಿದಳುವಂಗೆ ತಾಯ ಮೊಲೆಯ ಕೊಟ್ಟರೆ ಆ ಶಿಸು ಜೀವಿಸದಿಪ್ಪುದೆ ಹೇಳಯ್ಯ? ಪ್ರಾಣ ವಲ್ಲಭನ ಅಗಲಿಕೆಯಿಂದೆ ಪ್ರಾಣವಿಯೋಗವಾಗಿಹ ಹೆಂಗುಸಿಂಗೆ ಆ ಪ್ರಾಣವಲ್ಲಭ ಬಂದರೆ ವಿರಹ ಸಂತಾಪಿಸದಿಪ್ಪುದೆ ಹೇಳಯ್ಯ? ಕೂಡಲಸಂಗಮದೇವರು ಸಾಕ್ಷಿಯಾಗಿ, ಪ್ರಭುವೆನ್ನ ಮನೆಗೆ ಬಂದರೆ ಎನ್ನ ಬಯಕೆ ಕೈಸಾರಿ ಚನ್ನಬಸವಣ್ಣನ ಕರುಣದ ಕಂದನಾಗಿ ಉಳಿದೆನು, ಕಾಣಾ ಮಡಿವಾಳಯ್ಯ. ೩೭॥

ಹೀಗೆಂದು ನುಡಿವುತ್ತಿಪ್ಪ ಪ್ರಸ್ಥಾವದೊಳು ಪ್ರಭುದೇವರ ಬರವಿನ ಸೂಚನೆ ಬಸವರಾಜದೇವರಿಗೆ ತೋರ ತ್ತಿದ್ದಿತ್ತು. ಅದೆಂತೆಂದೊಡೆ ವಚನ॥

ಅಂಗಯ್ಯ ತಿಂಡಿಯಾಗಿಹುದಯ್ಯ. ಎನ್ನ ಕಂಗಳು ಕೆತ್ತುತ್ತಿಹವಯ್ಯ ಬಂದಹರೇಕೆ ಎನ್ನ ಮನೆಗೆ ಪ್ರಮಥರು ಬಂದಹರೇಕಯ್ಯ? ಎನ್ನ ಮನೆಗೆ ಪುರಾತನರು ಕಂಡ ಕನಸು ಕರೆಯವಾಗಿ. ಜಂಗಮ ಮನೆಗೆ ಬಂದರೆ ಶಿವಾರ್ಚನೆಯ ಮಾಡುವೆನು ಕೂಡಲಸಂಗಮದೇವ ನಿಮ್ಮ ಮುಂದೆ ॥೩೮॥

ಇದಕ್ಕೆ ಮೋಳಿಗೆಯ ಮಾರಿತಂದೆಗಳ ಪ್ರತ್ಯುತ್ತರ॥

ನಿಮಿತ್ತ ಶುಭಸೂಚನೆಯ ಬಿನ್ನಪವನವಧರಿಸು. ಅತಿಥಿಯ ಮಸ್ತಕತಾಗಿ ಶೂನ್ಯಸಿಂಹಾಸನದ ಘಳಹರಂಗಳೆಲ್ಲವು ಅಲ್ಲಾಡುವದ ಕಂಡೆನಯ್ಯ. ಮುತ್ತಿನಾರತಿಯ ಮುಂದೆ ಹಿಡಿದ ಕೊಂಡು ಮುಕ್ತಿವನಿತೆಯರು ನಿತ್ಯ ನಿರಂಜನಂಗೆ ನಿವಾಳಿಸುವದ ಕಂಡೆನಾಗಿ. ಆದರಿಂದೆ ನಿಃಕಳಂಕ ಮಲ್ಲಿಕಾರ್ಜುನದೇವರು ಬಾರದಿದ್ದಡೆ ನಾ ನೀನಾದಂತೆ ಆಹೆನು. ಕಟ್ಟ ಗುಡಿಯ ಸಂಗನಬಸವಣ್ಣಾ ॥೩೯॥

ಇದಕ್ಕೆ ಸೊಡ್ಡಳಬಾಚರಸರ ಪ್ರತ್ಯುತ್ತರ॥

ಮನದೊಡೆಯ ಮನೆಗೆ ಬಾಹರೆ ಮನ ಮನ ಅಜ್ಜೊತ್ತಿದಂತಿಪ್ಪುದಯ್ಯ ನೋಡಯ್ಯ! ಮನಕ್ಕೆ ಮನೋಹರ ಚಿತ್ತಕ್ಕೆ ಮನೋಹರವಾಗಿಪ್ಪುದಯ್ಯ. ಮಹಾದಾನಿ ಸೊಡ್ಡಳನ ಬರವಿಂಗೆ ಶುಭಸೂಚನೆ ಮೈದೋರುತಿದೆ. ಪ್ರಭುದೇವರ ಬರವನೀಗಳೆ ತೋರುವೆನಯ್ಯ ಸಂಗನಬಸವಣ್ಣ ॥೪೦॥

ಇದಕ್ಕೆ ಬಸವರಾಜದೇವರು ಕೃತನಿಶ್ಚಯವನೈದಿದ ವಚನ॥

ಶರಣೆಂದು ಕರ ಸಂತೋಷವ ಮಾಡಿ ಮುರಿದು ಮುಂಜೆರಗ ಗಂಟಿಕ್ಕಿ ನೆಲವ ಹೊಯಿದ ಕೈ ತಪ್ಪಬಲ್ಲುದೆ ಹೇಳಾ? ಆದಿ ಶರಣರ ನುಡಿ ತಪ್ಪದೆ ಕೂಡಲಸಂಗಮ ದೇವರು ಸಾಕ್ಷಿಯಾಗಿ ಕಟ್ಟುವೆನು ಗುಡಿಯನೆತ್ತುವೆನು ಧ್ವಜವಾ ॥೪೧॥

ಮತ್ತಂ॥ ಅಡವಿಯೊಳಗೆ ನೀರಡಿಸಿ ಎಡೆಯಲ್ಲಿ ನೀರ ಕಂಡಂತಾಯಿತ್ತಯ್ಯ. ಕುರುಡಂಗೆ ಕಣ್ಣ ಬಂದಂತಾಯಿತ್ತಯ್ಯ. ನಮ್ಮ ಕೂಡಲಸಂಗನ ಶರಣರು ಬಂದಹರೆಂದರೆ ಹೋದ ಪ್ರಾಣ ಬಂದಂತಾದೆನಯ್ಯ. ॥೪೨॥

ಮತ್ತಂ॥ ಹಡಪದಪ್ಪಣ್ಣಗಳ ವಚನ

ಬಯಸುವ ಬಯಕೆ, ಕೈಸಾರುವಂತೆ ನಿಧಿ ನಿಧಾನ ಮನೆಗೆ ಬಪ್ಪಂತೆ, ಪರಿಮಳವನರಸಿ ಬಪ್ಪ ಭ್ರಮರನಂತೆ, ಚಿಂತಾಮಣಿಯ ಪುತ್ಥಳಿ ನಡೆಗಲಿವಂತೆ ಬಸವಪ್ರಿಯ ಕೂಡಲ ಚನ್ನ ಸಂಗನಲ್ಲಿ ಪ್ರಭುದೇವರ ಬರವು ಕಾಣುತ್ತಿದೆ ನೋಡಾ ಸಂಗನಬಸವಣ್ಣಾ ॥೪೩॥

ಇದಕ್ಕೆ ಬಸವರಾಜದೇವರ ವಚನ॥

ನಚ್ಚು ಮುಚ್ಚಿನ ಶರಣರೆನ್ನ ಕಣ್ಣ ಮುಂದೆ ಬಂದು ನಿಂದಿರಲು ಎನ್ನ ತನುವ ಬಗೆದು ಎನ್ನ ತನುವಿನೊಳಗೆ ಇಟ್ಟುಕೊಂಬೆನು. ಎನ್ನ ಮನವ ಬಗೆದು ಮನದೊಳಗಿಟ್ಟುಕೊಂಬೆನು. ಎನ್ನ ಕಂಗಳ ಬಗೆದು ಮನದೊಳಗೆ ಇಟ್ಟುಕೊಂಬೆನು. ಎನ್ನ ಕಂಗಳ ಒಗೆದು ಕಂಗಳೊಳಗೆ ಇಟ್ಟುಕೊಂಡೆನು ಕೂಡಲ ಸಂಗನ ಶರಣರೆನ್ನ ಒಡೆಯರಾಗಿ ಎನ್ನ ಮನೆಗೆ ಬಂದರೆ ಭಕ್ತಿಯ ಮಾಡುವೆನು ಕಾಣಾ ಅಪ್ಪಣ್ಣ.

ಇದಕ್ಕೆ ಚಿಕ್ಕದಣ್ಣಾಯಕರ ವಚನ. ॥

ಕಂಗಳ ನೋಟ ಕರಸ್ಥಲದ ಪ್ರಾಣ ಮನದೊಳಗೆ ಪರಿಣಾಮವ ತೋರುತ್ತಿದೆ ನೋಡಾ! ನಡೆವರೆ ಗತಿ ಇಲ್ಲ. ನಿಂದರೆ ಹೆಜ್ಜೆ ಇಲ್ಲ. ಸುಳುಹಿನೊಳಗೊಂದು ಅತಿಶಯದ ಸುಳುಹ ನೋಡಾ! ತೆರೆಯ ಮರೆಯ ಪರಶಿವನು ನಡೆಗಲಿತು ಬಪ್ಪ ಕರುಣವ ನೋಡಾ ಸಂಗನಬಸವಣ್ಣಾ ಕೂಡಲ ಚನ್ನಸಂಗಮದೇವರು ಸಾಕ್ಷಿಯಾಗಿ ಪ್ರಭುದೇವರ ಬರವು ತಪ್ಪದು. ॥೪೪॥

ಇದಕ್ಕೆ ಬಸವರಾಜದೇವರ ವಚನ. ॥

ಸಂಗ ಸನ್ನಿಹಿತ ಶರಣರು ಮನೆಗೆ ಬಂದರೆ ನಂಬುವುದೆನ್ನ ಮನ. ನಚ್ಚುವುದೆನ್ನ ಮನ. ಹಾವು ನೇಣೆಂಬ ಬ್ರಾಂತುಳ್ಳನ್ನಕ್ಕರ ನಾನೆಂತು ಭಕ್ತನಪ್ಪೆನಯ್ಯ? ಅಂಗ ಲಿಂಗ ಸನ್ನಿಹಿತವಪ್ಪ ಪ್ರಭುದೇವರ ಬರವ ಕಂಡು ಮನದಲ್ಲಿ ಮತ್ತೆ ಸಂದೇಹ ಹೊಳೆದರೆ ಬೆಂದೆನಲ್ಲಾ ನಾನು ಕೂಡಲ ಸಂಗಮದೇವಾ. ॥೪೬॥

ಅಲ್ಲಿ ಬಸವರಾಜದೇವರು ಪ್ರಭುದೇವರ ಬರವ ಕಂಡ ಪ್ರಸ್ಥಾವದ ವಚನ. ॥

ಕಂಗಳೆ ಕರುವಾಗಿ ಉರವಣಿಸಿ ಬಪ್ಪವನ ಬರವ ನೋಡಾ, ಇರವ ನೋಡಾ, ಪರವನೋಡಾ ಇಹಪರವ ನೋಡಾ. ಇಹಪರ ಒಂದಾದ ಘನವ ನೋಡಾ: ಇಂತೀ ಘನಕ್ಕೆ ಘನವ ನೋಡಾ! ಕರುವಿಟ್ಟ ರೂಪಿನಂತೆ ಕಂಗಳೆರಡು ಹಳಚದಂತೆ ಭುಗಿಲನೆ ನಡೆತಹ ಇಂತಪ್ಪ ಗರುವ ಪ್ರಭುದೇವರ ಕಂಡೆನಯ್ಯ ಕೂಡಲಸಂಗಮದೇವಾ. ॥೪೭॥

ಮತ್ತಂ॥ ಬಸವರಾಜದೇವರು ಪ್ರಭುದೇವರ ಮೂರ್ತಿಯ ನಿಲವನ್ನು ಚನ್ನಬಸವಣ್ಣಂಗೆ ತೋರಿ ನುಡಿವ ಪ್ರಸ್ಥಾವದ ವಚನ. ॥

ಕೆವರಿದ ತಲೆಯು ನಡೆವು ತೊನೆವ ಹಣೆಯು ಬುಗುಟಿನ ಕರಸ್ಥಲದ ಅನುಮಿಷದಿಂ ಬಹಿರಂಗದ ವದನ ತಪ್ಪಿ ಇದಿರುಗೊಯಿಲು ತಾಗಿ ಪೂರ್ಬೊಡೆದು ಕಣ್ದೆರೆದು ಕಿವಿ ಹರಿದು ಜೋಲುವ ರಕ್ತಧಾರೆ ಗಾಳಿಯು ಧೂಳಿಯು ಮಳೆಯು ಜಾರಿನ ಬೆನ್ನ ಬಾಸುಳದ ಎಡದ ಬದಿಯು ತಟ್ಟಿನ ಮುಳ್ಳುದರಹಿನ ಕಂಕುಳ ಸೀಳಂ ಕಂಡು ನೋಡುವ ಜನರು ಬೆರಗಾಗೆ ಪೊರವಾರಿನ ಮುಸಿಯು ದಿಗಂಬರದ ಬಣಗು ಸುರಿವುತ್ತ ಆಪ್ಯಾಯನವರತು ಬಿದ್ದು ಮಣಿಕಾಲೊಡೆದು ಹೊಸಹುಣ್ಣಿನ ರಕ್ತದ ಜೋಲುವ ಮುಂಗಾಲ ಕಣ್ಣು ಹೊಳೆದು ಕಣಕಾಲ ಸಂದು ತಪ್ಪಿ ಬಿರುಬೇನೆಯು ಎಡಹಿ ಬಟ್ಟೊಡೆದು ಗಾಯದ ಉರುಗು ಟೊಂಕದ ಬರುಗುಂಟನ ನೋಡಾ ಚನ್ನಬವಣ್ಣಾ. ಅತ್ಯಂತ ಮಲಿನ ಕೂಡಲಸಂಗಮದೇವರ ಕುರುಹು ವಿಪರೀತ ನೋಡುವಡೆ ಭಯಂಕರವಾಗಿದೆ ನೋಡಯ್ಯ ॥೪೮॥

ಇದಕ್ಕೆ ಚಿಕ್ಕದಣ್ಣಾಯಕರ ಪ್ರತ್ಯುತ್ತರ॥

ಆದಿಯಿಂದತ್ತತ್ತ ನೀನೆಅಯ್ಯ. ಅನಾದಿಯಿಂದತ್ತತ್ತ ನೀನೆ ಅಯ್ಯ. ಈ ಎರಡನು ಮೀರಿದ ಅತ್ಯತಿಷ್ಠದ್ದ ಶಾಂಗುಲನಾದನಯ್ಯ ಚತು

ಯುಗ ಸಹಸ್ರಾಣಿ ಎಂಬ ಶಂಕೆ ಯುಗಂಗಳ ಪವಣಿಸದೆಂದು ಕೆಸರ ಗಲ್ಲನಿಕ್ಕಿದರೆ ಮೇರುವ ನೆಲೆಗೊಳಿಸಿ ಅಂಡಜ ಉತ್ಪತ್ಯವಾಗದೆಂದು ಆತ ನಂತುವ ನೀನೆ ಬಲ್ಲೆ. ನಿನ್ನಂತುವನ್ನಾತನೆ ಬಲ್ಲ. ನಿಮ್ಮಿಬ್ಬರ ಮಹಿಮೆಯ ನಾನೆತ್ತ ಬಲ್ಲೆನಯ್ಯ ಕೂಡಲ ಚನ್ನಸಂಗಮದೇವಾ? ॥೪೯॥

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ॥

ಹುಟ್ಟಿತ್ತ ದ್ರವ್ಯವ ನರಿಯದ ಒಬ್ಬ ಬಡವಂಗೆ ಲಕ್ಷದ ಸಂಖ್ಯೆಯ ಧನ ಸಂಪತ್ತಾಗಲು, ಆ ಸಿರಿಯ ನೋಡಿ ಪರಿಣಾಮಿಸುವಂತೆ, ಕಾಳಗದ ಮುಖ ವನೆಂದು ಕಂಡರಿಯದ ಅರಸಿಂಗೆ ಒಬ್ಬ ಖಡ್ಗವುಳ್ಳ ಕುಮಾರ ಹುಟ್ಟಿ ಕಿಗ್ಗ ಡಲ ರಕ್ತದ ಹೊನಲಲ್ಲಿ ಮುಳುಗಾಡುವ ಕೊಳುಗುಳ ಕಂಡು ಪರಿಣಾ ಮಿಸುವಂತೆ, ನಾನು ಪರಿಣಾಮಿಸುತ್ತಿರ್ದೆನಯ್ಯ ಚನ್ನಬಸವಣ್ಣ ನೀನು ಕೂಡಲಸಂಗನ ಶರಣ ಪ್ರಭುದೇವರ ನಿಜವನರುಹಿದರೆ ॥೫೦॥

ಇಂತು ಬಸವರಾಜದೇವರು ಪ್ರಭುದೇವರ ನಿಲವು ಅತ್ಯಂತ ನಿರಾ ಮಯವಾಗಿದೆ ಎಂದು ನಿರೂಪಿಸಲು, ಆ ಪ್ರಭುದೇವರ ನಿಲವನಾರು ಆರಿ ಯರೆಂದು ಚಿಕ್ಕದಣ್ಣಾಯಕರು ಸ್ತುತಿಗೈದ ಪ್ರಸ್ಥಾವದ ವಚನ॥

ಕಾಲಿಲ್ಲವೆಂಬರಯ್ಯ ಪ್ರಭುದೇವರು ಸಂಸಾರ ಸೂತಕವ ಮೆಟ್ಟ ರಾಗಿ. ಕೈಯಿಲ್ಲವೆಂಬರಯ್ಯ ಪ್ರಭುದೇವರು ಪರಧನವ ಕೊಳ್ಳರಾಗಿ. ಕಿವಿ ಯಿಲ್ಲವೆಂಬರಯ್ಯ ಪ್ರಭುದೇವರು ಅನ್ಯವ ಕೇಳರಾಗಿ. ಮೂಗಿಲ್ಲವೆಂಬರಯ್ಯ ಪ್ರಭುದೇವರು ದುರ್ಗಂಧಕ್ಕೆಳಸರಾಗಿ. ಎದೆ ಇಲ್ಲವೆಂಬರಯ್ಯ ಪ್ರಭುದೇ ವರು ಪರಸ್ತ್ರೀಯರನಪ್ಪರಾಗಿ. ಇದು ಕಾರಣ ಕೂಡಲಚನ್ನಸಂಗಯ್ಯ ನಲ್ಲಿ ಪ್ರಭುದೇವರು ಒಕ್ಕಮಿಕ್ಕ ಪ್ರಸಾದವ ಕೊಂಡು ನಾನು ಧನ್ಯನಾ ದೆನು ಕಾಣಾ ಸಂಗನಬಸವಣ್ಣಾ ॥೫೧॥

ವುತ್ತಂ॥ ಚಿಕ್ಕದಣ್ಣಾಯಕರು ಪ್ರಭುದೇವರ ಬಸವರಾಜದೇವರ ಪೂರ್ವಾಪರ ಸಂಬಂಧಮಂ ತಿಳಿಯ ಹೇಳಿದ ಪ್ರಸ್ಥಾವದ ವಚನ॥

ಕೃತಯುಗದಲ್ಲಿ ದೇವಾಂಗನೆಂಬ ಗಣೇಶ್ವರನಾಗಿ ನೀವು ಬಂದು ಆರಾಧಿಸುವಲ್ಲಿ ಸ್ಥೂಲಕಾಯನೆಂಬ ಜಂಗಮವಾಗಿ ಬಂದು ಲಿಂಗಾರ್ಚ ನೆಯ ಮಾಡಿ ಹೋದನು. ಅದರ ಕ್ರಿಯಾಂಗವನು ಮರೆದೆಯಲ್ಲ ಬಸ ವಣ್ಣ! ತ್ರೇತಾಯುಗದಲ್ಲಿ ಘಂಟಾಕರ್ಣನೆಂಬ ಗಣೇಶ್ವರನಾಗಿ ಬಂದು ಆರಾಧಿಸುವಲ್ಲಿ ಶೂನ್ಯಕಾಯನೆಂಬ ಜಂಗಮವಾಗಿ ಬಂದು ಲಿಂಗಾರ್ಚ ನೆಯ ಮಾಡಿ ಹೋದನು. ಅದರ ಕ್ರಿಯಾಂಗವನು ಮರೆದೆಯಲ್ಲ ಬಸ

ವಣ್ಣಾ! ದ್ವಾಪರದಲ್ಲಿ ನೀನು ವೃಷಭನೆಂಬ ಗಣೇಶ್ವರನಾಗಿ ಬಂದು ಆರಾಧಿಸುವಲ್ಲಿ ಅನುಮಿಷನೆಂಬ ಜಂಗಮವಾಗಿ ಬಂದು ಲಿಂಗಾರ್ಚನೆಯ ಮಾಡಿ ಹೋದನು. ಅದರ ಕ್ರಿಯಾಂಗವನು ಮರೆದೆಯಲ್ಲ ಬಸವಣ್ಣ. ಕಲಿಯುಗದಲ್ಲಿ ನೀನು ಬಸವಣ್ಣನೆಂಬ ಗಣೇಶ್ವರನಾಗಿ ಬಂದು ಆರಾಧಿಸುವಲ್ಲಿ ಪ್ರಭುದೇವರೆಂಬ ಜಂಗಮವಾಗಿ ಬಂದು ಲಿಂಗಾರ್ಚನೆಯ ಮಾಡ ಬಂದ ಕಾರಣ ಇಂತೀ ದೇವ ಭಕ್ತನೆಂಬ ನಾಮ ನಾಟಕ ಬಿನ್ನಾಣವಲ್ಲದೆ ಬೇರೆಂದು ಕಂಡವರಿಗೆ ನರಕ ತಪ್ಪದು ಕೂಡಲ ಚನ್ನಸಂಗಮದೇವಾ ॥೫೨॥

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ॥

ಇದ್ದ ಪರಿ ಎಂತುಟದೆ ನೋಡಯ್ಯ. ನಿಂದಡೆ ನೆಳಲಿಲ್ಲ. ನಡೆದರೆ ಹೆಜ್ಜೆ ಇಲ್ಲ. ಭೂತಳದೊಳಗೆ ಕಂಡುದಿಲ್ಲ. ಇಂತಪ್ಪ ಆ ನಿಯಮದ ಸುಳುಹು ಅಹುದಹುದು. ಅರಿದರಿದು ಜಂಗಮಸ್ಥಲ ಇಂತುಟಲ್ಲದೆ ಎಂತುಟು ಹೇಳಾ? ಆಪ್ಯಾಯನದ ಅರಿಕೆಯ ಹೊಲಬ ಕಾಣಬಾರದು. ಉಣಿಸಿದರೆ ಉಣ್ಣನೋ ಉಂಬನೋ? ಉಂಬಂಥವರಾದಡೆ ನೀಡುವೆ ಕೂಡಲ ಸಂಗಮದೇವರಿಗೆ ಚನ್ನಬಸವಣ್ಣ ನೀನಹುದಹುದೆನಲಿಕ್ಕೆ ॥೫೩॥

ಇದಕ್ಕೆ ಚನ್ನಬಸವರಾಜದೇವರ ಪ್ರತ್ಯುತ್ತರ॥

ಅರಸುವಂಗೆ ಅರಕೆ ತಾನಹುದು ದೇವಾ. ಬಯಸುವಂಗೆ ಬಯಕೆ ತಾನಹುದು ದೇವಾ. ನೀವು ಭಾವಿಸಿದಂತೆ ಅಲ್ಲದೆ ಬೇರೊಂದಾಗಬಲ್ಲುದೆ? ಈರೇಳು ಭುವನದ ಸ್ಥಾಣ್ಯ ಪ್ರೇರಣೆಗಳೆಲ್ಲ ನಿಮ್ಮಿಂದಲಾದವಾಗಿ ನಿಮ್ಮಿಂದ ಲಹುದಾಗದೆಂಬ ಸಂದೇಹಉಂಟೆ ಬಸವಣ್ಣ? ನಿಮ್ಮಡಿಗಳೆಂದಂತೆ ನೆನದಂತೆ ನೋಡಿದಂತೆ ತಪ್ಪದು ಕೂಡಲ ಚನ್ನಸಂಗಮದೇವರು ಸಾಕ್ಷಿಯಾಗಿ ಪ್ರಭುವಿನಾಣೆ. ಕಟ್ಟು ಗುಡಿಯನು ॥

ಇದಕ್ಕೆ ಬಸವರಾಜ ದೇವರ ಉತ್ತರ॥

ಬಡವಾಗಿಲ ಪೌಳಿಯ ಭರವಸದಿಂ ಪೊಕ್ಕು ಪಶ್ಚಿಮದ್ವಾರದ ಧವಳಾರವಂ ಪಶ್ಚಿಮದಿ ಪೊಕ್ಕು ತ್ರಿವಿಧ ಗತಿಯ ಶೂನ್ಯ ಸಿಂಹಾಸನದ ಮೇಲೆ ತರಹರವಾದಡೆ ನಂಬುವುದೆನ್ನ ಮನವು. ಕೂಡಲ ಸಂಗಮದೇವರು ಸಾಕ್ಷಿಯಾಗಿ ನೀನು ನಮ್ಮ ಕೋಪಿಸಿದರೆ ಕೋಪಿಸು ಚನ್ನಬಸವಣ್ಣಾ ॥೫೫॥

ಇದಕ್ಕೆ ಚಿಕ್ಕ ದಣ್ಣಾಯಕರ ಉತ್ತರ.

ದೇವ ದೇವ ಮಹಾಪ್ರಸಾದ ನಿಮ್ಮಡಿಗಳಿಗೆ ಉತ್ತರವ ಕೊಡಲಮ್ಮೆನಯ್ಯ. ಇದ ಬಲ್ಲೆನೆಂಬ ಬಲುಮೆಯ ದೇಹ ನಾನಲ್ಲವಾಗಿ ಆನು ಭಕ್ತನೆಂಬ ಭಕ್ತಿ ಶೂನ್ಯನಲ್ಲವಾಗಿ ಆನು ಬಲ್ಲೆನೆಂಬ ನುಡಿಯಿಂ ಸಿರಿದು ಸುಡದೆ? ತಪ್ಪೆನ್ನದು ಕ್ಷಮೆ ನಿಮ್ಮದ. ಕೂಡಲ ಚನ್ನಸಂಗಮ ದೇವರು ಸಾಕ್ಷಿಯಾಗಿ ಕೊಲ್ಲು ಕಾಯಿ ನಿಮ್ಮ ಧರ್ಮ॥೫೬॥

ಇದಕ್ಕೆ ಬಸವರಾಜ ದೇವರ ಪ್ರತ್ಯುತ್ತರ.

ಪುಣ್ಯಗಳಹ ಕಾಲಕ್ಕೆ ಹಗೆಗಳು ತನ್ನವರಹರು. ಪುಣ್ಯಗಳಹ ಕಾಲಕ್ಕೆ ಮಣ್ಣು ಹೊನ್ನಹುದು. ಪುಣ್ಯಗಳಹ ಕಾಲಕ್ಕೆ ಹಾವು ಲ್ಯಾವಳವಹುದು. ಪುಣ್ಯಗಳಹ ಕಾಲಕ್ಕೆ ಅನ್ಯರು ತನ್ನವರಹರು. ಇಂತಪ್ಪ ಪುಣ್ಯಗಳೆಲ್ಲವು ಭಕ್ತಿಯಿಂದಲಹುದು. ಭಕ್ತಿ ಕೆಟ್ಟರೆ ಪುಣ್ಯವು ಕೆಡುವದು. ಇಂತಪ್ಪ ಭಕ್ತಿಯ ಪುಣ್ಯವು ಚನ್ನಬಸವಣ್ಣನಿಗುಂಟಾಗಿ ನಾನು ಬದುಕಿದೆನಯ್ಯ ಕೂಡಲಸಂಗಮದೇವಾ. ॥೫೭॥

ಇಂತು ಬಸವರಾಜದೇವರು ಚಿಕ್ಕದಣ್ಣಾಯಕರು ಪ್ರಸಂಗಮಂ ಮಾಡುತ್ತ ಪ್ರಭುದೇವರ ತೋರಿ ನುಡಿವುತ್ತಿರಲು, ಆ ಪ್ರಸ್ತಾವದೊಳು ಸೊಡ್ಡಳ ಬಾಚರಸರು ಹೇಳಿದ ವಚನ॥

ಅಟ್ಟಿ ಹಾವುತಲೊಮ್ಮೆ ಹೋಗಿ ನಿಲುವುತಲೊಮ್ಮೆ ಬೀಗಿ ನಗುತಲೊಮ್ಮೆ ಮರುಳನಂತೆ ಮಂಕಿನಂತೆ ದೆಸೆದೆಸೆಯ ನೋಡುತ್ತ, ಅಂಗಡಿ ರಾಜಬೀದಿಗಳ ಶೃಂಗಾರಂಗಳ ನಲಿನಲಿದು ನೋಡುತ್ತೆ, ಇತ್ತರದ ಭದ್ರದ ಮೇಲೆ ನಾಂಟ್ಯವನಾಡುವವರ ನೋಡಿ ನಗುತ್ತ ನೋಡುವ ಗಾವಳಿಯ ಜನರನಟ್ಟಿ ಹೊಯಿವಂತೆ ಹರಿವುತ್ತ ಗುಡಿ ಇಕ್ಕಿದಂತಿರೆ ನಿಂದರೆ ಬೀಳುತ್ತ ನಾಂಟ್ಯವನಾಡುವವರಿಗೆ ಇದಿರಾಗಿ ಮರಳಿಯಾಡುತ್ತ ಹಾಡುತ್ತ ಜೈವುತ್ತ ಕೆರಳಿ ನುಡಿವುತ್ತ ವಾದ್ಯ ಮೇಳಾಪಮಂ ಕಂಡು ಆಳಿಗೊಂಡು ನಗುತ್ತ ಹಸ್ತವನಾಡಿಸಿ ಗತಿಯನುಚ್ಚರಿಸಿ ಕೈಯ್ಯೊಡನೆ ಮರುಳಾಟವನಾಡುತ್ತೆ ಮೆಲ್ಲ ಮೆಲ್ಲನೆ ನೋಡಿ ನಿಂದು ನಗುತ್ತ ಎಂದಿನ ಸುಳುಹಿನೊಳಗಲ್ಲದ ಸುಳುಹು ಬಸವಣ್ಣ ಸೊಡ್ಡಳನಲ್ಲದೆ ಮಾಣನೂ. ॥೫೮॥

ಇದಕ್ಕೆ ಮಡಿವಾಳತಂದೆಗಳ ವಚನ॥

ಬಾಲನಹನೊಮ್ಮೆ, ಲೋಲನಹನೊಮ್ಮೆ, ವೃದ್ಧನಹನೊಮ್ಮೆ, ಮತ್ತನಹನೊಮ್ಮೆ, ಹೊಳೆದು ತೋರುವನೊಮ್ಮೆ, ತೋರಿಯಡಗುವನೊಮ್ಮೆ, ವಿಶ್ವವೆಲ್ಲವ ನೋಡಿ ಬೆರಗಾಗುತ್ತಿರೆ ಇದ್ದ ಠಾವಿನಲ್ಲಿದ್ದು ಮುಂದೆ ತೋರುತ್ತಿರಲು, ಸಾಂಪ್ರದಾಯದವರು ಒಡನೊಡನೆ ಹರಿದು ಬಂದು ಹೇಳುತ್ತಿರಲು, ಹರಿದು ಬಂದು ಹತ್ತೆ ಸೇರಿದ ಬಸವನ ಮಹಾಮನೆಯ ತಲೆ ಎತ್ತಿ ನೋಡಿದ ಮುಗಿಲ ಮೂಲೆದಪ್ಪದೆ ಕಸುರಿಯ ಗೆಲಸದ ನಂದಿಯ ಮಂಟಪಂಗಳ ಮೇಲುಪ್ಪರಿಗೆಯ ಭದ್ರಂಗಳ ನೋಡ ತಲೆದೂಗುತ್ತ ಕಲಿದೇವರದೇವ ಬಸವನ ಮಹಾಮನೆಯ ಪ್ರದಕ್ಷಿಣವ ಬಂದು ದ್ವಾರವಟ್ಟದ ಮುಂದೆ ನಿಂದಿರ್ದನು. ॥೫೯॥

ಇತಿ ಶ್ರೀಮತ್ಸಕಲ ಗಣ ಪುರಾತನರೊಳ್ ಪ್ರಭುದೇವರ ಮಹಾನುಭಾವ ಸದ್ಗೋಷ್ಠಿಯಂ ಮಾಡಿದ ಶೂನ್ಯಸಂಪಾದನೆಯೊಳ್ ಪ್ರಭುದೇವರು ಸವ್ವಾಲಕ್ಷಪರ್ವತದಿಂದೆ ಕಲ್ಯಾಣಕ್ಕೆ ಬಂದುದು ಸಪ್ತದಶೋಪದೇಶ ಸಮಾಪ್ತ.



# ಪ್ರಭುದೇವರು ಶೂನ್ಯಪೀಠ ಮೂರ್ತ ಸಂಪಾದನೆ.

( ಅಷ್ಟಾದಶೋಪದೇಶ. )

ಕಂದ॥ ಪ್ರಭು ಶೂನ್ಯ ವಿಷ್ಟರದೊಳು । ವಿಭವದಿ ಮಂಡಿಸಿ ಸಮಸ್ತ ಶರಣರ ಕರದಿಂ । ಶುಭದಿಂದರ್ಚಿಸಿಕೊಂಡುದ । ತ್ರಿಭುವನಮರಿಯಲ್ಕೆ ಪೇಳ್ವೆನತಿಕೌತುಕದಿಂ ॥

ಅದೆಂತೆಂದೊಡಾ ಪ್ರಭುದೇವರು ಬಸವರಾಜದೇವರ ಅರಮನೆಯಂ ಪೊಕ್ಕು ಆ ಬಸವೇಶ್ವರನ ಮಹಾಮನೆಯ ಚಿತ್ರಮಯದ ಭಾಸುರ ತೇಜಂಗಳನೊಳಕೊಂಡು ಹೊಂಭಿತ್ತಿಗಳ ರತ್ನದೆನೆಗಳಂ ನೆಲೆ ನೆಲೆಯ ಮಂಟಪಂಗಳಂ ನೀಲದುಪ್ಪರಿಗೆಗಳ್ನಿಲೆ ಮಾಣಿಕ್ಯದ ಕಲಶಂಗಳಿಂದೊಪ್ಪುವತಿ ಗೋಪುರಂಗಳಂ ವಜ್ರದಾರಿಯ ಭಿತ್ತಿಗಳೋಳ್ಮೆರೆದ ಬಹುವಿಧದ ಚಿತ್ರಂಗಳಿಂ ಕಣ್ಗೊಪ್ಪುವ ಪೊಂಜಗಲಿಗಳ್ ವಿರಾಜಸುವತಿ ನವರತ್ನಂಗಳೋಳ್ಕೂಡಿದ ರಂಗಮಂಟಪದಿಂ ಪಚ್ಚೆಯ ಕಂಬಂಗಳಿಂ ಪುಷ್ಯರಾಗದ ತೊಲೆಗಳಿಂದೆಸೆವ ಶಶಿಗಲ್ಗಳ್ಕಿರುಜಂತೆಗಳಿಂದೆ ಬಣ್ಣದ ಲೋವೆಗಳಿಂ ತೋರ್ಪ ಬಳ್ಳಿಮಿಂಚುಗಳಿಂಪ ಹೊಳೆಯುತಿರ್ಪ ಸೂರ್ಯಕಾಂತದಂಗಜಹಸ್ತಂಗಳಿಂ ನೀಲದ ನೆಲೆಗಟ್ಟುಗಳಿಂದಚ್ಚುಗಲ್ಸಂದ ಕೊನ್ನವಾಡಂಗಳ ಸಾಲ್ಗಳಿಂದವರೋಳ್ನಿಂದ ಅಮೃತದ ಕೊಂಡಂಗಳಿಂ ಮತ್ತಂ ಕಿರುವಾಡವೋಳ್ಗಂಧವಟ್ಟಲಗಳಿಂ ಮತ್ತಂ ಪೆರ್ವೋಡಂಗಳೊಳು ಪೂವೆಟ್ಟಿಗೆಗಳಂ ಭಸಿತದ ಭರಣಿಗಳಿಂ ರುದ್ರಾಕ್ಷಿಯ ಮಾಲೆಗಳಿಂದೆ ಹರದುಪಕರಣಂಗಳ ಎಡೆಯಾಡುವ ಶಿವಶರಣರ ಪ್ರತಿಬಿಂಬಗಳು ಮಣಿಸ್ತಂಭಂಗಳೊಳು ಭಿತ್ತಿಗಳೊಳು ಮೇಲೆ ಕವಾಟಂಗಳೊಳು ಸಹಸ್ರಮದಾಗಿ ತೋರಲು ಕಂಡತಿ ಹರುಷಂಗೊಳುತ್ತಿಹ್ಪ ಶಿವಸುಖಿಗಳ ಪಚ್ಚೆಯ ನೆಲಸಮದೊಳ್ ಪಾದಮಂ ತೊಳೆದುರ್ ಪರಿವಾರಿಯು ಮರಸಿರೆ ಬೀಳುವ ಮುಗ್ಧರಂ ಕಂಡುರೆ ಗಹಗಹಿಸುವ ಶರಣರ ಯುವರೆ ಮರಳ್ದಿದ್ದಾ ಪಚ್ಚೆಯ ನೆಲನಂ ಕಾಣುತ ಮೊದಲಾ ಜಲವೆಂದೆ ಸಿರಿವಿಡಿದು, ಲಿವಿಸುತ್ತೈತಪ್ಪವಂ ಕಾಣುತ್ತ ಕೈವೊಯ್ದಿಂಚರದಿಂ ನಗುವತಿ ಮುಕ್ತಾಂಗನೆಯರುಂ ಮತ್ತಂ ಭವನದ ದ್ವಾರವಟ್ಟದೊಳು ರುದ್ರಾಕ್ಷಿಯ ಸೂಸಕಗಳ ಮುತ್ತಿನ ತೋರಣಗಳ ರತ್ನದ ಗೊಂಡೆಯ ಥಳಥಳಿಸುವ ಪೊನ್ನ ಕವಾಟಂಗಳ

ಕನ್ನಡಿಕಲಶಂಗಳ ಪಿಡಿದಾರತಿಯನೆತ್ತುವ ಕನ್ನಿಕೆಯರ ಮತ್ತಂ ಭವನದ ಇಕ್ಕೆಲದೊಳ್ ಮಧ್ಯಮಂಟಪಾಗ್ರದೊಳ್ ಶಿವಲಿಂಗಾರ್ಚನೆಯ ಮಾಡುವ ಬಸವ ಸ್ತುತಿಸುವ ವಚನವ ನೋಡುವ, ಗದ್ಯಮಂ ಕೇಳುವ, ಅರ್ಥಮಂ ಪೇಳುವ. ಹಾಡುವ ಆದ್ಯರ ಅನುಭಾವಮಂ ಲಾಲಿಸುವ, ರಹಸ್ಯವನು ಚ್ಚರಿಸರ, ಹಾಡುವ ಗಾನರ, ಆಡುವ ಪಾತ್ರದ ಕೊಂಡಾಡುವ ಭಟ್ಟಳಿಗಳಿಂ ಮೆರೆವತಿ ಬಸವೇಶ್ವರನ ಹೆಮ್ಮನೆಯಂ ಪ್ರಭುದೇವರು ಕಂಡು, ಹರುಷಂದಳೆದು ಆನಂದದ ಶರಧಿಯ ಕೂಡುತ ನಲಿನಲಿದಾಡುತ ಇಕ್ಕೆಲದೊಳ್ಮೆರೆವತಿಭದ್ರ ಮಂಟಪಗಳ ಆ ಭಿತ್ತಿಯ ಆ ತೆನೆಗಳ ಆ ಗೋಪುರಗಳ ಆ ಕಲಶಮನಾ ತೋರಣಂಗಳ ಸೀಕ್ಷಿಸುತ್ತಿರೆ ಸ್ತುತಿಸುತ್ತುಘೆಯೆನುತ್ತಿಹ ಪುಷ್ಪಾಂಜಲಿಯಂ ಮಾಡುವ ಆರತಿಯನೆತ್ತುವ ಶಿವಭಕ್ತ ರುದ್ರಕನ್ನೆಯರ ಅತ್ಯಂತ ಸ್ತೋತ್ರಮಂ ಮಾಡುವ ನಿಜಘೋಷದೊಳ್ ಶೂನ್ಯಸಿಂಹಾಸನಮನಡರ್ದು ಮೇಲೆ ಮೂರ್ತಗೊಳುವ ಪ್ರಸ್ಥಾವದ ವಚನ॥

ಮಲೆವುತ್ತ ಮೆಟ್ಟುತ್ತ ತನುವನೊಲೆವುತ್ತ ತಲೆದೂಗಿ ಮನವನಲ್ಲಾಡಿದ ಭುವನ ಭುವನೇಶ್ವರನ ಹಿಂದು ಮುಂದು ನೋಡುತ್ತೆ ನಗುತ್ತೆ ಮುತ್ತಿನ ತೋರಣಕ್ಕೆ ಹಾಯ್ಸಿ ಬಸವನರಮನೆಯ ಹೊಕ್ಕನು ಕಲಿದೇವರ ದೇವನು ॥೧॥

ಮತ್ತಂ॥ ಶೂನ್ಯಸಿಂಹಾಸನದ ಮೇಲೆ ಮೂರ್ತಿಗೊಂಡ ಪ್ರಸ್ಥಾವದ ವಚನ॥

ಬಲಕ್ಕೆ ಮುರಿದನು. ಪಾಳೆಯ ಉತ್ತರ ಬಾಗಿಲಲ್ಲಿ ತಲೆವಾಗಿ ಹೊಕ್ಕ ಗತಿಯ ಪವಣಿನ ಧವಳಾರಮಪ್ಪ ಪಶ್ಚಿಮ ದ್ವಾರದಿಂ ತ್ರಿವಿಧ ಗತಿಯ ಶೂನ್ಯ ಸಿಂಹಾಸನದ ಮೇಲೆ ಮುಕ್ತಕೇಶವ ಪರಮ ಗುರುರಾಜ ಸೇರಿದ ಕಲಿದೇವರ ದೇವನೂ ॥೨॥

ಶೂನ್ಯಸಿಂಹಾಸನದ ಮೇಲೆ ಪ್ರಭುದೇವರು ಮೂರ್ತಿಗೊಳ್ಳಲು ಬಸವರಾಜದೇವರು ನಮಸ್ಕರಿಸಿದ ವಚನ.॥

ಬಟ್ಟ ಬಯಲಲಿ ಒಂದು ತಲೆಯಿಲ್ಲದಾನೆ ಇದ್ದಿತ್ತು. ಆನೆ ಬಂದು ಆನೆ ನುಂಗಿ ತಾನೆ ಅಳಿಯಿತ್ತು. ಇಂತು ಅಂತರಂಗವಿಲ್ಲದ ಒಳಗು ಅವಲಂಬವಿಲ್ಲದ ಹೊರಗು ನೋಡಲಳವಲ್ಲದ ಕುಸುಮದ ಗದ್ದುಗೆಯಲ್ಲಿ ಒಡಲಿಲ್ಲದ ಘನವು ಮೂರ್ತಿಗೊಂಡರೆ ವಿಚಿತ್ರವಾಯಿತ್ತು ಜಗವೆಲ್ಲ. ಕೂಡಲ

ಸಂಗಮದೇವರ ಶರಣ ಪ್ರಭುದೇವರ ಶ್ರೀಪಾದಕ್ಕೆ ನಮೋ ನಮೋ ಎಂಬೆನು. ||೩||

ಅಲ್ಲಿ ಹಡಪದಪ್ಪಣ್ಣಗಳ ವಚನ. ||

ನೆಲನ ಹೊದ್ದದು. ಆಕಾಶ ಮುಟ್ಟದು. ಎಡೆಯಲೊಂದು ರೂಪಿಲ್ಲ. ಭಾವವೆಂಬೆ. ಜ್ಞಾನವೆ ನಿವಾಸ. ನಿಲವೆ ಭಿತ್ತಿ. ನಿರಹಂಕಾರವೆ ಶಿಖರಿ ಮಹದಂಕಾರವೆ ಶೃಂಗಾರ. ಕಳಸ ಪತ್ರದ ನವ ಕಮಲ ಸಿಂಹಾಸನದ ನಿತ್ಯವೆ ಮಲಗು. ನಿಜವೆಂಬ ವಿಸ್ತಾರದಲ್ಲಿ ನಿತ್ಯ ನಿರಾಳವೆಂಬ ಮಹ ಘನವು ಬಂದು ಮೂರ್ತಿಗೊಳ್ಳಲು ಕಾಯದ ಕಂಗೆ ಕಾಣಬಾರದು. ಮನದ ಮುಂದೆ ಅಳವಡದು. ಭಾವದ ಬಗೆಗೆ ವೈದೋರದು. ಬಸವ ಪ್ರಿಯ ಕೂಡಲ ಚನ್ನಸಂಗಯ್ಯನಲ್ಲಿ ಪ್ರಭುದೇವರ ಶ್ರೀಪಾದಕ್ಕೆ ನಮೋ ನಮೋ ಎಂಬೆನು. ||೪||

ಅಲ್ಲಿ ಸೊಡ್ಡಳ ಬಾಚರಸರ ವಚನ. ||

ಆಕಾರವಿಲ್ಲದ ನಿರಾಕಾರ ಮಠಕ್ಕೆ ನಿರಾಳವೆಂಬ ಗಂಡ ಕುಳ್ಳಿರಲು, ಮೂವರು ಹೆಣ್ಮಕ್ಕಳು ಸೇವೆಯ ಮಾಡುವರು. ಇಬ್ಬರು ಸಂಗಮ ಮಾಡುತ್ತಿಪ್ಪರು. ಒಬ್ಬಾಕೆ ಪುರುಷನ ನುಂಗಿಕೊಂಡಿಪ್ಪಳು. ಇವರರುವರ ಕೂಡಿ ಹೊಯಿಕೈಯಾಗಿ ಇಪ್ಪನ ಕಂಡು ಆನು ಪ್ರಭುವ ದೇವರೆಂದರಿದು ಆತನ ನಿಜಪಾದಕ್ಕೆರಗಿ ಎನ್ನ ಭವವ ಹರಿದೆನು ಮಹದಾನಿ ಸೊಡ್ಡಳನ ಕಂಡು. ಕಡುಸುಖವ ಉಪಮಿಸಬಾರದು. ||೫||

ಇದಕ್ಕೆ ಬಸವ ರಾಜ ದೇವರ ವಚನ. ಎನ್ನ ಗಂಡ ಬರಬೇಕೆಂದು ಆನು ಎನ್ನಂತರಂಗವೆಂಬ ಮನೆಯ ತೆರಹು ಮಾಡಿ, ಅಷ್ಟದಳವೆಂಬ ಓವರಿಯೊಳಗೆ ನಿಜ ನಿವಾಸವೆಂಬ ಹಾಸುಗೆಯ ಹಾಸಿ, ಧ್ಯಾನವೆಂಬ ಮೇಲುಕಟ್ಟ ಕಟ್ಟಿ, ಜ್ಞಾನವೆಂಬ ದೀಪಮಂ ಬೆಳಗಿಸಿ, ಕ್ರಿಯವೆಂಬ ಉಪಚಾರಂಗಳ ಹರಹಿಕೊಂಡು, ಪಶ್ಚಿಮ ದ್ವಾರವೆಂಬ ಬಾಗಿಲು ತೆರೆದು, ಕಂಗಳೇ ಪ್ರಾಣವಾಗಿ ಬರವ ಹಾರೈಸುತ್ತಿರ್ದೆನಯ್ಯ! ನಾನು ಬಾರೆನೆಂದುಮ್ಮಳಿಸಿಹಳೆಂದು ತಾನೆ ಬಂದು ಎನ್ನ ಹೃದಯ ಸಿಂಹಾಸನದ ಮೇಲೆ ಮೂರ್ತಿಗೊಂಡರೆನ್ನ ಮನದ ಬಯಕೆ ಸ್ವಯವಾಯಿತ್ತು. ಹಿಂದೆ ಹನ್ನೆರಡು ವರುಷದಲ್ಲಿರ್ದ ಚಿಂತೆ ಇಂದು ನಿಶ್ಚಿಂತವಾಯಿತ್ತು. ಕೂಡಲ ಸಂಗಮ ದೇವರು ಕೃಪಾಮೂರ್ತಿ ವರಾನ ಕಾರಣ ನಾನ ಬದುಕಿದೆನು. ||೬||

ಮತ್ತಂ॥ ಬಸವರಾಜದೇವರು ಪಾದಾರ್ಚನೆಯ ಮಾಡುವ ಪ್ರಸ್ತಾವದ ವಚನ।

ಎನ್ನ ಮನವು ನಿಮ್ಮ ಚರಣವ ಕಂಡ ಬಳಿಕ ಬೆರಸಿಯಲ್ಲದೆ ಅಗಲಿ ಸೈರಿಸಲಾರೆನಯ್ಯಾ! ತ್ರಾಹಿ! ತ್ರಾಹಿ! ತ್ರಾಹಿ! ಘನಮಹಿಮ, ನಿಮ್ಮ ಪಾದಾರ್ಚನೆಯೆ ಎನ್ನ ಪರಮಾನಂದ ಜಲವ ತುಂಬುವದಯ್ಯ. ಪೂಜೆಯ ಮಾಡುವರೆ ಎನ್ನಹೃದಯ ಕಮಲವನಲರಿಸುವೆ. ಆರತಿಯಿಂದ ಆರತಿಯನೆತ್ತುವೆ. ಎನ್ನ ಮಹಪ್ರಕಾಶದ ಧೂಪವಬೀಸುವೆ. ಎನ್ನ ಸ್ವಾನುಭಾವದ ವಸೀವೆ. ಈ ತೆರನಲ್ಲದೆ ಅಷ್ಟವಿಧಾರ್ಚನೆ ಷೊಡಶೋಪ ಚಾರವೆಂಬುದಕ್ಕೆ ಬೇರೆ ತೆರನ ಕಾಣೆನಯ್ಯ. ಕೂಡಲ ಸಂಗಮ ದೇವಯ್ಯ ಪ್ರಭುವೆನ್ನ ಪ್ರಾಣಲಿಂಗವೆಂಬುದು ಎನಗಿಂದು ಕಾಣಬಂದಿತು ನೋಡಯ್ಯ ॥೭॥

ಮತ್ತಂ ದರುಶನದ ಸುಖಾನಂದದ ವಚನ॥

ನಿಮ್ಮ ನೋಟವನಂತಸುಖವು ನಿಮ್ಮ ಕೂಟ ಪರಮ ಸುಖವು. ಅಷ ಕೋಟಿ ರೋಮಂಗಳೆಲ್ಲ ಕಂಗಳಾಗಿ ನೋಡುತ್ತಿದ್ದೆನು ಕೂಡಲ ಸಂಗಮದೇವಯ್ಯ! ನಿಮ್ಮ ನೋಡಿ ನೋಡಿ ಎನ್ನ ಮನಪಲ್ಲಿ ರತಿ ಹುಟ್ಟಿ ನಿಮಿರ್ದವೆನ್ನ ಕಂಗಳು ॥೮॥

ಮತ್ತಂ ಎನ್ನ ವಚನದಲ್ಲಿ ನಾಮಾಮೃತವ ತುಂಬಿ ಎನ್ನ ನಯನದಲ್ಲಿ ಮೂರುತಿಯ ತುಂಬಿ, ಎನ್ನ ಮನದಲ್ಲಿ ನಿಮ್ಮ ನೆನಹು ತುಂಬಿ, ಎನ್ನ ಕಿವಿಯಲ್ಲಿ ನಿಮ್ಮ ಕೀರ್ತಿಯ ತುಂಬಿ ಕೂಡಲಸಂಗಮದೇವ ನಿಮ್ಮ ಚರಣ ಕಮಲದೊಳಗಾನು ತುಂಬಿ ॥೯॥

ಮತ್ತಂ ಕಂಡ ಕನಸು ನಿಧಾನವ ಕಂಡೆನಯ್ಯ. ಬಿಡಲಾರದ ನಿಧಾನವ ಕಂಡೆನಯ್ಯ. ಕೂಡಲ ಸಂಗಯ್ಯನೆಂಬ ನಿಧಾನವ ಕಂಡು ಬಿಡಲಾರೆನಯ್ಯ ॥೧೦॥

ಮತ್ತಂ, ಕಾಣಬಾರದ ವಸ್ತು ಕೈ ಸೇರಿತಯ್ಯ ಆನಂದದಿಂದ ಆಡುವೆ. ಹಾಡುವೆ. ಎನ್ನ ಕಣ್ಣ ತುಂಬ ನೋಡುವೆ. ಎನ್ನ ಮನ ಒಲಿದು ಭಕ್ತಿಯ ಮಾಡುವೆ ಕೂಡಲ ಸಂಗಯ್ಯ ನಿನಗೆ. ॥೧೧॥

ಮತ್ತಂ, ಆಡಿ ಕಾಲು ದಣಿಯವು. ನೋಡಿ ಕಣ್ಣು ದಣಿಯವು, ಹಾಡಿ ಮನ ದಣಿಯದಿನ್ನೇವೆನಿನ್ನೇವೆನಯ್ಯ? ನಿಮ್ಮುವ ಕೈವಮುಟ್ಟಿ ಪೂಜಿಸಿ ಮನ

ದಣಿಯಲ್ಲೊಲ್ಲದಿನ್ನೇವೆ ನಿನ್ನೇವೆನಯ್ಯ? ಕೂಡಲ ಸಂಗಮದೇವ ನಿಮ್ಮ ಉದರವ ಬಗಿದು ಹೋಗುವ ಭರವೆನಗೆ ॥೧೨।

ಇಂತು ಪ್ರಭುದೇವರು ಶೂನ್ಯ ಸಿಂಹಾಸನದ ಮೇಲೆ ಮೂರ್ತಿಗೊಂಡಿರಲು ಬಸವರಾಜದೇವರು ಪರಮಾನಂದಯುಕ್ತವಾದ ಸದ್ಭಕ್ತಿಯಿಂದೆ ಪ್ರಭುದೇವರ ಪೂಜಿಸಿ ಆಡಿ ಹಾಡಿ ಓಲಾಡುತ್ತಿರಲು ಇತ್ತಲು ಆರೋಗಣೆಗೆ ಬಂದು ಕುಳ್ಳಿರ್ದ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮರೆಲ್ಲರು ಕ್ರೋಧದಿಂದ ಬಸವರಾಜದೇವರ ಮೇಲು ಪ್ರಭುದೇವರ ಮೇಲೆಯು ಡಂಗುರವನಿಕ್ಕಿ ಎದ್ದು ಹೋದ ಪ್ರಸ್ಥಾವದ ವಚನ॥

ಅರಳು ಗಂಗಳವರಿಗೆ ಹರಳು ಗಂಗಳವರು ಸೈರಿಸದಂತೆ, ತುರುಬುಳ್ಳವರಿಗೆ ಬರಿಮಂಡೆಯವರು ಸೈರಿಸದಂತೆ, ಅರಸನ ಕಂಡು ಪುರುಷನ ಮರೆದಂತೆ, ಮಾಡಿದನೀ ವ್ರತಗೇಡಿ ಬಸವನು. ಮಹೇಂದ್ರ ಜಾಲಿಗನೊಬ್ಬನ ಪ್ರಭುವೆಂದು ಕುಳ್ಳಿರಿಸಿಕೊಂಡು ತನ್ನ ಪ್ರಾಣಲಿಂಗವೆಂದು ನಮ್ಮತ್ತ ತಿರುಗಿ ನೋಡಲೊಲ್ಲ. ಆತನಲ್ಲಿ ಎನು ಲೇಸ ಕಂಡನು? ನಮ್ಮಲ್ಲಿ ಎನು ಹೊಲ್ಲೆಯವ ಕಂಡನು? ಕಂಚನೊಲ್ಲದೆ ಬಿಟ್ಟು ಹಂಚ ಹಿಡಿದನು. ಅನಾಚಾರಿಯವನೊಬ್ಬ, ವ್ರತಗೇಡಿ ಬಸವನೊಬ್ಬನು. ಇವರಿಬ್ಬರು ದೇವಲೋಕ ಮರ್ತ್ಯಲೋಕಕ್ಕೆ ಹೊರಗು. ಇವರಿದಿರ ಮುಖವ ನೋಡಲಾಗದು. ಎನುತ್ತ ಹೋದರು ಕಲಿದೇವರದೇವನ ಶರಣರು ।೧೩॥

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ. ಅಯ್ಯ, ಸಾತ್ವಿಕ ಶರಣರ ನುಡಿ ಹುಸಿಯೆ? ಅದು ದಿಟ. ಅದು ದಿಟ ಒಳಗೆಂಬುದೇ ದೇವಲೋಕ. ಹೊರಗೆಂಬುದೇ ಮೃತ್ಯಲೋಕ. ಈ ಎರಡು ಲೋಕಕ್ಕೆ ಹೊರಗಾಗಿ ನಾವಿರಲು ಈ ಎರಡು ಲೋಕದೊಳಗೆ ತಾವೆ ಇರಲಿ ಗುಹೇಶ್ವರಾ ॥೧೪॥

ಮತ್ತಂ ಪ್ರಭುದೇವರುದ್ದಂಡಿಸುತ್ತೆ ಎದ್ದು ಹೋದ ಜಂಗಮರ ವಿಡಂಬಿಸುವ ಪ್ರಸ್ಥಾವದ ವಚನ॥

ಅಂಗಜ ಜಂಗುಳಿಗಳೆಲ್ಲ ಅಶನಕ್ಕೆ ನೆರೆದು, ಲಿಂಗದ ಹವಣ ನಿವರೆತ್ತ ಬಲ್ಲರು? ಕಾಯ ಜೀವಿಗಳು ಕಳವಳದಾರಿಗಳು ದೇವರ ಸುದ್ದಿಯ ನಿವರೆತ್ತ ಬಲ್ಲರಯ್ಯ? ಮದ್ಯಪಾನವನುಂಡು ಮದವೆದ್ದ ಜೋಗಿಯಂತೆ ನುಡಿವರು ಗುಹೇಶ್ವರನ ನಿಲವ ನಿವರೆತ್ತ ಬಲ್ಲರು? ॥೧೫॥

ಆ ಪ್ರಸ್ಥಾವದೊಳು ಚಿಕ್ಕದಣ್ಣಾಯಕರು ವಿಡಂಬಿಸುವ ಪ್ರಸ್ಥಾವದ ವಚನ॥

ಅತಿಮಥನವೆಂಬ ಶೂನ್ಯ ಸಿಂಹಾಸನವನೇರಿಕೊಂಡು ನಾವೇ ಹಿರಿಯರು ನಾವೇ ದೇವರೆಂಬವರು ತಮ್ಮ ತಾ ವರಿಯರು. ಅದ್ಭುತ ಮನ ಭುಂಜಕರ ಮೆಚ್ಚ ನಮ್ಮ ಕೂಡಲ ಚನ್ನಸಂಗಯ್ಯನು ॥೧೬॥

ಮತ್ತಂ ಪಥವ ನರಿಯದೆ ಮಂಡೆಯ ಬೋಳಿಸಿಕೊಂಡಾತ ಜಂಗಮವಲ್ಲ. ಸತ್ತಡೆ ತೆಗೆವರಿಲ್ಲೆಂದು ಕಟ್ಟಿಕೊಂಡಾತ ಭಕ್ತನಲ್ಲ. ತನು ಮನ ಧನ ಎನ್ನದಲ್ಲ, ಲಿಂಗದ ಒಡವೆ ಲಿಂಗಕ್ಕೆಂದು ಮಾಡುವಾತ ಭಕ್ತ. ತನು ಗುಣವಿರಹಿತನಾಗಿ ಲಿಂಗದಲ್ಲಿ ಸ್ವಯವಾಗಿ ಬಂದು ನಿಂದಾತನೆ ಜಂಗಮ. ಅಂಥ ಭಕ್ತನು ಅಂಥ ಜಂಗಮನು ಕೂಡಲ ಚನ್ನಸಂಗಯ್ಯನಲ್ಲಿ ಬಸವನು ಪ್ರಭುವಲ್ಲದಿಲ್ಲ. ಉಳಿದವರೆಲ್ಲ ಲಾಂಛನಧಾರಿಗಳೂ ॥೧೭॥

ಮತ್ತಂ॥ ಬರಿಯ ಬೋಳುಗಳೆಲ್ಲ ಜಂಗಮವೇ? ವೇಷಧಾರಿಗಳೆಲ್ಲ ಜಂಗಮವೇ? ಜಡ ಜೀವಿಗಳೆಲ್ಲ ಜಂಗಮವೇ? ನಿರ್ಗಮನವೆ ಜಂಗಮ? ನಿಃಸ್ಸೀಮ ಜಂಗಮ. ನಿಜೈಕ್ಯನೆ ಜಂಗಮ. ಇಂತಹ ಜಂಗಮದ ಸುಳುಹು ಕಾಣದೆ, ಕೂಡಲ ಚನ್ನ ಸಂಗಮ ದೇವ ತಾನೆ ಪ್ರಭುವೆಂಬ ಜಂಗಮವಾದ ॥೧೮॥

ಮತ್ತಂ॥ ಧರೆಯ ಮೇಲೆ ಸುಳಿದಾಡುವ ಲಾಂಛನ ಧಾರಿಗಳೆಲ್ಲರು ಹದಿನೆಂಟು ಜಾತಿಯ ಮನೆಯಲುಂಡು ಕೆಟ್ಟರಯ್ಯ. ಗಿರಿಯಲ್ಲಿಪ್ಪ ಜಡೆಯ ಧಾರಿಗಳೆಲ್ಲರು ಫಲವೃಕ್ಷಂಗಳನುಂಡು ಕೆಟ್ಟರಯ್ಯ. ತರಗೆಲೆಯ ಮೆದ್ದು ತಪಸ್ಸಿಪ್ಪವರೆಲ್ಲರು ವಾಯು ಭಕ್ಷಣವನುಂಡು ಕೆಟ್ಟರಯ್ಯ. ಅರಿಕೆಯ ಇಂದ್ರಿಯಂಗಳ ಕಟ್ಟಿ ಕುರುಹಿನ ರಾಜ್ಯಕ್ಕೆ ಬಂದು ನರಕಕ್ಕಿಳಿವವರ ಹಿರಿಯರೆಂದೆನ್ನದೆನ್ನ ಮನವು. ಇದು ಕಾರಣ ಕೂಡಲ ಚನ್ನ ಸಂಗಯ್ಯನೊಲ್ಲದಿದ್ದರೆ ಅವರ ಬೆನ್ನಿಲಿ ಹೋಗಲಿ. ಪ್ರಭುದೇವರ ಬಿಡೆನು ನಾನು॥೧೯॥

ಆ ಪ್ರಸ್ಥಾವದೊಳು ಸೊಡ್ಡಳ ಬಾಚರಸರ ವಚನ॥

ವಿಪಿನದೊಳು ಮದಕರಿಯ ಹಿಂಡು ಆನಂದ ಲೀಲೆಯೊಳಾಡುತ್ತಿರಲು, ಕೇಸರಿ ಬರಲು ಮದಕರಿಗಳೆಲ್ಲ ಕೆದರಿ ಓಡುವ ತೆರನಂತೆ, ಸಾಕಾರ ಸೊಡ್ಡಳ, ನಿಮ್ಮ ಶರಣ ಪ್ರಭುದೇವರು ಬರಲೊಡನೆ ಹರಿದುದಯ್ಯ ನೆರೆದ ಗಣಂಗಳು ॥೨೦॥

ಇಂತು ಜಂಗಮವೆಲ್ಲ ಮುಳಿದು ಪೋಗಲು ಬಸವರಾಜದೇವರು ಅತ್ಯಂತ ಭೀತರಾಗಿ ಪ್ರಭುಪೇವರೊಡನೆ ಬಿನ್ನೈಸುವ ವಚನ॥

ಅಯ್ಯ. ನಿಮ್ಮ ಶರಣರ ಸಂಗವೆನಗೆ ಪರಮ ಸುಖವಯ್ಯ. ಅಯ್ಯ, ನಿಮ್ಮ ಶರಣರ ಅಗಲಿಕೆ ಪ್ರಾಣವಿಯೋಗವಯ್ಯ. ಶಿವ ಶಿವ, ಸಂತವಿಡುವೆನು. ಇನ್ನೆಂತಯ್ಯ? ಎನಗೇನು ಗತಿ? ಕೂಡಲಸಂಗಮದೇವ ನಿಮ್ಮ ಶರಣರ ಮುನಿಸು ಎನಗೆ ಬಿಡಿಸಬಾರದ ತೊಡಕು. ॥೨೧॥

ಮತ್ತಂ, ಗುರು ಮುನಿದರೆ ಒಂದು ದಿನ ತಾಳುವೆ. ಲಿಂಗ ಮುನಿದರೆ ಅರೆ ದಿನ ತಾಳುವೆ. ಜಂಗಮ ಮುನಿದರೆ ಕ್ಷಣಮಾತ್ರ ತಾಳಿದರೆ ಎನ್ನ ಪ್ರಾಣದ ಹೋಕು ನೋಡಾ ಕೂಡಲ ಸಂಗಮದೇವಾ ॥೨೨॥

ಮತ್ತಂ ಅರಸು ಮುನಿದರೆ ನಾಡೊಳಗಿರಬಾರದು. ಪತಿ ಮುನಿದರೆ ಸತಿ ಇರಬಾರದು. ಕೂಡಲ ಸಂಗಮದೇವ, ಜಂಗಮ ಮುನಿದರೆ ನಾನೆಂತು ಬದುಕುವೆನು? ॥೨೩॥

ಇದಕ್ಕೆ ಪ್ರಭುದೇವರು ಬಸವರಾಜದೇವರ ಭಯಮಂ ಸಂತೈಸಿ ಬೋಧಿಸುವ ವಚನ॥

ಅಂಜಬೇಡ, ಅಳುಕಬೇಡ. ಹೋದವರಾರು? ಇದ್ದವರಾರು? ಎಲೆ ಮರುಳ, ಒಂದು ಮುಖವಲ್ಲಿಪ್ಪ ದೇವನೊಬ್ಬನೆ. ಹಲವರ ಮುಖದಲ್ಲಿಪ್ಪ ದೇವನೊಬ್ಬನೆ. ನಾಮ ಹಲವಲ್ಲದೆ ಕಾರ್ಯ ಒಂದೇ ನೋಡಾ. ಮನದೊಳಗಣ ಘನವು ತನುವ ನಗಲುವದೇ? ಗುಹೇಶ್ವರಲಿಂಗದ ವಿಯೋಗಕ್ಕೆ ತೆರಹಿಲ್ಲ ಕೇಳಾ ಸಂಗನ ಬಸವಣ್ಣಾ ॥೨೪॥

ಮತ್ತಂ॥ ಮತಿಯೊಳಗೆ ದುರ್ಮತಿ ಹುಟ್ಟಿ ಕಲಿ ಗಸಣಿಗೊಳಗಾದ ಪರಿಯ ನೋಡಾ. ಜ್ಞಾನವಜ್ಞಾನ ನುಂಗಿದ ಬಳಿಕ, ಭಾನು ಗ್ರಹಣಕ್ಕೊಳಗಾದಂತೆ ಇದ್ದಿತ್ತು. ಕ್ಷೀರವನುಂಬ ಶಿಶು ತಾಯನಗಲಿ ಅರಿಯದ ಮೋಹದಂತೆ ಇದ್ದಿತ್ತು. ಹೇಳುವಲ್ಲಿ ಯುಕ್ತನು, ಕೇಳುವಲ್ಲಿ ಯುಕ್ತನು, ಎಂಬುದು ಅಜ್ಞಾನ. ಭಾವಕ್ಕೆ ಬಂದಿತ್ತು. ನೀರ ಮೇಲಣ ಲಿಪಿಯ ನೋದಬಲ್ಲವರುಂಟೆ? ಸಾರಾಯ ವೇದ್ಯವಪ್ಪರಿಗಲ್ಲದೆ ಕನ್ನಡಿಯೊಳಗೆ ನೋಡಲು ಭಿನ್ನವುಂಟೆ ಅಯ್ಯ? ತನ್ನ ಕಣ್ಣಿನಲ್ಲಿ ಕಾಣದಂತೆ ಇದ್ದಿತ್ತು. ದರ್ಪಣದೊಳಗಣ ಬೆಳಗು. ಬೆಳಗಿನೊಳಗಣ ಬೆಳಗು. ಗುಹೇಶ್ವರ ನಿಪ್ಪೆಡೆಯ ತಿಳಿದು ನೋಡಯ್ಯ ಸಂಗನ ಬಸವಣ್ಣಾ ॥೨೫॥

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ. ಅದ್ವೈತವ ಅಂತರಂಗದಲ್ಲಿ ಅರಿದು, ಹೊರಗೆ ದಾಸೋಹವ ಮಾಡದಿರ್ದರೆಂತಯ್ಯ? ಉಭಯದ ಸಂದೇಹದಲ್ಲಿ ನಿಜ ಒಪ್ಪದು ನಿಮ್ಮ ಶರಣರ ಮನ ನೊಂದಲ್ಲಿ ನಾನು ಸೈರಿಸಿ ಕೊಂಬೆನೆಂತಯ್ಯ? ಕೂಡಲ ಸಂಗಮದೇವ ಹಾವು ಸಾಯದೆ ಕೋಲು ನೋಯುವಂತೆ ಮಾಡಾ ನಿಮ್ಮ ಧರ್ಮ ॥೨೬॥

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ. ಒಂದಾದುದು ಎರಡಪ್ಪದೇ? ಎರಡಾದುದು ಒಂದಪ್ಪದೇ? ಪರಿಣಾಮದ ವೇಳೆಯಲ್ಲಿ ಸಂದೇಹ ಹುಟ್ಟಲುಂಟೆ? ಬಂದ ಜಂಗಮದ ನಿಲವನರಿಯದೆ ಹಿಂದ ನೆನಸಿ ಹಲವ ನೆಣಿಸುವರೆ? ಈ ಒಂದು ನಿಲವಿಂಗೆ ಪರಿಣಾಮವ ಮಾಡಬಲ್ಲರೆ ನಿನ್ನ ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮಕ್ಕೆ ಪರಿಣಾಮವಹುದು ನೋಡಾ. ಗುಹೇಶ್ವರನೆಂಬ ಲಿಂಗದ ನೆಲೆಯನರಿಯದೆ ಮರುಳಾದೆಯಲ್ಲಾ ಸಂಗನ ಬಸವಣ್ಣಾ ॥೨೭॥

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ. ದೇವ ದೇವ, ಮಹಾಪ್ರಸಾದ ನಿಮ್ಮಡಿಗಳೆಂದಂತೆ ಅಲ್ಲದೆ ಇನ್ನೆನಗೆ ಬೇರೆ ಸ್ವತಂತ್ರ ಉಂಟೆ? ಸಂದಸಂಶಯವುಂಟೆ? ದರ್ಪಣದೊಳಗಣ ಪ್ರತಿಬಿಂಬವ ನೋಡುವ ಮುಖಕ್ಕೆ ಭಿನ್ನ ಭಾವವುಂಟೆ? ಚರಿಸಿ ಬಪ್ಪ ಅನಂತ ಸುಳುಹಿನೊಳಗೆ ನೀನೊಬ್ಬನೆ. ನಿನ್ನೊಳಗೆ ಅನಂತ ಸುಳುಹು ಅಡಗಿದವು. ನಿಮಗೆ ಮಾಡಿದ ಸುಯಿಧಾನವ ನಿಮಗೆ ನೀಡುವೆನು. ಅವಧರಿಸಬೇಕಯ್ಯ ಕೂಡಲಸಂಗಮದೇವಯ್ಯ ॥೨೮॥

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ. ತನಗುಳ್ಳ ನಿಧಾನ ತನಗಿಲ್ಲದಂತೆ ಬಂಧುಗಳೆಲ್ಲರ ನುಂಗಿ ಅಂಬುಧಿ ಬತ್ತಿತ್ತು. ಅದ್ಭುತ ಸತ್ತಿತ್ತು. ರಣರಂಗನತ್ತಿತ್ತು ಇರಳು ಮಾಣಿಕ್ಯವ ನುಂಗಿ ಮರಣವಾದ ಬಳಿಕ, ಅಮೃತದ ಪುತ್ಥಳಿಯ ಹಾಲ ಕುಡಿಯ ಕರೆದರೆ ಗುಹೇಶ್ವರ ಲಿಂಗಕ್ಕೆ ಊಟವೆಂಬುವದಿಲ್ಲ ನೋಡಾ ಸಂಗನ ಬಸವಣ್ಣಾ ॥೨೯॥

ಮತ್ತಂ॥ ಕಾಯದಲ್ಲಿ ಕಾಯ ಸವದು, ಪ್ರಾಣದಲ್ಲಿ ಪ್ರಾಣ ಸವದು, ನಿಶ್ಚಿಂತವಾದ ಬಳಿಕ ಹಸಿವುತೃಷೆಗಳೆಂಬವು ಅಳಿದು ಹೋದವು ಕೇಳಾ ಉಂಡೆನೆಂಬ ಬಯಕೆಯು ಒಲ್ಲೆನೆಂಬ ವೈರಾಗ್ಯವು ಇಲ್ಲ. ಇದು ಸ್ವಭಾವ

ತೃಪ್ತಿಯೊಳಗಡಗಿತ್ತು. ಇದು ಕಾರಣ ನಮ್ಮ ಗುಹೇಶ್ವರ ಲಿಂಗಕ್ಕೆ ಆರೋಗಣೆ ಇಲ್ಲ ಕಾಣಾ ಸಂಗನಬಸವಣ್ಣಾ ॥೩೦॥

ಇದಕ್ಕೆ ಚಿಕ್ಕದಣ್ಣಾಯಕರ ವಚನ. ಒಲ್ಲೆನೆಂದರೆ ಭಂಗ. ಒಲುವೆನೆಂದರೆ ಅದೇ ಭಂಗ. ಒಲ್ಲೆ ಒಲುವೆನೆಂಬೆರಡನು ತಿಳಿದು ತೃಪ್ತನಾದೆನೆಂದಡೆ ಅದೇ ಕೊರತೆ. ಕೂಡಲಚನ್ನಸಂಗಯ್ಯ ಭಕ್ತನಾಧೀನವಾಗಿ ಇಲ್ಲಿಗೆ ನಡೆದು ಬಂದ ಬಳಿಕ ಉಪಚಾರ ಉಂಟೇ ಅಯ್ಯ? ॥೩೧॥

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ. ಭಕ್ತನಾಧೀನವಾಗಿ ಭಕ್ತಿಯ ಬೇಡ ಬಂದವನಲ್ಲ. ಯುಕ್ತಿಯಾಧೀನವಾಗಿ ಯುಕ್ತಿಯ ಬೇಡ ಬಂದವನಲ್ಲ. ಅಶನಾತುರನಾಗಿ ವಿಷಯವ ಬಯಸಿ ಬಂದವನಲ್ಲ. ಗುಹೇಶ್ವರನ ಶರಣ ಸಂಗನ ಬಸವಣ್ಣ ಮಾಡುವ ಭಕ್ತನಲ್ಲವಾಗಿ, ನಾನು ಬೇಡುವ ಜಂಗಮವಲ್ಲ ಕಾಣಾ ಚನ್ನಬಸವಣ್ಣಾ ॥೩೨॥

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ॥ ಆನು ನಿಮ್ಮಲ್ಲಿ ಪ್ರಪಂಚಿನುಪಚಾರವನರಿಯೆನಯ್ಯ. ನಿಮ್ಮ ಪಾದದಲ್ಲಿ ತದ್ಗತನಾಗಿಪ್ಪೆ. ಭಕ್ತಿ ಮುಕ್ತಿ ವಿರಕ್ತಿ ಉಪಚಾರವನರಿಯೆನು. ಕೂಡಲ ಸಂಗಮದೇವ, ಭಿನ್ನವಿಲ್ಲದೆ ಭೃತ್ಯಾಚಾರಕ್ಕೆ ಬಂದ ಪದಾರ್ಥವ ನೀನಂದೆ ಚಿತ್ತೈಸಯ್ಯ ॥೩೩॥

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ॥ ಕಾಯವೆಂಬ ಕಲ್ಪಿತವ ಕಳೆದು, ಪ್ರಾಣವೆಂಬ ಸೂತಕವ ಹರಿದು, ನಿಜಭಕ್ತಿ ಸಾಧ್ಯವಾದಲ್ಲದೆ ಲಿಂಗಪರಿಣಾಮ ವೇಧಿಸಬಾರದು. ಆನು ಮಾಡಿದೆ ನೀನು ಕೊಳ್ಳು ಎಂದರೆ ಅದೇ ಅಜ್ಞಾನ. ನಮ್ಮ ಗುಹೇಶ್ವರ ಲಿಂಗಕ್ಕೆ ಕುರುಹಳಿದು ನಿಜ ಉಳಿದವರಾದಲ್ಲದೆ ಪದಾರ್ಥವ ನೀಡಬಾರದು ಕಾಣಾ ಚನ್ನಬಸವಣ್ಣಾ ॥೩೪॥

ಇದಕ್ಕೆ ಬಸವರಾಜದೇವರ ಬಿನ್ನಹ. ಮರ ಹಿಂದಲಾದ ಕುರುಹಿನ ಕಾಯವ ಧರಿಸಿಕೊಂಡು ಬಂದರೆ ಅದು ಎನಗೆ ಕುಂದಲ್ಲ ನೋಡು ದೇವಾ. ನಿಮ್ಮ ಲೀಲೆಯಿಂದೆ ಹಿಂದಾರು ಜನ್ಮದಲ್ಲಿ ಬಂದರೆ ಅದು ನಿಮ್ಮ ಜಂಗಮ ಭಕ್ತಿಯಿಂದ ಕಳೆದೆ ನೋಡಯ್ಯ. ಕಾಯವಿಲ್ಲದ ಜಂಗಮಕ್ಕೆ ಪ್ರಾಣವಿಲ್ಲದ ಮಾಟ ಒಲ್ಲೆನೆಂಬುದಕ್ಕೆ ಕಾರಣವೇನು ಹೇಳಾ ಕೂಡಲಸಂಗಮದೇವಾ? ॥೩೫॥

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ. ತಾನಿಟ್ಟ ಬೇತಾಳ ತನ್ನನೆ ತಿಂದಿತೆಂಬಂತೆ ನಿನ್ನ ಭವಾಳಿಯನೆತ್ತುವನ್ನಕ್ಕರ ಎನ್ನಮರವೆ ಎನಗೆ ಎಚ್ಚ

ರಿಕೆ ಯಾಯಿತ್ತು. ಎನ್ನ ಪೂರ್ವ ನಿರ್ವಾಹವಾಯಿತ್ತು. ನಿನ್ನ ವರ್ಣವು ತಿಳಿಯದೆನಗೆ. ಅದೆಂತೆಂದೊಡೆ ಹಿಂದೆ ನೀನೇನಾಗಿ ಇದ್ದೆಯೆಂಬುದನರಿಯೆನಾಗಿ ಇಂದು ನಿಮ್ಮ ಮನೆಯಲಾರೋಗಣೆ ಯಾಗದು ಕಾಣಾ ಸಂಗನಬಸವಣ್ಣಾ ಗುಹೇಶ್ವರಂಗೆ ॥೩೬॥

ಇದಕ್ಕೆ ಬಸವ ರಾಜ ದೇವರ ಪ್ರತ್ಯುತ್ತರ॥ ಅಯ್ಯ ಏಳೇಳು ಭವಾಂತರದಲ್ಲಿ ಶಿವಭಕ್ತನಾಗಿ ಬಾರದಿದ್ದರೆ ನಿಮ್ಮಾಣೆ ನಿಮ್ಮ ಪ್ರಮಥರಾಣೆ. ನಿಮ್ಮ ಪ್ರಸಾದಕ್ಕಲ್ಲದೆ ಬಾಯ್ದೆರೆಯೆನಯ್ಯ. ಅದೆಂತೆಂದೊಡೆ ಪ್ರಥಮ ಭವಾಂತರದಲ್ಲಿ ಶಿಲಾದನೆಂಬ ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು ನಿಮ್ಮ ಕಾರುಣ್ಯವ ಮಾಡಿಕೊಂಡದ್ದಿರಯ್ಯ. ಎರಡನೆಯ ಭವಾಂತರದಲ್ಲಿ ಸ್ಕಂದನೆಂಬ ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು ನಿಮ್ಮ ಕಾರುಣ್ಯವ ಮಾಡಿಕೊಂಡಿದ್ದಿರಯ್ಯ. ಮೂರನೆಯ ಭವಾಂತರದಲ್ಲಿ ನೀಲಲೋಹಿತನೆಂಬ ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು ನಿಮ್ಮ ಲೀಲಾವಿನೋದದಿಂದಿರಿಸಿಕೊಂಡಿದ್ದಿರಯ್ಯ. ನಾಲ್ಕನೆಯ ಭವಾಂತರದಲ್ಲಿ ಮನೋಹರನೆಂಬ ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು ನಿಮ್ಮ ಮನಃಪ್ರೇರಕನಾಗಲೆಂದಿರಿಸಿಕೊಂಡಿದ್ದಿರಯ್ಯ. ಐವನೆಯ ಭವಾಂತರದಲ್ಲಿ ಕಾಲಲೋಚನನೆಂಬ ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು ಸರ್ವಕಾಲ ಸಂಹಾರವ ಮಾಡಿಸುತ್ತಿದ್ದಿರಯ್ಯ. ಆರನೆಯ ಭವಾಂತರದಲ್ಲಿ ವೃಷಭನೆಂಬ ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು ನಿಮಗೇರಲು ವಾಹನವಾಗಲೆಂದಿರಿಸಿ ಕೊಂಡಿದ್ದಿರಯ್ಯ. ಏಳನೆಯ ಭವಾಂತರದಲ್ಲಿ ಬಸವದಣ್ಣಾಯಕರೆಂಬ ಗಣೇಶ್ವರನ ಮಾಡಿ ಹೆಸರಿಟ್ಟು ಕರೆದು ನಿಮ್ಮ ಒಕ್ಕು ಮಿಕ್ಕುದಕ್ಕೆ ಯೋಗ್ಯನಾಗಲೆಂದಿರಿಸಿಕೊಂಡಿದ್ದಿರಯ್ಯ. ಇದು ಕಾರಣ ಕೂಡಲಸಂಗಮ ದೇವ, ನೀವು ಬರಿಸಿದ ಭವಾಂತರದಲ್ಲಿ ನಾನು ಬರುತ್ತಿದ್ದೆನಯ್ಯ ॥೩೭॥

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ. ಕೆಳಗೇಳು ಲೋಕಂಗಳಿಲ್ಲದ ಮುನ್ನ, ಮೇಲೇಳು ಲೋಕಂಗಳಿಲ್ಲದ ಮುನ್ನ, ಸಮಸ್ತ ಬ್ರಹ್ಮಾಂಡಂಗಳಿಲ್ಲದ ಮುನ್ನ, ಅಲ್ಲಿಂದತ್ತತ್ತ ಬಸವಣ್ಣ ನೀನು ಲಿಂಗ ಭಕ್ತ ಜಂಗಮ ಪ್ರಾಣಿ ಶಶಿಧರನ ಶರಣಂಗೆ ವೃಷಧರ ಸ್ವಾಯತವಾಗಿ ನಮ್ಮ ಗುಹೇಶ್ವರ ಲಿಂಗಕ್ಕೆ ಬಸವಣ್ಣನೇ ಭಕ್ತನೆಂದು ಅರಿದೆನಯ್ಯ. ॥೩೮॥

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ. ಅಯ್ಯ ನೀವೆನ್ನ ಬಲ್ಲಿರಲ್ಲದೆ ನಾ ನಿಮ್ಮ ಬಲ್ಲೆನೆ? ನಿಮ್ಮ ನಿಲವ ನೋಡಿ ಮಾಡಿಹೆನೆಂದರೆ ನೀ ಘನ

ಪೆನ್ನ ಮನಕ್ಕೆ ಸಾಧ್ಯವಾಗದ ಕಾರಣ ಅಂತಿಂತೆಂದುಪಮಿಸಲಮ್ಮದೆ ಇದ್ದೆ ನೋಡಯ್ಯ. ನಿತ್ಯ ತೃಪ್ತ ಮಹಿಮ, ನಿಮಗೆಂದಳವಡಿಸಿದ ಪದಾರ್ಥವ ಸುಚಿತ್ರದಿಂದಳವಡಿಸಯ್ಯ ಪ್ರಭುವೇ ಕೂಡಲ ಸಂಗಮ ದೇವಾ. ೩೯॥

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ. ಪೌರ್ಣಮಿ ಬಂದನ್ನಕ್ಕರ ಬಾಯಿ ಬಂಧನದಲ್ಲಿರ್ದ ಚಕೋರನಂತೆ ಇದ್ದೆನಯ್ಯ. ಉಣ್ಣಲಾಗದೆಂಬ ಶಾಸ್ತ್ರವಿಡಿದು ಇದ್ದವನಲ್ಲ. ಉಣ್ಣಲಾಗದೆಂಬ ಶಾಸ್ತ್ರ ಉಂಟೆ ಲಿಂಗವಂತಂಗೆ? ಅಹೋರಾತ್ರಿ ಅಷ್ಟ ಯೋಗಂಗಳ ಲಿಂಗಕ್ಕೆ ಕೊಟ್ಟು ಕೊಳಬೇಕು. ಮಾಡುವ ನೀಡುವ ನಿಜ ಭಕ್ತರಿಲ್ಲದ ಕಾರಣ ಬಾಯ್ದೆರೆಯದೆ ಇದ್ದೆನು. ಮಾಡಿ ನೀಡಿಹೆನೆಂಬ ಸಂತೋಷದಾಪ್ಯಾಯನ ಹಿರಿದಾಯಿತ್ತು. ನೀಡಯ್ಯ ಸಂಗನ ಬಸವಣ್ಣ ಗುಹೇಶ್ವರಂಗೆ. ॥೪೦॥

ಮತ್ತಂ ಸಮತೆಯೆಂಬ ಕಂಥೆಯ ತೊಟ್ಟು, ಸುಬುದ್ಧಿಯೆಂಬ ಟೊಪ್ಪರವನಿಕ್ಕಿ, ವಿಷಯವೆಂಬ ಹಾವುಗೆಯ ಮೆಟ್ಟಿ, ತಮಂಧವೆಂಬ ಕುಳಿಯ ಬೀಳದೆ, ವೈರಾಗ್ಯವೆಂಬ ಕೊರಡನೆಡಹದೆ, ಮದವೆಂಬ ಜೇಳ ಮುಟ್ಟದೆ, ಗುಹೇಶ್ವರನ ಶರಣ ಬಂದೆನು. ಭಕ್ತಿ ಭಿಕ್ಷೆಯ ನಿಕ್ಕಯ್ಯ ಚನ್ನ ಸಂಗನ ಬಸವಣ್ಣಾ ॥೪೧॥

ಮತ್ತಂ। ಕಡೆಯಿಲ್ಲದ ದೇಶವ ತಿರುಗಿಪೆನು. ಹವಣಿಲ್ಲದ ಕಂಥೆಯ ತೊಟ್ಟೆನು. ಹಸಿವಿಲ್ಲದ ಕಪ್ಪರವ ಹಿಡಿದು ಭಕ್ತಿ ಭಿಕ್ಷವ ಬೇಡ ಬಂದೆ. ಗುಹೇಶ್ವರ ಹಸಿದನು. ಉಣಲಿಕ್ಕೆ ಕೇಳಾ ಸಂಗನ ಬಸವಣ್ಣಾ ॥೪೨॥

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ. ಕಾಯದ ಕುರುಹು ಹಿಡಿದು ಬಂದೆನೆಂಬ ಆ ಭಾವ ಇರಲೇತಕ್ಕೆ? ನಿಮಗೆ ಅಂಬರದ ಚಾಪ ಮುಗಿಲೊಳಗೆ ಹೊಂದಿತ್ತೆ? ಬೇರೊಂದರಲ್ಲಿ ನಿಂದಿತ್ತೆ? ಅದರಂಗದ ಛಾಯೆ ಪ್ರಭುದೇವರು ನಿಂದ ಸುಳುಹು. ಕೂಡಲ ಸಂಗಮ ದೇವರಲ್ಲಿ ಭಿನ್ನವಿಲ್ಲದೆ ನಿಂದ ಕಾಯದಂಗಾ ॥೪೩॥

ಮತ್ತಂ॥ ಎರಡಂದ ಭಿತ್ತಿನಂತೆ, ರಸವಾರಿಯಂತೆ, ಪಶುವಿನ ಪಿಸಿಕದಲ್ಲಿ ತಲೆದೋರುವ ಅಮೃತದಂತೆ, ಕಾಯವಿಡಿದು ಬಂದಡೆ ನಿನಗಾಭಾವವಿಲ್ಲ ಕೂಡಲ ಸಂಗನು ದೇವರಲ್ಲಿ ಪ್ರಭುದೇವರ ಸುಳುಹು ಅಗಮ್ಯವಾಯಿತ್ತು ॥೪೪॥

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ॥ ಬಂದು ನಿಂದು ಸೊಲೆ ನೀರ ಮಿಂದವರೆಲ್ಲರು ಹೆಂಡತಿಯರಾಗಬಲ್ಲರೇ? ಬಂದು ನಿಂದು ಸುಳಿದು ಮಾಡು ವರೆಲ್ಲರು ಸಂಗನಬಸವಣ್ಣನಂತೆ ಗುಹೇಶ್ವರಲಿಂಗವ ಬಲ್ಲರೇ? ॥೪೫॥

ಇದಕ್ಕೆ ಬಸವರಾಜ ದೇವರ ಪ್ರತ್ಯುತ್ತರ॥ ರೂಹಿಲ್ಲದ ಸಯಿಧಾನವ ನೀಡುವೆ. ರುಚಿಯಿಲ್ಲದ ಪದಾರ್ಥವ ಮಥನಿಸದೆ ನೀಡುವೆನು. ಲಿಂಗ ಕ್ಕೆಂದು ಲಿಂಗ ಪದಾರ್ಥವ ಸಂಗಮುಖವ ಮರೆದು ನಿಮಗೆ ನೀಡುವೆ. ಕಾಮಿಸದೆ ಕಲ್ಪಿಸದೆ ಭಾವಿಸದೆ ಭ್ರಮಿಸದೆ ನಿಮ್ಮ ಪರಿಯಾಣಕ್ಕೆ ನೀಡು ವೆನು. ಸುಚಿತ್ತ ಸಮಾಧಾನದಿಂದ ಅವಧರಿಸಬೇಕಯ್ಯ ಕೂಡಲ ಸಂಗ ಮದೇವಯ್ಯ ॥೪೬॥

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ.॥

ನಿಮ್ಮ ಲೀಲೆ ನಿಮ್ಮ ವಿನೋದ ನಿಮ್ಮ ಹರೆ ನಿಮ್ಮ ಕೊಳಲು ಅದಕ್ಕೆ ಬೇಕೆನ್ನೆ. ಬೇಡವೆನ್ನೆ. ಮೇಘವಹ್ನಿ ಧರೆಗೆರಗುತ್ತ ಲೋಕವ ಬೆಸ ಗೊಂಡಿತ್ತೆ? ಉದರಾಗ್ನಿ ಧರೆಗೆರಗುತ್ತ ಭೂತಂಗಳ ಬೆಸಗೊಂಡಿತ್ತೆ? ಗುಹೇ ಶ್ವರನಲ್ಲಮನ ನಿರೂಪ ಮಹಿಮೆ ಎಂತಿದ್ದಿತ್ತು? ಅಹಂಗೆ ನೀನು ಮಾಡು ವುದಲ್ಲದೆ ನಾನಿದಕ್ಕೆ ಬೇಕೆನ್ನೆ. ಬೇಡೆನ್ನೆನು. ॥೪೭॥

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ. ॥

ಮಾಡುವ ಮಾಡಿಸಿಕೊಂಬ ಈ ಎರಡರ ನಡುವೆ ಸಂದು ಭೇದ ಉಂಟೇ ದೇವಾ? ಕಾಯ ಪ್ರಾಣ ಸಂಗದಂತೆ ಇದ್ದುದಲ್ಲದೆ ಬಲ್ಲಂತೆ ಮಾಡು. ಬಲ್ಲಂತೆ ನೀಡು. ನಾನರಿಯೆನೆಂಬುದು ನಿನಗುಚಿತವೇ? ಮಾಡು ವಲ್ಲಿ ನೀಡುವಲ್ಲಿ ಹೇಳಿಸಿ ಮಾಡಿಸಿಕೊಂಬುದಲ್ಲದೆ ಕೈಕಲಸಿದರೆ ಬಾಯಿಂಗೆ ಹಂಗುಂಟೇ ಕೂಡಲಸಂಗಮದೇವಾ? ॥೪೮॥

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ. ॥

ಉಳ್ಳವರ ಹಗೆಯ ತೆಗೆವನ್ನಕ್ಕರ ಇಲ್ಲದವರ ಹರಣ ಹೋಯಿ ತ್ತೆಂಬ ಗಾದೆ ಎನಗಾಯಿತ್ತು. ಮಾತು ಬಣ್ಣಿಸಲು ಹೊತ್ತು ಹೋಯಿ ತ್ತಯ್ಯಾ. ನಿನಗದೆ ಹರಿನುಡಿಗೆ ಕಡೆ ಇಲ್ಲ. ಒಬ್ಬರ ನೋಡುವಾಗ ಆರುವತ್ತು ಮನುಷ್ಯರ ನೋಡಿದ ಹಾಗೆ ಆಗುತ್ತಿದೆ. ಶೂನ್ಯಸಿಂಹಾಸನ ಬವರಿಗೊಡುತ್ತಿದೆ. ಪ್ರಾಣ ಹೆಡತಲೆಯಲ್ಲಿ ಹೋಗುತ್ತಿದೆ. ಗುಹೇಶ್ವರ ಹಸಿದನು. ಪದಾರ್ಥವ ನೀಡಯ್ಯ ಸಂಗನಬಸವಣ್ಣಾ. ॥೪೯॥

ಇದಕ್ಕೆ ಬಸವರಾಜದೇವರ ವಚನ.॥

ಶುದ್ಧವಾಯಿತ್ತೆಂಬೆನೆ? ಸುಯಿಧಾನಿ ನಾನಲ್ಲ. ಅನುವಾಯಿತ್ತೆಂಬೆನೆ? ಅವಧಾನಿ ನಾನಲ್ಲ. ಸುಯಿಧಾನ ಅವಧಾನ ಅರ್ಪಿತವ ಮುನ್ನರಿಯೆ. ಇದ್ದ ಪರಿಯಲ್ಲಿ ನೀಡಿದರೆ ಬಂದ ಪರಿಯಲ್ಲಿ ಕೈಕೋ ಕೂಡಲಸಂಗಮದೇವಾ. ॥೫೦॥

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ.॥

ಅಹುದಹುದು ಕಿಂಕುರ್ವಾಣ. ಮಜಭಾಪು. ಬಲ್ಲವರು ಬಲ್ಲೆನೆಂದಂಬರೆ ಲಿಂಗವಂತರ ಮಹಿಮೆ ಹಿಂಗಿರಬೇಡ. ಗುಹೇಶ್ವರನ ಆಪ್ಯಾಯನವಡಗಿಸುವ ಅನುಮಾನವನು ನೀನಲ್ಲದೆ ಮಹೀತಳದೊಳು ಬಲ್ಲವರಾರುಹೇಳಾ ಸಂಗನಬಸವಣ್ಣಾ? ॥೫೧॥

ಇದಕ್ಕೆ ಬಸವರಾಜದೇವರ ವಚನ॥

ಅಘವಣಿಯವಸರದಾಚಾರ ಸತ್ಕ್ರಿಯೆಂಬ ಭೂಮಿಯ ಮೇಲೆ ಸರ್ವಶುದ್ಧವೆಂಬ ಗೋಮಯವುಂ ತಂದು, ವಿನಯಾರ್ಥವೆಂಬ ಉದಕದಿಂದ ಸಮ್ಮಾರ್ಜನೆಯಂ ಮಾಡಿ, ತನುವಿನವಗುಣಂಗಳಂ ಹಿಟ್ಟುಗುಟ್ಟಿ, ರಂಗವೋಲಿಯನಿಕ್ಕಿ. ಅಕ್ಷಯವೆಂಬ ಬಿಂದಿಗೆಯಲ್ಲಿ ಪರಮಾನಂದವೆಂಬ ಅಘವಣಿಯ ತುಂಬಿ, ಸಮರಸದಿಂದೆ ಮಜ್ಜನಕ್ಕೆರೆಯಲು ಹೃದಯ ಕಮಲವೆಂಬ ಪುಷ್ಪಮಂ ಸಲಿಸಿ, ಸೌಖ್ಯತರ ಶಾಂತಿ ಎಂಬ ಗಂಧವ ನಿಟ್ಟು, ಅಕ್ಷಯವೆಂಬ ಅಕ್ಷತೆಯನಿಟ್ಟು ಅಳವಡಿಸಿ, ಸದ್ಭಾವವೆಂಬ ಧೂಪಮಂ ಬೀಸಿ, ಸುಜ್ಞಾನವೆಂಬ ನಿವಾಳಿಯನೆತ್ತಿ, ನಿತ್ಯ ನಿರಂಜನವೆಂಬ ನೀರಾಜನಮಂ ಬೆಳಗಲು, ಬ್ರಹ್ಮನಾದವೆಂಬ ಗಂಟೆಯಂ ಬಾಜಿಸಲು, ನಿತ್ಯಲಿಂಗಾರ್ಚನೆಗೆಡೆಮಾಡಲು ಇದರ ಮರ್ಮ ಕರ್ಮಸ್ಥಿತಿಯ ಶಿವಲಿಂಗಾರ್ಚನೆಯಂ ಮಾಡಬಲ್ಲರೆ ನಾನಾರನು ಕಾಣೆನು. ಕೂಡಲ ಸಂಗಮದೇವ ಪ್ರಭು ಶಿವಲಿಂಗಾರ್ಚನೆಯ ಮಾಡಲು ನಾನೆ ಪರಿಚಾರಕನು. ॥೫೨॥

ಇದಕ್ಕೆ ಪ್ರಭುದೇವರು ತಮ್ಮ ಕರಸ್ಥಲದ ಲಿಂಗಕ್ಕೆ ಅಷ್ಟವಿಧಾರ್ಚನೆ ಷೋಡಶೋಪಚಾರವ ಮಾಡುತ್ತ ನಿವಾಳಿಯನೆತ್ತುವ ಪ್ರಸ್ಥಾವದ ಪದಂಗಳು॥

ರಾಗದೇಶಿ॥ ಮಂಗಳ ಮಂಗಳ ಗುಹೇಶ್ವರನ ಶರಣ ಲಿಂಗೈಕ್ಯಂಗೆ ಮಂಗಳಾ. ॥ಪಲ್ಲ॥

ಜಗವೆಲ್ಲ ಊರ ಮಾಡಿ, ಊರೆಲ್ಲವ ಮನೆಯ ಮಾಡಿ, ಹೋಗವೆ ಸೆಯಿಲ್ಲದ ಸುಳುಹು ನೋಡಾ. ಸುಳುಹಿನ ಭೇದವ ನರಿಯದ ಕಾರಣ ದೇವಲೋಕ ಮರ್ತ್ಯಲೋಕವೆಲ್ಲ ಭ್ರಮೆಗೊಂಡಿತ್ತಲ್ಲ. ॥೧॥

ಎಂಬತ್ತನಾಲ್ಕುಲಕ್ಷ ಯೋನಿಮುಖಜೀವಿಗಳಿಗೆ ಎಂಬತ್ತುನಾಲ್ಕು ಲಕ್ಷಾರಾಧನೆ ಒಂದೊಂದಾರಾಧನೆಯು ಒಂದೊಂದನರಿಯದೆ ಗೊಂದಣ ಗೊಂಡು ಲಯವಾದುದಲ್ಲಾ. ॥೨॥

ಭಕುತಿ ಯುಕುತಿಯನರಿಯೆ. ಷೋಡಶೋಪಚಾರವನರಿಯೆ. ಭಾವ ಸಂಕಲ್ಪ ವಿಕಲ್ಪವ ನರಿಯೆ. ನಾವು ಸೀಮೆಗಳೆಲ್ಲವ ನೇಮಿಸಿ ಕಳೆವಂಗೆ ಆವ ಲೋಕ ಕಂಪಿತವಾತಂಗೆ. ॥೩॥

ಕುಲವಳಿದು ಛಲವಳಿದು ಬಲುಹಳಿದು ನಿಲಲು ಸೂತ್ರದ ಜಂತ್ರವಳಿ ಯಲು ಫಲಸಿದ್ಧಿ ಎನಿಸಿ ನಿಷ್ಫಲಸಿದ್ಧಿಯನೆ ಬಿಟ್ಟು ಭಕ್ತಾಂಗನೆಯ ಮರ್ತ್ಯಕ್ಕೆ ತಂದಂಗೆ. ॥೪॥

ಮಧ್ಯಸ್ಥಾನದ ಲೋಕಕ್ಕೆ ಹೋಗಿ ಮರುವಾಳನರಿಯದ ಪರಿಯ ನೋಡಿರೆ. ತನು ರುಚಿಯನೆ ಮರೆದು ಘನರುಚಿಯನರಿದನ ತನ್ನಂತೆ ಮಾಡಿದ ಗುಹೇಶ್ವರಲಿಂಗಾ. ॥೫॥

ಆ ಪ್ರಸ್ಥಾವದೊಳು ಮೋಳಿಗೆಯ ಮಾರಯ್ಯಗಳ ವಚನ॥

ಮುತ್ತೊಡೆದ ಚಿಪ್ಪಿನಲ್ಲಿ ನಿವಾಳಿಗಳ ಮಾಡಿ ಹೊನ್ನಪರಿಯಾಣಂ ಗಳ ನಡುವೆ ತಂದು ಮೇಳೈಸಿ, ಉಟ್ಟ ಪಟ್ಟಾವಳಿಯ ದೇವಾಂಗದ ಸರ್ವ ಶೃಂಗಾರದಿಂದೆ ಕಳಸ ಕನ್ನಡಿಯ ಕನ್ನಿಕೆಯರ ಜವಳಿ ಪಂಕ್ತಿ ಶೋಭಿಸು ತ್ತಿರಲು, ಶಿವಭಕ್ತ ಜನಸತಿಯರು ನಡೆದು ಬಂದು ಶೂನ್ಯ ಸಿಂಹಾಸನದ ಮುಂದೆ ನಿಂತಿರ್ದರು ನಿಃಕಳಂಕ ಮಲ್ಲಿಕಾರ್ಜುನ ಪ್ರಭುವಿಂಗೆ ಆರತಿಯ ನೆತ್ತಿಹೆವೆಂದು ॥೫೮॥

ಮತ್ತಂ॥ ನಾಗಲಾಂಬಿಕೆಯಮ್ಮನು ನಿವಾಳಿಯನೆತ್ತುವ ಪ್ರಸ್ಥಾವ ದಲ್ಲಿ ಮೋಳಿಗೈಯ್ಯಗಳ ವಚನ॥

ಕೊಟ್ಟ ದ್ರವ್ಯವನು ತಮ್ಮ ತಮ್ಮ ಲಿಂಗಕ್ಕೆ ಸಮರ್ಪಣೆಯ ಮಾಡಿ ಕೊಂಡು ತನುಭೋಗಾದಿ ಭೋಗಂಗಳ ಭೋಗಿಸುತ್ತಿರ್ದರಲ್ಲ. ಹೊನ್ನ

ಪರಿಯಾಣಂಗಳಲ್ಲಿ ಅನಂತ ಪರಿಪರಿಯ ಗುಗ್ಗುಳ ಧೂಪದ ಸಾಂಗವೆಸೆಯಲು, ಭವದಿಂದ ನಡೆತಂದು ಶೂನ್ಯ ಸಿಂಹಾಸನದ ಮುಂದೆ ನಿಂದಿರ್ದರು. ಪಂಚವು ನಾದ್ಯ ವೊಳಗುತ್ತಿರಲು ಅವರವರ ಕೈಯ್ಯ ನಿವಾಳಿಗಳನಿಸು ಕೊಂಡು ನಾಗಾಯುಮ್ಮಗಳು ನಿಃಕಳಂಕ ಮಲ್ಲಿಕಾರ್ಜುನಗೆ ಆರತಿಯನೆತ್ತುತಿರ್ದ್ದರೆಲ್ಲಾ. ॥೫೯॥

ಇತಿ ಶ್ರೀಮತ್ಸಕಲ ಗಣಪುರಾತನರೊಳ್ ಪ್ರಭುದೇವರ ಮಹಾನುಭಾವ ಸದ್ಗೋಷ್ಠಿಯಂ ಮಾಡಿದ ಶೂನ್ಯ ಸಂಪಾದನೆಯೊಳ್ ಪ್ರಭುದೇವರು ಶೂನ್ಯ ಸಿಂಹಾಸನದ ಮೇಲೆ ಮೂರ್ತಿಗೊಂಡದಕ್ಕೆ ಅಷ್ಟಾದಶೋಪದೇಶ ಸಮಾಪ್ತ.

---

# ಪ್ರಭುವಾರೋಗಣೆ ಸಂಪಾದನೆ.

## (ಏಕೋನ ವಿಂಶತ್ಯುಪದೇಶ.)

ಕಂದ॥ ಶೂನ್ಯಪೀಠದೊಳ್ ಮಂಡಿಸಿ ಚಿನ್ಮಯ ಗುರುಮೂರ್ತಿ ಪ್ರಭುವರನತಿಶಯುವ॥ ಪ್ಪುನ್ನತದಾರೋಗಣೆಯಂ। ನನ್ನಿಯೊಳೊಳರ್ಪಿಸಿದ ಪರಿಯದೆಂತನಲುಸುರ್ವೆಂ ॥೧॥

ಅದೆಂತೆಂದೊಡೆ, ಪ್ರಭುದೇವರು ಶೂನ್ಯಸಿಂಹಾಸನದ ಮೇಲೆ ಮೂರ್ತಗೊಂಡಿರಲು, ಬಸವರಾಜದೇವರು ಅಷ್ಟವಿಧಾರ್ಚನೆ ಷೋಡಶೋಪಚಾರಂಗಳಂ ಮಾಡಿಸಿ ಅತ್ಯಂತ ಸಂತೋಷದಿಂದಿರಲು ಆಪಟ್ಟಣದಲ್ಲಿಹ ಸಕಲ ಶರಣ ಸತಿಯರೆಲ್ಲರು ನಿವಾಳಿಗಳನೆತ್ತಿ ಕೊಂಡಾಡುತ್ತಿರೆ ಪಂಚ ಮಹಾವಾದ್ಯ ರಭಸದಿಂ ಶರಣರೆಲ್ಲರು ಜಯಜಯ ಎಂದು ಹರುಷಾಂಬುಧಿಯೊಳು ತೇಂಕಾಡುತ್ತ ಮಿರಲು ಆ ಪ್ರಸ್ಥಾವದೊಳು ಬಸವರಾಜದೇವರು ಪ್ರಭುದೇವರಿಗೆ ಆರೋಗಣೆಯ ಮಾಡಿಸಬೇಕೆಂದು ಪರಿಯಾಣವ ತಂದಿರಿಸಿದ ಪ್ರಸ್ಥಾಪದ ವಚನ.

ಅಂಗದಲಳವಟ್ಟ ಲಿಂಗಕ್ಕೆ ಅಂಗವೇ ಭಾಜನ. ಪ್ರಾಣದ ಮೇಲಣ ಲಿಂಗಕ್ಕೆ ಮನವೇ ಭಾಜನ. ಅರಿವಿನ ಮೇಲಣ ಲಿಂಗಕ್ಕೆ ನಿಭಾವವೇ ಭಾಜನ. ಕೂಡಲಸಂಗಮದೇವಯ್ಯ ಪ್ರಭುದೇವರು ಆರೋಗಣೆಯ ಮಾಡುವರೆ ಭಕ್ತಿಪರಿಯಾಣವಲ್ಲದೆ ಬೇರೆ ಮತ್ತೆ ಭಾಜನವ ಕಾಣೆನು. ॥೧॥

ಮತ್ತಂ, ಪರಿಯಾಣದಲ್ಲಿ ಸಕಲ ಪದಾರ್ಥಂಗಳಂ ನೀಡುವ ಪ್ರಸ್ಥಾವದ ವಚನ.

ಘನವಪ್ಪ ಪರಿಯಾಣದಲ್ಲಿ ಒಂದನುವಿನ ಬೋನವನಳವಡಿಸಿ ಪರಿಪರಿಯ ಪದಾರ್ಥಂಗಳು ಬಗೆಬಗೆಯಿಂದ ಬರಲು ನೋಡದ ಮುನ್ನವೆ ರೂಪರ್ಪಿತವಾಯಿತ್ತು. ಮುಟ್ಟದ ಮುನ್ನವೇ ಸೋಂಕರ್ಪಿತವಾಯಿತ್ತು. ರುಚಿಸದ ಮುನ್ನವೆ ಸುಖವರ್ಪಿತವಾಯಿತ್ತು ಅವಧಾರು. ಅವಧಾರು ಅವಧಾರು. ಲಿಂಗ ನಿಮ್ಮ ಮನಕ್ಕೆ ಬಂದ ಪದಾರ್ಥವ ನಿನ್ನ ಘನಕ್ಕೆ ನೀನರ್ಪಿಸಿದರೆ ಎನ್ನ

ಮನಕ್ಕೆ ಬಂದ ಪದಾರ್ಥವ ನಿನಗರ್ಪಿಸುವೆನು. ಗುಹೇಶ್ವರ ನಿನಗೆ ಭರಿತ ಭೋಜನವನಳವಡಿಸಿ ನೀಡಬಲ್ಲವರಾಗಿ ಎನಗು ನಿನಗು ಸಂಗನಬಸವಣ್ಣನ ಪ್ರಸಾದವನಾರೋಗಿಸು ದೇವಾ. ॥೨॥

ಮತ್ತಂ ಪ್ರಭುದೇವರಾರೋಗಣೆ:—

ಕಾಯದಲಾದ ಅರ್ಪಿತ ಅರ್ಪಿತವಲ್ಲ. ಪ್ರಾಣದಲಾದ ಅರ್ಪಿತ ಅರ್ಪಿತವಲ್ಲ. ಭಾವದಲಾದ ಅರ್ಪಿತ ಅರ್ಪಿತವಲ್ಲ. ಅರುಹಿನಲಾದ ಅರ್ಪಿತ ಅರ್ಪಿತವಲ್ಲ. ನೆನಹಿಲ್ಲದ ಅವಧಾನ ಮರಹಿಲ್ಲದಾರೋಗಣೆ ತಟ್ಟಿದ ಮುಟ್ಟಿದ ಅರ್ಪಿತವಲ್ಲ. ಗುಹೇಶ್ವರಲಿಂಗದ ಆರೋಗಣೆಯನಿಂದು ಸಂಗನಬಸವಣ್ಣನಿಂದ ಕಂಡೆನು ॥೩॥

ಆ ಪ್ರಸ್ತಾವದೊಳು ಬಸವರಾಜದೇವರ ವಚನ ॥

ಕೈಹಾರ ನೀಡಿದರೆ ಮನಹಾರ ಕೊಳುತ್ತೈದಾನೆ. ಅಹುದಹುದು. ಸ್ವಾಮಿಯ ಹಸಿವು ಲೋಕಕ್ಕೆ ಹೊಸತು. ಕೂಡಲ ಸಂಗಮ ದೇವ ನೆರೆ ಹಸಿದ. ಮೊರಮೊರದಲ್ಲಿ ನೀಡಿ ॥೪॥

ಮೊರ ಹಾರ ನೀಡಿದರೆ ತೆರಹಾರ ಕೊಳುತ್ತೈದಾನೆ. ಆಹುದಹುದು. ದೇವರ ಹಸಿವು ನಮಗೆ ಹೊಸತಲಾ. ದೆಸೆದಿಕ್ಕೆಲ್ಲ ವಿಶ್ವತೋ ಮುಖದ, ಕೂಡಲ ಸಂಗಮ ದೇವಂಗೆ ದೆಸೆದೆಸೆಯಲ್ಲಿ ನೀಡಿ ॥೫॥

ಇದಕ್ಕೆ ಚಿಕ್ಕದಣ್ಣಾಯಕರ ವಚನ !

ಅನಾಹತದಲ್ಲಿ ಶಿವ ತನ್ನ ಲೀಲಾ ವಿನೋದದಿಂದ ನೀವು ಸಹಿತ ಮೂರ್ತಿಯಾದನು. ಹೊರಗೆ ಆಕಾರವ ಧರಿಸಿ ಒಳಗೆ ನಿರವಯಕ್ಕೆ ಆರೋಗಣೆಯ ಮಾಡಿಸಲು ಕೂಡಲ ಚನ್ನಸಂಗಮದೇವ ಪ್ರಭುದೇವರ ಅಪರಿಮಿತದಾರೋಗಣೆಗೆ ಬಸವಣ್ಣ ಮಡಿವಾಳನೆಂಬೆರಡು ತೋಳ ಧರಿಸಿದನು ಏನೆಂದುಪಮಿಸುವೆನು ॥೬॥

ಮಡಿವಾಳಯ್ಯಗಳ ವಚನ ।

ತನುಮುಖಕ್ಕೆ ನೀಡಿದ ಬೋನ ಅನುವಾಗಿ ಅಳವಡದ ಮುನ್ನ ಮನಮುಖಕ್ಕೆ ಸರಿಯಾಯಿತ್ತು. ಮನಮುಖಕ್ಕೆ ಅನುವಾಗಿ ಅಳವಡದ ಮುನ್ನ ನೋಡ ನೋಡಲೈಕ್ಯವಾಯಿತ್ತು. ಆಕಾಶ ಬಾಯ ತೆರೆದಂತೆ

ಆರೋಗಣೆಯ ಮಾಡುತಿದ್ದನು. ಮಾಡಿಸುವ ಗರುಪರಾರೊ? ಕಲಿ ದೇವರ ದೇವನ ಅನುವನರಿದು ನೀಡುವರೆ ಸಂಗನ ಬಸವಣ್ಣಗಲ್ಲದೆ ಮುತ್ತಾರಿಗು ಅಳವಡದು ॥೭॥

ಹಡಪದಪ್ಪಣ್ಣಗಳ ವಚನ।

ಹೆಡಗೆ ಹಾರ ಮೊರಹಾರ ಗೆರಸಿಹಾರ ಮುಡಕೆ ಹಾರ ದೆಸೆ ದೆಸೆಯಲ್ಲಿ ತಂದು ನೀಡುತ್ತಿರಲು ಹೊಸ ಪರಿಯದಾರೋಗಣೆಯನವಧರಿಸುತ್ತಿಪನನು ಆವ ದೆಸೆ ದೆಸೆಯಲ್ಲಿ ತಂದು ನೀಡುತ್ತಿದ್ದರೆ ಆ ದೆಸೆಗಳೆಲ್ಲ ಬಾಯಾಗಿ ಕೊಳುತಿರ್ದನು. ಎತ್ತೆತ್ತ ನೋಡಿದತ್ತತ್ತ ಮುಖವಾಗೆ ಎವೆ ಹೊಯಿದಂತೆ ತೆರಹಿಲ್ಲದೊಂದು ನಿಮಿಷ ಎಡಹಿದರೆ ಅಕ್ಕಿಗಚ್ಚು ನುಚ್ಚು ತವಡು ಮೊದಲಾಗಿ ಹೆಚ್ಚಿದವು. ನಿಮಿಷದೊಳು ಭಕ್ತಿ ಬಂಧುಗಳೆಲ್ಲ ತಮ್ಮಟದ ಸುಯಿಧಾನವ ತಂದು ಸಾರೆಗಟ್ಟಿ ನೀಡುತ್ತಿರೆ ಅದ್ಭುತದ ಆರೋಗಣೆಯ ಕಂಡು ಹರಿಹರಿದು ಸಾಕ ಪ್ರಯತ್ನಮಂ ಮಾಡಿ ಎನುತ್ತೆ ಬಸವ ಪ್ರಿಯ ಕೂಡಲ ಚನ್ನಸಂಗಯ್ಯನಲ್ಲಿ ಸಂತೋಷದಲ್ಲಿ ಲೋಲಾಡುತಿರ್ದನು ಎನ್ನ ಪರಮ ಗುರು ಬಸವಣ್ಣನು ॥೮॥

ಬಸವರಾಜದೇವರ ವಚನ ॥

ಅರಿದರಿದು ಎನಗಿಂದು ಕಂಗೆ ಮಂಗಳವಾಯಿತ್ತು. ಒಂದಹುದು ಒಂದಾಗದೆಂಬ ಭ್ರಮೆಯವನಲ್ಲ. ಬೇಕು ಬೇಡೆಂಬ ಜಂಜಡದವನಲ್ಲ. ಎಡವರಿಯದ ನೋಟ ನುಡಿಯ ಸಡಗರಪರಿತು ಎಡೆಯಾಟ ಕೋಟಲೆಯ ಕಳೆದು ಬಂದನು. ನೋಡುವರ ಮನದ ಸುಖದ ಸಾಗರ ನಿಧಿಯ ನೇನೆಂದುಪಮಿಸುವೆನು. ಎನ್ನ ಉಭಯ ಕರ್ಮವ ಕಳೆದು ತನ್ನೊಳಗೆ ಇಂಬಿಟ್ಟು ಕೊಳ್ಳಬಂದನು ಕೂಡಲ ಸಂಗಮ ದೇವ ಕೃಪಾಮೂರ್ತಿ ॥೯॥

ಮತ್ತಂ ॥ ಬೆದರಿಸುವ ಸಂಗ, ಬೆಚ್ಚಿಸುವ ಸಂಗ, ಬಿಚ್ಚಿಸುವ ಸಂಗ, ತನ್ನ ನಚ್ಚಿ ಮೆಚ್ಚಿ ಮುಯ್ಯಾಂತೆನೆಂದರೆ ಮೂಳವಾಡುವ ಸಂಗ, ಬೋಳೈಸುವ ಸಂಗ, ಆಳಿಗೊಳಿಸುವ ಸಂಗ, ಇದಿರ ಕೈಯಲ್ಲಿ ಅಳಲಿಸುವ ಸಂಗ, ಬಳಲಿಸುವ ಸಂಗ, ಒತ್ತಿ ನೋಡುವ ಸಂಗ, ಒಳಹೊರಗೆನ್ನದೆ ಕೂಡಲ ಸಂಗಮ ದೇವಯ್ಯ ಮಡಿವಾಳ ಮಾಚಿ ತಂದೆಯ ಕೃಪೆಯುಳ್ಳನ್ನಕ್ಕರ ನಾನಂಜೆನು ॥೧೦॥

ಇದಕ್ಕೆ ಮಡಿವಾಳಯ್ಯಗಳ ಪ್ರತ್ಯುತ್ತರ.

ಮಾಚಿ ತಂದೆಗಳ ಕೈಲಾಗದು. ಹೋಚಿ ತಂದೆಗಳ ಕೈಲಾಗದು. ಇಚ್ಛೆಗೆಟ್ಟವನಂತೆ ಇರಲಾಗದು. ಅಚ್ಛೊತ್ತಿದಂತೆ ಇರಬೇಕು. ಅತಿ ಚೋದ್ಯವಾಗಿ ಎಚ್ಚರಿಕೆಯ ಮಚ್ಚು ಮರಹಿಲ್ಲದೆ ಬೆಚ್ಚುತಿರಬೇಕು. ಮಚ್ಚು ಪಲ್ಲಟವಾದರೆ ಆಶ್ಚರ್ಯ ಭಕ್ತಿ ಭರಿತನಾಗಿರಬೇಕು. ಕಲಿ ತರುಳನೊತ್ತಿ ಮುಂದಕ್ಕೆ ಹರಿವನಲ್ಲದೆ ಎಡೆಗೋಲನಾಸೆ ಮಾಡುವನೆ ಹೇಳಾ? ಕಲಿ ದೇವರ ದೇವನೆ ಅಂಕೆಗೆ ಜಂಕೆಗೆ ಬೆಚ್ಚಿ ಬೆದರಿ ಓಡದಿರು. ವೀರಗಂಕಣವ ಕಟ್ಟು ಸಂಗನ ಬಸವಣ್ಣಾ ॥೧೧॥

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ.

ಸುಯಿಧಾನ ಸಯುವಾಯಿತ್ತೆಂದು ಬೆದರಿದೆನಾದಡೆ, ನಿಮ್ಮಾಣೆ, ನಿಮ್ಮ ಪ್ರಮಥರಾಣೆ. ಷಡಿ ಪದಾರ್ಥಂಗಳು ಅವಸರಕ್ಕೆ ಒದಗದೆ ಇದ್ದಲ್ಲಿ ಮನವಳುಕಿ ಬೆದರಿದೆನಾದಡೆ ನಿಮ್ಮ ಭಕ್ತರಿಗೆ ಸಲ್ಲೆನು. ಒಡವೆ ಸವಿದರೆ ಒಡಲನೆ ಸಲಿಸುವೆನು. ಕಡೆಮುಟ್ಟೆ ಪೂರೈಸದಿರ್ದೆನಾದಡೆ ಮಡಿವಾಳ ಮಾಚಿ ತಂದೆಯ ಪಾದಸಾಕ್ಷಿಯಾಗಿ ಕೂಡಲ ಸಂಗಮ ದೇವರಿಗೆ ದೂರವಹೆನು ॥೧೨॥

ಮತ್ತಂ, ಅಳವಡಿಸಿದ ಪದಾರ್ಥ ಆರ್ಪಿತಕ್ಕೆ ಸರಿಯಾಯಿತ್ತು. ಅಳವಡಿಸದ ಮುನ್ನ ಕೈಕೊಳ್ಳುತ್ತೈದಾನೆ ಶಿವನು. ಸಂದ ಪದಾರ್ಥ ಸಲ್ಲಲಿ. ಕೂಡಲಸಂಗಮದೇವರ ಆರೋಗಣೆಯ ಅವಸರಕ್ಕೆ ಸುಚಿತ ಸುಯಿಧಾನವ ತೆಗೆಸಿರೆ ಸೊಡ್ಡಳ ಬಾಚರಸರೆ ॥೧೩॥

ಇದಕ್ಕೆ ಸೊಡ್ಡಳ ಬಾಚರಸರ ವಚನ. ಬನ್ನಿರಿ ಕರಣಿಕರು ನೀವು ಲೆಕ್ಕವ ಕೇಳಿ ಧಾನ್ಯ ಸಂಚವನು. ಹೊಸ ಜೋಳ ಅರವತ್ತು ಲಕ್ಷ ಖಂಡುಗ. ಸಾವಿ ಧಾನ್ಯ ಮೂವತ್ತು ಲಕ್ಷ ಖಂಡಗ. ಗೋದಿ ಹನ್ನೆರಡು ಲಕ್ಷ ಖಂಡುಗ. ಕಡಲೆ ಬತ್ತೀಸ ಲಕ್ಷ ಖಂಡಗ. ಹೆಸರು ಮೂವತ್ತು ಲಕ್ಷ ಖಂಡುಗ. ನವಣ, ಹಾರಕ, ಬರಗು, ಸಾವೆ, ಮಾಸಿಗಳೆಂಬ ಧಾನ್ಯ ಐವತ್ತು ಲಕ್ಷ ಖಂಡುಗ. ಹೊಸ ಹುಗ್ಗಿಯ ವೇಳೆಗೆ ಬಹ ಬತ್ತ ಹತ್ತ ಅಗಣಿತ. ಮಹಾದಾನಿ ಸೊಡ್ಡಳನಾರೋಗಣೆಯ ಅವಸರಕ್ಕೆ ಅಳವಟ್ಟ ಸುಯಿಧಾನ ಇನಿತನವಧರಿಸಯ್ಯ ಸಂಗನಬಸವಣ್ಣ ॥೧೪॥

ಬಸವರಾಜದೇವರ ವಚನ. ಎಣಿಕೆಗೆ ಬಂದ ಸುಯಿಧಾನ ಕ್ಷಣಕ್ಕೆ ಪಾಕವಾಗಲು ಗಣನೆ ಇಲ್ಲದೆ ನೀಡುತ್ತಿರಲು ತೋರದ ಮುನ್ನವೆ ಅರ್ಪಿತವಾದವು. ಇಂತು ಎಣಿಸಿ ನೋಡಿಹೆನೆಂದರೆ ಮನಕ್ಕೆ ಸಾಧ್ಯವಲ್ಲ. ಬಯಲು ಬಾಯ್ದೆಗೆದಂತೆ ಉಣುತ್ತಿದ್ದನು ಕೂಡಲಸಂಗಮದೇವನು. ॥೧೫॥

ಮತ್ತಂ, ಖಂಡ ಮಂಡಿಗೆ ಬೆಲ್ಲ ದ್ರಾಕ್ಷೆ ಸಕ್ಕರೆ ಸರಿಭಾಗವಾದ ಹೊಸ ಹೆಸರ ಭಕ್ಷ ಪನ್ನೆರಡು ಖಂಡುಗ, ಸುಲಿಗಡಲೆಯ ಕಜ್ಜಾಯ ಹದಿನೆಂಟು ಖಂಡುಗ, ಅಕಾಲ ಮಾವಿನಹಣ್ಣು ಇಪ್ಪತ್ತುನಾಲ್ಕುಲಕ್ಷ ಕಡೆ ಇಲ್ಲದ ಕದಳಿಯ ಫಲ ಚಾರಬೀಜ ಎಂಬತ್ತು ಖಂಡುಗ, ತವರಾಜ ಹೆತ್ತತುಪ್ಪ ಹಲಸಿನಹಣ್ಣು ಮನಮೇರೆ ಹಾಲುಕೆನೆ ಹದಿನೆಂಟು ಖಂಡುಗ, ಉತ್ಪತ್ತಿ ಚಿಲುಪಾಲು ಘಟ್ಟೆ ಕಟ್ಟಣೆ ಇಲ್ಲ. ಮನ ಒಲಿದ ಕಜ್ಜಾಯವನಾರೋಗಣೆಯ ಮಾಡು ದೇವ ಕೂಡಲಸಂಗಮದೇವಾ. ॥೧೬॥

ಮತ್ತಂ, ಕೈಯ್ಯಲ್ಲಿ ಮುಟ್ಟಿದ ಪದಾರ್ಥ, ಕೈಯ್ಯಲ್ಲಿ ಐಕ್ಯ. ಕಂಗಳ ತಾಗಿದ ಪದಾರ್ಥ ಕಂಗಳೊಳಗೆ ಐಕ್ಯ. ನಾಲಿಗೆ ತಾಗಿದ ಪದಾರ್ಥ ನಾಲಿಗೆಯೊಳಗೈಕ್ಯ. ನೀಡುವ ಪರಿಚಾರಕರು ಬೇಸತ್ತರಲ್ಲದೆ ಆರೋಗಣೆಯ ಮಾಡುವ ದೇವ ಎತ್ತಲೇನೆಂದರಿಯನು. ಬ್ರಹ್ಮಾಂಡವನೊಡಲೊಳಗಿರಿಸಿಕೊಂಡು ಬಂದ ದೇವಂಗೆ ಆರೋಗಣೆಯ ಮಾಡಿಸಿಹೆನೆಂಬ ಅಹಂಕಾರದಲ್ಲಿ ಇದ್ದೆನಾಗಿ ನಾನ ಕೆಟ್ಟ ಕೇಡನೇನೆಂಬೆನಯ್ಯ? ಕೂಡಲಸಂಗಮದೇವರ ತೃಪ್ತಿಯ ತೆರನ ಬಲ್ಲರೆ ಹೇಳಾ ಮಡಿವಾಳಯ್ಯ ॥೧೭॥

ಇದಕ್ಕೆ ಮಡಿವಾಳ ತಂದೆಗಳ ವಚನ. ಮರುಳುಗೊಂಡೆಯಲ್ಲ ಬಸವಣ್ಣ! ಪಿತ್ತ ತಲೆಗೇರಿತ್ತೆ ನಿನಗೆ? ನರೆಯರಿದವರು ಮರುಳಹರೆಂಬ ನಾಣ್ನುಡಿ ದಿಟವಾಯಿತ್ತು. ಜಗದಗಲ ಮಿಗೆ ಅಗಲದ ದೇವಂಗೆ ಕ್ಷುರುಹಿನ ಪದಾರ್ಥಂಗಳು ನಿಲುಕಲಾಪವೆ? ಎಡೆಯಲೊಬ್ಬರಲಾಗದು. ಮಾಡುವರೆ ಕಡೆಯಲ್ಲಿ ಕೆಡುವುದು ನಿನ್ನ ಭಕ್ತಿ. ಕಲಿದೇವರ ದೇವನ ತೃಪ್ತಿಯನು ಚನ್ನಬಸವಣ್ಣ ಬಲ್ಲ. ಕೇಳಿ ನೋಡಾ ಸಂಗನಬಸವಣ್ಣ. ॥೧೮॥

ಇದಕ್ಕೆ ಬಸವರಾಜದೇವರ ವಚನ. ಧನ ಮದದಿಂದ ಸುಯಿಧಾನದ ಮದದಿಂದೆ ಮಾಡಿದೆನೆಂಬುದು ಕಡೆ ಮುಟ್ಟದೆ ಹೋಯಿತ್ತು. ಹಸ್ತಪರುಷದಿಂದ ಮುಟ್ಟಿ ಮಾಡಿದುದೆಲ್ಲವು ಅಂತರಿಸಿತ್ತು. ದೃಷ್ಟಿಪರುಷದಿಂದ ನೋಡಿ ಮಾಡಿಹೆನೆಂಬುದೆಲ್ಲವು ಹೆಚ್ಚಿತ್ತು. ವಾಕ್ಪರುಷದಿಂದ ನುಡಿದು ಮಾಡಿದುದೆಲ್ಲವು ಸ್ವಯವಾಯಿತ್ತು. ಮನಪರುಷದಿಂದ ಮುಟ್ಟಿ ನೀ

ಡಿದ ಪದಾರ್ಥ ತೋರದ ಮುನ್ನವೆ ಅಮುಳೋಕ್ಯವಾದ ಕೂಡಲ ಸಂಗಮ ದೇವರ ತೃಪ್ತಿಯನರಿದಿಹೆನೆಂದು ಕೆಟ್ಟೆನು. ॥೧೯॥

ಮತ್ತಂ, ತೋರಿಲ್ಲದ ಸಿಂಹಾಸನದ ಮೇಲೆ ಹೇಳಬಾರದ ಘನವು ಬಂದೆರಗಿದರೆ ತೋರಿ ಮೆರೆವ ಸಂಗಮನಾಥನು ಎದ್ದು ಹೋದನು. ನೀಡ ನೀಡ ಸುಯಿಧಾನವೆಲ್ಲವು ನಿರ್ವಯಲಾಯಿತ್ತು. ಮಾಡಿದ ಸುಯಿಧಾನವ ಮರಳಿ ನೋಡಲಿಲ್ಲ. ಇದ ಏನ ಹೇಳುವೆ ಆ ನಿಯಮದ ಚರಿತ್ರವನು? ಇಂದೆಂತುಪಮಿಸುವೆನು ವಿಸ್ಮಯವನು? ಕೂಡಲ ಸಂಗಮದೇವರ ತೃಪ್ತಿಯ ತೆರನ ಬಲ್ಲರೆ ಹೇಳಯ್ಯ ಚನ್ನಬಸವಣ್ಣ. ॥೨೦॥

ಇಂತು ಬಸವರಾಜದೇವರು ಪ್ರಭುದೇವರಿಗೆ ತೃಪ್ತಿಯ ಮಾಡುವ ಬುದ್ಧಿಯಾವುದೆಂದು ಕೇಳಲು ಅದಕ್ಕೆ ಚಿಕ್ಕದಣ್ಣಾಯಕರ ವಚನ.

ಅನಂತ ವರುಷದ ಹಿರಿಯರೆಂಬೆನೆ? ಏನ್ನೆನು, ಅವರು ಭೂಭಾರಕರಾಗಿ. ಏಳು ವರುಷದ ಹಿರಿಯ ಚೇಲಾಳ. ಹನ್ನೆರಡು ವರುಷದ ಹಿರಿಯಳು ಮಹಾದೇವಿಯಕ್ಕ. ಅಂಡಜ ಪಿಂಡಜ ರೋಮಜರೆಂಬ ಅಂದಂದಿನ ಬಾಲಕರು ನಿಮಗೆ ಬುದ್ಧಿಹೇಳುವರೆ ಎನಗೆ ಬುದ್ಧಿ ಇಲ್ಲ ಕೂಡಲ ಸಂಗಮದೇವ. ॥೨೧॥

ಮತ್ತಂ, ಪಂಚಶತಕೋಟಿ ವಿಸ್ತೀರ್ಣ ಭೂಮಂಡಲ ಮೊದಲಾದ ನವಖಂಡ ಪೃಥ್ವಿ ಎಲ್ಲವು ಒಂದು ಭುವನದೊಳಗಡಗಿತ್ತು. ಅಂತಹ ಈರೇಳು ಭುವನವನೊಳಕೊಂಡ ಮಹಾಘನಕ್ಕೆ ಸುಯಿಧಾನ ನೀಡಿಹೆನೆಂಬ ಸ್ವಾಮಿಯ ಮರುಳತನವೇನೆಂಬೆನು? ಕೂಡಲ ಚನ್ನಸಂಗಮದೇವರ ತೃಪ್ತಿಯ ತೆರನನರಿವರೆ ನೀವು ಬೋನ ನಾನು ಪದಾರ್ಥ. ಇವರಿಂದ ಮೇಲೇನು ಘನವಿಲ್ಲ ಕಾಣಾ ಸಂಗನಬಸವಣ್ಣ ॥೨೨॥

ಇದಕ್ಕೆ ಬಸವದೇವರ ವಚನ. ಎನ್ನ ಕಾಯದ ಕತ್ತಲೆ ಹಿಂಗಿತ್ತು ಚನ್ನಬಸವಣ್ಣ. ಇಂದಿನಲ್ಲಿ ಎನ್ನತನು ಮನಧನದ ಲೋಭವಳಿದು ತಳವೆಳಗಾಯಿತ್ತು. ಇಂದಿನಲ್ಲಿ ಎನ್ನೆಡೆಗೊಂಡ ಅಹಂಕಾರ ನಿರ್ವಯಲಾಯಿತ್ತು ಚನ್ನಬಸವಣ್ಣ. ಇಂದಿನಲ್ಲಿ ಕೂಡಲಸಂಗಮದೇವರ ತೃಪ್ತಿಯ ತೆರವ ನೀನು ತೋರಿದೆಯಾಗಿ ನಾನು ಬದುಕಿದೆನು ಕಾಣಾ ಚನ್ನಬಸವಣ್ಣ ॥೨೩॥

ಇದಕ್ಕೆ ಚನ್ನಬಸವರಾಜದೇವರ ವಚನ. ಎನ್ನ ಹೊಗಳಲಿಕ್ಕೆ ನಿಮಗೆ ತೆರಹಿಲ್ಲ. ನಿಮ್ಮ ಹೊಗಳಲಿಕೆ ಎನಗೆ ತೆರಹಿಲ್ಲ. ಒಬ್ಬರನೊಬ್ಬರ ಹೊಗಳಲಿಕೆ ಹೊತ್ತು ಹೋಯಿತ್ತಲ್ಲದೆ ಸಂಗಮನಾಥನ ಆಪ್ಯಾಯನಕ್ಕೆ ಪದಾರ್ಥವ ನೀಡಲಿಲ್ಲ. ಕೂಡಲ ಚನ್ನಸಂಗಯ್ಯಂಗೆ ಪದಾರ್ಥವನಳವಡಿಸಿ ನಡೆಸಿದೆ ಸಂಗನಬಸವಣ್ಣ. ॥೨೪॥

ಇದಕ್ಕೆ ಬಸವರಾಜದೇವರ ವಚನಃ-- ಧನ ಸವೆದರೆ ತನುವನರ್ಪಿಸುವೆನು. ತನು ಸವೆದರೆ ಮನವನರ್ಪಿಸುವೆನು. ಮನ ಸವೆದರೆ ಭಾವವನರ್ಪಿಸುವೆನು. ಭಾವ ಸವೆದರೆ ನಿರ್ಭಾವವನರ್ಪಿಸುವೆನು. ಕೂಡಲ ಸಂಗಮದೇವಯ್ಯ ಚನ್ನಬಸವಣ್ಣನ ತೆತ್ತಿಗನಾದ ಬಳಿಕ ನಾನು ನಿಮ್ಮಲ್ಲಿ ಕೂಡಿ ಅರ್ಪಿಸಿ ಶುದ್ಧನಪ್ಪೆನಯ್ಯ. ॥೨೫॥

ಮತ್ತಂ, ಆದಿಯ ಲಿಂಗವ ತಂದಾತನಲ್ಲಯ್ಯ. ಅನಾದಿಯ ಲಿಂಗವ ತಂದಾತನಲ್ಲಯ್ಯನು. ಭಾಪುರೆ ಜಂಗಮವೆ ನಿರ್ವಯಲನವಗ್ರಹಿಸಿದಿರಿ ನಿಮಗೋಸುಗ ಮಾಡುವ ಸುಯಿಧಾನವನು ನಡೆಗೆಟ್ಟು ಮಾಡುವೆನು ಸರ್ವಕುಳಕ್ಕೆ ನೀನೆಂದು ಅಲ್ಲಯ್ಯನ ಶ್ರೀಪಾದಕ್ಕೆ ಕೈಯ್ಯನಾನುವೆನು. ನವ ಬ್ರಹ್ಮರ ಕೇರಿಯೊಳಗೆ ಅಲ್ಲಯ್ಯನ ಪ್ರಭೆ ರುದ್ರ ಭೂಮಿಯೊಳಗೆ ಅಲ್ಲಯ್ಯನ ಪ್ರಭೆ. ಬಂದು ನಿಂದಸಿ ಲವಿಂಗೆ ಅಲ್ಲಯ್ಯನ ಪ್ರಭೆ. ಸುಯಿಧಾನವಿಲ್ಲದಿರೆ ಎನ್ನ ನೀಡುವೆನು ಕೂಡಲ ಸಂಗಮದೇವಾ. ॥೨೬॥

ದೇವದೇವ ಮಹಾಪ್ರಸಾದ ಅವಧರಿಸಯ್ಯ ಎನ್ನ ಬಿನ್ನಪವ. ಅತಳ ವಿತಳ, ಸುತಳ, ತಳತಳ ರಸಾತಳ ಮಹೀತಳ ಪಾತಾಳಾದಿ ಲೋಕದಿಂದತ್ತ ನಿಮ್ಮ ಶ್ರೀಚರಣ. ಭೂಲೋಕ ಭುವರ್ಲೋಕ ಸ್ವರ್ಲೋಕ ಮಹಲೋಕ ಜನಲೋಕ ತಪೋಲೋಕ, ಸತ್ಯಲೋಕದಿಂದತ್ತತ್ತ ನಿಮ್ಮುತ್ತುಮಾಂಗ. ತನುವಿನೊಳಗೆ ಅನಲ ಭರಿತವಾಗಿರ್ದು ಮಥನದಿಂ ತೋರಿ ಆಹುತಿಗೊಂಬಂತೆ ಸರ್ವಕರ್ತ ನಿತ್ಯಾನಂದಮಯನೆ ಭಕ್ತ ಲೀಲಾ ವಿನೋದನೆ ಕೂಡಲಸಂಗಮದೇವ ಸುಚಿತ್ತದಲ್ಲಿ ಮನ ಮೀಸಲ ಬೋನವನಾರೋಗಿಸಯ್ಯ. ॥೨೭॥

ಕಾಲ ಮುಟ್ಟಲಮ್ಮದ ಸುಯಿಧಾನ. ಕಲ್ಪಿತವಿಲ್ಲದ ಸುಯಿಧಾನ. ಅನಂತರತಿ ಎಂಬ ಹೆಂಗಸು ಮುಟ್ಟದ ಸುಯಿಧಾನ- ಭಾಳಲೋಚ

ನನೆಂಬ ಜಂಗಮ ಮುಟ್ಟದ ಸುಯಿಧಾನ. ಎಲ್ಲಿಯು ಮುಟ್ಟದ ಸುಯಿಧಾನವ ನಿಮಗರ್ಪಿಸಿದೆನು ಆರೋಗಿಸಯ್ಯ ಪ್ರಭುವೇ ಕೂಡಲ ಸಂಗಮದೇವ ||೨೮||

ಇದಕ್ಕೆ ಚಿಕ್ಕದಣ್ಣಾಯಕರ ವಚನ. ಅಂಗ ಲಿಂಗಕ್ಕೆ ಭಾಜನವೆಂಬರು. ಅಂಗ ಲಿಂಗಕ್ಕೆ ಭಾಜನವಲ್ಲ. ಕಾಯಗುಣಂಗಳ ಕಳೆದು, ಮಾಯಾಮದವ ಹಿಂಗಿಸಿ, ಮನವೆಂಬ ಘನಪರಿಯಾಣವ ಬೆಳಗಿ, ಷಡಾಧಾರ ಚಕ್ರವೆಂಬ ಅಡ್ಡಣಿಗೆಯನಿಟ್ಟು, ಸಕಲಇಂದ್ರಿಯಂಗಳೆಂಬ ಕೆಲವಟ್ಟಲನಳವಡಿಸಿ, ಜ್ಞಾನಪ್ರಕಾಶವೆಂಬ ದೀಪಸ್ತಂಭಮಂ ಬೆಳಗಿ, ಸಕಲ ಕರಣಂಗಳೆಂಬ ಮೇಲುಸಾಧನಂಗಳಂ ಹಿಡಿದು, ಸದ್ಭಕ್ತ್ಯಾನಂದವೆಂಬ ಬೋನಮಂ ಬಡಿಸಿ, ವಿನಯ ವಿವೇಕವೆಂಬ ಅಭಿಗಾರಮಂ ಗಡಣಿಸಿ ಪ್ರಸನ್ನ ಪರಿಣಾಮದ ಮಹರುಚಿ ಎಂಬ ಚಿಲುಪಾಲ ಘಟ್ಟಿಯ ತಂದಿಳುಹಿ ಸುಚಿತ್ತ ಸುಯಿಧಾನದಿಂದೆ ನಿಮ್ಮ ಹಸ್ತದ ಅವಧಾನವೆ ಅನುವಾಗಿ ಬಸವಣ್ಣನೆ ಬೋನನಾನೇ ಪದಾರ್ಥವಾಗಿ ನಿಮ್ಮ ಪರಿಯಾಣಕ್ಕೆ ವೇಧಿಸಿದೆನು ಆರೋಗಣೆ ಮಾಡಯ್ಯ ಕೂಡಲಚನ್ನಸಂಗಮ ದೇವಾ. ||೨೯||

ಮತ್ತಂ, ಕಾಯವೆಂಬ ಘಟಕ್ಕೆ ಕರಣಂಗಳೆಂಬ ಸುಯಿಧಾನ, ಅದಕ್ಕೆ ಚೈತನ್ಯವೆ ಜಲವಾಗಿ ಸಮತೆ ಎಂಬ ಮುಚ್ಚಳವ ಮುಚ್ಚಿ ಧೃತಿ ಎಂಬ ಸಮತೆಯನೊಡ್ಡಿ ಮತಿ ಎಂಬ ಅಗ್ನಿಯನಿಕ್ಕಿ ಜ್ಞಾನವೆಂಬ ದರ್ವಿಯಲ್ಲಿ ಘಟ್ಟಿಸಿ ಪಕ್ವಕ್ಕೆ ತಂದು ಭಾವದಲ್ಲಿ ಕುಳ್ಳಿರಿಸಿ ಪರಿಣಾಮದೋಗರವ ನೀಡುವೆನಯ್ಯ ಕೂಡಲಸಂಗಮದೇವಾ. ||೩೦||

ಮತ್ತಂ, ಕಂಗಳಾಶ್ರಯದ ಸೋಂಕಿನ ಸುಖ ಸಂಬಂಧವನು ಮಹದಾಶ್ರಯಕ್ಕೆ ತಂದು ಸೂಸಲೀಯದೆ ನಿಮಗರ್ಪಿಸುವೆ. ನಾಸಿಕದಾಶ್ರಯವನು ತಟ್ಟು ಮುಟ್ಟಿಲ್ಲದೆ ನಿಮಗರ್ಪಿಸುವೆನು. ಆಪ್ಯಾಯನದಲ್ಲಿ ಅಂಗವಿಸುವ ಸುವಿಚಾರ ಚೈತನ್ಯ ಮಧ್ಯಕ್ಕೆ ತಂದು ನಿಮಗರ್ಪಿಸುವೆ. ಪ್ರಸಾದಿ ಅನುಭಾವ ಪ್ರಸಾದಿ ಶರಣ ಪ್ರಸಾದಿ ಜಂಗಮವೇ ಲಿಂಗವೆಂಬುದನರಿದೆನಾಗಿ ಕೂಡಲ ಚನ್ನಸಂಗನ ಪ್ರಸಾದದಿಂದ ನಾನು ಪ್ರಸಾದಿಯಾದೆನಾಗಿ ಆನು ನಿನಗೆ ಪ್ರಸಾದಿಯಾದೆನು. ಆರೋಗಿಸಯ್ಯ ಪ್ರಭುವೇ ||೩೧||

ಮತ್ತಂ ನೀನಳವಡಿಸಿಕೊಟ್ಟ ಪದಾರ್ಥ ನಿನಗರ್ಪಿತವಯ್ಯ. ನಿಮ್ಮ ಆರೋಗಣೆ ಮಹಾ ಆರೋಗಣೆ ಸಕಲ ಕರಣಂಗಳಿಗೆ ಹಿತಾರ್ಥ. ಕೂಡಲ

ಚನ್ನಸಂಗಮದೇವಾ ನಿನಗೆ ಕ್ಷುತ್ತಿಲ್ಲಾಗಿ ನಾನು ಅರ್ಪಿತವ ಮಾಡಲಿಲ್ಲವಯ್ಯ ॥೩೨॥

ಮತ್ತಂ, ಗುರುವೇ ಬೋನ, ಶಿಷ್ಯನೇ ಮೇಲೋಗರ, ಲಿಂಗಕ್ಕೆ ಪದಾರ್ಥವರ್ಪಿತವಯ್ಯ. ಘನಕ್ಕೆ ಮನವೇ ಅರ್ಪಿತ. ಮನಕ್ಕೆ ಮಹವೆ ಅರ್ಪಿತ. ಘನದೊಳಗೆ ಮನವು ತಲ್ಲೀಯವಾದ ಬಳಿಕ ಅರ್ಪಿಸುವ ಭಕ್ತರಾರು? ಆರೋಗಿಸುವ ದೇವರಾರು? ನಿತ್ಯ ತೃಪ್ತ ಉಣಕಲಿತೆನೆಂದರೆ ಅರ್ಪಿಸಲುಂಟೆ ಪೇವ ಮತ್ತೊಂದನು? ಕೂಡಲಸಂಗಮದೇವ ಬಸವಣ್ಣನೇ ಬೋನ ನಾನೇ ಪದಾರ್ಥ ಸುಚಿತ್ತದಿಂದೆ ಆರೋಗಿಸಯ್ಯ ಪ್ರಭುವೆ. ॥೩೩॥

ಇದಕ್ಕೆ ಪ್ರಭುದೇವರು ತೃಪ್ತಿಯಾಗಿ ನಿರೂಪಿಸಿದ ವಚನ. ಮನಮುಕ್ತಿ ವಿವೇಕವೆಂಬ ಅಕ್ಕಿಯನು ಗುಪಿತವೆಂಬ ವರೊಳಗಿಕ್ಕಿ ಅಭಿನ್ನಮಥನವೆಂಬ ಒನಕೆಯಲ್ಲಿ ಥಳಿಸಿ ಕಿಲ್ಮಿಷವೆಂಬ ತೌಡಂ ಹಾರಿಸಿ ಸಮತೆಎಂಬ ಸಲಿಲದಲ್ಲಿ ಜಾಳಿಸಿ ಅಳುಪೆವೆಂಬ ಹರಳಂ ಕಳೆದು ದಯಾಮೃತವೆಂಬ ಹಾಲಿನಲ್ಲಿ ಬೋನವಂ ಮಾಡಿ ಸಮರಸ ರುಚಿಕರದಿಂದೆ ಶಾಕಪಾಕಂಗಳ ಮಾಡಿ ನೆನಹಿನ ಲವಲವಿಕೆಯೇ ಅಭಿಗರವಾಗಿ ನಿರ್ಮಲವೆಂಬ ಶಿವದಾನವ ಗಡಣಿಸಿ ಕಾಯ್ದಿರ್ದರಯ್ಯ ಪಂಚೇಂದ್ರಿಯವೆಂಬ ಸೊಣಗ ಮುಟ್ಟದಂತೆ. ಕಾಯ್ದಿರ್ದರಯ್ಯ ಷಡುವರ್ಗವೆಂಬ ತೊತ್ತೆಯರು ಮುಟ್ಟದಂತೆ. ಕಾಯ್ದಿರ್ದರಯ್ಯ ಅಷ್ಟಮದವೆಂಬ ಮಕ್ಕಳು ಮುಟ್ಟದಂತೆ. ಇನಿತು ಮುಖ್ಯವಾದ ಹೀನಂಗಳಾವಾವು ಮುಟ್ಟದಂತೆ ಕಾಯ್ದಿರ್ದರಾಗಿ ಈ ಬೋನ ಗುಹೇಶ್ವರ ಲಿಂಗಕ್ಕೆ ಅರ್ಪಿತವಾಯಿತ್ತು ಕಾಣಾ ಚನ್ನ ಬಸವಣ್ಣಾ ॥೩೪॥

ಮತ್ತಂ, ಭರಿತ ಬೋನ, ಭರಿತ ಬೋನವೆಂದು ಭ್ರಮೆಗೊಂಡು ಭ್ರಮಿತರಾದಿರಿ ಲೋಕವೆಲ್ಲ. ಭರಿತ ಬೋನವೆ ದಿಟವಾದರೆ ಮರ್ತ್ಯದಲ್ಲಿ ಸುಳಿಯಲುಂಟೆ? ಚತುರ್ವಿಧ ಅರ್ಪಿತದೊಳಗೆ ಆವುದು ಭರಿತವೆಂಬುದನರಿಯರಾಗಿ ಗುಹೇಶ್ವರ ಲಿಂಗದಲ್ಲಿ ಭರಿತ ಬೋನದ ಅನು ಚನ್ನಬಸವಣ್ಣಂಗಾಯಿತ್ತು ॥೩೫॥

ಪ್ರಭುದೇವರು ಬಸವರಾಜ ದೇವರೊಡನೆ ನಿರೂಪಿಸಿದ ಪ್ರತ್ಯುತ್ತರ.

ಭಕ್ತಿಯೇ ಓಗರವಾಗಿ ಸತ್ಯವೆ ಮೇಲೋಗರವಾಗಿ ನಿಜತತ್ವವೆ ಸ್ವಯವಾಗಿ ಗುಹೇಶ್ವರ ಲಿಂಗಕ್ಕೆ ಇಕ್ಕ ಬಲ್ಲವ ಸಂಗನಬಸವಣ್ಣನಲ್ಲದಿಲ್ಲಾ ॥೩೬॥

ಮತ್ತಂ, ಭೂಮಿಯಲ್ಲಿ ಹುಟ್ಟಿ ಅಂತರಂಗದಲ್ಲಿ ಬೆಳೆವ ಫಲವೃಕ್ಷದಂತೆ ಸರ್ವರಿಗೆ ಭೂತಹಿತವಾಗಿ ಫಲರಸವನೀವ-ತೆ ನೀ ಭೂಮಿಯಾಗಿ ನಾ ಸಸಿಯಾಗಿ ಬೆಳೆದ ಬೆಂಬಳಿಯಲ್ಲಿ ಗುಹೇಶ್ವರಲಿಂಗವೆಂಬುದು ಫಲವಾಯಿತ್ತು. ಅರಿವರಿಕೆ ರಸವಾಯಿತ್ತು. ಸಂಗನಬಸವಣ್ಣನಿಂದ ಎನ್ನಂಗ ಬಯಲಾಯಿತ್ತು. ॥೩೭॥

ಅಂದು ನೀವು ಬಂದ ಬೆಂಬಳಿಯಲ್ಲಿ ನಾ ಬಂದೆ. ಅಂದಂದಿನ ಸಂದೇಹ ಹರಿಯಿತ್ತು. ನೀ ಭಕ್ತನಾಗಿ ನಾ ಜಂಗಮವಾಗಿ ಗುಹೇಶ್ವರಲಿಂಗವೆಂಬುದಕ್ಕೆ ಅಂಗವಾಯಿತ್ತು. ॥೩೮॥

ಕಾಯ ಉಭಯಭೇದವಾಗಿ ಆತ್ಮನೇಕವಾಗಿ ಕಾಯ ಭಕ್ತನಾಗಿ ಪ್ರಾಣ ಜಂಗಮವಾಗಿ ನಾ ಹಿಡಿದ ರೂಪು ಬಸವಣ್ಣನಾಗಿ ಅರಿದರಿವು ಗುಹೇಶ್ವರಲಿಂಗವಾಗಿ ನೆನೆವುತ್ತಿರ್ದೆನು. ॥೩೯॥

ಇದಕ್ಕೆ ಬಸವರಾಜದೇವರ ವಚನ. ಆತ್ಮನ ಸುಳುಹಿನಿಂದ ಮತ್ತೆ ಕಾಯದ ಅವತಾರವಳಿಯಿತ್ತು. ನೀನೆಂಬ ಭಾವವರತಲ್ಲಿ ಕೂಡಲಸಂಗಮದೇವರ ಭಾವ ಪ್ರಭುದೇವರಲ್ಲಿ ಐಕ್ಯವಾಯಿತ್ತು. ॥೪೦॥

ಇದಕ್ಕೆ ಪ್ರಭುದೇವರ ವಚನ. ಅನ್ನಬರ ಹಂಗೆನ್ನದಿರು. ಸಂಗನ ಬಸವಣ್ಣ ನಿನಗೆ ಬೇರೆ ಅಡಗುವ ಕುರಹೆಂಬುದೊಂದೊಡಲುಂಟೆ? ಎನಗೆ ಅಂಗೈಯ್ಯ ನಾಮ ಕಾಯವೆಂಬ ಕವಳಿ ಗುಹೇಶ್ವರನೆಂಬ ಭ್ರಮೆ ಬಿಡದು. ॥೪೧॥

ಮತ್ತಂ, ಪ್ರಭುದೇವರು ಬಸವರಾಜದೇವರ ಸ್ತುತಿಸಿದ ವಚನ. ತನು ಶುದ್ಧವಾಯಿತ್ತು ಬಸವಣ್ಣ ಇಂದೆನ್ನ. ಮನ ಶುದ್ಧವಾಯಿತ್ತು ಬಸವಣ್ಣ ಇಂದೆನ್ನ. ಭಕ್ತಿ ಯುಕ್ತಿ ಮುಕ್ತಿ ಶುದ್ಧನಾಯಿತ್ತು ಬಸವಣ್ಣ ಇಂದೆನ್ನ. ಇವೆಲ್ಲವು ಶುದ್ಧವಾದವು ಬಸವಣ್ಣ ಇಂದೆನ್ನ. ನಮ್ಮ ಗುಹೇಶ್ವರಲಿಂಗಕ್ಕೆ ಆದಿ ಆಧಾರವಾದೆಯಲ್ಲ ಬಸವಣ್ಣ. ॥೪೨॥

ಮತ್ತಂ, ಚನ್ನಬಸವಣ್ಣನ ಸ್ತುತಿಸಿದ ವಚನ. ಪಂಚವರ್ಣದ ಬಿಂದು ಪ್ರಪಂಚನಳಿದುಳಿದಿರಲು ಸಂಚಲಿಸುವರೆ ಆವೆಡೆ ಇಲ್ಲ. ನಿಂದ ಚಿತ್ತಿನ ಪ್ರಭೆ ಅಂಗವನುರೆ ನುಂಗಿ ಹಿಂದು ಮುಂದು ಎಡಬಲ ಆದಿ ಆಕಾಶವೆಂಬುದಿಲ್ಲ. ಕೆಳಗೆ ನಿಲಲಾಧಾರ ಮೊದಲಿಂಗಿಲ್ಲ. ಕಡೆಗೆ ಸಾರುವೆನೆನಲು ಊರ್ಧ್ವವಿಲ್ಲ. ನಡುವೆ ನಾನಿದ್ದಿಹೆನೆಂದರೆ ತನ್ನೊಡಲೊಳಗೆ ಒಡೆದು ಮೂಡಿತ್ತು. ಅದು ತನ್ನಂತೆ ಬಯಲು. ಈ ಬೆಡಗು ಬಿನ್ನಾಣವ ಬಡ

ವರರಿವರೆ ಇದನರಿದು ನುಡಿದು ತೋರಿದನು ಗುಹೇಶ್ವರನ ಶರಣ ಸಂಗನಬಸವಣ್ಣನು. ॥೪೩॥

ಇದಕ್ಕೆ ಬಸವರಾಜದೇವರ ವಚನ. ಕಾಣಬಾರದ ಘನವ ಕರಸ್ಥಲದಲ್ಲಿ ತೋರಿದ. ಹೇಳಬಾರದ ಘನವ ಮನಸ್ಥಲದಲ್ಲಿ ತೋರಿದ. ಉಪಮಿಸಬಾರದ ಘನವ ನಿವ್ಮ್ರ ತೃಪ್ತಿಯ ಮುಖದಲ್ಲಿ ತೋರಿದ. ಇಂತೀ ತ್ರಿವಿಧವು ಏಕಾರ್ಥವಾಗಿಹ ಭೇದವ ಚನ್ನಬಸವಣ್ಣ ತೋರಿದನಾಗಿ ಆನು ಬದುಕಿದೆನು ಕಾಣಾ ಕೂಡಲಸಂಗಮದೇವಾ. ॥೪೪॥

ಇದಕ್ಕೆ ಪ್ರಭುದೇವರು ಚನ್ನಬಸವರಾಜದೇವರ ಸ್ತುತಿಸಿದ ವಚನ.

ಗುರುಶಿಷ್ಯರಿಬ್ಬರ ಮಧ್ಯದಲ್ಲಿ ಒಂದು ಮಗು ಹುಟ್ಟಿತ್ತು ನೋಡಾ. ಗುರುವಿಂಗೆ ಗುರುವಾದ ಪರಿ ಎಂತೋ? ಶಿಷ್ಯಂಗೆ ಶಿಷ್ಯನಾದ ಪರಿ ಎಂತೋ? ಆದಿಯ ಲಿಂಗವ ಸಾಧ್ಯವ ಮಾಡಿ ತೋರಿದ ಗುಹೇಶ್ವರನ ಶರಣ ಚನ್ನಬಸವಣ್ಣಂಗೆ ಶರಣೆಂದು ಬದುಕಿದೆನು ಕಾಣಾ ಸಂಗನಬಸವಣ್ಣಾ. ॥೪೫॥

ಆ ದೃಷ್ಟದ ಕರಣದ ಮೇಲಣ ಪೂರ್ವಾಶ್ರಯವ ಕಳೆದು ಗುರುವಿನ ಹಸ್ತ ಮುಟ್ಟಿತ್ತೆಂಬ ಸಂದಣಿಯಲ್ಲಿ ಹೋಗದು. ಪಂಚೇಂದ್ರಿಯ ಲಿಖಿತವ ತೊಡೆದು ಲಿಂಗ ಲಿಖಿತವ ಬರೆವುದು ಶಿಷ್ಯನ ಕೈಯ್ಯಲಲ್ಲದೆ ಗುರುವಿನ ಕೈಯ್ಯಲಾಗದು. ಭವಿ ಮಾಡುವ ಬೋನವ ಭಕ್ತ ಕಾಣದ ಹಾಗೆ ಅರ್ಪಿಸುವ ಭೇದವರಿದು ಪ್ರಸಾದ ಪೂರ್ವಾಶ್ರಯವ ಕಳೆವ ನಿರೂಪಿಸಬಲ್ಲರೆ ಹರಿಯದು. ಗುರುವಿಲ್ಲದ ಶಿಷ್ಯ ಶಿಷ್ಯನಿಲ್ಲದಗುರು ಇಂತೀ ಒಂದಕ್ಕೊಂದು ಇಲ್ಲದೆ ಗುಹೇಶ್ವರಲಿಂಗದಲ್ಲಿ ಸಹಜಮುದಯವಾದನು. ನಮ್ಮ ಚನ್ನಬಸವಣ್ಣಂಗೆ ನಮೋ ನಮೋ ಎಂಬೆನು. ॥೪೬॥

ಬಸವರಾಜದೇವರು ಚನ್ನಬಸವರಾಜದೇವರ ಸ್ತುತಿಸಿದ ವಚನ।

ಪ್ರಸಾದಿಯ ಪ್ರಸಾದದಲೊದಗಿದ ಪ್ರಸಾದಿಯನೇನೆಂದುಪಮಿಸುವೆನು? ಏನೆಂದು ಸ್ತುತಿಸುವೆನಯ್ಯ? ಮಹಾಪ್ರಸಾದಿಗೆ ಮಹಾಘನ ಪ್ರಸಾದವಾದ ಪ್ರಸಾದಿಯನು ಅಗಮ್ಯ ಪ್ರಸಾದದಲ್ಲಿ ಸ್ವಾಯತವಾದ ಕೂಡಲ ಸಂಗಮದೇವ ನಿಮ್ಮ ಶರಣ ಚನ್ನಬಸವಣ್ಣಂಗೆ ನಮೋ ನಮೋ ಎಂಬೆನು ॥೪೭॥

ಲೋಕದಿಚ್ಛೆಯ ನಡೆವವನಲ್ಲ. ಲೋಕದಿಚ್ಛೆಯ ನುಡಿವವನಲ್ಲ. ಲೋಕ ವಿರಹಿತ ಶರಣ. ಶರಣ ವಿರಹಿತ ಲೋಕವೆಂಬುದು ಕಾಣ ಬಂದಿತ್ತು ನೋಡಾ. ಲಿಂಗವೆ ಗೂಡಾಗಿ, ಜಂಗಮವೆ ಸ್ವಾಯತವಾಗಿ ಪ್ರಸಾದವೆ ಪ್ರಾಣವಾಗಿ ಪರಿಣಾಮದಲ್ಲಿ ಇಪ್ಪ ನೋಡಯ್ಯ. ಕೂಡಲ ಸಂಗಮದೇವ ನಿಮ್ಮ ಶರಣ ಚನ್ನಬಸವಣ್ಣಂಗೆ ನಮೋ ನಮೋ ಎಂಬೆನು. ॥೪೮॥

ಇದಕ್ಕೆ ಚನ್ನಬಸವಣ್ಣನು ಬಸವಣ್ಣನ ಸ್ತುತಿಯಿಸಿದ ವಚನ. ॥

ಅಂಗದಮೇಲೆ ಆಚಾರಲಿಂಗ ಸ್ವಾಯತವಾಯಿತ್ತು. ಪ್ರಾಣದ ಮೇಲೆ ಜಂಗಮಲಿಂಗ ಸ್ವಾಯತವಾಯಿತ್ತು. ಆತ್ಮನ ಮೇಲೆ ಸಮ್ಯಜ್ಞಾನ ಸ್ವಾಯತವಾಯಿತ್ತು ಇಂತೀ ತ್ರಿವಿಧಕ್ಕೆ ತ್ರಿವಿಧ ಸ್ವಾಯತವಾಗಿಪ್ಪ ನಮ್ಮ ಕೂಡಲ ಚನ್ನಸಂಗನ ಶರಣ ಬಸವಣ್ಣಂಗೆ ನಮೋ ನಮೋ ಎನುತಿರ್ದೆನು. ॥೪೯॥

ಮತ್ತಂ, ತನು ಗುರುವಿನಲ್ಲಿ ಸವೆದು, ಮನ ಲಿಂಗದಲ್ಲಿ ಸವೆದು, ಧನ ಜಂಗಮದಲ್ಲಿ ಸವೆದು, ತನುವೆ ಗುರುವಾಗಿ, ಮನವೆ ಲಿಂಗವಾಗಿ ಧನವೆ ಜಂಗಮವಾಗಿ, ತ್ರಿವಿಧವು ಐಕ್ಯವಾಗಿ ನಿಂದಲ್ಲಿ ನಿಜ ಭರಿತನಾಗಿ ಕಾಯವಿಡಿದು ಕರ್ಮ ವಿರಹಿತವಾಗಿ ಕೂಡಲ ಚನ್ನಸಂಗಯ್ಯನಲ್ಲಿ ಬಸವಣ್ಣನುಪಮಾತೀತನಾಗಿರ್ದನು. ॥೫೦॥

ಮತ್ತಂ॥ ಚನ್ನಬಸವಣ್ಣನು ಪ್ರಭುದೇವರ ಸ್ತುತಿಸಿದ ವಚನ ॥

ಮನೆಯೊಳಗಣ ಕಿಚ್ಚು ಕಾನನವ ಸುಟ್ಟಿತ್ತು. ಕಾನನ ಬೆಂದಲ್ಲಿ ಮನೆ ಉರಿ ಹತ್ತಿತ್ತು ಮನೆ ಬೆಂದು ಕಂಭ ಉರಿಯಿತ್ತು. ಆ ಕಂಭದ ಮೇಲೊಂದು ರತ್ನ ವಿದ್ದುದು ಕಂಡೆ. ಅದರ ಬೆಳಗು ಮೂರುಲೋಕ ತುಂಬಿತ್ತಲ್ಲಾ! ಇದು ಕಾರಣ ಕೂಡಲಚನ್ನಸಂಗಯ್ಯನಲ್ಲಿ ಪ್ರಭುದೇವರ ನಿಲವಿಂಗೆ ನಾನು ಶರಣೆನುತಿರ್ದೆನು ॥೫೧॥

ಮತ್ತಂ॥ ಅಂಗದಲ್ಲಿ ಲಿಂಗವರತು, ಲಿಂಗದಲ್ಲಿ ಅಂಗವರತು, ಒಡಲುಪಾಧಿ ಎಂಬುದಿಲ್ಲ ನೋಡಾ. ನಿಂದಡೆ ನೆಳಲಿಲ್ಲ. ಸುಳಿದಡೆ ಹೆಜ್ಜೆ ಇಲ್ಲ ಅಪರಿಮಿತ ಘನ ಮಹಿಮನನೇನೆಂಬೆನಯ್ಯ? ಶಬ್ದವರಿದು ಸಾರಾಯನಲ್ಲ. ಗತಿವಿಡಿದು ಆಜಡನಲ್ಲ. ಎರಡು ಅಳಿದುಳಿದ ನಿಶ್ಚಿಂತನು. ತನಗೆ ತಾನೆ

ನಿಜವಾದ ಕೂಡಲಚನ್ನಸಂಗಯ್ಯನಲ್ಲಿ ಪ್ರಭುದೇವರ ಪಾದಕ್ಕೆ ನಮೋ ನಮೋ ಎನುತಿರ್ದೆನು ॥೫೨॥

ಮತ್ತಂ ॥ ಹೆಣ್ಣಿಂಗೆ ಬಂದಾತನಲ್ಲ, ಹೊನ್ನಿಂಗೆ ಬಂದಾತನಲ್ಲ, ಮಣ್ಣಿಂಗೆ ಬಂದಾತನಲ್ಲ, ಅಶನಕ್ಕೆ ಬಂದಾತನಲ್ಲ, ವ್ಯಸನಕ್ಕೆ ಬಂದಾತನಲ್ಲ. ಕೂಡಲ ಚನ್ನಸಂಗಯ್ಯನಲ್ಲಿ ಭಕ್ತಿಪಥವ ತೋರಬಂದೆನಯ್ಯ ಪ್ರಭುದೇವರು. ॥೫೩॥

ಇಂತು ಪ್ರಭುದೇವರು, ಚನ್ನಬಸವಣ್ಣನು, ಬಸವಣ್ಣನು ಒಬ್ಬರೊಬ್ಬರ ಕೊಂಡಾಡುತಿಪ್ಪ ಪ್ರಸ್ಥಾವದೊಳು ಬಸವರಾಜದೇವರು ಲಕ್ಷದ ಮೇಲೆ ತೊಂಬತ್ತಾರು ಸಾವಿರ ಜಂಗಮದ ಮುನಿಸ ತಿಳುಹಿಕೊಡಬೇಕೆಂದು ಪ್ರಭುದೇವರಿಗೆ ಬಿನ್ನಹಂ ಮಾಡುವ ಪ್ರಸ್ಥಾವದ ವಚನ ॥

ಚಂದ್ರಮು ಅಮೃತಕರನಾದಡೇನಯ್ಯ, ಒಳಗಣ ಕಳಂಕ ಬಿಡದನ್ನಕ್ಕರ ? ಸೂರ್ಯ ಮಹ ಪ್ರಕಾಶವಾದಡೇನಯ್ಯ, ಅಸ್ತಮಾನಕ್ಕೆ ಅಸ್ತಂಗತನೆಂಬ ಹೀನ ಬಿಡದನ್ನಕ್ಕರ ? ಆನು ನಿಮ್ಮ ಕೃಪೆಯ ಹಡೆದು ಫಲವೇನಯ್ಯ, ನಿಮ್ಮ ಶರಣರು ಎನ್ನ ಮೇಲೆ ಮುನಿದುಹೋದ ಬಳಿಕ? ಕೂಡಲ ಸಂಗಮದೇವಯ್ಯ ನಿಮ್ಮ ಶರಣರು ಮನದಲ್ಲಿ ಎನ್ನ ಮೇಲೆ ಕರುಣ ಹುಟ್ಟಿ ಬಪ್ಪಂತೆ ಮಾಡಯ್ಯ. ॥೫೪॥

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ ॥

ನಾನೆಂಬಹಂಕಾರದಲ್ಲಿ ನಾನುಂಡೆನಾದಡೆ ಎನಗದೆ ಭಂಗ. ಸ್ತುತಿನಿಂದೆಗೆ ನೊಂದೆನಾದಡೆ ಅಂಗೈಯ್ಯಲ್ಲಿದ್ದ ಗುಹೇಶ್ವರಲಿಂಗಕ್ಕೆ ದೂರ ಸಂಗನಬಸವಣ್ಣಾ ॥೫೫॥

ಮತ್ತಂ॥ ನೋಡುವ ಸೂರ್ಯ ಸುರಿವ ಜಲ ಹೊಲೆ ನೆಲೆ ಶುದ್ಧ ಎಲ್ಲಕ್ಕು ಸರಿ. ಅರಿದು ನುಡಿವಂಗೆ ಮರೆದು ನುಡಿದು ತಲ್ಲಣಿಸುವಂಗೆ ಆವನ ಹೃದಯವೆ ಸಾಕ್ಷಿ. ಗುಹೇಶ್ವರಲಿಂಗಕ್ಕೆ ತಥ್ಯಮಿಥ್ಯವಿಲ್ಲ ಸಂಗನ ಬಸವಣ್ಣಾ ॥೫೬॥

ಮತ್ತಂ॥ ಸುರಿವ ಜಲಕ್ಕೆ ನೆಲ ಹೊಲ ಎಂದು ಪ್ರಮಾಣಿಸಬಹುದೆ? ಉರಿವ ಅನಲಂಗೆ ಶತ ಡೊಂಕು ಸಸಿನವೆಂಬುದುಂಟೆ? ಗುಹೇಶ್ವರಲಿಂಗಕ್ಕೆ ಲೇಸು ಕಷ್ಟವೆಂಬುದಿಲ್ಲ ಸಂಗನಬಸವಣ್ಣಾ ॥೫೭॥

ಮತ್ತಂ॥ ಕಾಯದ ಮೇಲೆ ಕಲ್ಲು ಬೀಳಲಿಕ್ಕೆ ಜೀವ ಆ ಠಾವನ ರಿದು ತಾವು ಮಾಡಿಸಿಕೊಂಬಾಗ ನೋವರಿವುದು ಕಾಯವೊ ಜೀವವೊ ಉಭಯ ಸಮಯವೊ? ಗುಹೇಶ್ವರಲಿಂಗಕ್ಕೆ ಅನ್ಯವಿಲ್ಲ ಸಂಗನಬಸವಣ್ಣಾ ॥೫೮

ಮತ್ತಂ॥ ನಿಜವ ಬಲ್ಲವಂಗೆ ಜಲವು ಸರಿ ನೆಲನು ಸರಿ. ಅರಿದು ನುಡಿವಂಗೆ ಜಗವು ಸರಿ ಸಮಯವು ಸರಿ. ಎಮಗಾಮಿಥ್ಯವಿಲ್ಲ. ಗುಹೇ ಶ್ವರಲಿಂಗವು ಪರಿಪೂರ್ಣವಾದ ಕಾರಣ ಸಂಗನಬಸವಣ್ಣಾ ॥೫೯॥

ಮತ್ತಂ॥ ನೀರನೀಜುವನ ದೇಹ ಬಳಲುವದಲ್ಲದೆ ನೀರು ಬಳಲು ವದೆ? ಸಮಯವ ನುಡಿದಡೆ ಸಮಯಕ್ಕೆ ನೋವಲ್ಲದೆ ಗುಹೇಶ್ವರಲಿಂಗಕ್ಕಾ ಭ್ರಮೆ ಇಲ್ಲ ಕಾಣಾ ಸಂಗನಬಸವಣ್ಣಾ ॥೬೦॥

ಮತ್ತಂ॥ ವಿಡಂಬನ. ಜಂಗಮ ಘನವೆಂಬೆನೆ? ಜಂಗಮ ಬೇಡಿ ದಾಗಲೆ ಕಿರಿದಾಯಿತ್ತು. ಲಿಂಗ ಘನವೆಂಬೆನೆ? ಕಲ್ಲುಕುಟಿಕನ ಕೈಯ್ಯಲ್ಲಿ ಮಾಡಿಸಿಕೊಂಡು ಕಿರಿದಾಯಿತ್ತು. ಭಕ್ತ ಘನವೆಂದನೆ? ತನು ಮನ ಧನ ವಂಚಕನಾಗಿ ಕಿರಿದಾದ ಇಂತೀ ತ್ರಿವಿಧದಲ್ಲಿ ಪರಿಣಾಮವಿಲ್ಲದ ಪರ ಮಾರ್ಥ ಗುಹೇಶ್ವರಲಿಂಗದ ಘನವ ಬಲ್ಲವರಾರು ಹೇಳಯ್ಯ ಸಂಗನ ಬಸವಣ್ಣಾ ॥೬೧॥

ಮತ್ತಂ, ತನು ಬತ್ತಲೆ ಇದ್ದಡೇನಯ್ಯ? ಮನ ಶುಚಿಯಾಗದನ್ನ ಕ್ಕರ? ಮಂಡೆ ಬೋಳಾದಡೇನಯ್ಯ ಭಾವ ಬಯಲಾಗದನ್ನಕ್ಕರ? ಭಸ್ಮವ ಹೂಸಿದಡೇನು? ಕರಣಾದಿ ಗುಣಂಗಳನೊತ್ತಿ ಮೆಟ್ಟಿ ಸುಡದನ್ನಕ್ಕರ? ಇಂತೀ ಆಸೆಯ ವೇಷದ ಭಾಷೆಗೆ ಗುಹೇಶ್ವನ ಸಾಕ್ಷಿಯಾಗಿ ಛೀ ಎಂಬೆನು ಕಾಣಾ ಸಂಗನಬಸವಣ್ಣಾ. ॥೬೨॥

ಮತ್ತಂ, ಆಸೆ ಎಂಬ ಶೂಲದ ಮೇಲೆ ವೇಷವೆಂಬ ಹೆಣನ ಕುಳ್ಳಿ ರಿಸಿದರೆ ಮೇಲುಳ್ಳ ಹಿರಿಯರು ಹೀಗೆ ಸವೆದರು ನೋಡಾ. ಆಶೆಯ ಮುಂದಿಟ್ಟುಕೊಂಡು ಸುಳಿವ ಹಿರಿಯರ ಕಂಡು ಗುಹೇಶ್ವರ ಲಿಂಗಕ್ಕೆ ಹೇಸಿ ಕೆಯಾಯಿತ್ತು ಕಾಣಾ ಸಂಗನಬಸವಣ್ಣಾ. ॥೬೩॥

ಮತ್ತಂ॥ ಆಚಾರವನರಿಯದೆ, ಕ್ರಿಯಾಕಾರ ಉಡುಗದೆ, ವಿಭಯ ವಳಿಯದೆ, ಕೋಪವಡಗದೆ, ತಾಪಮುರಿಯದೆ, ಬರಿದೆ ನೆನೆದ ಹೊರ

ಸಿನಂತೆ ಜೆಬ್ಬಳಿಸಿ ಜೆಬ್ಬನೆ ಜೆರಸವರ ಕೇಡಿಂಗೆ ನಾನು ಬೆರಗಾದೆನು ಕಾಣಾ ಗುಹೇಶ್ವರ. ॥೬೪॥

ಮತ್ತಂ॥ ತಮ್ಮ ತಾವರಿಯರು. ಹೇಳಿದರೆ ಕೇಳರು. ಆದರ ಹೊಲ ಬನೇನೆಂದರಿಯರು. ಎಂಟರ ಕಂಟಕವ ಮುನ್ನರಿಯರು. ಏರಿದ ಬೆಟ್ಟವ ಇಳಿಯಲರಿಯದವರನೇನೆಂಬೆ ಗುಹೇಶ್ವರಾ? ॥೬೫॥

ಮತ್ತಂ, ಅರಿದ ಶರಣಂಗೆ ಆಚಾರವಿಲ್ಲ. ಆಚಾರವಿಲ್ಲವಾಗಿ ಲಿಂಗ ವಿಲ್ಲ. ಲಿಂಗವಿಲ್ಲದ ಶರಣನ ಸುಳುಹು ಜಗಕ್ಕೆ ವಿಪರೀತ ಚರಿತ್ರವದು. ಪ್ರಕಟವಲ್ಲ ನೋಡಾ. ಸಂಸಾರ ಬಳಸುವ ಬಯಕೆ ಏನೆಂದು ಹೊದ್ದನು. ಸಟೆಯ ಹಿಡಿದು, ದಿಟವ ಮರೆದು, ಇಲ್ಲದ ಲಿಂಗವನುಂಟೆಂದು, ಪೂಜಿ ಸುವರಾಗಿ, ಆಚಾರ ಉಂಟು. ಆಚಾರವುಳ್ಳವಂಗೆ ಗುರುವುಂಟು. ಗುರು ವುಳ್ಳವಂಗೆ ಲಿಂಗ ಉಂಟು. ಲಿಂಗಪೂಜಕಂಗೆ ಭೋಗ ಉಂಟು. ಈ ಬರಿ ಯ ಬಾಯ ಬಣ್ಣಕರೆಲ್ಲರು ಪೂಜಕರಾದರು. ಗುಹೇಶ್ವರಲಿಂಗವು ಅಲ್ಲಿ ಇಲ್ಲಿ ಎಂಬುದನು ಈ ವೇಷಲಾಂಛನರೆತ್ತಬಲ್ಲರು ಹೇಳಾ ಸಂಗನ ಬಸ ವಣ್ಣಾ. ॥೬೬॥

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ॥

ಘನ ಗಂಭೀರ ವಾರುಧಿಯೊಳಗೆ ತೋರುವ ವಿಚಾರಂಗಳು ಆ ವಾರು ಧಿಯ ಬಿಟ್ಟು ತೋರಬಲ್ಲವೆ? ತೋರಿದರೆ ಆ ವಾರುಧಿ ತನ್ನ ತಾ ಜರಿದು ಕೊಂಬುದೆ? ನಿಮ್ಮೊಳಗಡಗಿದ ಪ್ರಮಥರೆಲ್ಲರ ಗುಣಾದಿಗುಣಂಗಳೆಲ್ಲವನು ನಿಮ್ಮಡಿಯುಲೆತ್ತಲುಂಟೆ? ಜಗದೊಳಗೆ ಕೂಡಿ ಪರಿಪೂರ್ಣವಾದ ಬಳಿಕ ಇದಿರ ನೋಡಿ, ಜರಿದು ನುಡಿವ ಠಾವಾವುದು ಹೇಳಯ್ಯ? ಕೂಡಲಸಂಗಮ ದೇವಯ್ಯ ನಿಮ್ಮ ನೀವು ಪರಿಣಾಮಿಸಿಕೊಂಬುದಲ್ಲದೆ ಭಿನ್ನವ ಮಾಡ ಲುಂಟೆ? ॥೬೭॥

ಮತ್ತಂ॥ ಕುಲವ ನೋಡದೆ ಛಲವ ನೋಡದೆ ನಿಲವ ನೋಡದೆ ಕೂಡಿದ ಬಳಿಕ ಅಲ್ಲಿ ಹೆಚ್ಚು ಕುಂದನರಸಲುಂಟೆ? ಮುಂದುವರಿದು ಜಂಗ ಮಕ್ಕೆ ನಿಮ್ಮ ಕಾರುಣ್ಯವನುಪದೇಶವ ಮಾಡಿದ ಬಳಿಕ ಬಂದುದ ಬಂದಂತೆ ಸಮನಿಸಿಕೊಳ್ಳಬೇಕಲ್ಲದೆ ಅಂತಿಂತೆನ್ನಬಾರದು ಕೇಳಯ್ಯ. ನೀನು ನಿರಾಕಾರ ಸಾಕಾರವೆಂಬೆರಡು ಮೂರ್ತಿಯ ಧರಿಸಿಪ್ಪೆಯಾಗಿ ಒಂದು ಜರಿದು ಒಂದ

ಹಿಡಿದಿಹೆನೆಂದರೆ ಅದೇ ಕೊರತೆ ನೋಡಾ ಪ್ರಭುವೆ ಕೂಡಲಸಂಗಮ ದೇವಾ. ॥೧೮॥

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ॥

ಆಕಾರ ನಿರಾಕಾರವೆಂಬೆರಡು ನಾನೆ ದಿಟ ದಿಟ ತಪ್ಪದು ಕೇಳಾ. ಆಕಾರಕ್ಕೆ ಭಾವವೆ ಪ್ರಾಣ. ನಿರಾಕಾರಕ್ಕೆ ಮಹಾಜ್ಞಾನವೆ ಪ್ರಾಣ. ಇಂತೀ ಉಭಯಕುಳಕ್ಕೆ ಇದು ಲಕ್ಷಣ ಕೇಳಾ. ಎರಡರೊಳಗೆ ಆವ ಮುಖದಲ್ಲಿ ಇಪ್ಪಾತನು ಆ ಮುಖದಲ್ಲಿ ಶುದ್ಧವಾಗದನ್ನಕ್ಕರ ಗುಹೇಶ್ವರಲಿಂಗಕ್ಕೆ ದೂರ ಕೇಳಾ ಸಂಗನಬಸವಣ್ಣಾ. ॥೧೯॥

ಇದಕ್ಕೆ ಬಸವರಾಜ ದೇವರ ಪ್ರತ್ಯುತ್ತರ. ಅರಿವಿಲ್ಲದ ಕಾಯ ಉಂಟೇ? ಅರಿವಿಲ್ಲದ ಪ್ರಾಣ ಉಂಟೆ? ಅರಿವಿಲ್ಲದ ನಿಲವು ಉಂಟೆ? ಭಾವವಿಲ್ಲದ ಭಕ್ತಿ ಉಂಟೆ? ಕೂಡಲಸಂಗಮದೇವ ನೀವು ಪರಿಪೂರ್ಣ ವಾಗಿಪ್ಪಿರಿ. ಅವಗುಣಕ್ಕೆ ತೆರಹಿಲ್ಲ. ॥ ೨೦ ॥

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ. ಆಹುದಹುದು ಬಸವಣ್ಣ. ನೀನೆಂದುದನಲ್ಲೆನಬಹುದೆ? ಎನ್ನ ಮನದ ಕಪ್ಪ ಕಳೆದು, ನಿರ್ಲೇಪನ ಮಾಡಿ ಎನ್ನ ನಿರ್ವಯಲಲ್ಲಿ ನಿಲಿಸಿ ಪ್ರತಿಷ್ಠೆಯ ಮಾಡುವಾತನು ನೀನೆಂಬುದು ಸತ್ಯ ವಚನ ನೋಡಾ! ಗುಹೇಶ್ವರನ ಮಹಗಣಂಗಳಿದ್ದಲ್ಲಿಗೆ ಹೋಗಿ ತಿಳುಹಿಕೊಂಡು ಬಾರಾ ಸಂಗನಬಸವಣ್ಣಾ ॥ ೨೧ ॥

ಇದಕ್ಕೆ ಬಸವರಾಜ ದೇವರ ಪ್ರತ್ಯುತ್ತರ. ಕಾಲವಿಂದೆ ಕೆಡೆಮುಟ್ಟ ಮಾಡಿದ ಲೇಸು ಒಂದುದಿನ ಉದಾಸವ ಮಾಡಿದರೆ ಅದೆಲ್ಲವು ವ್ಯರ್ಥವಾಗಿ ಹೋಹುದು ಕೇಳಯ್ಯ. ಸಾವಿರ ನೋಂಪಿಯ ನೋಂತು ಒಂದು ಬಾರಿ ಹಾದರವನಾಡಿದರೆ ಆ ನೋಂಪಿ ಎಲ್ಲವು ನೀರೊಳಗೆ ನೆರೆದು ಹೋಹಂತೆ ಕೇಳಯ್ಯ. ನಾನೆಷ್ಟು ಭಕ್ತಿಯ ಮಾಡಿದರೇನು? ನಿಮ್ಮ ಶರಣರ ಮನವೆಳ್ಳನಿತು ನೊಂದರೆ ಎನ್ನ ಭಕ್ತಿಯ ಅಭಿಮಾನ ಹೋಯಿತ್ತು. ಅಯ್ಯ ಕೂಡಲಸಂಗಮದೇವ ನಿಮ್ಮ ಶರಣರ ಮುನಿಸನಾವ ಪರಿಯಲ್ಲಿ ತಿಳುಹುವೆ ಹೇಳಾ ಎಲೆ ಪ್ರಭುವೇ ॥ ೨೨ ॥

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ. ಎಡದ ಕಾಲದಲೊದ್ದರೆ ಬಲದ ಕಾಲ ಹಿಡಿವುದು. ಬಲದ ಕಾಲಿಲೊದ್ದರೆ ಎಡದ ಕಾಲ ಹಿಡಿವುದು. ತ್ರಾಹಿ

ತ್ರಾಹಿ. ತಪ್ಪೆನ್ನದು. ಗುಹೇಶ್ವರನ ಶರಣ ನೊಡಗೊಂಡು ಬಾರಯ್ಯ ಸಂಗನ ಬಸವಣ್ಣಾ ॥ ೭೩ ॥

ಇವಕ್ಕೆ ಬಸವರಾಜದೇವರು ಮಹಾ ಶಿವಗಣಂಗಳಿಗೆ ಬಂದು ಮುನಿಸ ತಿಳುಹಿ ಕರೆವ ಪ್ರಸ್ತಾವದ ವಚನ॥

ತೊತ್ತಿನ ತೊತ್ತಿನ ಮರಿದೊತ್ತಿನೊಡನೆ ಮುಸಿವುದು ನಿಮಗೆ ಗುಣವೆ ಅಯ್ಯ? ಅಯ್ಯ ಅಯ್ಯ, ನಿಮ್ಮ ಧರ್ಮದವ ನಾನಯ್ಯ. ಒಮ್ಮೆಗೆ ಕೃಪೆ ಮಾಡಿ ಕರುಣಿಸಯ್ಯ. ಕೂಡಲ ಸಂಗಮದೇವ ಇಲಿಗಂಜಿ ಮನೆಯ ಸುಡುವರುಂಟೆ? ॥೭೪॥

ಮತ್ತಂ, ಆನು ಭಕ್ತನಲ್ಲ. ಆನು ಯುಕ್ತನಲ್ಲ. ನೀವು ಮಾಡಿದ ಸೂತ್ರದ ಬೊಂಬೆ ನಾನಯ್ಯ. ಎನಗೆ ಬೇರೆ ಸ್ವತಂತ್ರ ಉಂಟೆ? ನೀವೆನ್ನ ಮಾನಾಭಿಮಾನಕ್ಕೆ ಒಡೆಯರಾದ ಬಳಿಕ ಎನ್ನ ತಪ್ಪ ಲೆಕ್ಕಿಸದೆ ಬಿಜಯಂಗೈವುದಯ್ಯ ಕೂಡಲ ಸಂಗಮದೇವ. ॥೭೫॥

ಮತ್ತಂ॥ ಎನ್ನ ಭಕ್ತಿ ಎಲವದ ಕಾಯ ಫಲದಂತೆ ನೋಡಯ್ಯ. ಹೊರಗೆ ಹೆಂಪು ಒಳಗೆ ಬೂರವಯ್ಯ. ನಿಮ್ಮ ದೇವರೆಂದು ಪೂಜಿಸಿ ಮಾನವರೆಂದು ಮರೆವೆನು. ಸಗುಣ ನಿರ್ಗುಣವೆರಡು ಅಳವಡದ ಸಂದೇಹಿ ನಾನಯ್ಯ. ಕೂಡಲ ಸಂಗಮದೇವ ಎನ್ನಪರಾಧವ ಸೈರಿಸುವರೆ ನೀವಲ್ಲದೆ ಮತ್ತಾರನು ಕಾಣೆ. ಶರಣಾರ್ಥಿ. ಕೃಪೆಯಿಂದ ಕರುಣಿಸಯ್ಯ ॥೭೬॥

ಇದಕ್ಕೆ ಶರಣರ ಪ್ರತ್ಯುತ್ತರ॥

ಸೊಡ್ಡಳಬಾಚರಸರ ವಚನ॥

ಹಿಡಿದು ಬಿಟ್ಟ ಬಳಿಕ ಅಂತಿರಬೇಕಲ್ಲದೆ ಇನ್ನು ಹಿಡಿದು ತಪ್ಪಿದ ವಸ್ತುವ ಅರಸಿ ಹಿಡಿಯಲುಂಟೆ? ಮುನಿದು ಹೂವಿನೊಳಿಟ್ಟು ಒಸೆದು ಆನೆಯನೇರಿಸಿಹೆನೆಂಪಡೆ ಶಿವಶರಣರ ಮನಸ್ಸು ತಿಳಿಯದು ನೋಡಾ. ಒಡೆದ ಮುತ್ತು ನಾಣ್ಯಕ್ಕೆ ಸಲ್ಲದು. ಒಡೆದ ಹಾಲು ಅಮೃತಕ್ಕೆ ಸಲ್ಲದು. ನಾವೇಕಯ್ಯ? ನಿಮಗೆಂದು ಸೊಡ್ಡಳನ ಶರಣರು ನಿರೂಪವ ಕೊಡಲು ಎನ್ನ ಪರಮಾರಾಧ್ಯರು ಸಂಗನಬಸವಣ್ಣ ತಿಳುಹುತಿರ್ದನು ॥೭೭॥

ಇವಕ್ಕೆ ಬಸವರಾಜದೇವರ ಪ್ರತ್ಯುತ್ತರ.

ಎಡದ ಪಾದದಲೊದ್ದರೆ ಬಲದ ಪಾದವ ಹಿಡಿವೆ. ಬಲದ ಪಾದದಲೊದ್ದರೆ ಎಡದ ಪಾದವ ಹಿಡಿವೆ. ತ್ರಾಹಿ ತ್ರಾಹಿ. ತಪ್ಪೆನ್ನದು, ಕ್ಷಮೆ ನಿಮ್ಮದು. ಕೂಡಲಸಂಗಮದೇವ ನಿಮ್ಮ ಕರುಣದ ಕಂದ ನಾನು.

ಮತ್ತಂ, ಎನ್ನಂತರಂಗ ನೀವಯ್ಯ. ಎನ್ನ ಬಹಿರಂಗ ನೀವಯ್ಯ! ಎನ್ನರಿವು ನೀವಯ್ಯ! ಎನ್ನ ಮರಹು ನೀವಯ್ಯ! ಎನ್ನ ಭಕ್ತಿ ನೀವಯ್ಯ ಎನ್ನ ಯುಕ್ತಿ ನೀವಯ್ಯ! ಎನ್ನ ಆಲಸ್ಯ ನೀವಯ್ಯ! ಎನ್ನ ಪರವಶ ನೀವಯ್ಯ. ಸಮುದ್ರವ ಹೊಕ್ಕ ಕಾಲು ಒಳದಲ್ಲಿ ಕೊರತೆಯನರಸುವದೆ ಆ ಸಮುದ್ರವು? ಎನ್ನ ಲೇಸು ಹೊಲ್ಲೆಯವೆಂಬುದ ನೀವೆ ಬಲ್ಲಿರಿ. ಇದಕ್ಕೆ ನಿಮ್ಮ ಪಾದವೆ ಸಾಕ್ಷಿ, ಎನ್ನ ಮನವೆ ಸಾಕ್ಷಿ ಕೂಡಲಸಂಗಮದೇವಾ. ॥೭೯॥

ಇದಕ್ಕೆ ಚನ್ನಬಸವರಾಜದೇವರ ವಚನ. ಆರಿಗೆ ಮಾಡಬಹುದಯ್ಯ ಸದ್ಭಕ್ತಿ ಎಂಬುದನು? ಆರಿಗೆ ತಿಳಿವುದಯ್ಯ ಶಿವಜ್ಞಾನದ ಸೆರಗು? ನಿರಾಳದ ಸಿಂಹಾಸನದ ಮೇಲೆ ನಿರವಯ ಬಂದೆರಗಿದರೆ ನಿರಾಕಾರದ ಪದಾರ್ಥವ ತಂದರ್ಪಿಸಿ ಪ್ರಸನ್ನವ ಹಡೆದ ಸಾಕಾರ ಸಿಂಹಾಸನದ ಮೇಲೆ ಮೂರ್ತಿಗೊಂಡ ಸಂಗಮನಾಥ ಮುನಿದೆದ್ದು ಹೋದರೆ ತನುವಿನೊಳಗೆ ತನುವಾಗಿ ಹೊಕ್ಕು ಮನದೊಳಗೆ ಮನವಾಗಿ ಹೊಕ್ಕು ಭಾವದೊಳಗೆ ಭಾವವಾಗಿ ವೇಧಿಸಿ ಶಿವಶರಣರ ಮನದ ಕಂದು ಕಲೆಯ ಕಳೆದು ತನ್ನತ್ತ ತಿರುಗಿಸಿ ಪ್ರಸನ್ನವಡೆದ ಇಂತೀ ಉಭಯದ ನಿರ್ಣಯದಲ್ಲಿ ನಿಸ್ಸೀಮನಾದ ಕೂಡಲಸಂಗಮದೇವರ ಶರಣ ಬಸವಣ್ಣಂಗೆ ತ್ರಿಜಗದೊಳಗೆ ಆರನು ಸರಿಗಾಣೆನು. ॥೮೦॥

ಮತ್ತಂ॥ ರಣವನರ್ಚಿಸಿ ಭೂತಕ್ಕೆ ಬಲಿಯ ಕುಡುವ ಕಲಿಯ ಮನದ ಕೊನೆಯ ಮೊನೆಯ ಮೇಲಿಪ್ಪಂತೆ ಸಮಯಾಚಾರವ ಮಾಡಬೇಕು. ಮಾಡಿಹೆನೆಂಬುದು ಸಾಮಾನ್ಯವೆ? ಇದು ಕಾರಣ ಕೂಡಲಚನ್ನಸಂಗಯ್ಯ ಸಮಯ ಭಕ್ತಿ ಸಂದಿತ್ತು ಸಂಗನಬಸವಣ್ಣಂಗೆ ॥೮೧॥

ಇಂತು ಬಸವರಾಜದೇವರು ಬೇಡಿಕೊಳ್ಳಲು, ಮಹಾಗಣಂಗಳು ಮುನಿಸು ತಿಳಿದು, ಪ್ರಸನ್ನರಾದ ಪ್ರಸ್ಥಾವದಲ್ಲಿ ಚಿಕ್ಕದಣ್ಣಾಯಕರ ವಚನ॥

ಭಕ್ತಿಯುಕ್ತಿಯ ಹೊಲಬ ಮೂರು ಲೋಕದೊಳಗೆ ಬಲ್ಲವರನಾರನು ಕಾಣೆನು. ಲಿಂಗದಲ್ಲಿ ಭಕ್ತಿಯ ಮಾಡಿದರೆ ಭವ ಹರಿಯದೆಂದು

ಜಂಗಮ ಮುಖ ಲಿಂಗವೆಂದರಿದು ಅರ್ಚಿಸಿ ಪೂಜಿಸಿ ದಾಸೋಹವ ಮಾಡಿ, ಪ್ರಸನ್ನತೆಯ ಹಡೆದು ಆ ಪ್ರಸನ್ನತೆಯ ರು ಚಿಯನುಪವಿುಸಬಾರದು. ಆ ಬಸವಣ್ಣನ ಭಕ್ತಿ ಪ್ರಸಾದವ ಕೊಂಡು, ನಾನು ಬದುಕಿದೆನು. ಆ ಬಸವಣ್ಣನ ಪ್ರಸಾದವ ಕೊಂಡು, ಅಲ್ಲಮಪ್ರಭು ತೃಪ್ತನಾದನು. ಅಲ್ಲಮಪ್ರಭು ಕೊಂಡ ಪ್ರಸಾದದ ತೃಪ್ತಿ ಲಕ್ಷದ ಮೇಲೆ ತೊಂಭತ್ತಾರು ಸಾವಿರ ಜಂಗಮಕ್ಕೆ ತೃಪ್ತಿಯಾಯಿತ್ತು. ಆ ಲಕ್ಷದ ಮೇಲೆ ತೊಂಭತ್ತಾರು ಸಾವಿರ ಜಂಗಮ ತೃಪ್ತಿಯಾದಲ್ಲಿ ಸಚರಾಚರವೆಲ್ಲ ಕೂಡಿ ತೃಪ್ತಿಯಾಯಿತ್ತೆಂದರೆ ಇಲ್ಲವೆಂದು ಬಿಜ್ಜಳರಾಯ ತರ್ಕಿಸಲು ಕಪ್ಪೆಯ ಒಡಲೊಳಗೆ ಪ್ರಭುವಿನ ಪ್ರಸಾದವ ತೋರನೆ ಬಸವಣ್ಣನು ? ಇದು ಕಾರಣ ಕೂಡಲಚನ್ನಸಂಗಮದೇವರಲ್ಲಿ ಬಸವಣ್ಣ ಪ್ರಭುದೇವರ ಪ್ರಸಾದದ ಘನವು ತ್ರೈಲೋಕ್ಯದಲ್ಲಿ ಬೆಳವಿಗೆಯಾಯಿತ್ತು. ॥೮೨॥

ಇದಕ್ಕೆ ಪ್ರಭುದೇವರ ವಚನ॥

ಲಿಂಗಜಂಗಮವೆಂಬ ಸಕೀಲವನರಿದು ಲಿಂಗಾರ್ಚನೆಯ ಜಂಗಮಾರ್ಚನೆಯ ಮಾಡಲು, ಆ ಲಿಂಗವೆ ಜಂಗಮದೊಳಗಡಗಿ ಆ ಜಂಗಮವೆ ಪರಾತ್ಪರವೆಂದರಿದು, ತೋರಿದ ಆ ಜಂಗಮವೆಂಬ ಘನವು ನಿಮ್ಮೊಳಗಡಗಿದ ಕಾರಣ ಗುಹೇಶ್ವರ ನಿಮ್ಮ ಅನುವನರಿದು ಸಂಗನಬಸವಣ್ಣನು ತನ್ನ ಪ್ರಸಾದವನಿಕ್ಕಿದರೆ ನಿಮ್ಮ ಪ್ರಮಥರೆಲ್ಲರು ನಿಮ್ಮ ಜಯ ಜಯ ಎನುತಿರ್ದ ಕಾರಣ ನಾನು ಬಸವಣ್ಣಂಗೆ ನಮೊ ನಮೊ ಎನುತಿರ್ದೆನು. ॥೮೩॥

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ॥

ತೊರೆಯುದಕವ ಕೆರೆಯುಂಡು ತೃಪ್ತನಾಗಲು, ಆ ಕೆರೆಯುದಕವ ಹಲವು ಕೆಲವು ಸ್ಥಾವರ ಜಂಗಮಂಗಳುಂಡು ತೃಪ್ತಿವಡೆದಂತೆ ಪ್ರಭುದೇವರ ತೃಪ್ತಿ ಅಸಂಖ್ಯಾತ ಮಹಾಗಣಂಗಳೆಲ್ಲಕ್ಕೆ ತೃಪ್ತಿಯಾಯಿತ್ತು ನೋಡಾ, ಬಸಿರ ಹೆಂಗಸು ತೃಪ್ತಿಯಾದಲ್ಲಿ ಒಡಲ ಶಿಸು ತೃಪ್ತಿಯಾದಂತೆ ಸಚರಾಚರವೆಲ್ಲವು ತೃಪ್ತಿಯಾದವು ನೋಡಾ. ಕೂಡಲಸಂಗಮದೇವ ನಿಮ್ಮ ಶರಣ ಪ್ರಭುದೇವರ ಪ್ರಸಾದದ ಮಹಿಮೆಗೆ ನಮೊ ನಮೊ ಎಂಬೆನು. ॥೮೪॥

ಇದಕ್ಕೆ ಪ್ರಭುದೇವರು ಬಸವಣ್ಣನ ಸ್ತೋತ್ರಮಂ ಮಾಡುವ ವಚನ॥

ಲಿಂಗದ ಪೂರ್ವಾಶ್ರಯವ ಕಳೆಯಲೆಂದು ಲಿಂಗಪ್ರಾಣಿಯಾದ. ಲಾಂಛನದ ಪೂರ್ವಾಶ್ರಯವ ಕಳೆಯಲೆಂದು ಜಂಗಮಪ್ರಾಣಿಯಾದ. ಪ್ರಸಾದದ

ಪೂರ್ವಾಶ್ರಯುವ ಕಳೆಯಲಿಂದು ಮಹಾಪ್ರಸಾದಿಯಾದ. ಇಂತೀ ತ್ರಿವಿಧದ ಪೂರ್ವಾಶ್ರಯುವ ಕಳೆಯಲೆಂದು ಬಸವಣ್ಣನು ಮರ್ತ್ಯಕ್ಕೆ ಬಂದನು ಕಾಣಾ ಗುಹೇಶ್ವರಾ. ॥೮೫॥

ಮತ್ತಂ॥ ಆದಿ ಆಧಾರವಮಂ ಮಾಡಿ, ಅಜಕೋಟಿ ಬ್ರಹ್ಮಾಂಡಂಗಳಂ ಮಾಡಿ, ಈರೇಳು ಭುವನಂಗಳಂ ಮಾಡಿ, ಹರ ಲೀಲೆಯಾಡುವಲ್ಲಿ ಹರಿ ವಿರಿಂಚಿಗಳ ಸುರಾಸುರರ ಶಿರೋಮಾಲೆ ಇಕ್ಕಿ ಕೊಂಡಾಡುವಲ್ಲಿ ಪಾದ ರಸಾತಳಕ್ಕಿಳಿದು ಭುವನ ಜಲಮಯವಾದಲ್ಲಿ ಹಸ್ತ ಮಕುಟ ತಾಗಿ ಸಕಲ ಲೋಕಂಗಳೆಲ್ಲವು ನಿರವಯಲಾದಲ್ಲಿ ನಿಜ ಬೆಳಗಿನೊಳಗಣ ಬೆಳಗಿನೊಳಗೆ ಸೋಹಂ ಮೆನಲು ವಿಚಾರದಿಂದೆ ಘನ ಮನವಾದಂದು ಗುಹೇಶ್ವರ ನೀನೆ ಲಿಂಗ ನಾನೆ ಜಂಗಮ ಬಸವಣ್ಣನೆ ಭಕ್ತಾ ॥೮೬॥

ಮತ್ತಂ॥ ಭೂವಳಯ ಮಧ್ಯದಲ್ಲಿ ಎಂಟೆಸಳ ಮೇಲೆ ಸುಳಿದಾಡುವನ ಉಚ್ಚರಲೀಯ್ಯ. ಕಂಟಕ ವಿರಹಿತ ನಂಟರಿಗೆ ವಿರೋಧಿ. ಇಳೆಯ ಗುಣ ವಿರಹಿತನು. ಗಗನ ಕಮಲ ಕುಸುಮ ಪರಿಣಾಮದೊಳಗೆ ಪರಿಣಾಮಿ ನೋಡಾ. ತಾನೆಂಬುದ ಹುಸಿ ಮಾಡಿ, ಲಿಂಗಜಂಗಮ ದಿಟವೆಂದು ಸಕಲ ಸುಖಭೋಗಂಗಳನರ್ಪಿಸಿದ ಗುಹೇಶ್ವರ ನಿಮ್ಮ ಶರಣ ಬಸವಣ್ಣಂಗಲ್ಲದೆ ಇನ್ನಾರಿಗೆಯು ಅಳವಡದು. ॥೮೭॥

ಮತ್ತಂ॥ ಹಾಳಮನೆಯ ಹೊಸತಿಲಲ್ಲಿ ನಿಂದಿದ್ದು ಆರು ಬಾರವ ಬಟ್ಟೆಯ ನೋಡುತ್ತ ಆರಿಂಗಾಗದಿರವು ನಮಗಾಯಿತ್ತೆನುತಲಿ ಆರಯ್ಯ ಬಲ್ಲವರಿಗೆ ಶಂಕೆ ಇಲ್ಲ. ಕಾಲಿಲ್ಲದೆ ಬಂದವರು ಕೈಯ್ಯಿಲ್ಲದೆ ಕೊಂಬವರು ಮೇಲು ತಲೆ ಇದ್ದವರು ನುಡಿವಾಗ ಮಾರಾರಿಯ ಬೆಳಸನಾರಯ್ಯ ಸಂತವಿಡುವರೆಂಪರೆ ಸಾರಾಯಂಗಲ್ಲದೆ ಮತ್ತಿನ್ನಾರಿಂಗಹುದು ಹೇಳಾ? ಸಂತೆಯ ಗುಡಿಸಿಲ ಸೂಳೆಗೆ ಕೊಂತವ ಕೊಂಡರೆ ಎಂತು ಬಜ್ಜೆಡಬಹುದು? ಮರುಳುತನವು. ಶಂಕಿಸಿತು ಎನ್ನ ಮನವು. ಹಿಂದು ಮುಂದು ಕೂಡುವರಿಲ್ಲೆಂದು ಉಮ್ಮಳದಲ್ಲಿ ಗುಹೇಶ್ವರ ನಿಮ್ಮ ಶರಣ ಬಸವಣ್ಣನ ಪ್ರಸಾದವ ಕೊಂಡು ನಿರುಪಮ ಸುಖಿಯಾದೆನು. ॥೮೮॥

ಮತ್ತಂ॥ ಆದಿಯಲ್ಲಿ ಬಸವಣ್ಣನುತ್ಪತ್ಯವಾದ ಕಾರಣ ನಾಗಲೋಕದ ನಾಗಗಣಂಗಳಿಗೆ ಬಸವಣ್ಣನ ಪ್ರಸಾದ. ಮರ್ತ್ಯಲೋಕದ ಗಣಂಗಳಿಗೆ

ಬಸವಣ್ಣನ ಪ್ರಸಾದ. ದೇವಲೋಕದ ದೇವಗಣಂಗಳಿಗೆ ಬಸವಣ್ಣನ ಪ್ರಸಾದ. ಗುಹೇಶ್ವರ ನಿಮ್ಮಾಣೆ ಎನಗು ನಿನಗು ಬಸವಣ್ಣನ ಪ್ರಸಾದ ॥ ೮೯ ॥

ಎತ್ತಿದ ಮಣಿಮಕುಟದ ಮೇಲಣ ಸುತ್ತಿದ ನಾಗಭೂಷಣದ ಪೆಡೆಯೊಂದು ಕೋಟಿ. ಶಿವನಿಪ್ಪ ನೆಲೆಯನಾರು ಅರಿಯರಯ್ಯ! ಇಕ್ಕಿದ ಕರೋಟಿ ಮಾಲೆಯೊಳಗಿಪ್ಪ ರುದ್ರ ಕೋಟಿ. ಶಿವನಿಪ್ಪ ನೆಲೆಯನಾರು ಅರಿಯರಯ್ಯ. ಇಕ್ಕಿದ ರುಂಡಮಾಲೆಯೊಳಗಿಪ್ಪ ಮುಂಡಧಾರಿಗಳೊಂದು ಕೋಟಿ. ಶಿವನಿಪ್ಪ ನೆಲೆಯನಾರು ಅರಿಯರಯ್ಯ. ಖಂಡ ಕಪಾಲವ ಧರಿಸಿಪ್ಪ ಕಪಾಲಧಾರಿಗಳೊಂದು ಕೋಟಿ. ಶಿವನಿಪ್ಪ ನೆಲೆಯನಾರು ಅರಿಯರಯ್ಯ. ಗುಹೇಶ್ವರ ನಿಮ್ಮ ಪೂರ್ವಾಚಾರಿ ಸಂಗನ ಬಸವಣ್ಣನೊಬ್ಬನೆ ಬಲ್ಲನು ॥ ೯೦ ॥

ವೃತ್ತಂ॥ ನಡುಜಲಕ್ಕೆ ಇದಿರಾಗಿ ಹರಿವ ಸ್ವಾಮಿಯು ಬರವ ಕಂಡು ಬಿಡದೆ ಬೆಂಬತ್ತಿಸುವ ಪರಿಯ ನೋಡಾ! ನಡೆ ನುಡಿ ಚೈತನ್ಯ ಒಡಲನೊಂದನು ಮಾಡಿ ಬಿಡದೆ ವೇದಿಸುವ ಬೆಡಗ ಕಂಡೆನಯ್ಯ. ಕಡೆಗೆ ಸೂಸದ ದೃಷ್ಟಿ ಹಿಡಿದು ತೊಲಗದ ಹಸ್ತ ಬಿಡಬೇಡ. ತನಗೆನ್ನದ ಸಜ್ಜನ ಮಡದಿ ತನ್ನ ಗಂಡನ ಅಡಗಿ ಕೂಡುವ ಭೇದ ನಡುವಿರಳು ಕೂಡಿ ಸಿಮಿರಿ ಬೆಳಗಾಯಿತ್ತು. ಮಾಡಿ ನೀಡುವವನ ಕಂಡು ನಾಡುಬೇಡಿಲ್ಲ ನೆರೆದು ಕೋಡಕೈಯಲ್ಲಿ ಕೊಟ್ಟರೆ ತೃಪ್ತರಾಗಿ ಮಾಡುವರ ಹರಸುವರು. ನೋಡುವರ ಮಣಿದಣಿಯ ಕೊಡುವರು. ಕೋಟಿ ಸಹಜ ಒಂದೆ ಎಂದು ಕೈಯಲ್ಲಿ ಕೊಟ್ಟರೆ ಜೋಡ ತೊಡೆದಾತನ ವೈಯ್ಯಲ್ಲಿ ಕೂಡಿ ಕಾಯಛಾಯವಿಲ್ಲದುದ ಕಂಡು ನೋಡಿರೆ. ಮಸೆ ಮುಟ್ಟದ ಮಹಂತನ ಬೇಡುವೆನಾತನ ಕರುಣವನು ಪಾಡುವೆ. ನೊಸಲಲ್ಲಿ ಸೂಡುವೆ. ಗುಹೇಶ್ವರನ ಶರಣ ಬಸವಣ್ಣಂಗೆ ನಮೊ ನಮೊ ಎಂಬೆನು ॥ ೯೧॥

ವೃತ್ತಂ ॥ ಯುಗದ ಉತ್ಸಹವ ನೋಡಿರೆ. ಪಂಚಶಕ್ತಿಗಳಿಗೆ ಪಂಚಪ್ರಧಾನರು ಅವರಾಗು ಹೋಗನಾ ಶರಣನೆ ಬಲ್ಲ. ಆ ಶರಣ ತಾನೆ ತಾನಾಗಿ ಆರು ದರುಶನಕ್ಕೆ ಯಾಚಕನಲ್ಲ. ಮೂರು ದರುಶನಕ್ಕೆ ಮುಯ್ಯಾನುವನಲ್ಲ. ವೇದ ಶಾಸ್ತ್ರ ಪುರಾಣ ಛಂದಸ್ಸು ನಿಘಂಟುಗಳೆಂಬುದಕ್ಕೆ ಭೇದಕನಲ್ಲ. ಅದೆಂತೆಂದೊಡೆ, ಆವರಂಗದ ಮೇಲೆ ಗುರುವಿಲ್ಲ, ಲಿಂಗವಿಲ್ಲ, ಜಂಗಮುವಿಲ್ಲ, ಪ್ರಸಾದವಿಲ್ಲ, ಪಾದೋದಕವಿಲ್ಲದ ಭಾಷೆ. ಆ ಗುರು ಲಿಂಗ ಜಂಗಮ ಪ್ರಸಾ

ದ ಪಾದೋದಕ ಏಕಾರ್ಥವಾದ ಕಾರಣ ಪ್ರಾಣಿಗಳೆಲ್ಲವು ಪ್ರಣಾಮಂಗೈವು ತ್ತಿರ್ದವು. ಜೀವಿಗಳೆಲ್ಲವು ಜಿಯ್ಯ ಜಿಯ್ಯ ಎನುತಿರ್ದವು. ಆತ್ಮಂಗಳೆಲ್ಲವು ಅನ್ನವ ಬೇಡುತಿರ್ದವು. ಗುಹೇಶ್ವರ ಸಂಗನಬಸವಣ್ಣನ ಪಾದಕ್ಕೆ ಈರೇಳು ಲೋಕವೆಲ್ಲವು ಜಯ ಜಯ ಎನುತ್ತಿರ್ದವು ॥೯೨॥

ಇದಕ್ಕೆ ಬಸವರಾಜದೇವರು ಪ್ರಭುದೇವರ ಸ್ತೋತ್ರಮಂ ಮಾಡುವ ವಚನ॥

ಹೊನ್ನಿನ ಆಪ್ಯಾಯನಕ್ಕೆ ಬೋಳಾದವನಲ್ಲ. ಮಣ್ಣಿನ ಆಪ್ಯಾಯ ನಕ್ಕೆ ಬೋಳಾದವನಲ್ಲ, ಹೆಣ್ಣಿನ ಆಪ್ಯಾಯನಕ್ಕೆ ಬೋಳಾದವನಲ್ಲ. ಕೂಡ ಲಸಂಗಮದೇವರಲ್ಲಿ ಎನಗಾರು ಇಲ್ಲವೆಂದು ಬೋಳಾದ ಎನ್ನ ಪ್ರಭುದೇ ವರು. ॥೯೩॥

ಮತ್ತಂ॥ ಶ್ರೋತ್ರದಲ್ಲಿ ಬ್ರಹ್ಮಚಾರಿಯಾಗಿರಬೇಕು ಶರಣನು. ತ್ವಕ್ಕಿ ನಲ್ಲಿ ಬ್ರಹ್ಮಚಾರಿಯಾಗಿರಬೇಕು ಶರಣನು. ನಾಸಿಕದಲ್ಲಿ ಬ್ರಹ್ಮಚಾರಿಯಾ ಗಿರಬೇಕು ಶರಣನು. ನೇತ್ರದಲ್ಲಿ ಬ್ರಹ್ಮಚಾರಿಯಾಗಿರಬೇಕು ಶರಣನು. ಜಿಹ್ವೆಯಲ್ಲಿ ಬ್ರಹ್ಮಚಾರಿಯಾಗಿರಬೇಕು ಶರಣನು. ಇಂತೀ ಪಂಚೇಂದ್ರಿ ಯಂಗಳಲ್ಲಿ ಬ್ರಹ್ಮಚಾರಿಯಾಗಿ ಕೂಡಲಸಂಗಮದೇವರಲ್ಲಿ ಎನ್ನನಾಗು ಮಾಡಲಿಕ್ಕೆ ಬ್ರಹ್ಮಚಾರಿಯಾದನು ಪ್ರಭುದೇವರು ॥೯೪॥

ಮತ್ತಂ। ಬಸುರೆ ಬಾಯಾಗಿ ಬಾಯೆ ಬಸುರಾಗಿ ಇಪ್ಪುದ ತೊಡೆವ ಕಂಣೇ ತಲೆಯಾಗಿ, ತಲೆಯೆ ಕಣ್ಣಾಗಿರಿಸಿದ ಕಾಲೆ ಕೈಯ್ಯಾಗಿ ಕೈಯೇ ಕಾಲಾಗಿರಿಸಿದ, ನೆಳಲ ಸುಟ್ಟು ಸೀರೆಯುನುಡುಗೊರೆಯ ಕೊಟ್ಟನು. ಮಥನವಿಲ್ಲದ ಸಂಗ ಸುಖವ ಎನಗೆ ತೋರಿದನು ಕೂಡಲಸಂಗಮದೇವ ಪ್ರಭುವಿನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು. ॥೯೫॥

ಮತ್ತಂ, ವೀರ ದನುಜರೆಲ್ಲ ಧಾರುಣಿ ಎಂಬುದರೊಳಗೆ ಸಾಗರ ವಾಗಿದ್ದುದನಾರು ಅರಿಯರಲ್ಲ. ದ್ವಾರಾವತಿ ಪುರದೊಳಗೆ ಪರವು ಬಂದಿ ದ್ದರೆ ಶರೀರ ಸಂಬಂಧವ ಮಾಡಲರಿಯರಲ್ಲ. ಕಳಗಸವ ಕಳೆದುಕೊಂಡು ಪರಶುರಾಮನ ಗೆಲಿದು ಸುರರೊಳಗೆ ಸುಳಿದಾಡಲರಿಯರಲ್ಲ. ವಾರುಧಿಯು ನೇರಿಕೊಂಡು ಮರಣವೆಂಬುದ ನಿಲಿಸಿ ತ್ರಿಪುರವ ಮೂರ್ತಿಗೊಳಿಸಲರಿ ಯರಲ್ಲ. ಮೇರುವೆಂಬುದ ಹೊಕ್ಕು ನೂರೆಂಟನೆಣಿಸಿಕೊಂಡು ಸಿರಾಕಾ

ರದಲಡಗುವರಿನ್ನಾರು ಹೇಳಾ? ಸಾಸಿರವ ಮೇಲೆ ನೂರೆಂಭತ್ತೆಂಟು ರಾಶಿ ಪುರುಷವೇದಿಗಳಾಗಲರಿಯರಲ್ಲ. ಕೂಡಲಸಂಗನ ಶರಣ ಸಂಬಂಧವು ಪ್ರಭುವಿಂಗಲ್ಲದೆ ಮತ್ತಾರಿಗು ಅಳವಡದು ॥೯೬॥

ಮತ್ತಂ, ನೀಲದ ಮಣಿಯೊಂದು ಮಾಣಿಕ್ಯವ ನುಂಗಿದರೆ ವಜ್ರ ಬಂದು ಅದ ಬೆಂದು ಗಳಸಿತ್ತು ನೋಡಾ! ಅಡಗಿರ್ದ ಮಾಣಿಕ್ಯ ನೀಲದ ತಲೆಯ ಮೆಟ್ಟಿ ಆನಂದ ನಾಂಟ್ಯವನಾಡುತಿದ್ದಿತ್ತು. ಅಂಬಡದೊಳಗಣ ಮುಗ್ಧೆ ಕಂಗಳು ಮುತ್ತಿನ ಮಣಿಯ ಮಥನವಿಲ್ಲದೆ ನುಂಗಿ ಉಗುಳುತಿದ್ದಳು. ಲಿಂಗಜಂಗಮವೆಂಬುದ ಇಂದರಿದು ಸುಖಿಯಾದೆನು ಕೂಡಲ ಸಂಗಮದೇವರಲ್ಲಿ ಪ್ರಭುವಿನ ಕೃಪೆಯಿಂದ ನಾನು ಬದುಕಿದೆನು. ॥೯೭॥

ಮತ್ತಂ, ನೀರ ಒರಳ ಮಾಡಿ ನೆಳಲೊನಕೆಯ ಮಾಡಿ, ಆಕಾರವಿಲ್ಲ ದಕ್ಕಿಯ ಥಳಿಸುತ್ತಿರಲು, ಮೇಲುಗಿರಿಯಾಕಳ ಕರೆದು ಕ್ಷೀರದಲ್ಲಿ ಅಡಿಗಿಯ ಮಾಡಿ, ನಾರಿಯ ಬಸುರೊಳಗೆ ಗಂಡ ಬಂದು ಕುಳ್ಳಿರಲು, ಮಾಡಿದಡಿಗೆಯ ಮನ ಉಂಡು ಹೋಗಲು ಮೇಲು ಕೈಯ್ಯ ತೆರೆದು ಸಂತೊಷದಿಂದೆ ಪ್ರಾಣ ಸಖಿ ತನ್ನ ಗಂಡಂಗೆ ನೀಡುತ್ತಿರಲು ಅರಳ ಹುಟ್ಟಿಗೆಯಲ್ಲಿ ಹೊರಳಿ ಮಾಡುವ ಭೇದ ಮರಳಿ ಕೂಡಲಿಕೆಂತು ಬಣವಿಲ್ಲ. ಕೆರಳಿ ಮುನಿದು ಘುಡಿಘುಡಿಸಿ ಗರ್ಜಿಸಲೊಡನೆ ತೆರಳಲಮ್ಮದೆ ಅಂಜಿ ಒಳಗಡಗಿದ ಶರಣ ಸತಿ ಲಿಂಗ ಪತಿ ಎಂಬ ಭಾಷೆ ನೀವು ಹರನ ಬಟ್ಟೆಯ ನೋಡಿ ಸೂಯ್ಯಬೇಡ ಜನನ ಮರಣ ವಿರಹಿತ ಕೂಡಲ ಸಂಗನ ಅನುಭಾವ ಪ್ರಭುವಿನ ಶ್ರೀಪಾದದೊಳಗಿದ್ದು ಸುಖಿಯಾದೆನು ॥೯೮॥

ಪ್ರಭುದೇವರು ಚಿಕ್ಕದಣ್ಣಾಯಕರ ಹೊಗಳಿದ ವಚನ. ಬಸವಣ್ಣ, ನಿನ್ನ ಹೊಗಳಲೆಡೆಯಂತಿರಲಿ. ಗುರುವಾಗಬಹುದು. ಜಂಗಮವಾಗಬಹುದು. ಇಂತೀ ತ್ರಿವಿಧವು ಆಗಬಹುದು. ನಿನ್ನ ಆಚಾರಕ್ಕೆ ಪ್ರಾಣವಾಗಿ ಎನ್ನ ಜ್ಞಾನಕ್ಕೆ ಆಚಾರವಾಗಿ ಉಭಯ ಸಂಗದ ಸುಖದ ಪ್ರಸನ್ನಕ್ಕೆ ಪರಿಣಾಮ ಪ್ರಸಾದಿಯಾಗಿ ಬಂದ ಘನ ಮಹಿಮನು ಗುಹೇಶ್ವರಲಿಂಗದಲ್ಲಿ ಚನ್ನಬಸವಣ್ಣನಾಗಬಾರದು ಕಾಣಾ ಸಂಗನ ಬಸವಣ್ಣಾ ॥೯೯॥

ಮತ್ತಂ, ಪ್ರಕೃತಿಯ ಗುಣವುಳ್ಳನ್ನಕ್ಕರ ಭಕ್ತನಲ್ಲ. ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರವುಳ್ಳನ್ನಕ್ಕರ ಶರಣನಲ್ಲ. ಹಸಿವು ತೃಷೆ ನಿದ್ರೆ ವಿಷಯವುಳ್ಳನ್ನಕ್ಕರ ಪ್ರಸಾದಿಯಲ್ಲ. ಆಚಾರದಲ್ಲಿ ಅಸು

ಭಾವಿ, ಪ್ರಸಾದದಲ್ಲಿ ಪರಿಣಾಮಿ, ಗುಹೇಶ್ವರಲಿಂಗದಲ್ಲಿ ಚನ್ನಬಸವಣ್ಣ ನೆಂಬ ಪ್ರಸಾದಿಗೆ ನಮೋ ನಮೋ ಎನುತಿರ್ದೆನು. ॥೧೦೦॥

ಮತ್ತಂ, ಆದಿವಿಡಿದು ಬಾಹಾತ ಭಕ್ತನಲ್ಲ. ಅನಾದಿವಿಡಿದು ಬಾಹಾತ ಭಕ್ತನಲ್ಲ. ಸ್ಥಲವಿಡಿದು ಬಾಹಾತ ಭಕ್ತನಲ್ಲ. ಲಿಂಗವಿಡಿದು ಬಾಹಾತ ಭಕ್ತನಲ್ಲ. ಶೂನ್ಯಕಾಯವ ನಿಃಶೂನ್ಯಂಗಿಕ್ಕಿ ಪ್ರಾಣಲಿಂಗ ಪ್ರಸಾದವ ಕೊಳಬಲ್ಲನು. ಗುಹೇಶ್ವರ ಲಿಂಗದಲ್ಲಿ ಚನ್ನಬಸವಣ್ಣಂಗೆ ನಮೋ ನಮೋ ಎಂಬೆನು. ॥೧೦೧॥

ಮತ್ತಂ, ಸದ್ಯೋಜಾತ ಶಬ್ದಜ್ಞಾನಿ, ವಾಮದೇವನಾತುರಜ್ಞಾನಿ, ಅಘೋರ ಕೋಪಜ್ಞಾನಿ, ತತ್ಪುರುಷ ಕ್ಷಣಿಕಜ್ಞಾನಿ, ಈಶಾನ್ಯನತೀತಜ್ಞಾನಿ, ಈ ಪರಿಯಲ್ಲಿ ನೋಡಾ ಗುಹೇಶ್ವರಲಿಂಗದಲ್ಲಿ ಅವಿರಳಜ್ಞಾನಿ ಚನ್ನಬ ಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎಂಬೆನು. ॥೧೦೨॥

ವೀರಧಾರುಣಿಯೊಳಗೆ ನಾರಿ ಶೃಂಗಾರವ ಮಾಡಿ ಈರೇಳು ಭುವನವ ನಮಳೋಕ್ಯವ ಮಾಡಿ, ಬಿಂದು ಶಕ್ತಿಯ ಭೇದ ಸಂಚ ಯೋಗವ ಸುಖವ ತಂದು ಮೂರ್ತಿಗೊಳಿಸಿದರಾರು? ಒಂದೆರಡರ ನುಡಿಯ ಮತ್ತೊಂದ ಗ್ರಹಿಸಿತ್ತ ಕಂಡೆ. ಬಿಂದುವಿನ ರಸದ ಪರೀಕ್ಷೆಯ ಭೇದವ ಚಂದ್ರಕಾಂ ತದ ಗಿರಿಗೆ ಅರುಣ ಚಂದ್ರನೊಡನೆ ಇಂಬಿನಲ್ಲಿ ಇಪ್ಪ ಪರಿಯ ನೋಡಾ. ಅಂಗೈಯ್ಯ ತಳದೊಳು ಮೇಲೆ ಕಂಗಳಲ್ಲಿ ಉರ ಸನ್ನೆ ಇಂಬಿನಲ್ಲಿ ನೆರೆವ ಸುಖ ಆದಿ ಅನಾದಿಯ ಪ್ರತಿಬಿಂಬ ಇಂದೆನಗೆ ತೋರಿತ್ತು ಗುಹೇಶ್ವ ರನ ಶರಣ ಚನ್ನಬಸವಣ್ಣಂಗೆ ಶರಣೆನುತಿರ್ದೆನು. ॥೧೦೩॥

ಮತ್ತಂ, ವಸುಧೆಯ ಮುಟ್ಟದೆ ರಸವನೋಸರಲೀಯದೆ, ರಸದಲ್ಲಿ ಕಟ್ಟ ಬಲ್ಲರೆ ಅದು ಯೋಗ. ಹೊರಗಿದ್ದ ರಸವ ಕಟ್ಟಬಲ್ಲೆನೆಂಬವರೆಲ್ಲ ಅಂಜನಸಿ ದ್ಧರಾಗಿ ಹೋದರು. ಸುಷುಮ್ನ ಸೂಕ್ಷ್ಮ ನಿಧಿಯ ಮಧ್ಯದ ಕೂಪ ಕಂಭದ ಮೇಲೆ ಪಂಚೇಂದ್ರಿಯ ಗುಹ್ಯವ ತೊಡೆದು ರಸವ ಕಟ್ಟಬಲ್ಲ ಗುಹೇಶ್ವರನ ಶರಣ ಚನ್ನಬಸವಣ್ಣಂಗೆ ನಮೋ ನಮೋ ಎನುತಿರ್ದೆನು. ॥೧೦೪॥

ಚನ್ನಬಸವಣ್ಣನು ಪ್ರಭುದೇವರ ಪೊಗಳುವ ವಚನ ॥

ರೂಪಿಲ್ಲದ ರೂಪು, ನಿಜವಿಲ್ಲದ ನಿಷ್ಪತ್ತಿ, ಸೀಮೆಯ ಮೀರಿದ ನಿಸ್ಸೀಮ, ಗಮನವಿಲ್ಲದಗಮ್ಯ, ನುಡಿಯುಡಿಗಿದ ನಿಃಶಬ್ದ, ಪರವನರಿ

ಯದ ಪರಿಣಾಮಿ, ಕೂಡಲ ಚನ್ನಸಂಗನ ಶರಣ ಪ್ರಭುದೇವರಿಗೆ ನಮೋ ನಮೋ ಎನುತ್ತಿರ್ದೆನು ॥೧೦೫॥

ಬಟ್ಟ ಬಯಲೊಳಗೊಂದು ಐವಾಗಿಲ ಪಟ್ಟಣ. ಆ ಪಟ್ಟಣಕ್ಕೆ ಒಡಲಿಲ್ಲದಾತ ಅರಸು ನೋಡಾ. ಆ ಅರಸಂಗೆ ಆರುವರು ಅರಸಿಯರು. ಮೂವ್ವರು ಸ್ವರೂಪಿಯರು. ಮೂವ್ವರು ಕುರೂಪಿಯರು. ಅವರೊಬ್ಬರಿಗೊಬ್ಬರಿಗೊಂದೊಂದು ಪರಿಯ ಕೂಟ ನೋಡಾ. ಐವರ ಕಣ್ಣ ಕಟ್ಟಿ ಒಬ್ಬಳ ನೆರೆದರೆ ಪ್ರತಿ ಇಲ್ಲದ ಸುಖವು ಸಮವಾದ ಕಾರಣ ಕೂಡಲ ಚನ್ನಸಂಗ ನಿಮ್ಮ ಶರಣ ಪ್ರಭುವಿಂಗೆ ನಮೋ ನಮೋ ಎನುತ್ತಿರ್ದೆನು ॥೧೦೬॥

ಚಿಕ್ಕದಣ್ಣಾಯಕರು ಬಸವರಾಜದೇವರ ಹೊಗಳಿದ ವಚನ॥

ಅಂತರಂಗದಲ್ಲಿ ಪ್ರಭುದೇವರನೊಳಕೊಂಡ ಬಹಿರಂಗದಲ್ಲಿ ಎನ್ನನೊಳಕೊಂಡ. ಆ ಉಭಯ ಸಂಗದ ಮಧ್ಯದಲ್ಲಿ ನಿಜೈಕ್ಯವಾಗಿರ್ದನು. ಪ್ರಸಾದದಲ್ಲಿ ಪರಮಾನಂದ ಸುಖಿ. ಅರುಹಿನಲ್ಲಿ ಕುರುಹಳಿದ ಘನದ ನಿಲವು ಕೂಡಲ ಚನ್ನಸಂಗಮದೇವ ಬಸವಣ್ಣನ ಪಾದಕ್ಕೆ ನಮೋ ನಮೋ ಎಂಬೆನು ॥೧೦೭॥

ಇದಕ್ಕೆ ಬಸವಣ್ಣ ಚನ್ನಬಸವಣ್ಣನ ಹೊಗಳುವ ವಚನ ॥

ಶಿಶುವೆನ್ನ ಬಹುದೆ ನಂಬಿಯಣ್ಣನ? ಸೂಕ್ಷ್ಮನೆನ ಬಹುದೆ ರವಿಯನು? ಜಗವ ಬೆಳಗುವ ವೃಷ್ಟಿ ಕಿರಿಯದೆನಬಹುದೆ? ಸೃಷ್ಟಿಯ ಕಾಂಬುವ ಭಾವ ಕಿರಿದೆನ ಬಹುದೆ? ಬಳ್ಳ ಲಿಂಗವಾದುದನು ಕೂಡಲ ಸಂಗಮದೇವ ಕೇಳಯ್ಯ. ಯುಗಜುಗವೆಲ್ಲವನು ಮೀರಿದ ಶರಣನು ಕಿರಿದೆನ್ನ ಬಹುದೆ? ಚನ್ನಬಸವಣ್ಣನ ಪಾದಕ್ಕೆ ನಮೋ ನಮೋ ಎಂಬೆನು ॥೧೦೮॥

ಮತ್ತಂ, ಒತ್ತಿ ಹೊಸದು ಕಿಚ್ಚನೆ ಮಾಡಿದೆನೆಂದು ಮುಟ್ಟಿ ಹಿಡಿದಡೆ, ಕೈ ಬೇಯದಿಹುದೆ? ಎನ್ನಿಂದಾಯಿತ್ತು, ಎನ್ನಿಂದ ಹೋಯಿತ್ತು, ಎನ್ನದಿರು ಮನವೆ. ನಾನು ಮಾಡಿದೆನೆನ್ನದಿರು ಮನವೆ. ಕೂಡಲ ಸಂಗಮದೇವ ಕೇಳಯ್ಯ. ಚನ್ನಬಸವಣ್ಣನ ಪಾದಕ್ಕೆ ನಮೋ ನಮೋ ಎಂಬೆನು ॥೧೦೯॥

ಮತ್ತಂ, ಲಿಂಗ ಗಂಭೀರದೊಳಗೆ ಜಗ ಹುಟ್ಟಿದರೇನು? ಆ ಲಿಂಗದಿಂದ ಘನವೇ? ಶಿವಲಿಂಗದೊಳಗೆ ಜಗ. ಜಗ ಶಿವಲಿಂಗದೊಳಗೆ

ಲೋಕಾದಿಲೋಕಂಗಳಿಗೆ ನೀನು ಭಕ್ತಿಯ ಕಂದೆರೆದು ತೋರಿದೆ. ಕೂಡಲ ಸಂಗಮ ದೇವರಲ್ಲಿ ಚನ್ನಬಸವಣ್ಣ ನಿನ್ನ ಶ್ರೀ ಪಾದಕ್ಕೆ ನಮೋ ನಮೋ ಎನುತ್ತಿರ್ದೆನು ॥೧೧೦॥

ಪ್ರಾಣಲಿಂಗ ಪ್ರವೇಶಿತನಾಗಿ ಪ್ರಸಾದದಲ್ಲಿ ಸ್ನೇಹಿತನಯ್ಯ. ಲಿಂಗಾರ್ಪಿತವಲ್ಲದ ಅನರ್ಪಿತವ ಮುಟ್ಟಲೀಯನಯ್ಯ. ಅಂಗ ಗುಣಂಗಳನೆಲ್ಲವನತಿಗಳೆದು ಪ್ರಸಾದದಲ್ಲಿ ಬ್ರಹ್ಮಚಾರಿಯಾದವನು ಕೂಡಲ ಸಂಗಮದೇವರಲ್ಲಿ ಚನ್ನಬಸವಣ್ಣನು ॥೧೧೧॥

ಮತ್ತಂ, ಸರ್ವಾವಧಾನಿ ಸಮಯ ಪ್ರಸಾದಿ ನೋಡಯ್ಯ. ಲಿಂಗಾರ್ಪಿತದಲ್ಲಿ ಸರ್ವಾವಧಾನಿ ನೋಡಯ್ಯ. ಅಯ್ಯ ಅನಾಹತಂಗಳಲ್ಲಿ ಮುನ್ನನೆ ಇರಲೀಯ್ಯ ಕೂಡಲ ಸಂಗಮದೇವರಲ್ಲಿ ಚನ್ನಬಸವಣ್ಣಂಗೆ ನಮೋ ನಮೋ ಎನುತ್ತಿರ್ದೆನು ॥೧೧೨॥

ಮತ್ತಂ, ಅಂಗವಿಕಾರವನಳಿದು ಸತಿಯರ ಸಂಗವನರಿಯ ನೋಡಾ. ದೇಹ ಗುಣಂಗಳಿಲ್ಲಾಗಿ ನಿರ್ದೇಹಿ ಪ್ರಸಾದಿ ನೋಡಯ್ಯ. ಅಶನ ವ್ಯಸನಾದಿಗಳೆಲ್ಲವು ಬೆಂದವು ನೋಡಯ್ಯ. ಈ ಎಲ್ಲ ಗುಣಂಗಳಳಿದು ಕೂಡಲ ಸಂಗಮದೇವರಲ್ಲಿ ಸಾವಧಾನ ಪ್ರಸಾದಿ ಚನ್ನಬಸವಣ್ಣನು ॥೧೧೩॥

ಮತ್ತಂ, ಘನವನರಿದು ಘನವ ವೇಧಿಸಿ, ಘನಗುರುವ ತನ್ನೊಳಗೆ ಬೈಚಿಟ್ಟ ಪರಿಣಾಮಿಯ ನೋಡಯ್ಯ. ಗುರುಲಿಂಗ ಜಂಗಮದಲ್ಲಿ ತನು ಮನ ಧನವ ವೇಧಿಸುವ ಪರಿಯ ನೋಡಾ. ಕಾಯ ಪ್ರಸಾದದಲ್ಲಿ ಸ್ವಾಯತವ ಮಾಡಿ ಕೊಂಡಿಪ್ಪ ಪರಿಯ ನೋಡಾ. ಷಡುಸ್ಥಾನದಲ್ಲಿ ಸ್ವಾಯತವಾದ ಕೂಡಲ ಸಂಗಮದೇವರ ಚನ್ನಬಸವಣ್ಣನು ॥೧೧೪॥

ಮತ್ತಂ, ನಿರ್ಲೇಪನಾದ ನಿಜಗುಣ ನೋಡಯ್ಯ. ಕಾಮಿಸದ ಕಲ್ಪಿಸದ ಪ್ರಸಾದಿ ನೋಡಯ್ಯ. ಬಯಸಲಿಲ್ಲದ ಪ್ರಸಾದಿ ಗುರುವಿನ ಮುಖದಲ್ಲಿ ಬಂದು ಪ್ರಸಾದವಲ್ಲದೆ ಮತ್ತೇನೇನು ಮುಟ್ಟಲೀಯ್ಯನು ಕೂಡಲಸಂಗಮದೇವರಲ್ಲಿ ಚನ್ನಬಸವಣ್ಣನು ॥೧೧೫॥

ಮತ್ತಂ, ಅರ್ಪಿತವ ಮಾಡುವ ಅವಧಾನವು, ಅನ್ಯವು ಸೋಂಕವ ಅವಧಾನವು, ಅರಿಷಡ್ವರ್ಗಂಗಳು ಮುಟ್ಟಲಿಯ್ಯದ ಅವಧಾನದ ಪರಿಯ ನೋಡಾ. ಪಂಚಭೂತವೆಂಬ ಭವಿಯ ಕಳೆದು ಪ್ರಸಾದಿಯಾಗಿಪ್ಪ ಪರಿಯ

ನೋಡಾ. ಪಂಚೇಂದ್ರಿಯಂಗಳ ಗುಣವಳಿದು ಪಂಚವಿಂಶತಿ ತತ್ವವಲ್ಲಿ ಪರಿಣಾಮಿ ಕೂಡಲಸಂಗಮ ದೇವರಲ್ಲಿ ಚನ್ನಬಸವಣ್ಣನು ॥೧೧೬॥

ಚನ್ನಬಸವಣ್ಣನು ಬಸವಣ್ಣನ ಸ್ತುತಿಸಿದ ವಚನ॥

ಭಕ್ತ ಮಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣೈಕ್ಯರೆಂದೆ. ಬೇರೆ ಮಾಡಿ ನಡೆದು ಬೇರೆ ಮಾಡಿ ನುಡಿವ ಭಿನ್ನವಿಲ್ಲ. ಅಂತರಗದಲ್ಲಿ ಅರಿವು ಪರಿಪೂರ್ಣ. ಬಹಿರಂಗದಲ್ಲಿ ದಾಸೋಹ ಸಂಪನ್ನ. ಮನೋವಾಕ್ಕಾಯ ಕರ್ಮಗಳಲ್ಲಿ ಸದ್ಭಕ್ತಿಸಂಪನ್ನ. ಎಡದೆರಹಿಲ್ಲದೆ ಲಿಂಗ ಸಂಪನ್ನ. ಸರ್ವಾಂಗದಲ್ಲಿ ಸರ್ವಾಚಾರ ಸಂಪನ್ನ. ಕೂಡಲ ಚನ್ನ ಸಂಗಮದೇವರಲ್ಲಿ ಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎಂಬೆನು ॥೧೧೭

ಮತ್ತಂ॥ ಮಾತು ಮಾಣಿಕವ ನುಂಗಿ, ಜ್ಯೋತಿ ಕತ್ತಲೆಯ ನುಂಗಿ, ಆಳು ಅಳ್ದನ ನುಂಗಿ ಉಗುಳಿಲ್ಲದ ಮಥನ, ಮಥನವಿಲ್ಲದ ಸಂಗ, ಮರಣವಿಲ್ಲದ ಉದಯ, ಅಳಲಿಲ್ಲದ ಶೋಕ, ಸಮರಸವಿಲ್ಲದ ಉದಯದ ಬೆಳಗನು ಮದಗಜ ಒಳಕೊಂಡು ಮಾವತಿಗನ ನುಂಗಿ ಉಗುಳದಲ್ಲಿ ಸದಮದ ಬರಿಕೈಯ್ಯೊಳಗೆ ಈರೇಳು ಭುವನವನೊದರೆ ಹಾಯಿಕಿ ತಾನೆ ನಿಂದುದಲ್ಲ ಸದಮಲಜ್ಞಾನ ಸಂಪನ್ನ ಕೂಡಲಚನ್ನಸಂಗೈಯ್ಯನಲ್ಲಿ ಬಸವಣ್ಣಂಗೆ ಸ್ವಯವಾಯಿತ್ತು. ॥೧೧೮॥

ಮತ್ತಂ। ಉರಿಯ ಸೀರೆಯನುಟ್ಟು, ಕಡೆಸೆರಗ ಬಿಡಬೀಸಿ, ಮಡದಿ ತನ್ನ ಕೆಳದಿಯರನೊಡಗೊಂಡು ಆಡುತ್ತಿರೆ ಪತಿ ಬಂದು ಮುಡಿಯ ಹಿಡಿದು ಉಟ್ಟ ಸೀರೆಯ ನುಗಿಯೆ ಮಡದಿ ಒಡಗೂಡುತ್ತಿರೆ ಸಮರಸವಲ್ಲಿ ಸತಿಯಳಿದು ಪತಿಯಾಗಿ ಪತಿಯಳಿದು ನಿಃಷ್ಪತ್ತಿಯಾಗಿ ಸತಿ ಪತಿ ನಿಃಷ್ಪತ್ತಿಎಂಬ ತ್ರಿವಿಧವು ಏಕಾರ್ಥವಾದ ಕೂಡಲಚನ್ನಸಂಗನಲ್ಲಿ ಬಸವಣ್ಣನ ಪಾದಕ್ಕೆ ನಮೋ ನಮೋ ಎನುತ್ತಿರ್ದೆನು. ॥೧೧೯॥

ಮತ್ತಂ। ಚನ್ನಬಸವಣ್ಣ ಗುರುಬಸವಣ್ಣನ ಸ್ತುತಿಸಿದ ಪದಂಗಳೂ।

ರಾಗಭೂಪಾಳಿ॥ ಪರಮ ಮೂರುತಿ ಪರಮಜ್ಞಾನಿ ಲೋಕಪ್ರಪಂಚನಲ್ಲ ನಿಃಪ್ರಪಂಚನಾಮ ನಿರ್ನಾಮ ನಿಃಕಾಮಿಯಾಗಿ ॥ಪದ॥

ಕಾಯಗುಣಗಳ ತಂದು ಜೀವದೊಳಗಿರಿಸಿ ಪ್ರಾಣಲಿಂಗಕ್ಕೆ ಸಮಾಧಾನಮಾಡಿ ಆಶ್ರಮವ ಸ್ವೀಕರಿಸನಾ ಶ್ರೀಯುವನೀಕರಿಸದ್ವೈತಾದ್ವೈತನು ಅಲ್ಲ ಲಿಂಗಸಂಗಿ. ॥೧॥

ಕಾಯ ಶೂನ್ಯ ಲಿಂಗ ಪ್ರಾಣ ಶೂನ್ಯ ಶರಣ। ಭಾವ ಭೇದಂಗಳಿಲ್ಲದವಾಗಿ ಒಳ ಹೊರಗುವನ್ನು ಸರ್ವಾಂಗದಲ್ಲಿ ಅನುಭಾವಕೆ ತೆರಹಿಲ್ಲದನು ಮನೂ. ॥೨॥

ಕಾರಣವ ಕಲ್ಪಿತಾಕಲ್ಪಿತವ ಸಂಕಲ್ಪವಿಕಲ್ಪನಲ್ಲ ಸುಜ್ಞಾನಿಯಾಗಿ ಸಾವಯ। ನಿರವಯುಸಂಗಿ ನಿಸ್ಸಂಗಿ ಪರಮಾತ್ಮ ತಾನಾದ ನಿರ್ಬೋಧ ಬೋಧಿ. ॥೩॥

ನಿರ್ಭಾವ ನಿರ್ನಾಮ ನಿರ್ದೇಹ ದೇಹಿ ನಿರ್ಗುಣಕೆ ಅವಯವಾಕಾರರೂಪಾ। ಪರತತ್ವವನಿಂಬಿಟ್ಟು ಉಭಯುವಳಿದುಳಿದಾತ ತ್ರಿವಿಧ ಸಂಪನ್ನನೀತನು ಉಬಯುಸಂಗಿ. ॥೪॥

ಲಿಂಗಭಕ್ತಶೇಷ ಭಕ್ತಚರ ಪ್ರಾಣಿ ನಿರ್ಗಮನ ಗಮುಸಿಗೆ ಗಮನವಿಲ್ಲ ಸ್ವತಂತ್ರ ಕೂಡಲಚನ್ನಸಂಗಯ್ಯನಲ್ಲಿ ಸಾಧ್ಯ ಸಾಧಕನಾದ ಲಿಂಗ ಸಂಗಿ. ॥೫॥

ಮಂತ್ರ, ವೇದಪಂತಿರಲಿ, ಶಾಸ್ತ್ರ ಸಾಕು ಸಾಕು. ಪುರಾಣವಂತಿರಲಿ, ಆಗಮ ಸಾಕು ಸಾಕು. ಅಂತಿರಲಿ ಸಾಧಿಸಿದನು ಸಜ್ಜನ ಸಾರಾಯವನು ಲಿಂಗ ಜಂಗಮದ ಪ್ರಸಾದವೆ ಪ್ರಾಣವೆಂದು ಇದರಲ್ಲಿ ಸಜ್ಜನ ಸದರ್ಥ ಕೂಡಲ ಚನ್ನಸಂಗಯ್ಯನಲ್ಲಿ ಬಸವಣ್ಣನು. ॥೧೨೫॥

ಆ ಪ್ರಸ್ಥಾವದೊಳು ಮಡಿವಾಳ ಮಾಚಿತಂದೆಗಳು ಪ್ರಭುದೇವರ ಸ್ತುತಿಸುವ ವಚನ.

ತನುಗುಣವಳಿದು ಲಿಂಗಸಂಗಿಯಾದ. ಮನಗುಣವಳಿದು ಜ್ಞಾನ ಸಂಬಂಧಿಯಾದ. ಪ್ರಾಣಗುಣವಳಿದು ಪ್ರಸಾದ ಸಂಬಂಧಿಯಾದ. ಭಾವ ಭ್ರಮೆಯಳಿದು ನಿಜಲಿಂಗಸಂಬಂಧಿಯಾದ. ಇಂತೀ ಚತುರ್ವಿಧ ಸಂಬಂಧಿಯಾಗಿ ಶೂನ್ಯಸಿಂಹಾಸನವನಿಂಬುಗೊಂಡ ಕಲಿದೇವರ ದೇವ ನಿಮ್ಮ ಶರಣ ಪ್ರಭುದೇವರ ಪಾದಕ್ಕೆ ನಮೋ ನಮೋ ಎಂಬೆನು. ॥೧೨೬॥

ಮತ್ತಂ, ಲಿಂಗಬೆರಗಿನ ಪರಮಸುಖಿಯನೇನೆಂಬೆನಯ್ಯ? ಕಂಗಳ ಕಳೆಯ ಸಂಗವನರಿದ ಅಂಗ ವಿರಹಿತನನೇನೆಂದುಪಮಿಸುವೆನು? ನೋಟದಲ್ಲಿ ಅನುಮಿಷ. ಕೂಟದಲ್ಲಿ ನಿಸ್ಸಂಗಿ. ಎಡೆಯಾಟದಲ್ಲಿ ನಿರ್ಗಮನ. ನಿಂದಲ್ಲಿ ನಿರಾಳ. ಸುರಾಳದಲ್ಲಿ ಪರಿಪೂರ್ಣ. ಘನಕ್ಕೆ ಘನಮಹಿಮನು ಕಲಿದೇವರ

ದೇವ ನಿಮ್ಮ ಶರಣನು ಪ್ರಭುದೇವರ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು. ॥೧೨೭॥

ಮತ್ತಂ, ಸಂಸಾರದ ಸಾರಾಯವ ತನಿರಸವ ಹಿಂಡಿ ಹಿಡಿದಾಡಿದ ರಯಾ. ಸವರಿಕೊಂಡು ಹರಿದು ಹತ್ತುವನಲ್ಲ. ಮರಳಿ ನೋಡುವನಲ್ಲ ಇಂತ ಪ್ಪ ವೀರರುಂಟೇ? ಇಂತಪ್ಪ ಧೀರರುಂಟೇ? ಇಂತಪ್ಪ ಪೌರುಷ ಚರಿತನಾಗಿ ಮಾಯೆಯ ಹಂಗಿಸಿ ಮುಯ್ಯಾಂತು ಮುಂದಣ ನಿಲವ ನಾಗು ಮಾಡಿದ ನಿಜೈಕ್ಯ ನಿರ್ವಯಲ ನಿಷ್ಪತ್ತಿಗೆ ನಿಜವಾಗಿ ನಿರಾಳದೊಳಗೆ ತಾನೇ ತೊಳಲು ತ್ತಿರ್ದನು. ಕಲಿದೇವ, ನಿಮ್ಮ ಲಿಂಗೈಕ್ಯ ಪ್ರಭುದೇವರ ಶ್ರೀಪಾದದಲ್ಲಿ ಭೃಂಗ ನಾಗಿಪ್ಪೆನು ॥೧೨೮॥

ಪ್ರಭುದೇವರು ಮಡಿವಾಳ ಮಾಚಿ ತಂದೆಗಳ ಸ್ತುತಿಸಿದ ವಚನ ॥

ಲಿಂಗ ಗಂಭೀರ ಸುನಾದನಂ ಜಗಗಂಭೀರ ತನುಗುಣ ಚರಿತ್ರ ಜಂಗ ಮಗಂಭೀರ ಅನಾಹತವೇ ಮನಗುಣ ಚರಿತ್ರ ಈ ಎರಡರ ಸಂಬಂಧವೇ ಒಡ ಲು ಪರಮಾನಂದ ಜಲದಲ್ಲಿ ಅಲುಬಿ ಮಹಾ ಪ್ರಕಾಶದಲ್ಲಿ ಅರಿಸಿ ಅನಾಹತ ಮಥನದಲ್ಲಿ ಘಟ್ಟಿಸಿ ಆ ವಸ್ತ್ರವನೆನಗೆ ಕೊಟ್ಟರೆ ಉಡದ ಮುನ್ನವೆ ಉರಿ ಹತ್ತಿತ್ತು ನೋಡಾ. ಆ ಉರಿಯು ಕಣ್ಣಿಗೆ ಕಾಣಬಾರದು. ಮನಕ್ಕೆ ನೆನೆಯಬಾರದು. ಉರಿ ಉಂಡು ಉಷ್ಣವಿಲ್ಲದ ಆ ಸ್ವಯಂ ಜ್ಯೋತಿಯ ನಿಜ ನಿವಾಸದಲ್ಲಿ ನಿಶ್ಚಿಂತನಾಗಿರ್ದು ಮಡಿವಾಳನ ಕೃಪೆಯಿಂದ ನಾನು ಬದುಕಿದೆನು ಕಾಣಾ ಗುಹೇಶ್ವರಾ ॥೧೨೯॥

ಮತ್ತಂ, ತಾಯಿಲ್ಲದ ಶಿಸುವಿಂಗೆ ಶಿಸು ಪಿಲ್ಲದ ತಾಯಿ ಮೊಲೆವಾಲ ನೂಡಿದಳು. ಮೊಲೆವಾಲ ನುಂಡ ಶಿಸು ತಾಯಿ ತರ್ಕೈಸಿದರೆ ತಾಯಿ ಶಿಸು ವಿಂಗೆ ಸತಿಯಾದಳಲ್ಲ. ಸತಿಯ ಸಂಗದ ಸುಖವ ಪತಿ ಇಲ್ಲದರಿದಲ್ಲಿ ಸತಿ ಪತಿ ಎಂಬೆರಡು ಅಳಿಯಿತ್ತು ನೋಡಾ. ಈ ನಿಜದ ನಿರ್ಣಯವ ತೋರಿದನೆನಗೆ ಗುಹೇಶ್ವರನ ಶರಣ ಮಡಿವಾಳ ತಂದೆಗಳ ಪಾದಕ್ಕೆ ನಮೋ ನಮೋ ಎಂಬೆನು ॥೧೩೦॥

ಚಿಕ್ಕದಣ್ಣಾಯಕರು ಮಡಿವಾಳ ಮಾಚಿ ತಂದೆಗಳ ಸ್ತೋತ್ರಮಂ ಮಾಡುವ ವಚನ ॥

ಹೊಟ್ಟೆಯಲ್ಲಿ ಎನ್ನ ತೆಗೆದ. ಬೆನ್ನಿನಲ್ಲಿ ಬಸವಣ್ಣನ ತೆಗೆದ. ಬ್ರಹ್ಮರಂಧ್ರ ದಲ್ಲಿ ಅಲ್ಲಮನ ತೆಗೆದ. ಸಂಗನೋ ಮಡಿವಾಳನೋ ಮಡಿವಾಳನೋ

ಸಂಗನೋ ಕೂಡಲ ಚನ್ನಸಂಗನಲ್ಲಿ ಮಡಿವಾಳ ಸ್ವಾಯತ ನಮ್ಮ ಬಸವಣ್ಣಂಗೆ ॥೧೩೧॥

ಮತ್ತಂ, ಅಂಗದ ಮೇಲಣ ಲಿಂಗ ಹಿಂಗದಂತಿರಬೇಕು. ಅಂಗಕ್ಕೆ ಲಿಂಗಕ್ಕೆ ಸಂಬಂಧವೇನೋ? ಮನ ಮುಟ್ಟದನ್ನಕ್ಕರ ಕಾಯ ಕಾಯಕವ ಮಾಡುತ್ತಿರಲು ಮನವು ಲಿಂಗವಲ್ಲಿ ಬೆರಸಿ ತೆರಹಿಲ್ಲದಿಪ್ಪ ಮಡಿವಾಳನ ಪರಿಯ ನೋಡಾ. ಅಂಗಲಿಂಗ ಸಂಗವೆಂಬ ಸಂದು ಸಂಶಯುವ ನಳಿದು ಸರ್ವಾಂಗ ಲಿಂಗ ಸಂಬಂಧಿ ಕೂಡಲ ಚನ್ನಸಂಗಯ್ಯನಲ್ಲಿ ಮಡಿವಾಳ ಮಾಚಯ್ಯನು ॥೧೩೨॥

ಮಡಿವಾಳ ಮಾಚಿ ತಂದೆಗಳು ಚನ್ನಬಸವಣ್ಣನ ಸ್ತುತಿಸಿದ ವಚನ॥ ಮಾಯದ ಮಾಯದ ಸಂಭ್ರಮದೊಳಗೆ ಸಿಲುಕಿತ್ತು ನೋಡಾ. ಭವನವೆಲ್ಲವು ಮಾಯಕ್ಕೆ ಹೊರಗಾದ ನಿರ್ಮಾಯನ ಕಂಡೆನು. ತಾನೆಂಬ ನುಡಿಗೆ ನಾಚಿ ನೀನೆಂಬ ನುಡಿಗೆ ಹೇಸಿ ತಾನು ತಾನಾದ ಘನ ಮಹಿಮನು ಕಾಯದಲ್ಲಿ ಕುರುಹಿಲ್ಲ. ಭಾವದಲ್ಲಿ ಭ್ರಮೆ ಇಲ್ಲ. ಜ್ಞಾನ ತಾನೆಂಬ ಭೇದವಿಲ್ಲ. ಸಾಯುವನಲ್ಲ ನಿರವಯನಲ್ಲ ಕಲಿದೇವರ ದೇವ ನಿಮ್ಮ ಶರಣ ಚನ್ನಬಸವಣ್ಣನು ॥೧೩೩॥

ಅತಿಶಯುವನತಿಗಳೆದು ನಿರತಿಶಯ ಸುಖದೊಳಗೆ ಪರಮ ಸುಖಿಯಾಗಿಪ್ಪವರಾರು ಹೇಳಾ? ನಿಜ ನಿರ್ಣಯುವನರಿದು ಭಜನಿಯ ಭಾವವನೆ ಅಳಿದು ಶ್ರೀಜಗಪತಿಯಾಗಿಪ್ಪವರಾರು ಹೇಳಾ? ಕೋಡಗದ ಮನದೊಳಗೆ ಗಮನ ವಿರಹಿತನಾಗಿ ಗಮನಗೆಡದಿಪ್ಪರಾರು ಹೇಳಾ? ಹಗೆಯುಲ್ಲಿ ಹೊಕ್ಕು ಹಗೆಯಳಿದು ಸುಖಿಯಾಗಿ ತನಗೆ ತಾ ಕಳೆಯಾಗಿಪ್ಪರಾರು ಹೇಳಾ? ಒಳ ಹೊರಗು ಸರ್ವಾಂಗವೆಲ್ಲ ಲಿಂಗವಾಗಿರ ಬಲ್ಲ ಪರಮಾತ್ಮರಾರು ಹೇಳಾ? ಕಲಿದೇವರ ದೇವಾ ನಿಮ್ಮ ಶರಣ ಚನ್ನಬಸವಣ್ಣನ ನಿಲವ ನರಿದು ಶರಣೆಂದು ನಾನು ಸುಖಿಯಾದೆನು. ॥೧೩೪॥

ಮಡಿವಾಳಯ್ಯಗಳು ಬಸವರಾಜದೇವರ ಸ್ತುತಿಸಿದ ವಚನ.

ಮಾರಾರಿಯ ಬೆಸನದಿಂದೆ ಧಾರುಣಿಗವತರಿಸಿ ಸಾರಾಯ ಸದ್ಭಕ್ತಿಯ ತೋರಿದನು. ಶಿವಶರಣರೆಲ್ಲರಿಗೆ ಭಕ್ತಿಯ ಸಂಚಯುವ ಮುಕ್ತಿಯ ಭೇದವ ಸತ್ಯಶರಣರಿಗೆಲ್ಲ ಉಪದೇಶವ ಮಾಡಿ ನಿತ್ಯ ಲಿಂಗಾರ್ಚನೆಯೊಳಗೆನ್ನನಿರಿಸಿ ರಕ್ಷಿಸಿದಾತ ಬಸವಣ್ಣ ಕಾಣಾ ಕಲಿದೇವರ ದೇವಾ. ॥೧೩೫

ಆರು ಜನ್ಮದವನೆಂಬರು. ಬಸವಣ್ಣನಗಾರು ಮಾತು ಕೇಳಲಾಗದು. ಆರುಸ್ಥಲವನಾರು ಪಥವ ತೋರಲಿಕ್ಕೆ ತಾ ಪರಶಿವಮೂರ್ತಿಯಾದ. ಆರಾರು ತತ್ವಂಗಳ ಮೇಲಿಹಾತ ಬಸವಣ್ಣನ ಕಾಣಾ ಕಲಿದೇವರ ದೇವಾ. ॥೧೩೬॥

ಮತ್ತಂ, ಕಲ್ಯಾಣವೆಂಬ ಪಟ್ಟಣದೊಳಗೆ ಛತ್ತೀಸಪುರದ ಮಹಾ ಗಣಂಗಳು ಒಂದು ಪುರದವರು ಅಘವಣಿಯ ತಾಹರು. ಎರಡು ಪುರ ದವರು ಸಮ್ಮಾರ್ಜನೆಯ ರಂಗವೋಲೆಯ ಮಾಡುವರು. ಮೂರು ಪುರ ದವರು ಲಿಂಗಾರ್ಚನೆಗೆ ನೀಡುವರು. ನಾಲ್ಕುಪುರದವರು ಲಿಂಗಕ್ಕೆ ಬೋನವ ಮಾಡುವರು. ಐದು ಪುರದವರು ಅರ್ಪಿತಕ್ಕೆ ನೀಡುವರು. ಆರು ಪುರದ ವರು ಪ್ರಸಾದದಲ್ಲಿ ತದ್ಗತರಾಗಿ ಏಳು ಪುರದವರು ಧ್ಯಾನಾರೂಢರಾಗಿಹರು. ಮುಂದಣ ಪುರದವರು ನಿಶ್ಚಿಂತ ನಿವಾಸಿಗಳಾಗಿಹರು. ಈ ಪುರದ ಗಣಂ ಗಳು ಓಲೈಸುವ ಬಸವಣ್ಣನ ಮಹಾಮನೆಯ ಮಡಿವಾಳ ನಾನು ಕಾಣಾ ಕಲಿದೇವ ದೇವಾ. ॥೧೩೭॥

ಮತ್ತಂ, ಇವಭಕ್ತಿ ಸಂಪುಟವಾದ ಮಹಾಮಹಿಮರ ನಿಲವು ನಾದದ ಉತ್ಪತ್ತಿ ಸೋಂಕದು. ಬಿಂದುವಿನಾಶ್ರಯದಲ್ಲಿ ಬೆಳೆಯದು. ಶುಕ್ಲ ಶೋಣಿತವೆಂಬ ಪಂಚವರ್ಣಾಶ್ರಮವನು ಹೊದ್ದದು. ಅಷ್ಟದಳ ಕಮಲವ ಮುಟ್ಟದು. ಪ್ರಾಣೋಪಾನ ವ್ಯಾನೋದಾನ ಸಮಾನ ನಾಗ ಕೂರ್ಮ ಕ್ರಕರ ದೇವದತ್ತ ಧನಂಜಯವೆಂಬ ದಶವಾಯುಗಳಿಚ್ಛೆಯಲ್ಲಿ ಸುಳಿದಾ ಡದು. ಜ್ಞಾನದಲ್ಲಿ ಬೆಳೆವುದು. ನಿರಾಲಂಬದಲ್ಲಿ ಆಡುವದು. ಹೃದಯ ಕಮಲದ ಪದ್ಮ ಪತ್ರದ ಉಸಿರ ನಾಲಿನ ಸಂಪುಟ ಜಂಗಮದಾಟವ ನಾಡುವದು. ಲಿಂಗ ನೋಟವ ನೋಡುವುದು. ಮಹಾಘನದಲ್ಲಿ ಬೆಳೆ ವುದು. ನಿಜನಿರಾಳದಲ್ಲಿ ನಿಜಯಾಗಿಪ್ಪದು. ಕಲಿದೇವರ ದೇವ ನಿಮ್ಮ ಶರಣ ಬಸವಣ್ಣನ ನಿಲವಿದು ॥೧೩೮॥

ಮತ್ತಂ, ಅಷ್ಟ ತನುವಿನಲ್ಲಿ ಹುಟ್ಟಿದ ನಿಷ್ಕಾಮಪುರದಲ್ಲಿ ಮುಟ್ಟುವ ಭಾವದಲ್ಲಿ ವಿದ್ಯದೊಳಗಣ ಆಧಾರ ಮಂಟಪದೊಳಗಣ ಸಹಜವನರಿದ ವಂಗಲ್ಲದೆ ಲಿಂಗವೆನಬಾರದು. ಜಂಗಮವೆನಬಾರದು. ಪ್ರಸಾದವೆನಬಾ ರದು. ದ್ವಾರ ಮಂಟಪದೊಳಗಣ ಸಹಜವನರಿಯದೆ ಕರಣಂಗಳಿಗೆ ಗುರಿ ಯಾದರು. ಕರಣ ಲಿಂಗಾರ್ಚಕರಾದರು. ಕರಣವು ಮರಣ ತಪ್ಪದಿ ನ್ನೆಂತೋ? ಇದನೆಲ್ಲವ ನತಿಗಳೆದು ನಿಜ ಲಿಂಗಾರ್ಚನೆಯ ತೋರಿ ನಿಜೈಕ್ಯ ದೊಳಗಿರಿಸಿ ಬದುಕಿಸಿದಾತ ಬಸವಣ್ಣ ಕಾಣಾ ಕಲಿದೇವರ ದೇವಾ ॥೧೩೯॥

ಬಸವರಾಜದೇವರು ಮಡಿವಾಳ ತಂದೆಗಳ ಸ್ತೋತ್ರಮಂ ಮಾಡುವ ವಚನ ॥

ಎನ್ನ ಕಾಯದ ಕರ ಸ್ಥಲದಲ್ಲಿ ಪ್ರಭುದೇವರ ಕಂಡೆನು. ಎನ್ನ ಪ್ರಾಣದ ಕರ ಸ್ಥಲದಲ್ಲಿ ಚನ್ನಬಸವಣ್ಣನ ಕಂಡೆನು. ಎನ್ನ ಸರ್ವಾಂಗದ ಕರ ಸ್ಥಲದಲ್ಲಿ ಮಡಿವಾಳನ ಕಂಡೆನು. ಸಂಗನೋ ಮಡಿವಾಳನೋ ಎಂದು ನುಡಿಯಲರಿಯೆ. ಮಡಿವಾಳನೋ ಸಂಗನೋ ಎಂದು ನುಡಿಯಲರಿಯೆ. ಎನ್ನೊಡಲ ಗಣಂಗಳನೆ ಕೆಡಿಸಿ ತಡೆಯ ಕಾಣಿಸಿ ಎನ್ನನುಳುಹಿದ ಪರಮಯೋಗಿ ಕೂಡಲ ಸಂಗಮದೇವ ಮಡಿವಾಳ ಮಾಚಿ ತಂದೆಯ ಪಾದಕ್ಕೆ ನಮೋ ನಮೋ ಎಂಬೆನು ॥೧೪೦॥

ಮತ್ತಂ, ಆಚಾರದ ಸುಖವ ಸಂಗದಲ್ಲಿ ನೆಲೆಗೊಳಿಸಿ ತೋರಿದ ಅನುಭಾವದನುವ ಪ್ರಾಣದಲ್ಲಿ ನೆಲೆಗೊಳಿಸಿ ತೋರಿದ ಮಹಾಜ್ಞಾನದ ಸುಖವ ಸರ್ವಾಂಗದಲ್ಲಿ ನೆಲೆಗೊಳಿಸಿ ತೋರಿದ ಈ ತ್ರಿವಿಧ ಸ್ಥಲದ ನಿರ್ಣಯವ ಎನಗೆ ಅರುಹಿದ ಕಾರಣ ಕೂಡಲ ಸಂಗಮದೇವಯ್ಯ ಮಡಿವಾಳ ಮಾಚಯ್ಯನ ಪಾದಕ್ಕೆ ನಮೋ ನಮೋ ಎಂಬೆನು ॥೧೪೧॥

ಹಡಪದಪ್ಪಣ್ಣಗಳು ಪ್ರಭುದೇವರ ಸ್ತುತಿಸಿದ ವಚನ ॥

ಅನುಮಿಷನಾದ ನಿಬ್ಬೆರಗಿನ ಲಿಂಗೈಕ್ಯ ಭಾವ ನಿರ್ಭಾವವನೈದಿ ಜ್ಞಾನವೇ ಪರಮಾಶ್ರಯವಾಗಿಪ್ಪ ಲಿಂಗೈಕ್ಯನು ಮಹವ ನೊಳಕೊಂಡ ಮಹಾಮಹಿಮ ಲಿಂಗೈಕ್ಯನು ಬಸವಪ್ರಿಯ ಕೂಡಲ ಚನ್ನಸಂಗಯ್ಯ ನಿಮ್ಮ ಶರಣ ಪ್ರಭುದೇವರಿಗೆ ನಮೋ ನಮೋ ಎನುತ್ತಿರ್ದೆನು. ॥೧೪೨॥

ಮತ್ತಂ, ನಿರಾಕಾರದ ಶಕ್ತಿಯಲ್ಲಿ ನಿರಾಳವೆಂಬ ತನು ನಿಃಶೂನ್ಯವೆಂಬ ಸಿಂಹಾಸನದ ಮೇಲೆ ಘನವಾಗಿ ತೊಳಗಿ ಬೆಳಗುತ್ತಿರ್ದನು. ದೆಸೆಯೆಲ್ಲ ಮುಖವಾಗಿ ಮುಖವೆಲ್ಲ ಜಗವಾಗಿ ಅಖಂಡ ಪರಿಪೂರ್ಣ ಪರಬ್ರಹ್ಮ ತಾನಾದನು. ಈ ಮಹಿಮನ ನೆನೆದರೆ ಮನೋಮುಕ್ತಿ, ಕಂಡರೆ ರೂಪು, ಮುಕ್ತಿ, ನುಡಿಸಿದರೆ ಶಬ್ದ ಮುಕ್ತಿ, ಸಂಗವ ಮಾಡಿದರೆ ಸರ್ವಾಂಗ ಲಿಂಗೈಕ್ಯ. ಬಸವ ಪ್ರಿಯ ಕೂಡಲ ಚನ್ನಸಂಗಯ್ಯ ನಿಮ್ಮ ಪ್ರಭುವಿನ ಶ್ರೀಪಾದಕ್ಕೆ ಶರಣೆಂದು ಬದುಕಿದೆನು ॥೧೪೩॥

ನಾಗಯಕ್ಕಗಳು ಪ್ರಭುದೇವರನು ಬಸವರಾಜ ದೇವರನು ಚನ್ನಬಸವಣ್ಣನನು ಸ್ತೋತ್ರಮಂ ಮಾಡಿದ ವಚನ ॥

ಎನ್ನ ಭವದ ಬಳ್ಳಿಯ ಬೇರು ಹರಿಯಿತ್ತಯ್ಯ, ಬಸವಣ್ಣನು ಓಕ್ಕುದ ಕೊಂಡೆನಾಗಿ. ಎನ್ನ ಮನದ ಕಪಟ ಹಿಂಗಿತ್ತಯ್ಯ ಚನ್ನಬಸವಣ್ಣನ ಕರುಣವ ಪಡೆದೆನಾಗಿ. ಎನ್ನ ಮನದ ಸಂಶಯ ತೊಲಗಿತ್ತೆಂದು ಬಸವಣ್ಣ ಪ್ರಿಯ ಕೂಡಲ ಚನ್ನಸಂಗಯ್ಯ ಎನ್ನ ಪರಮ ಗುರು ಶ್ರೀ ಪ್ರಭುವಿನ ಶ್ರೀ ಪಾದವ ಕಂಡೆನಾಗಿ ॥೧೪೪॥

ಅರಿಯದೆ ಮರಹಿಂದ ಭವದಲ್ಲಿ ಬಂದೆ. ಇನ್ನು ಅರಿದ ಬಳಿಕ ಬಳಲಲುಂಟೆ? ಹೃದಯ ಕಮಲ ಮಧ್ಯದಲ್ಲಿ ನಿಜವು ನೆಲೆಗೊಂಡ ಬಳಿಕ ಪುಣ್ಯ ಪಾಪವೆಂಬವಕ್ಕೆ ಹೊರಗಾದೆನು. ಭುವನ ಹದಿನಾಲ್ಕರೊಳಗೆ ಪರಿಪೂರ್ಣ ನಿರಂಜನ ಜ್ಯೋತಿಯಾಗಿ ಬೆಳಗುವ ಪ್ರಭುವ ಕಂಡು ಬದುಕಿದೆನು ಕಾಣಾ ಬಸವಣ್ಣ ಪ್ರಿಯ ಕೂಡಲಚನ್ನಸಂಗಯ್ಯ. ॥೧೪೫॥

ಸೊಡ್ಡಳ ಬಾಚರಸರು ಪ್ರಭುದೇವರ ಸ್ತೋತ್ರಮಂ ಮಾಡುವ ವಚನ॥

ಬರದಲ್ಲಿ ಅರಲುಗೊಂಡವಂಗೆ ಅಮೃತ ಸಿಕ್ಕಿದಂತೆ ಜರಾ ಮರಣ ದುಃಖಿ ಮರುಜೀವಣಿಯ ಕಂಡಂತೆ ಭವದ ಬಾಗಿಲ ಹೊಗದೆ ಬದುಕಿದೆನೈಯ್ಯ ನಿತ್ಯವ. ಕಂಡು ಒಳಗೆ ಬೆಳಗುವ ಪ್ರಕಾಶ ಹೊರಗೆ ಮೂರ್ತಿಗೊಂಡಂತೆ ಕಂಗಳಿಗೆ ಮಂಗಳವಾಯಿತ್ತಯ್ಯ. ಮಹಾ ಘನದಲ್ಲಿ ಸಾಕಾರ ಸೊಡ್ಡಳನ ಶರಣ ಪ್ರಭುವಿಂಗೆ ನಮೋ ನಮೋ ಎನುತಿರ್ದೆನು. ॥೧೪೬॥

ಮತ್ತಂ, ಮನದ ಸಂಚದೋವರಿಯೊಳಗೆ ಮಿಂಚಿನ ಗೊಂಚಲು ಬಳ್ಳಿವರಿಯಿತ್ತಯ್ಯ. ಎನ್ನ ಕಾಯದ ಕಂಗಳೊಳಗೆ ನಿರುಪಮ ಸುಖ ಸಾಧ್ಯವಾಯಿತ್ತಯ್ಯ. ಬಯಸುವ ಬಯಿಕೆ ಕೈಸಾರಿತ್ತು. ಅರಸುವ ಅರಿಕೆ ನಿಂದಿತ್ತು. ಆಹಹಾ ಕರತಳಾಮಳಕವಾಯಿತ್ತಲ್ಲ. ಸತ್ಯಶರಣರ ದರುಶನವೇನ ಮಾಡದು? ಮಹಾದಾನಿ ಸೊಡ್ಡಳನ ಶರಣ ಪ್ರಭುವಿನ ಶ್ರೀ ಪಾದವ ಕಂಡು ಬದುಕಿದೆನು. ॥೧೪೭॥

ಬಹುರೂಪಿಚೌಡಯ್ಯಗಳು ಬಸವಣ್ಣನ ಚನ್ನಬಸವಣ್ಣನ ಪ್ರಭುದೇವರ ಸ್ತುತಿಸುವ ವಚನ॥

ಸಂಗನಬಸವಣ್ಣ ಎನ್ನ ಕರಸ್ಥಲಕ್ಕೆ ಬಂದ ಕಾರಣ ಗುರುವಾದ. ಚನ್ನಬಸವಣ್ಣನೆನ್ನ ಕರಸ್ಥಲಕ್ಕೆ ಬಿಜಯಂಗೈದ ಕಾರಣ ಎನಗೆ ಲಿಂಗ

ವಾದ. ಪ್ರಭುದೇವರು ಎನ್ನ ಕರಸ್ಥಲಕ್ಕೆ ಬಂದ ಕಾರಣ ಎನಗೆ ಪ್ರಾಣ ಲಿಂಗವಾದ. ಈ ಮೂವರಿಗೆ ನಾ ಭಕ್ತನಾಗಿ ಹುಟ್ಟಿದೆನಾಗಿ ರೇಕಣ್ಣ ಪ್ರಿಯ ನಾಗಿನಾಥ ಎನಗೆ ಒಚ್ಚತವಾದ. ॥೧೪೪॥

ಮತ್ತಂ, ಬಸವಣ್ಣನಿಂದೆ ಶುದ್ಧಪ್ರಸಾದಿಯಾದೆ. ಚನ್ನಬಸವಣ್ಣನಿಂದೆ ಸಿದ್ಧಪ್ರಸಾದಿಯಾದೆ. ಪ್ರಭುದೇವರಿಂದ ಪ್ರಸಿದ್ಧ ಪ್ರಸಾದಿಯಾದೆ. ರೇಕಣ್ಣ ಪ್ರಿಯ ನಾಗಿನಾಥನಲ್ಲಿ ಸೊಬಗಮೆರೆದೆ. ॥೧೪೯॥

ಕಕ್ಕಯ್ಯಗಳು ಪ್ರಭುವಿನ ಸ್ತುತಿಸುವ ವಚನ. ॥

ಕಷ್ಟ ಕುಲದಲ್ಲಿ ಹುಟ್ಟಿದ ಕರ್ಮವ ಕಳೆದು ಮುಟ್ಟಿ ಪಾವನವ ಮಾಡಿ ಕೊಟ್ಟನಯ್ಯ ಎನ್ನ ಕರಸ್ಥಲಕ್ಕೆ ಲಿಂಗವ. ಆ ಲಿಂಗ ಬಂದು ಸೋಂಕಲೊಡನೆ ಎನ್ನ ಸರ್ವಾಂಗದ ಅವಲೋಹವಳಿಯಿತ್ತಯ್ಯ! ಎನ್ನ ತನುವಿನಲ್ಲಿ ಗುರುವ ನೆಲೆಗೊಳಿಸಿದ, ಎನ್ನ ಮನದಲ್ಲಿ ಲಿಂಗವ ನೆಲೆಗೊಳಿಸಿದ, ಎನ್ನ ಧನದಲ್ಲಿ ಜಂಗಮವ ನೆಲೆಗೊಳಿಸಿದ, ಎನ್ನ ಅರಿವಿನಲ್ಲಿ ಪ್ರಸಾದವ ನೆಲೆಗೊಳಿಸಿದ, ಇಂತೀ ತ್ರಿವಿಧ ಸ್ಥಾನ ಶುದ್ಧವ ಮಾಡಿದ ಬಸವಣ್ಣನ ಕರುಣದಿಂದೆ ಪ್ರಭುವಿನ ಶ್ರೀಪಾದವ ಕಂಡು ಬದುಕಿದೆನು ಕಾಣಾ ಅಭಿನವ ಚನ್ನಮಲ್ಲಿಕಾರ್ಜುನ. ॥೧೫೦॥

ಮತ್ತಂ, ಆಸೆಯಾಮಿಷವಳಿದು ಹುಸಿವಿಷಯಂಗಳೆಲ್ಲ ಹಿಂಗಿ ಸಂಶಯ ಸಂಬಂಧವಾಯಿತ್ತು ನೋಡಾ. ಎನ್ನ ಮನದೊಳಗೆ ಘನ ಪರಿಣಾಮವ ಕಂಡು ಮನಮಗ್ನವಾಯಿತ್ತಯ್ಯ. ಅಭಿನವ ಚನ್ನಮಲ್ಲಿಕಾರ್ಜುನ ನಿಮ್ಮ ಶರಣ ಪ್ರಭುದೇವರ ಕರುಣದಿಂದೆ ಬದುಕಿದೆನು. ॥೧೫೧॥

ಮೋಳಿಗಯ್ಯಗಳು ಪ್ರಭುವಿನ ಸ್ತುತಿಸುವ ವಚನ. ॥

ಬಡವಂಗೆ ನಿಧಾನ ಕಡವರ ಕೈಸಾರಿತ್ತಯ್ಯ. ಕಾಣಬಾರದ ಬಯಲು ರೂಪು ಗೊಂಡಿತ್ತಯ್ಯ. ನಿರಾಳ ನಿರ್ಣಯದ ಮೇಲೆ ನಿಂದಿತ್ತು. ಎನ್ನ ಭಾವದ ಕೊನೆಯ ಮೊನೆಯ ಮೇಲೆ ಮನೆಯ ಮಾಡಿಕೊಂಡಿಪ್ಪ ಪ್ರಭುದೇವರ ಕಂಡು ಬದುಕಿದೆನು ಕಾಣಾ ನಿಃಕಳಂಕ ಮಲ್ಲಿಕಾರ್ಜುನ ॥೧೫೨॥

ಮತ್ತಂ, ನೆನಹಿನ ನಿಧಿಯ ನೋಡಾ. ಎನ್ನ ಅರಿವಿನ ಘನವ ನೋಡಾ. ಆಹಾ ಎನ್ನ ಪುಣ್ಯವೆ ಆಹಾ ಎನ್ನ ಭಾಗ್ಯವೆ ಆಹಾ ಎನ್ನ

ಕಂಗಳ ಮನೆಯ ಮಾಡಿಕೊಂಡಿಪ್ಪ ನಿತ್ಯದ ಬೆಳಗೆ ಎನ್ನ ಧ್ಯಾನದೊಳಗಣ ದೃಢವೆ ಎನ್ನ ಸುಖದೊಳಗಣ ಸುಗ್ಗಿಯೆ ನಿಃ ಕಳಂಕ ಮಲ್ಲಿಕಾರ್ಜುನ ನಿಮ್ಮ ಶರಣ ಪ್ರಭುವಿನ ಶ್ರೀಪಾದಕ್ಕೆ ನಮೋ ನಮೋ ಎನುತಿರ್ದೆನು. ॥೧೫೩॥

ಏಕಾಂತರಾಮಿತಂದೆಗಳು ಪ್ರಭುದೇವರ ಸ್ತುತಿಸಿದ ವಚನ. ॥

ಲೋಕಾಂತವಳಿದು ಏಕಾಂತ ಉಳಿದಲ್ಲಿ ಏಕೈಕಮೂರ್ತಿಯ ಸಂಗ ಸಮ್ಮನಿಸಿತ್ತೆನಗೆ. ಎನ್ನ ನುಡಿ ಆತನ ಕಿವಿಗಿನಿದಾಯಿತ್ತು. ಆತನ ನುಡಿ ಎನ್ನ ಕಿವಿಗಿನಿಯಾಯಿತ್ತು. ಇಬ್ಬರ ನುಡಿಯು ಒಂದೆಯಾಗಿ ನಿಃ ಶಬ್ದ ವೇಧಿಸಿತ್ತು. ಈ ಸುಖದ ಸೋಂಕಿನ ಪುಣ್ಯದ ಫಲದಿಂದೆ ಅನುಪಮ ಚರಿತ್ರ ಅಲ್ಲಮ ಪ್ರಭುದೇವರ ನಿಲವ ಕಂಡು ನಾನು ಧನ್ಯನಾದೆನು ಕಾಣಾ ಏಕಾಂತ ವೀರಸೊಡ್ಡಳ ॥೧೫೪॥

ಮತ್ತಂ, ಕೂರ್ಮನ ಶಿಸುವಿನ ಸ್ನೇಹದಂತಿಪ್ಪ ದೇವ ಎನಗಿಂದು ಪ್ರತ್ಯಕ್ಷ ಕಣ್ಣ ಮುಂದೆ ಗೋಚರವಾದ ನೋಡಾ. ಎನ್ನಂತರಂಗದಲ್ಲಿ ಹೂಣಿಹೊಕ್ಕು ವಿನಯ ಸದ್ಗೋಷ್ಠಿಯಂ ಮಾಡುವ ನಿಃ ಕಳಂಕ ಚೈತನ್ಯನು ಸಕಲ ರೂಪು ಸನ್ನಿಹಿತನಾದ ನೋಡಾ. ಬಟ್ಟಬಯಲು ಗಟ್ಟಿಗೊಂಡಂತೆ ಏಕಾಂತ ವೀರ ಸೊಡ್ಡಳ ನಿಮ್ಮ ಶರಣ ಪ್ರಭುದೇವರ ನಿಲವು ॥೧೫೫॥

ಶಂಕರದಾಶಿಮಯ್ಯಗಳು ಪ್ರಭುದೇವರ ಸ್ತುತಿಸಿದ ವಚನ. ॥

ಹರ ನಿರೂಪದಿಂದೆ ಬಸವಣ್ಣ ಧರಣಿಗೆ ಅವತರಿಸಿದ ಕಾರಣ ಶಿವಾಚಾರ ಸದಾಚಾರವೆಂಬುದು ಧರೆಗೆ ವಿಖ್ಯಾತವಾಯಿತ್ತು. ಶಿವಗಣ ಪ್ರಮಥಗಣಂಗಳೆಂಬ ಮಹಾ ಮಹಿಮರ ಸುಳುಹು ಧರೆಯ ಮೇಲೆ ಕಾಣ ಬಂದಿತ್ತು ನೋಡಯ್ಯ. ಪರುಷವ ಸಾಧಿಸಿ ತಂದಂತಾಯಿತ್ತು. ನಿಮ್ಮ ಶರಣರ ಸಂಗದಿಂದೆ ಎನ್ನ ನಂದಿಯ ಮೊಗವಾಡ ನೊಸಲಕಣ್ಣೆಂಬ ಅಹಂಕಾರವ ಮುಂದುಗೊಂಡಿದ್ದೆನಯ್ಯ! ಎನ್ನ ಮದ ಉಡುಗಿ ಸಂಗನಬಸವಣ್ಣನ ಕರುಣದಿಂದೆ ಪ್ರಭುದೇವರ ನಿರಾಳವ ಕಂಡು ಬದುಕಿದೆನು ಕಾಣಾ ನಿಜಗುರು ಶಂಕರದೇವಾ. ॥೧೬೬॥

ಮತ್ತಂ ಕಾಯದ ಮದವಳಿದಲ್ಲದೆ ಮಾಯಾವಿಕಾರವಳಿಯದು. ಮಾಯಾ ವಿಕಾರವಳಿದಲ್ಲದೆ ಭಾವ ನಾಶವಾಗದು. ಭಾವ ನಾಶವಾದ

ಲ್ಲದೆ ಲಿಂಗ ಸಂಬಂಧವಳವಡದು. ಲಿಂಗಸಂಬಂಧವಳವಟ್ಟಲ್ಲದೆ ಸುಖವು ಸಾಧ್ಯವಾಗದು. ಪರಮ ಸುಖ ಪರಿಣಾಮಕ್ಕೆ ಮಹಾನುಭಾವಿಗಳ ಸಂಗವೆ ಬೇಕು. ಮಹಾನುಭಾವಿಗಳ ಸಂಗದಿಂದಲ್ಲದೆ ವಿಶ್ರಾಮವಿಲ್ಲ. ಇಂತಪ್ಪ ಮಹಾನುಭಾವದ ಮೂರ್ತಿ ಸಂಗನಬಸವಣ್ಣನ ಕೃಪೆಯಿಂದ ಎನಗೆ ನಿಜವು ಕಾಣಬಂದಿತ್ತು. ಇದು ಕಾರಣ ನಿಜಗುರು ಶಂಕರದೇವರ ಶ್ರೀಪಾದವ ಕಂಡು ನಿಶ್ಚಿಂತನಾದೆನಯ್ಯ. ॥೧೫೭॥

ಮೇದಾರ ಕೇತಯ್ಯಗಳು ಪ್ರಭುದೇವರ ಸ್ತುತಿಸುವ ವಚನ. ॥

ಎನ್ನ ಕಾಯದ ಕಳವಳವ ನಿಲಿಸಿ ಗುರು ಲಿಂಗವ ತೋರಿದ. ಎನ್ನ ಮನದ ವ್ಯಾಕುಳವ ನಿಲಿಸಿ ಜಂಗಮವ ತೋರಿದ. ಅಂತು ಅಂತರಂಗ ಬಹಿರಂಗದಲ್ಲಿ ತಾನೆಯಾಗಿ ಎನ್ನ ಪಾವನವ ಮಾಡಿದನು. ಅಮರಗಣಂಗಳ ಮುನಿದು ಎನ್ನ ಕೈಲಾಸಕ್ಕೊಯ್ದರೆ ಸದ್ಯೋನ್ಮುಕ್ತಿಯ ತೋರಲೆಂದು ಮರ್ತ್ಯಕ್ಕೆ ಮರಳಿ ತಂದ ಸಂಗನಬಸವಣ್ಣನೆ ಗುರು ಎನಗೆ ಸಂಗನ ಬಸವಣ್ಣನೆ ಪರವೆನಗೆ ಸಂಗನ ಬಸವಣ್ಣನ ಕರುಣದಿಂದೆ ಘನಕ್ಕೆ ಘನ ಮಹಿಮ ಅಲ್ಲಮಪ್ರಭುವಿನ ಶ್ರೀಪಾದವ ಕಂಡು ಬದುಕಿದೆನು ಕಾಣಾ ಗೌರೇಶ್ವರಾ ॥೧೫೮॥

ಮತ್ತಂ, ಪ್ರಾಣಸ್ಥಾನದಲ್ಲಿ ಆಪ್ಯಾಯನವಾಯಿತ್ತು. ಲಿಂಗ ಜಂಗಮ ತನುಸ್ಥಲದಲ್ಲಿ ಆಪ್ಯಾಯನವಾಯಿತ್ತು. ಆಚಾರಲಿಂಗಸ್ಥಲ ಗುರುಲಿಂಗಸ್ಥಲ ಉಭಯಸ್ಥಲ ನಿಸ್ಥಲವಾಗಿ ತಾನೊಂದೆ ತೋರುತ್ತಿರ್ದಿತ್ತು. ಆ ತೋರುವ ತೋರಿಕೆಯೆ ಬಸವಣ್ಣನೆನಗೆ. ಆ ಬಸವಣ್ಣನ ಕರುಣದಿಂದೆ ಪ್ರಭುದೇವರ ಶ್ರೀಪಾದವ ಕಂಡು ಬದುಕಿದೆನು ಕಾಣಾ ಗೌರೇಶ್ವರಾ ॥೧೫೯॥

ಇತಿ ಶ್ರೀ ಮತ್ಸಕಲಗಣ ಪುರಾತನರೊಳ್ ಪ್ರಭುದೇವರು ಮಹಾನುಭಾವ ಸದ್ಗೋಷ್ಠಿಯಂ ಮಾಡಿದ ಶೂನ್ಯಸಂಪಾದನೆಯೊಳ್ ಪ್ರಭುದೇವರ ಆರೋಗಣೆಯಲ್ಲಿ ಪ್ರಭುದೇವರ ಸ್ತುತಿಗಂ ಏಕೋನ ವಿಂಶತ್ಯುಪದೇಶ ಸಮಾಪ್ತ ॥

---

# ಶರಣರವಸಾನ ಪರಾಮರಿಕೆ ಸಂಪಾದನೆ

## (ವಿಂಶತ್ಯುಪದೇಶ)

ಶ್ರೀ ಗುರು ಬಸವ ಲಿಂಗಾಯ ನಮಃ ॥ಕಂದ॥ ಸಂಗನ ಬಸವಣ್ಣಗೆ ಘನ ಲಿಂಗದೊಳವಿರಳ ನಿಜೈಕ್ಯಮುಂ ಶರಣ ಸ್ತೋತ್ರ ಮಂಗಳ ಅವಸಾನವ ಪ್ರಭು ಲಿಂಗಂ ಪೇಳಿದ ಸುಬೋಧೆಯೆಂತೆನೆ ಪೇಳ್ವೆಂ ॥

ಅದೆಂತೆಂದೊಡಾ ಎಲ್ಲಿ ಗಣಂಗಳು ಸ್ತೋತ್ರ ಮಾಡುತ್ತಿರಲು ಪ್ರಭುದೇವರು ಬರಿಯ ಸ್ತೋತ್ರವ ಮಾಡಿ ಫಲವೇನು? ನಿಃಶಬ್ದ ಬ್ರಹ್ಮವು ನುಡಿಯ ಗಡಣಕ್ಕೆ ಸಾಧ್ಯ ವಪ್ಪುದೆ ಎಲೆ ಮರುಳಗಳಿರಾ? ಆದಿಯಲ್ಲಿ ಪರ ಶಿವನ ತದ್ರೂಪವಾದ ಸ್ಥೂಲ ತತ್ವವೇ ಮರ್ತ್ಯ ಲೋಕದ ಮಹಾ ಮನೆ ಯನುದ್ಧರಿಸಲೆಂದು ರುದ್ರ ಗಣ ಪ್ರಮಥ ಗಣಂಗಳು ಮೊದಲಾದ ಸಮಸ್ತ ಗಣನಿಕರ ಸಹಿತಲೈತಂದು ಕಲ್ಯಾಣವೆಂಬ ಕಟಕವ ಶಿವಪುರವ ಮಾಡಿ ರುದ್ರ ಗಣ ಮೊದಲಾದ ಪ್ರಮಥ ಗಣವಸಂಖ್ಯಾತರೆಂದು ಹೆಸರಿಟ್ಟು ಕರೆದು ಶಿವಾಚಾರ ಧ್ವಜವನೆತ್ತಿ ಭಕ್ತಿಯ ಕುಳಸ್ಥಳ ವಕೃತ ದೃಷ್ಟ ಪವಾಡವ ತೋರಿ ಶಿವಲೋಕಕ್ಕೆ ತಾನೆ ನಿಚ್ಚಣಿಕೆಯಾಗಿ ಮೆರೆದು ಮರ್ತ್ಯವ ಪಾವನವ ಮಾಡಿದ ಬಳಿಕ ಇನ್ನು ಮರ್ತ್ಯದ ಹಂಗೇತಕ್ಕೆ? ತನಿರಸವ ತುಂಬಿ ಫಳ ಒಮ್ಮಿಂಗೆ ತೊಟ್ಟು ಬಿಡುವಂತೆ ಬಂದ ಮಣಿಹ ಪೂರೈಸಿತ್ತು ನೋಡಿರೆ. ಅಸಂಖ್ಯಾತರು ಇನ್ನು ನಿಮ್ಮ ನೀವೆ ತಿಳಿದು ನಿರಾಳದಲ್ಲಿ ನಿಜವನೈದಿ ಸಾವನ್ನಕ್ಕರ ಸಾಧನೆಯ ಕಲಿತರೆ ಕಾದುವ ದಿನವಿನ್ನಾವುದೆಂದು ಪ್ರಭು ದೇವರು ತಮ್ಮ ಅವತಾರದ ಅವಸಾನಮಂ ನಿರೂಪಿಸುವ ಪ್ರಸ್ಥಾವದ ವಚನ॥

ಅನುವನರಿಯದೆ ಆದಿಯ ವಿಚಾರಿಸದೆ ಅನಾದಿಯಲ್ಲಿ ತಾನಾರೆಂಬುದ ನೋಡದೆ ಸ್ತೋತ್ರಮಂ ಮಾಡಿ ಫಲವೇನು? ನಿಃ ಶಬ್ದ ಬ್ರಹ್ಮ ಮುಚ್ಯತೆ ಎಂಬ ಘನವು ಹೊಗಳಿಕೆಗೆ ಸಿಕ್ಕುವದೆ? ಎಲೆ ಮರುಳುಗಳಿರಾ ಅನಾದಿಯಲ್ಲಿ ಬಸವಣ್ಣನು ಏಳನೂರೆಪ್ಪತ್ತು ಅಮರಗಣಂಗಳು ಸಹಿತ ಮರ್ತ್ಯಕ್ಕೆ ಬಂದನೊಂದು ಕಾರಣದಿಂದ ಬಂದ ಮಣಿಹ ಪೂರೈಸಿತ್ತು. ಸಂದ ಪುರಾತರೆಲ್ಲರು ಕೇಳಿ ಇಂದು ನೀವೆಲ್ಲರು ನಿಮ್ಮ ನೀವೆ

ತಿಳಿದು ನೋಡಿ ನಿಜವನೈದುವುದು ಇಂದು ನಮ್ಮ ಗುಹೇಶ್ವರ ಲಿಂಗಕ್ಕೆ ಸುಳುಹಿಲ್ಲ. ॥೧॥

ಮತ್ತಂ, ಸಾವನ್ನಕ್ಕರ ಸಾಧನವ ಮಾಡಿದರೆ ಕಾದುವ ದಿನವಿನ್ನಾವುದು? ಬಾಳುವನ್ನಕ್ಕರ ಭಜಿಸುತ್ತಿದ್ದರೆ ತಾನಹ ದಿನವಿನ್ನಾವುದು? ಅರ್ಥವುಳ್ಳನ್ನಕ್ಕರ ಅರಿವುತ್ತಿದ್ದರೆ ನಿಜವನೈದುವ ದಿನವಿನ್ನಾವುದು? ಕಾರ್ಯಕ್ಕೆ ಬಂದು ಕಾರ್ಯ ಕೈಸಾರಿದ ಬಳಿಕ ಇನ್ನು ಮರ್ತ್ಯಲೋಕದ ಹಂಗೇತಕ್ಕೆ? ತನಿರಸ ತುಂಬಿದ ಅಮೃತ ಫಲ ಒಮ್ಮಿಗೆ ತೊಟ್ಟು ಬಿಡುವದು. ನೋಡಿರೆ ದೃಷ್ಟಾಂತವ. ಬಸವಣ್ಣ ಚನ್ನಬಸವಣ್ಣ ಮೊದಲಾದ ಪ್ರಮಥರು ಗುಹೇಶ್ವರ ಲಿಂಗದಲ್ಲಿ ನಿಜವನೈದಿ ನಿಶ್ಚಿಂತರಾಗಿರಯ್ಯ. ॥೨॥

ಹೀಗೆಂದು ಪ್ರಭುದೇವರು ನಿರೂಪಿಸುತ್ತಿರಲು, ಬಸವರಾಜದೇವರು ತಮ್ಮ ಲಿಂಗಾಂಗಸಮರಸೈಕ್ಯವೆಂತೆಂದು ಬೆಸಗೊಂಬ ಪ್ರಸ್ತಾವದ ವಚನ.

ದೇವದೇವ ಮಹಾ ಪ್ರಸಾದ ಅವಧರಿಸು ದೇವ ಎನ್ನ ಬಿನ್ನಪವ. ಕಾಯದ ಮಾಯದ ಸಡಗರದಲ್ಲಿ ಹುಟ್ಟಿಸಿದಿರಿ. ಎನ್ನ ಆಗು ನಿಮ್ಮ ಲೀಲಾ ವಿನೋದ. ಆ ಕಾಯದ ಮಾಯದ ತಲೆಯ ಚಿವುಟಿ ಶ್ರೀಗುರು ಕಾರುಣ್ಯವ ಮಾಡಿ ಗುರು ಲಿಂಗ ಜಂಗಮ ತ್ರಿವಿಧ ಭಕ್ತಿಯ ಘನವ ತೋರಿಸಿ ನಿಮ್ಮ ಪಾದೋದಕ ಪ್ರಸಾದವನಿತ್ತು ರಕ್ಷಿಸಿದಿರಿ. ಅದು ನಿಮ್ಮ ಲೀಲಾ ವಿನೋದ. ಪರವಾದಿ ಬಿಜ್ಜಳ ಒರೆಗಲ್ಲಾದಲ್ಲಿ ಮುನ್ನೂರರುವತ್ತು ಸತ್ತ ಪ್ರಾಣವನೆತ್ತಿ ಮೂವತ್ತಾರು ಕೊಂಡೆಯರ ಪರಿಹರಿಸಿ ಎಂಭತ್ತೆಂಟು ಪವಾಡವ ಮೆರೆದಿರಿ. ಅದು ನಿಮ್ಮ ಲೀಲಾ ವಿನೋದ. ಎನ್ನ ಮನದ ಮಲಿನವ ತೊಳೆಯಲೆಂದು ಬಂದು ಶೂನ್ಯ ಸಿಂಹಾಸನದ ಮೇಲೆ ಮೂರ್ತಿಗೊಂಡು ನಿಮ್ಮ ನಿಜ ಮಹಿಮೆಯನೆಲ್ಲ ಪ್ರಮಥರ ಮುಂದೆ ತೋರಿ ಎನ್ನ ಪಾವನವ ಮಾಡಿ ಷಡುಸ್ಥಲವಂ ಎನ್ನ ಸರ್ವಾಂಗದಲ್ಲಿ ಪ್ರತಿಷ್ಠಿಸಿ ಎನ್ನ ನಿಮ್ಮಂತೆ ಮಾಡಿದಿರಿ. ಅದು ನಿಮ್ಮ ಲೀಲಾ ವಿನೋದ. ಕೂಡಲ ಸಂಗಮ ದೇವ ಎನ್ನ ವರ್ಮದ ಸಕೀಲವ ನೀವೆ ಬಲ್ಲಿರಾಗಿ ಎನಗೊಮ್ಮೆ ತಿಳುಗಿಕೊಟ್ಟು ಎನ್ನ ನುಳುಹಿಕೊಳ್ಳಾ ಪ್ರಭುವೆ ॥೩॥

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ. ಕಾಯದೊಳಗೆ ಕಾಯವಾಗಿ, ಪ್ರಾಣದೊಳಗೆ ಪ್ರಾಣವಾಗಿ, ಮನದೊಳಗೆ ಮನವಾಗಿ, ಭಾವದೊಳಗೆ ಭಾವವಾಗಿ, ಅರುಹಿನೊಳಗೆ ಅರುಹಿನ ತಿರುಳಾಗಿ, ಮರಹು ಮಾರುಗೊಂಡು

ನಿಜ ಸದವು ಸಾಧ್ಯವಾದ ಬಳಿಕ ಆವುದು ವರ್ಮ ಆವುದು ಕರ್ಮ ಆವುದು ಬೋಧೆ ಆವುದು ಸಂಬಂಧನೆಂದು ಹೇಳಲಿಲ್ಲ ನೀ ಕೇಳಲಿಲ್ಲ. ಅದೇನು ಕಾರಣವೆಂದರೆ ಬೇಸರಗೊಂಬ ತೆರಹಿಲ್ಲವಾಗಿ ಗುಹೇಶ್ವರ ಲಿಂಗ ದಲ್ಲಿ ತಿಳಿವುದೆ ಆವುದು ಹೇಳಯ್ಯ ಬಸವಣ್ಣಾ ॥೪॥

ಇದಕ್ಕೆ ಬಸವ ರಾಜ ದೇವರ ಪ್ರತ್ಯುತ್ತರ॥

ಅರಿದಿಹೆನೆಂದರೆ ಅರಿಹಿಂಗಸಾಧ್ಯ. ನೆನೆದಿಹೆನೆಂದರೆ ನೆನಹಿಂಗಸಾಧ್ಯ. ಭಾವಿಸಿಹೆನೆಂದರೆ ಭಾವಕ್ಕಸಾಧ್ಯ. ವಾಙ್ಮನಕ್ಕಗೋಚರ ಲಿಂಗವ ನರಿವ ಪರಿ ಎಂತಯ್ಯ? ಗುರು ತೋರದನ್ನಕ್ಕರ ಗುರು ಶಿಷ್ಯರ ಮಥನದಲ್ಲಿ ಸ್ವಯಂ ಜ್ಯೋತಿ ಲಿಂಗವು ಉದಯವಪ್ಪುದೆಂಬ ಶೃತಿ ಹುಸಿಯೆ? ಕೂಡಲ ಸಂ ಗನು ದೇವ ನಿಮ್ಮ ಮಹಾನುಭಾವರ ಮಥನದಿಂದೆ ಎನ್ನಲ್ಲಿ ನಿಜವ ನೆಲೆ ಗೊಳಿಸಾ ಪ್ರಭುವೆ. ॥೫॥

ಇದಕ್ಕೆ ಪ್ರಭುದೇವರ ಪ್ರತ್ಯುತರ॥

ಮಥನವ ಲೀಲೆಯಲ್ಲಿ ಹುಟ್ಟವನೆ ಬ್ರಹ್ಮನು? ಶೃತಿ ಸ್ಮೃತಿಗಳಿಗೆ ಅಳವಡವು ನೋಡಾ. ಪೃಥ್ವಿಯೊಳಗಿಲ್ಲದೆ ಅಚಳವಪ್ಪ ಲಿಂಗವನು ಸಚ ರಾಚರವಲ್ಲಿ ಭರಿತವೆಂತೆಂಜೆ? ಇಲ್ಲದ ಲಿಂಗವನಲ್ಲಲ್ಲಿಗೆ ಉಂಟೆಂಬ ಲಿಂಗ ವಾತೇ ಗುಹೇಶ್ವರನೆಂಬ ಲಿಂಗವು ಸಾಧ್ಯವಾಗದು ಕಾಣಾ ಸಂಗನ ಬಸ ವಣ್ಣಾ. ॥೬॥

ಇದಕ್ಕೆ ಬಸವ ರಾಜ ದೇವರ ಪ್ರತ್ಯುತ್ತರ॥

ಅನುಭಾವವಿಲ್ಲದ ಭಕ್ತಿ ಅರುವಿಂಗೆ ಬಾರದು. ಅನುಭಾವವಿಲ್ಲದ ಸಂಗ ಸಮರಸ ಸುಖಕ್ಕೆ ಸಿಲುಕವು. ಅನುಭಾವವಿಲ್ಲದ ಪ್ರಸಾದ ಪರಿಣಾ ಮವ ಕೊಡದ. ಅನುಭಾವ ಇಲ್ಲವೆ ಏನೇನು ಅರಿಯಬಾರದು. ತನ್ನಲ್ಲಿ ಸನ್ನಿ ಹಿತ ಉಳ್ಳಡೆ ಶಿವ ಶರಣರ ಸಂಗವೇತಕ್ಕೆನಲುಂಟೆ? ಕೂಡಲ ಸಂಗಮ ದೇವಯ್ಯ ನಿಮ್ಮ ಅನುಭಾವ ಸಾತಿನ ಮಥನವೆಂದು ನುಡಿಯಬಹುದೇ ಪ್ರಭುವೆ? ।೭॥

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ॥

ನೆಲದ ಮುಂದಣ ಬಾಗಿಲು ಮೂರು ಮೊನೆಯ ಕಂಭದ ಶೈಲ ದಲ್ಲಿ ಒಂದು ದೇಗುಲ. ಅಲ್ಲಿ ಒಳಗಣ ಹುಪ್ಪಿನ ಕಲ್ಲಿನಲ್ಲಿ ಸಿಲುಕಿತ್ತು.

ನಾದ ಮೂರುತಿ ಲಿಂಗವಿಪ್ಪದು. ಒಂದು ಮಾತನಾಡುವರಳುಕಿ ನುಡಿವುದು ಗುಹೇಶ್ವರ ವೆಚ್ಚಲು ಬಹು ಮಾತಿನ ಮಾಲೆಯು ಅನುಭಾವಕ್ಕೆ ನಾಚು ವೆನು ಕಾಣಾ ಸಂಗನ ಬಸವಣ್ಣಾ ॥೮॥

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ. ॥

ಅರವಿಂದಲರಿದೆನೆಂದರೆ ಅರವಿಂಗಸಾಧ್ಯ. ಅರಿಯದೆ ಅರಿವ ಪರಿ ಎಂತಯ್ಯ? ಭಾವಿಸುವೆನೆಂದರೆ ಭಾವ ನಿರ್ಭಾವವೆಂದುದಾಗಿ ಮತ್ತೆ ಭಾವಿಯಲ್ಲದೆ ಕಾರಣ ಬಾರದಯ್ಯಾ. ವಾಙ್ಮನಕ್ಕಗೋಚರನೆಂವಡೆ ನುಡಿಯು ಲಿಲ್ಲದೆ ನಡೆ ಸಾಧ್ಯವಹ ಪರಿ ಎಂತು ಹೇಳಾ ಅಯ್ಯಾ? ಹಲವು ಮಾತಿನ ನಿಲವು ಒಂದೆಂಬ ನುಡಿ ಗಡಣದ ನಿಜವ ಬಲ್ಲವರಾರು ಹೇಳಯ್ಯ? ನಿಮ್ಮ ಮಾತೆಂಬ ಪರತತ್ವ ಒಂದಲ್ಲದೆ ಎರಡುಂಟೆ? ಕೂಡಲ ಸಂಗಮದೇವ ಕಡೆ ಮುಟ್ಟ ನೋಡುವಡೆ ನುಡಿಗೆಡೆಯಿಲ್ಲ. ಕೃಪೆಯಿಂದೆ ಕರುಣವ ಮಾಡಯ್ಯ ಪ್ರಭುವೆ ॥೯॥

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ ॥

ಪ್ರಸಾದಲಿಂಗವುಳ್ಳನ್ನಕ್ಕರ ಪ್ರಾಣಲಿಂಗವೆಂಬ ವಾರ್ತೆಭಂಗನೋಡಾ. ಸಂಗನ ಬಸವಣ್ಣ ಬೀದಿಯಲ್ಲಿ ಕೊಡನ ನೊಡದು ಬಯಲ ನುಡುಗಿದರೆ ಉಂಟೆ ಹೇಳಾ? ಗುಹೇಶ್ವರ ಲಿಂಗವ ಬೇರು ಮಾಡಿ ಅರಸಲುಂಟೆ ಬಸ ವಣ್ಣಾ ॥೧೦॥

ಇದಕ್ಕೆ ಬಸವರಾಜದೇವರ ಪ್ರತ್ಯುತ್ತರ. ॥

ಆವಿಯಲ್ಲಿ ಸಾಧ್ಯವೆಂಬೆನೆ? ಅಲ್ಲಿಂದತ್ತತ್ತ ಸಾಧ್ಯಾಸಾಧ್ಯ ಸೂತಕ ಶಬ್ದ ಕ್ಕತೀತ. ಆ ಲಿಂಗವೆ ಆಲಿಂಗನವಾಗಿ ಅವಿರಳ ಸಂಪನ್ನನಾದಲ್ಲಿ ಭೇದ ಭಾವವುಂಟೆಂಬೆನೆ? ಅದೇ ಭವಕ್ಕೆ ಬೀಜ. ಎನ್ನ ಪ್ರಾಣಲಿಂಗ ನೀವೆಂದಿ ಪ್ಪೆನಯ್ಯ ಕೂಡಲ ಸಂಗಮದೇವಾ. ॥೧೧॥

ಇದಕ್ಕೆ ಪ್ರಭುದೇವರ ಪ್ರತ್ಯುತ್ತರ॥

ಬಸವಣ್ಣನೆ ಪ್ರಾಣಲಿಂಗವೆಂದು ಭಾವಿಸಿ ದೃಷ್ಟಿ ನಟ್ಟ ಸ್ವೈವೆರಗಾ ದುದ ಕಂಡೆ. ಕಲ್ಪಿಸಿ ಮನ ನಟ್ಟದು ಸಿಬ್ಬೆರಗಾಯಿತ್ತಯ್ಯ. ಗುಹೇಶ್ವರ ನಿಮ್ಮಲ್ಲಿ ಸರ್ವ ನಿರ್ವಾಣಿ ಸಂಗನ ಬಸವಣ್ಣನೆ ಎನ್ನ ಪ್ರಾಣಲಿಂಗವೆಂದ ರಿದು ನೀನೆನ್ನನೊಳಕೊಂಡ ಗುರುವೆಂದು ಕಂಡೆನಯ್ಯ. ನಿಮ್ಮ ಧರ್ಮ ನಿಮ್ಮ ಧರ್ಮ. ॥೧೧॥

ಮತ್ತಂ॥ ಎತ್ತೆತ್ತ ನೋಡಿದರೆ ಬಸವನೆಂಬ ಬಳ್ಳಿ. ಆ ಬಳ್ಳಿಯ ಹಿಡಿದೆತ್ತಿದರೆ ಲಿಂಗವೆಂಬ ಗೊಂಚಲು. ಆ ಲಿಂಗದ ಗೊಂಚಲ ಹಿಡಿದೆತ್ತಿದರೆ ಭಕ್ತಿರಸವಾಯಿತ್ತಯ್ಯ. ಇದಾರಯ್ಯ? ಅನುಭೋಕ್ಯವ ಮಾಡಬಲ್ಲವರು ಇದಾರಯ್ಯ? ಹೊರಗೆ ಪ್ರಜ್ವಲಿಸಿ ತೋರಬಲ್ಲವರು ಬಸವ ಗುರು ಎನ್ನ ಕರಸ್ಥಲದ ಲಿಂಗದ ಆದಿಯನರುಹಿ ತೋರಿದ ಕಾರಣ ಗುಹೇಶ್ವರ ಲಿಂಗದ ನಿಲವ ನಿನ್ನಿಂದಲರಿದೆ. ಈ ಉಳಿದ ಲೋಕಾದಿಲೋಕಂಗಳೆಲ್ಲ ಎನ್ನ ಮುಖದಲ್ಲಿ ಕಿಂಚಿತ್ತು. ॥೧೩॥

ಮತ್ತಂ॥ 'ಬ' ಎಂಬಲ್ಲಿ ಭವ ಹರಿಯಿತ್ತಯ್ಯ. 'ಸ' ಎಂಬಲ್ಲಿ ಸರ್ವಜ್ಞಾನಿಯಾದೆನು. 'ವ' ಎಂಬಲ್ಲಿ ವಚಿಸುವರೆ ಚೈತನ್ಯಾತ್ಮಕನಾದೆನು. ಇಂತೀ ಬಸವಕ್ಷರತ್ರಯ ಎನ್ನ ಸರ್ವಾಂಗದಲ್ಲಿ ತೊಳಗಿ ಬೆಳಗುವ ಭೇದವನರಿದು ಆನು ಬಸವ ಬಸವ ಎನುತಿರ್ದೆನು ಕಾಣಾ ಗುಹೇಶ್ವರಾ. ॥೧೪॥

ಮತ್ತಂ, ಅಳಿಯ ಬಳಿಯ ಸುಳಿವನಲ್ಲ ಪ್ರಳಯವಿಲ್ಲದ ವಿಜಯನು. ಕಳಾಕುಳದ ಆತ್ಮನ ಅಂಗಸಂಗಿಯಲ್ಲ. ಸುಳುಹಿನೊಳಗಣ ಸೂಕ್ಷ್ಮವ ತಿಳಿದು ನೋಡುವರೆ ಅಣಿಮಾದಿ ಗುಣ ವಿರಹಿತನ ಅಕಲ್ಪಿತ ಮಹಿಮನ ನೇನೆಂಬೆನು? ನೆಲದ ಕಳವಳದ ಬಳಿಯ ಭಾವ ರೂಪನಲ್ಲ. ಬೆಳಗಿನೊಳಗಣ ಬೆಳಗು ಗುಹೇಶ್ವನೆಂಬ ನಿಲವು ಸಂಗನ ಬಸವಣ್ಣನ ಕರಸ್ಥಲದೊಳಗೆ ತೊಳಗಿ ಬೆಳಗುತ್ತಿದ್ದಿತ್ತು ॥೧೫॥

ಮತ್ತಂ, ಅಂಗದ ಕೈಯ್ಯಲ್ಲಿ ಲಿಂಗ. ಮನದ ಕೈಯ್ಯಲ್ಲಿ ನಿಸ್ಸಂಸಾರ ಎಂತಯ್ಯ. ಪ್ರಾಣ ಲಿಂಗ ಲಿಂಗಪ್ರಾಣವೆಂಬುದು ಭಿನ್ನವಿಟ್ಟು ನುಡಿವೆನು. ಹೊರಗೆ ಕುರುಹಾಗಿ ತೋರುತ್ತಿದೆ. ಇದು ಕೃತಯುಗದಲ್ಲಿ ಮೂರ್ತಿಯಾದ ಕರಸ್ಥಲವಲ್ಲ. ಇದು ತ್ರೇತಾಯುಗದಲ್ಲಿ ಮೂರ್ತಿಯಾದ ಕರಸ್ಥಲವಲ್ಲ. ಇದು ದ್ವಾಪರದಲ್ಲಿ ಮೂರ್ತಿಯಾದ ಕರಸ್ಥಲವಲ್ಲ. ಇದು ಕಲಿಯುಗದಲ್ಲಿ ಮೂರ್ತಿಯಾದ ಕರಸ್ಥಲವಲ್ಲ. ಕೆಳಗೇಳು ಲೋಕ ಮೇಲೇಳು ಲೋಕ ಹುಟ್ಟದಲಿಂದತ್ತತ್ತ ಮುನ್ನ ಮುನ್ನಲಾದ ಕರಸ್ಥಲವು. ಸಂಗನ ಬಸವಣ್ಣನ ಕರ ಸ್ಥಲದೊಳಗೆ ಗುಹೇಶ್ವರನೆಂಬ ಲಿಂಗದೊಳಗೆ ಬೆಳಗುತ್ತಿರ್ದುದ ಕಂಡು ನಮೋ ನಮೋ ಎನುತಿರ್ದೆನು ॥೧೬॥

ಮತ್ತಂ, ಜಗತ್ಸ್ವಯಂಭುವೆಂಬ ಗಣೇಶ್ವರನ ಕರಸ್ಥಲದಲ್ಲಿ ಹಿಡಿದಾಡುತ್ತಿದ್ದಾರೆ. ಆದಿ ಲಿಂಗವೆಂದು ಬಗೆಯಲದು ಲೋಕವೆಲ್ಲ ಗುಹೇ

ಶ್ವರ ನಿಮ್ಮ ಶರಣ ಬಸವಣ್ಣನಚ್ಚ ಲಿಂಗವ ಹಿಡಿವ ಕಾರಣ ಬರಿಯ ಲಿಂಗದ ಮಸ್ತಕವಾಯಿತ್ತು ತ್ರಿಜಗದೊಳಗೆ ॥೧೭॥

ಮತ್ತಂ, ಎನ್ನ ಕರ ಸ್ಥಲದೊಳಗೊಂದು ಮಹಾ ಬೆಳಗ ಕಂಡೆನಯ್ಯಾ. ಮಹಾ ಮಂಗಳ ನಿಳಯವಾಗಿ ತೋರುತ್ತಿದೆ. ಗುಹೇಶ್ವರ ಲಿಂಗದ ಕಂಗಳ ಕಾಂತಿಗಳು ಸಂಗನ ಬಸವಣ್ಣನ ನಿವಾಳಿಸುತ್ತಿಪ್ಪವಯ್ಯಾ ॥೧೮॥

ಮತ್ತಂ, ಗುರುಸ್ಥಲ ಲಿಂಗಸ್ಥಲ ಜಂಗಮಸ್ಥಲ ಪ್ರಸಾದಸ್ಥಲ ಅಡ ಗಿತ್ತಲ್ಲಿ. ಸಂಗನ ಬಸವಣ್ಣನ ಕರಸ್ಥಲದೊಳಗೆ ಇನ್ನಾರಿಗಹುದೀ ಭಕ್ತಿ ಸ್ಥಲ? ಇನ್ನಾರಿಗೆ ಸಾರಿಹುದೀ ಭಕ್ತಿಸ್ಥಲ? ಗುಹೇಶ್ವರ ಸಂಗನ ಬಸವಣ್ಣನ ಮರೆಹೊಕ್ಕು ಬದುಕಿದೆನು ॥೧೯॥

ಪ್ರಭುದೇವರು ಬಸವರಾಜದೇವರ ಐಕ್ಯಸ್ಥಲಮಂ ಕೊಂಡಾಡಿದ ಪ್ರಸ್ತಾವದ ವಚನ ॥

ಅವಸ್ಥೆ ಅವಸ್ಥೆಯ ಕೂಡಿ ಬಿಂದು ನಾದವ ಕೂಡಿ ಕಳೆ ಕಳೆಗಳು ಒಂದಾದ ಪರಿಯ ನೋಡಾ. ಅದು ಲಿಂಗದ ಅನುಮಿಷ ಅನೆಂಬ ಗುರು ಪಾದ ವಾದೆನಯ್ಯ. ಹಿಂದು ಮುಂದು ಒಂದು ಮಾಡಿದ ಮೂರ್ತಿಯಾಗಿ ಲಿಂಗ ಜಂಗಮವಾದ ಪರಿಯ ನೋಡಾ. ಗುಹೇಶ್ವರನ ಅನುಳೋಕ್ಯವಾದ ಸಂಗನ ಬಸವಣ್ಣನ ಶ್ರೀಪಾದಕ್ಕೆ ನಮೋ ನಮೋ ಎಂಬೆನು ॥೨೦॥

ಮತ್ತಂ, ಕೈಲಾಸಕ್ಕೆ ಹೋದವರೆಲ್ಲ ಕೈಸೆರೆಯಾದರು. ಲಿಂಗದಲ್ಲಿ ಲೀಯವಾದವರೆಲ್ಲರು ಬಂಧನಕ್ಕೊಳಗಾದರು. ಸಾಲೋಕ್ಯ ಸಾಮೀಪ್ಯ ಸಾರೂಪ್ಯ ಸಾಯುಜ್ಯದವರೆಲ್ಲರು ಎಡೆಯಾಡುತ್ತಿದ್ದರು. ಗುಹೇಶ್ವರ ನಿಮ್ಮ ಶರಣ ಸಂಗನ ಬಸವಣ್ಣ ಜಂಗಮ ಪ್ರಸಾದಿಯಾದನಾಗಿ ಸ್ವಯಂಭು ಲಿಂಗವಾದಾ ॥೨೧॥

ಮತ್ತಂ॥ ಪ್ರಭುದೇವರು ಬಸವರಾಜ ದೇವರ ನಿರ್ವಯಲ ಜ್ಞಾನ ಶೂನ್ಯಮಂ ನಿರೂಪಿಸಿದ ವಚನ॥

॥ಪದ॥ ರಾಗ ನಾಟಿ।

ತಾನಿದಿರೆಂಬೆರಡರಿಯದೆ ಧ್ಯಾನ ನಷ್ಟವಾಗಿ, ಜ್ಞಾತೃ, ಜ್ಞಾನ, ಜ್ಞೇಯ ವೆಂಬ ತ್ರಿವಿಧವ ನರಿತ ಮಹಿಮಾ. ॥ಪದ॥

ಹೊರಗೊಳಗೆಂಬೆರಡರ ಬಗೆಯನ್ನರಸದೆ ಎರಡರ ತೆರನೆಂಬ ನುಡಿ ಯಂ ಮುನ್ನನೆ ತಾನರಿಯದೆ ಅರಿವಿನ ಮೂಲವ ಹರಿದು ಮನವೆ ನಷ್ಟ ವಾದ ಅರಿವು ಅರಿವಿನ ಮರವೆಯ ಕುರುಹಳಿದ ನಿಶ್ಚಿಂತಾ. ॥೧॥

ಉಲುಹಡಗಿದ ಸಮುದ್ರದ ನಿಲುವಿನ ಘಾತದಂತೆ ತಿಳಿವಿನ ಮಹ ಘನ ವಿವೇಕ ಹರಿಹಂಚಾಗಿ ಉಳಿದೆನೆಂಬಾ ಉಳುಮೆಯ ಮೂಲವ ಮರೆದು ಕಳೆಯ ಬೆಳಗಳಿದು ನಿಜದೊಳು ನಿಂದ ಮಹಿಮಾ. ॥೨॥

ಉರಿ ಕರ್ಪೂರದ ಒಡಗೂಡಿ ಎರಡು ಅಳಿದ ಬಳಿಕ ಮರಳಿ ನೋಡಿ ಹೆನೆಂದರೆ ಭಸ್ಮವಿಲ್ಲ ನೋಡಾ. ಅರಿವ ನರಿದಿಹೆನೆಂಬ ಅರಿವಿನ ಮೂಲವ ಧರಿಸಿ ಘರಿಸಿದ ಜ್ಞಾನ ಭಸ್ಮ ವೆಂಬುದಿಲ್ಲದ ಮಹಿಮಾ. ॥೩॥

ನಿಜವಲ್ಲಿ ನಿರ್ಣಯವಡಗಿದ ಗತಿ ಮತಿ ನಷ್ಟವಾಗಿ ಕಳೆಯೊಳಗಣ ಬೆಳಗು ತಾನೆಂದು ತೋರುತಲಿರ್ಪ ತೊಳಗಿ ಬೆಳಗುವ ಚೈತನ್ಯ ತನ್ನಲ್ಲಿ ತಾನೆ ನಿಃಕಳೆಯಾಗಿ ನಿಜದೊಳು ನಿಃಶೂನ್ಯವಾದ ಮಹಿಮಾ. ॥೪॥

ತನ್ನೊಳು ತಾನೆಯಾಗಿ ಎನ್ನಲ್ಲಿ ನಾನರಿದೆನೆಂಬ ಅರುಹಿಗೆ ತೆರಹು ಗೊಡದೆ ಬಿಂದು ಬೀಸರವಾಗಿ ಹಮ್ಮು ಶೂನ್ಯ ನಷ್ಟವಾಗಿ ನಿರ್ಮಳ ನಿಜ ಪದ ವಾದ ಉಪಮಾತೀತ ಮಹಿಮಾ. ॥೫॥

ಜ್ಞಾನಜ್ಯೋತಿಯ ಪ್ರಭೆ ತಾನಾಗಿ ನಿಂದಿರ್ಪ ತಾನಾಗಿದ್ದೆನೆಂಬ ಜ್ಞಾನ ಶೂನ್ಯವಾಗಿ ತಾನೆ ತನ್ನೊಳು ವೈಮರೆದೊರಗಿರ್ಪ ನಿರಾಳ ಜ್ಞಾನಾ ತೀತ ನಿರ್ಮಲ ನಿಶ್ಚಲ ನಿರ್ಭೇದ್ಯ. ॥೬॥

ಶಬ್ದ ನಿಃಶಬ್ದವಾಗಿ ನಿಃಶಬ್ದವನಹತವಾಗಿ, ಶಬ್ದ ನಿಃಶಬ್ದವೆಂಬ ಬುದ್ಧಿ ನಿರ್ವಯಲಾಗಿ, ಇದ್ದುದ ಹೋದುವನರಿಯದೆ ಮೇರೆಗೆಟ್ಟ ನಿಃಶಬ್ದ ಗಂಭೀರ ಗುಹೇಶ್ವರ ನಿಮ್ಮ ಬಸವ ॥೭॥

ಇಂತು ಪ್ರಭುದೇವರು ಬಸವರಾಜದೇವರಿಗೆ ಲಿಂಗಾಂಗ ಸಮರಸದ ನಿರ್ವಯಲ ನಿಜ ಸಮಾಧಿಯ ನಿರ್ಣಯವನರುಹಿ ತೋರಲು, ಆ ಬಸವ ರಾಜ ದೇವರು ಕೃತ ನಿಶ್ಚಯವ ನೈದಿದ ವಚನ॥

ಆ ರತವಡಗಿತ್ತೆನ್ನ. ಬಯಕೆ ಸಮನಿಸಿತ್ತೆನ್ನ. ಸಂಕಲ್ಪ ಸಮನಿಸಿತ್ತೆನ್ನ. ಸ್ವಯವು ದೊರಕೊಂಡಿತ್ತೆನ್ನ. ನಿಮ್ಮ ನೋಡಿ ಎನ್ನ ಕಂಗಳು ಮಂಗಳನು

ಯುದ ಸುಖಸಂಗವಾಯಿತ್ತಯ್ಯ? ಒಳಹೊರಗೆಂಬುದ ತಿಳಿದು ಪ್ರಭುವಿನ ಕರುಣದಿಂದೆ ಕೂಡಲ ಸಂಗಮ ದೇವರಲ್ಲಿ ತೆರಹಿಲ್ಲದಿರ್ದೆನು. ॥೨೯॥

ಆ ಪ್ರಸ್ತಾವದೊಳು ಚನ್ನ ಬಸವ ರಾಜ ದೇವರು ಬಸವ ರಾಜ ದೇವರ ನಿರ್ವಯಲ ಪ್ರಸಾದದ ಕೃತನಿಶ್ಚಯವ ಕಂಡು ಸ್ತೋತ್ರವುಂ ಮಾಡುವ ವಚನ॥ ಪದಂಗಳು॥

ರಾಗ ಭೂಪಾಳಿ.

ಮಹಾ ಘನ ಲಿಂಗದೊಳಗೆ ಮಹಾಘನ ತದ್ರೂಪವಾಗಿ ಸಹಜ ಪರಿಣಾಮ ಪ್ರಸಾದವನಾರೋಗಿಸಿ ನಿರ್ವಯಲಾದ ಬಸವಣ್ಣ ಗುರುವೆ. (ಪದ)

ಇತರೇತರ ಭಾವವ ನರಿಯದೆ, ಸತತ ವಿಧಾನವೆಂದರಿಯದೆ ಕೃತ ನಿಶ್ಚಯುವ ಪರಿಣಾಮ ಪ್ರಸಾದವನಾರೋಗಿಸಿ ನಿರ್ವಯಲಾದ. ॥೧॥

ನಿಂದ ಸುಖವ ನಿಂದೆ ನಿಂದೆಂಬ ಸಂಶಯ ಭಾವವ ಮರೆದು ನಿಂದ ನಿಜ ಪರಿಣಾಮ ಪ್ರಸಾದದೊಳೊಂದಿ ನಜಿ ಗ್ರಾಹಕನಾದ ಸುಖಿಯಾ ॥೨॥

ಅರ್ಪಿತವಿಲ್ಲದ ಮುನ್ನವೆ ಅರ್ಪಿತ ನಿಜ ರೂಪಾಗಿ ಅರ್ಪಿತ ಪರಿಣಾಮದ ಪ್ರಸಾದದ ತವನಿಧಿಯೆ ॥೩॥

ಮುಟ್ಟದ ಮುನ್ನವೆ ಪ್ರಸಾದ ಗ್ರಾಹಕನಾಗಿ ಮುಟ್ಟಿದೆನೆಂದೆಂಬುದನರಿಯದೆ ಒಟ್ಟ ಬಯಲ ಪರಮಾನಂದದಿ ದೃಷ್ಟಿ ಮುಟ್ಟದ ನಿಜವೆ ॥೪॥

ನಿರ್ಣಯ ನಿರ್ಲಯವಾದ ನಿರಂಜನ ಸನ್ನಿಹಿತ ಕೂಡಲ ಚನ್ನ ಸಂಗನಲ್ಲಿ ನಿತ್ಯ ತೃಪ್ತನಾದ ಪರಿಣಾಮಿ ಬಸವಣ್ಣ ತಂದೆ ॥೫॥

ಮತ್ತಂ, ಅಪ್ಪುವನಪ್ಪಿದ ಶರಣ ನಾರಿ ಕಲ್ಲಿನಂತೆ ವಾಯುವನಪ್ಪಿದ ಪರಿಮಳದಂತೆ ಲಿಂಗವನಪ್ಪಿದ ಶರಣನ ದೇಹಿ ಎನಬಹುದೆ? ಅನಲನಪ್ಪಿದ ಕರ್ಪುರದಂತೆ ಕೂಡಲ ಚನ್ನ ಸಂಗೈಯ್ಯ ನಿಮ್ಮ ಶರಣ ಬಸವಣ್ಣನ ನಿಲವು ॥೩೫॥

ಮತ್ತಂ, ತಾನೆಲ್ಲ ಜಗಜಗವೆಲ್ಲ. ತಾನೆಂಬ ಅರಿವರತು ಮನ ವೇದ್ಯ ರೂಪಾಗಿ ಅನ್ಯವಿಲ್ಲದ ಅನ್ಯವನರಿಯೆ. ಎಲ್ಲಿಯುದು ನಿರಂಜನನ ನಿಜ ಚಿದ್ರೂಪಾಗಿ ಅರಿವು ತಾನೆಂಬ ಮಮತೆಗೆ ತೆರಹಿಲ್ಲೆಂದು ಆನೆನ್ನ ತಾನೆನ್ನ ದುಳಿದುಳಮೆಯನುಪಮಿಸಬಹುದೆ? ಅನುಪಮ ಸುಖ ಸಾರಾಯ ಕೂಡಲ ಸಂಗೈಯ್ಯ ನಿಮ್ಮ ಶರಣ ಬಸವಣ್ಣನು ॥೩೬॥

ಮತ್ತಂ, ವೇದ ವೇದಾರ್ಥ ಸಾರಾಯದಿಂದೆ ಹದಿನಾರು ಶಾಸ್ತ್ರ ಪುರಾಣಂಗಳಾದವು. ಆ ಪುರಾಣಂಗಳ ಸಾರಾಯವನರಿವುದರಿಂದ ಜ್ಯೋತಿ ಜ್ಞಾನವಾಯಿತ್ತು. ಆ ಜ್ಯೋತಿಜ್ಞಾನದಿಂದೆ ಮತಿಜ್ಞಾನ ಶೃತಜ್ಞಾನ ಮನ ಪರಿಪೂರ್ಣ ಜ್ಞಾನ ಅವಧಿಜ್ಞಾನ ಕೇವಲಜ್ಞಾನ ಇಂತೀ ಪಂಚ ಜ್ಞಾನವೆ ಪಂಚ ಸ್ಥಲವಾಯಿತ್ತು. ಮತಿಜ್ಞಾನವುಳ್ಳಾತನೆ ಭಕ್ತ. ಶೃತಜ್ಞಾನವುಳ್ಳಾತನೆ ಮಹೇಶ್ವರ. ಮನ ಪರಿಪೂರ್ಣಜ್ಞಾನವುಳ್ಳಾತನೆ ಪ್ರಸಾದಿ. ಅವಧಿಜ್ಞಾನವುಳ್ಳಾತನೆ ಪ್ರಾಣಲಿಂಗಿ. ಕೇವಲ ಜ್ಞಾನವುಳ್ಳಾತನೆ ಶರಣ. ಶರಣ ಸ್ಥಲವೆಂಬುದು ಭವಂ ನಾಸ್ತಿ. ಈ ಪಂಚಜ್ಞಾನಕ್ಕೆ ಮೂಲವಾದ ಜ್ಯೋತಿಜ್ಞಾನವೆ ಪಂಚಸ್ಥಲದಲ್ಲಿ ಏಕಾಕಾರದ ಐಕ್ಯನು. ಇಂತೆಂದುದಾಗಿ ಕೂಡಲ ಚನ್ನಸಂಗಯ್ಯನಲ್ಲಿ ಪಂಚಸ್ಥಲದ ನೆಲೆಯ ಬಲ್ಲ ಐಕ್ಯ ಬಸವಣ್ಣಂಗೆ ನಮೋ ನಮೋ ಎಂಬೆನು. ॥೩೭॥

ಆ ಪ್ರಸ್ತಾವದೊಳು ಬಸವರಾಜದೇವರ ಪರಾಮರಿಕೆಯನೇನೆಂಬೆ ನೇನೆಂಬೆ? ಒಂದೆರಡಾದುದ ಎಂತೆಂಬೆ? ಎಂತೆಂಬೆ ಎರಡೊಂದಾದುದ? ಅವಿರಳ ಘನ ಲಿಂಗೈಕ್ಯ ಮಹಾದಾನಿ ಕೂಡಲ ಸಂಗಮದೇವಯ್ಯ ತಾನೆ ಬಲ್ಲ. ॥೩೮॥

ಮತ್ತಂ, ಘನ ಗಂಭೀರ ಮಹಾ ಘನದೊಳಗೆ ಘನಕ್ಕೆ ಘನವಾಗಿದ್ದೆನಯ್ಯ. ಕೂಡಲ ಸಂಗಮದೇವಯ್ಯನೆಂಬ ಮಹಾ ಬೆಳಗಿನೊಳಗೆ ಬೆಳಗಾಗಿರ್ದೆನೆಂಬ ಶಬ್ದ ಮುಗ್ಧವಾಗಿರ್ದುದ ನೇನೆಂಬೆನಯ್ಯ. ॥೩೯॥

ಮತ್ತಂ, ದೆಸೆದಿಕ್ಕು ಧರೆ ಗಗನವೆಂಬುದ ನಾನರಿಯೆನಯ್ಯ. ಲಿಂಗ ಮಧ್ಯಂ ಜಗತ್ಸರ್ವಂ ಎಂಬುದ ನಾನರಿಯೆನಯ್ಯ. ಲಿಂಗಸೋಂಕಿನ ಸುಖದೊಳಗೆ ಶಿವ ಶಿವ ಎನುತಿರ್ದೆನಯ್ಯ. ಅಂಬುಧಿಯೊಳಗೆ ಬಿದ್ದ ವಾರಿಕಲ್ಲಿನಂತೆ ಭಿನ್ನಭಾವವಿಲ್ಲದೆ ಶಿವ ಶಿವ ಎನುತಿರ್ದೆನು ಕಾಣಾ ಕೂಡಲಸಂಗಮದೇವಾ. ॥೪೦॥

ಮತ್ತಂ, ಅರಿವನ್ನಕ್ಕರ ಅರ್ಚಿಸಿದೆ; ಅರಿವನ್ನಕ್ಕರ ಪೂಜಿಸಿದೆ; ಅರಿವನ್ನಕ್ಕರ ಹಾಡಿದೆ, ಹೊಗಳಿದೆ; ಅರಿವು ಗೆಟ್ಟು ಮರಹು ನಷ್ಟವಾಗಿ, ಭಾವ ನಿರ್ಭಾವವಾಗಿ ನಿಜ ಒಳಕೊಂಡಿತ್ತಾಗಿ ಕೂಡಲ ಸಂಗೈಯ್ಯನಲ್ಲಿ ಸರ್ವ ನಿವಾಸಿಯಾದೆನು. ॥೪೧॥

ಮತ್ತಂ, ಅರಿಯಲಿಲ್ಲದ ಅರಿವು ಅವಗ್ರಹಿಸಿತ್ತಾಗಿ ಅರಿಯಲಿಲ್ಲದ ಮರೆಯಲಿಲ್ಲದ ನಿಜವು ಸಿಂದಿತ್ತಾಗಿ ನಿರ್ನಾಮವಾಯಿತು. ನಿಷ್ಪತ್ತಿಯಾಯಿತ್ತು, ಅಗಮ್ಯದಲ್ಲಿ ಮನಗೆಟ್ಟಿತ್ತು, ನಿಂದಲ್ಲಿ ನಿರಾಳವಾಯಿತ್ತು. ಕೂಡಲ ಸಂಗಮದೇವರಲ್ಲಿ ಶಬ್ದ ಮುಗ್ಧವಾಯಿತ್ತು. ॥೪೨॥

ಮತ್ತಂ, ಅಂತರಂಗ ಬಹಿರಂಗ ಆತ್ಮ ಸಂಗ ಒಂದೇ ಅಯ್ಯ. ಆರೂಢದ ಸುಖವನು ಕೂಡಲ ಸಂಗಮದೇವ ತಾನೆ ಬಲ್ಲನು. ॥೪೩॥

ಮತ್ತಂ, ಸಮಸ್ತ ಕತ್ತಲೆಯ ಮುಸಕವ ಕಳೆದಿಪ್ಪ ಇರವ ನೋಡಾ! ಬೆಳಗಿನ ಬೆಳಗು ಸಿಂಹಾಸನವ ಕೂಡಿದ ಕೂಟವ ಕೂಡಲ ಸಂಗೈಯ್ಯ ತಾನೇ ಬಲ್ಲನು. ॥೪೪॥

ಮತ್ತಂ॥ ಚಿಕ್ಕದಣ್ಣಾಯಕರ ಸಮರಸ. ಅರಿವಿನಾಶ್ರಯ ಸಂಗ ಅರಿತು ನೆರೆ ಮಾಡಲು ಭಾವದಲ್ಲಿ ಸರ್ಪ ದಷ್ಟವಾಗಿ ಆಕಾರ ಪ್ರಾಣದಲ್ಲಿ ವಿಶ್ರಮಿಸಿತ್ತು. ಭಾವದಲ್ಲಿ ಭರಿತ ನಿರ್ಭಾವದಲ್ಲಿ ನಿರುತ ಕೂಡಲಚನ್ನಸಂಗಯ್ಯ ಸಕಳಾಶ್ರಯದಲ್ಲಿ ನಿರ್ಣಯ. ॥೪೫॥

ಮತ್ತಂ, ನೇಹದ ಸುಖವ ನೋಟ ನುಂಗಿತ್ತು. ನೋಟದ ಸುಖವ ಕೂಟ ನುಂಗಿತ್ತು. ಕೂಟವ ಸುಖವ ಆಲಿಂಗನ ನುಂಗಿತ್ತು. ಆಲಿಂಗನದ ಸುಖವ ಸಂಗ ನುಂಗಿತ್ತು. ಸಂಗಸುಖವ ಸಮರಸ ನುಂಗಿತ್ತು. ಸಮರಸದ ಸುಖವ ಪರವಶ ನುಂಗಿತ್ತು. ಪರವಶದ ಸುಖವ ಕೂಡಲ ಚನ್ನ ಸಂಗಯ್ಯ ತಾನೆ ಬಲ್ಲ ॥೪೬॥

ಮತ್ತಂ, ಅರಿಯಲಿಲ್ಲದ ಅರಿವು, ಮರೆಯಲಿಲ್ಲದ ಮರಹು, ನೋಡಲಿಲ್ಲದ ನೋಟ, ಕೂಡಲಿಲ್ಲದ ಕೂಟ, ಬೆರಿಸಲಿಲ್ಲದ ಬೆರಗು ನಿಮ್ಮ ಕೂಡಲ ಚನ್ನ ಸಂಗಯ್ಯ ಲಿಂಗೈಕ್ಯವು ॥೪೭॥

ಮತ್ತಂ, ಅರುಹಿಂದಾದ ಮರಹಿನ ಶಬ್ದ ಮರಿಯಲಾಗದು. ಅರಿದಡೆ ಅಪಕ್ಕದೆ ಭಂಗವು. ಅರಿವರತು ಮರಹು ನಷ್ಟವಾಗಿ ಜ್ಞಾನವೆಂಬಲ್ಲಿ ನಿರ್ಣಯವಿಲ್ಲಯ್ಯ. ಜ್ಞಾನದೊಳಗಣ ಬುದ್ಧಿಯ ಭಸ್ಮವಾಗಿ ಧರಿಸಿ ಕೂಡಲ ಚೆನ್ನ ಸಂಗಯ್ಯ ಸರ್ವನಿವಾಸಿ ॥೪೮॥

ಮತ್ತಂ, ಏನೆಂಬೆನೇನೆಂಬೆನಾಶ್ರಯ ವಿರಹಿತನ? ಏನೆಂಬೆನೇನೆಂಬೆ ನಾಮ ನಿರ್ನಾಮನ? ಏನೆಂಬೆನೇನೆಂಬೆ? ಸಂಸಾರ ಭರಿತ ನಲ್ಲಮಪನೇನೆಂಬೆ?

ದೇವಾ ಕ್ರಿಯೆ ಮೀರಿದ ಸಂಬಂಧ ಕೂಡಲಿ ಚನ್ನಸಂಗಮ ದೇವ ನಾನೆಂಬುದಿಲ್ಲನಾದನೇನೆಂದುಪಮಿಸುವೆನು? ॥೪೯॥

ಮತ್ತಂ, ಎನ್ನ ಮನದಲ್ಲಿ ಇದೇ ತಥ್ಯವಯ್ಯ. ಬೆರಸುವರೆ ಪ್ರಾಣದ ಮಥನ ಭಾವದ ನಷ್ಟ ತನು ಸ್ಥಿತಿಯ ಮರೆದು ಭ್ರಾಂತ ಸೂತಕವೆಲ್ಲ ವಿವರಿಸಿ ಹೋದವು. ಶೂನ್ಯ ಸಿಂಹಾಸನದ ಮೇಲೆ ಕೂಡಲ ಚನ್ನ ಸಂಗಮ ನಿಮ್ಮ ಶರಣನ ಪ್ರಭೆಯಿಂದೆ ॥೫೦॥

ಮತ್ತಂ॥ ದೃಷ್ಟಿ ನಷ್ಟವಾದುದಕ್ಕೇನು ದೃಷ್ಟ? ಭಾವ ನಷ್ಟವಾದುದೇ ದೃಷ್ಟ. ಭಾವ ನಷ್ಟವಾದುದಕ್ಕೇನು ದೃಷ್ಟ? ಸ್ವಯ ಪರವರಿಯದುದೇ ದೃಷ್ಟ. ಸ್ವಯ ಪರವರಿಯದುದಕ್ಕೇನು ದೃಷ್ಟ? ಕೂಡಲ ಚನ್ನ ಸಂಗಯ್ಯನ ನೆನೆದುದೇ ದೃಷ್ಟ. ॥೫೧॥

ಮತ್ತಂ॥ ಸಹಜವೆನ್ನದೆ ನಿಜವೆನ್ನದೆ ಖಂಡಿತವೆನ್ನದೆ ಪರಿಪೂರ್ಣವೆನ್ನದೆ ಏನು ಎನ್ನದೆ ಕೂಡಲ ಚನ್ನ ಸಂಗಯ್ಯ ಲಿಂಗೈಕ್ಯವು. ॥೫೨॥

ಮತ್ತಂ॥ ಆನೆಂಬುದಿಲ್ಲ, ನೀನೆಂಬುದಿಲ್ಲ, ಸ್ವಯವೆಂಬುದಿಲ್ಲ, ಪರವೆಂಬುದಿಲ್ಲ, ಅರಿವೆಂಬುದಿಲ್ಲ, ಮರಹೆಂಬುದಿಲ್ಲ, ಒಳಗೆಂಬುದಿಲ್ಲ, ಹೊರಗೆಂಬುದಿಲ್ಲ ಕೂಡಲ ಚನ್ನ ಸಂಗಯ್ಯ ನೆಂಬ ಶಬ್ದ ಮುನ್ನಿಲ್ಲ. ॥೫೩॥

ಮತ್ತಂ॥ ತನು ಬಯಲು ನಿರ್ವಯಲೊಳಗಡಗಿತ್ತು. ಮನ ಬಯಲು ನಿರ್ವಯಲೊಳಗಡಗಿತ್ತು. ಭಾವ ಬಯಲು ನಿರ್ವಯಲೊಳಗಡಗಿತ್ತು. ಬಯಲು ಬಯಲ ಬೆರಸಿ ಬಯಲೆಯಾಯಿತ್ತು. ಕೂಡಲ ಚನ್ನ ಸಂಗಯ್ಯ ನೆಂಬ ನುಡಿಯಡಗಿತ್ತು. ॥೫೪॥

ಮಡಿವಾಳಯ್ಯಗಳ ಪರಾಮರಿಕೆ. ನಿತ್ಯ ಸತ್ಯದೊಳಗಡಗಿ ಸತ್ಯ ಆಚಾರದೊಳಗಡಗಿ ಆಚಾರ ಅನುಭಾವದೊಳಗಡಗಿ ಅನುಭಾವ ಜ್ಞಾನದೊಳಗಡಗಿ ಮಹಾಜ್ಞಾನ ಮನೋಲಯದೊಳಗಡಗಿ ಮನೋಲಯವೆ ಮಹಾಘನವಾಯಿತ್ತು ಕಲಿ ದೇವರ ದೇವ ನಿಮ್ಮ ನಿಜೈಕ್ಯ. ॥೫೫॥

ತನು ನಷ್ಟ ಮನ ನಷ್ಟ ನೆನಹು ನಷ್ಟ ಭಾವ ನಷ್ಟ ಜ್ಞಾನ ನಷ್ಟ ಇಂತೀ ಪಂಚ ನಷ್ಟದೊಳಗೆ ನಾ ನಷ್ಟವಾದೆನು. ಆ ನಷ್ಟದೊಳಗೆ ನೀನು ನಷ್ಟವಾದೆ. ಕಲಿ ದೇವರ ದೇವನೆಂಬ ನುಡಿ ನಿಃಶಬ್ದ ಬ್ರಹ್ಮಮುಚ್ಯತೆ ॥೫೬॥

ಅರಿವಿನೊಳಗಣ ಕುರುಹು ಮರಹಿಂಗೆ ಬೀಜ. ಕುರುಹಿನ ಮರಹೆ ನರಿವು ನುಂಗಿ ಘನಕ್ಕೆ ಘನ ವೇದ್ಯವಾದ ಬಳಿಕ ನಿತ್ಯ ಪರಿಪೂರ್ಣ ತಾನೆ. ಕಲಿದೇವರ ದೇವನು ವಾಙ್ಮನಕ್ಕಗೋಚರನು. ॥೫೭॥

ಮತ್ತಂ, ಎನ್ನ ಆಯತ ಅವಧಾನಗೆಟ್ಟಿತ್ತಯ್ಯ. ಎನ್ನ ಸ್ವಾಯತ ಸಂದಳಿಯಿತ್ತಯ್ಯ. ಎನ್ನ ಸಮಾಧಾನ ತರ ಹರವಾಯಿತ್ತಯ್ಯ ಎನ್ನ ಅರಿವು ನಿಜದಲ್ಲಿ ನಿಷ್ಪತ್ತಿಯಾಯಿತ್ತಯ್ಯ ಕಲಿ ದೇವರ ದೇವಯ್ಯ ನಿಮ್ಮ ಶಬ್ದ ಮುಗ್ಧವಾಗಿದ್ದೆನು ॥೫೮॥

ಮತ್ತಂ, ತನುವಳಿಯಿತ್ತು. ಮನವಳಿಯಿತ್ತು. ಭಾನವಳಿಯಿತ್ತು. ಬಯಕೆಯುಳಿಯಿತ್ತು. ನಿಜವೆಂಬುದಳಿಯಿತ್ತು. ನಾವು ಸೀಮೆಯ ಬಯು ಲಲ್ಲಿ ಕಲಿದೇವರ ದೇವನಲ್ಲಿ ಬೆರಸಿ ಬೇರಿಲ್ಲದಿರ್ದೆನು ॥೫೯॥

ಮತ್ತಂ, ತ್ರಿವಿಧ ಮಧ್ಯ ಶೇಷ ತ್ರಿಕೂಟ ಬೆಳಸು ದಿವ್ಯ ಮಧ್ಯದ ಪರಿಯಾಣ ನಿರ್ಭಾವ ಮಧ್ಯ ಧ್ಯಾನವನೆ ತಂದು ರತ್ನಾ ಭರಣದ ಭಾಜನದಲ್ಲಿ ಇವನೆಲ್ಲವನು ಸಂಹರಿಸುವೆನು. ಹಿಂದೆ ನೋಡಿಯು ಅರನು ಕಾಣೆ. ಮುಂದೆ ನೋಡಿಯು ಆರನು ಕಾಣೆ. ಮಧ್ಯದಲ್ಲಿ ನೋಡು. ಪೈಸ್ಯಕ್ಕರನ ಮಾಡಿದ ಭಕ್ತಿಯ ಬೇಡವೆಂದು ಒಬ್ಬ ಜಂಗಮ ಬಂದರೆ ಕೊಟ್ಟೆ ಆ ಭಕ್ತಿಯ ಶೇಷ ಪ್ರಸಾದದಿಂದೆ ಶುದ್ಧನಾದೆನು ಕಾಣಾ ಕಲಿ ದೇವರ ದೇವಾ ॥೬೦॥

ಮತ್ತಂ ಬಹುರೂಪಿ ಚೌಡಯ್ಯಗಳ ಸಮರಸದ ವಚನ॥

ಷಡುಚಕ್ರವಳಯದೊಳಗೆ ನಾನಾಡುವೆ. ಬಹು ರೂಪಭ್ರೂ ಮಧ್ಯ ಮಂಡಲ ಹೃದಯ ಕಮಲ ಮಧ್ಯದ ಅಬ್ಜ ಸ್ವರದ ಮಣಿ ಪೂರಕದ ಮೇಲೆ ನಾನಾಡುವೆ. ಬಹು ರೂಪ ನುರಿಯುಂಡ ಕರ್ಪುರದಂತೆ ನಾನಾ ಡುವೆ. ಬಹು ರೂಪ ಬಯಲ ಬೆರಸಿದ ಮರೀಚಿಯಂತೆ ನಾನಾಡುವೆ. ಬಹು ರೂಪ ರೇಕಣ್ಣ ಪ್ರಿಯನಾಗಿ ನಾಥ ಬಸವಣ್ಣನಿಂದೆ ಬದುಕಿದೆನು ॥೬೨॥

ಮತ್ತಂ, ನಿಷ್ಪತ್ತಿ ಬಂದು ಹಾಳಕೊಂಡಿದ್ದಲ್ಲಿ ನಿರಾಶ್ರಯ ಬಂದು ಹೊದಕೆಯಾದಲ್ಲಿ ನಿರಾಲಂಬವಾಯಿತ್ತಯ್ಯ. ಎನ್ನ ಬಹು ರೂಪು ನಿರು ಹರಣ ಮಧ್ಯದಲ್ಲಿ ಅಡಗಿದ್ದುದಲ್ಲ. ಎನ್ನ ಬಹು ರೂಪಕ್ಕೆ ಪ್ರಾಣಲಿಂಗ ಬಸವಣ್ಣ ಕಾಣಾ. ರೇಕಣ್ಣ ಪ್ರಿಯ ನಾಗಿನಾಥ ಬಸವಣ್ಣನಿಂದೆ ಬದುಕಿದೆನು ॥೬೩॥

ಮತ್ತಂ, ಇಂದು ಬಂದ ಬಹುರೂಪ ನೋಡಿರಯ್ಯ. ಗತಿಯು ಹೊದ್ದದೆ ಸ್ಥಿತಿಯು ಹೊದ್ದದೆ ಸ್ಥಾನವ ಹೊದ್ದದೆ ಐವರು ಕಟ್ಟಿದ ಕಟ್ಟಳೆಯ ಮೀರಿ ನಾನಾಡುವೆ. ಬಹುರೂಪ ರೇಕಣ್ಣ ಪ್ರಿಯ ನಾಗಿನಾಥ ಬಸವಣ್ಣನಿಂದ ಬದುಕಿದೆನು ॥೬೩॥

ಮತ್ತಂ, ಇನ್ನಾಡುವೆ ಜಂಗಮ ಬಹುರೂಪ ಅಲ್ಲಮನಂತೆ. ಆಡುವೆ ಬಹುರೂಪು ಅಜಗಣ್ಣನಂತೆ. ಆಡುವೆ ಬಹುರೂಪ ಮುಖವಾಡದಯ್ಯಗಳಂತೆ. ಆಡುವೆ ಬಹುರೂಪ ಪುರುಷಂಗಣ ಮೆಟ್ಟಿ ಆಡುವೆ. ಬಹುರೂಪ ರೇಕಣ್ಣ ಪ್ರಿಯ ನಾಗಿನಾಥ ಬಸವಣ್ಣನಿಂದ ಬುದುಕಿತ್ತೀ ಲೋಕವೆಲ್ಲಾ ॥೬೪॥

ಮತ್ತಂ, ಶೂನ್ಯ ಸನ್ನಿಹಿತನಾದಲ್ಲಿ ಶೂನ್ಯ ಪದಾರ್ಥವಾದಲ್ಲಿ ಬಸವನ ಪ್ರಸಾದವೆಂದು ಬಸವನ ಕೂಡೆ ಆಡುತ್ತಿರ್ದ ರೇಕಣ್ಣ ಪ್ರಿಯನಾಗಿನಾಥ ಬಸವಣ್ಣನಿಂಪ ಬದುಕಿತ್ತೀ ಲೋಕವೆಲ್ಲಾ ॥೯೫॥

ಶುದ್ಧವೇ ಜವನಿಕೆಯಾಗಿ ಶುದ್ಧವೇ ಸಿಂಹಾಸನವಾಗಿ ಪ್ರಸಿದ್ಧ ಹೊದಕೆಯ ಹೊದ್ದು ನಾನಾಡುತ್ತಿರ್ದ್ದೆ. ಬಹುರೂಪ ಶುದ್ಧ ·ವಿಡಿದಲ್ಲಿ ಇದ್ದ ನಿಜ ನಾಸ್ತಿಯಾಯಿತ್ತೆನ್ನ ಬಹುರೂಪ, ಸಿದ್ಧವೆಂಬ ಸಿಂಹಾಸನವ ಳಿದಲ್ಲಿ ಬುದ್ಧಿ ಗೆಟ್ಟು ಅಡುತಿರ್ದುದಯ್ಯ ಎನ್ನ ಬಹು ರೂಪು ಪ್ರಸಿದ್ಧ ಹೊದೆಕೆಯ ಹರಿದಲ್ಲಿ ನಾ ಬಸವನ ಕೂಡೆ ಆಡುತಿರ್ದೆ ಕಾಣಾ ರೇಕಣ್ಣ ಪ್ರಿಯನಾಗಿ ನಾಥ ಬಸವಣ್ಣನಿಂದ ಬದುಕಿತ್ತೀ ಲೋಕವೆಲ್ಲಾ. ॥೬೩॥

ಮತ್ತಂ, ಸರದೊಳಗೆ ಸರಗಟ್ಟಿ ಸರ ಹರಿದವ ನಾನಯ್ಯ. ಮಹದಲ್ಲಿ ಮನೆ ಗಟ್ಟಿ ಮನೆ ಬೆಂದವ ನಾನಯ್ಯ. ಕಿಚ್ಚಿನೊಳಗೆ ಕಿಚ್ಚನೊಟ್ಟಿ ಕಾದವ ನಾನಯ್ಯ. ಆ ಕಿಚ್ಚಿನೊಳಗೆ ಬಿದ್ದು ಉರಿದವ ನಾನಯ್ಯ. ಬಸವಣ್ಣನು ಎನ್ನ ಬಹುರೂಪಕ್ಕೆ ಸೂತ್ರಧಾರಿಯಾದ. ಸೂಕ್ಷ್ಮವಾಗಿ ಹೋದೆ ನಾ ಬಸವನಿಂದ ಕೆಟ್ಟೆ ಕಾಣಾ ರೇಕಣ್ಣ ಪ್ರಿಯನಾಗಿ ನಾಥ ಬಸವಣ್ಣನಿಂದ ಬದುಕಿತ್ತೀ ಲೋಕವೆಲ್ಲಾ ॥೬೭॥

ಹಡಪದಪ್ಪಣ್ಣಗಳ ಪರಾಮರಿಕೆ. ಎನ್ನ ತನು ನಿಮ್ಮ ಸೇವೆಯಲ್ಲಿ ಸವೆದು, ಎನ್ನ ಮನ ನಿಮ್ಮ ನೆನಹಿನಲ್ಲಿ ಸವೆದು, ಎನ್ನರಿವು ನಿಮ್ಮ ಘನದಲ್ಲಿ ಸವೆದು ನಿಶ್ಚಲ ನಿಜೈಕ್ಯವಾಗಿ ಬಸವ ಪ್ರಿಯ ಕೂಡಲ ಚನ ಸಂಗಯ್ಯ ನಾ ನೀನೆಂಬುದು ಏನಾಯಿತ್ತೆಂದರಿಯೆ. ॥೬೮॥

ಮತ್ತಂ, ಎನ್ನ ಆಚಾರ ವಿಚಾರ ಬಸವಣ್ಣಂಗರ್ಪಿತವಾದವು ಎನ್ನ ಅವಧಾನ ಅನುಭಾವ ಬಸವಣ್ಣಂಗರ್ಪಿತವಾದವು. ಎನ್ನ ಸರ್ವಾಚಾರ ಸಂಪತ್ತು ಬಸವಣ್ಣನಲ್ಲಿ ವೇದ್ಯವಾಯಿತ್ತು. ಬಸವ ಪ್ರಿಯ ಕೂಡಲ ಚನ್ನ ಸಂಗಮದೇವರಲ್ಲಿ ನಿಜ ನಿವಾಸಿ ಯಾಗಿರ್ದೆನು. ॥೯॥

ಮತ್ತಂ, ಹರಿದು ಹತ್ತಿ ಮುಟ್ಟಲಿಲ್ಲ. ಮುಟ್ಟಿ ಮರಳಿ ಇಳಿಯ ಲಿಲ್ಲ. ಬೆರಸಿದೆನೆಂದು ನೆನೆಯಲಿಲ್ಲ. ಬಸವ ಪ್ರಿಯ ಕೂಡಲ ಚನ್ನಸಂ ಗಯ್ಯನಲ್ಲಿ ಶಬ್ದಕ್ಕೆ ಇಂಬಿಲ್ಲದಿದ್ದನು. ॥೭೦॥

ಸೊಡ್ಡಳ ಬಾಚರಸರ ಪರಾಮರಿಕೆ. ಎನ್ನ ಕಾಯವೆಂಬ ಸಿಂಹಾ ಸನದಲ್ಲಿ ಪ್ರಾಣ ಲಿಂಗವ ಮೂರ್ತಿಗೊಳಿಸಿ, ಧ್ಯಾನವೆಂಬ ಹಸ್ತದಲ್ಲಿ ಮುಟ್ಟಿ ಪೂಜಿಸುತ್ತಿರಲು, ಮೆಲ್ಲಮೆಲ್ಲನೆ ಸುತ್ತಿ ಮುತ್ತಿದ ಸಂಸಾರ ಬಯಲ ಬೆರ ಸಿದ ನಾನೆಂಬ ಭೇದವಳಿದು ಮಹಾದಾನಿ ಸೊಡ್ಡಳನಲ್ಲಿ ನಿಜಲಿಂಗೈಕ್ಯ ವಾಯಿತ್ತು. ॥೭೧॥

ಮತ್ತಂ, ಅಂಗ ಲಿಂಗಕ್ಕೆ ಗೂಡಾಯಿತ್ತು. ಲಿಂಗ ಅಂಗಕ್ಕೆ ಗೂಡಾ ಯಿತ್ತು. ಅಂಗ ಲಿಂಗ ಸಂಗವೆಂಬ ಸಂದಳಿದು ನಿಜ ಲಿಂಗೈಕ್ಯವಾ ಯಿತ್ತು. ಭಾವ ನಿರ್ಭಾವ ನಿಷ್ಪತ್ತಿಯಲ್ಲಿ ಮಹಾದಾನಿ ಸೊಡ್ಡಳಂಗೆ ಸರ್ವ ನಿರ್ವಾಣವಾಯಿತ್ತು. ॥೭೨॥

ಮತ್ತಂ, ಎನ್ನ ಅಷ್ಟವಿಧಾರ್ಚನೆ ಷೋಡಶೋಪಚಾರದ ಹಂಗು ಹರಿದು ಸೋಹಂ ಸೋಹಂ ಎನುತ್ತಿದ್ದಿತು. ಸೋಹಂ ವೆಂಬ ಸುಖದ ಮಹಾ ಸವಿಯ ಮಹಾದಾನಿ ಸೊಡ್ಡಳ ಆರೋಗಣೆಯ ಮಾಡಿ ನಿಜ ನಿವಾಸಿಯಾದ ಕಾರಣ ನಾನು ನಾಮ ಸೀಮೆ ಗೆಟ್ಟೆನು. ॥೭೩॥

ಮತ್ತಂ, ಅಕ್ಕ ನಾಗಾಯಿಗಳ ಪರವಶ ಎನ್ನ ತನು ಚನ್ನಬಸ ವಣ್ಣನ ಬಯಲ ಬೆರಸಿತ್ತು. ಎನ್ನ ಮನ ಸಂಗನಬಸವಣ್ಣನ ನಿಜಪ ದವ ಬೆರಸಿತ್ತು. ಎನ್ನ ಪ್ರಾಣ ಪ್ರಭುದೇವರ ಬಯಲ ಬೆರಸಿತ್ತು. ಬಸ ವಣ್ಣ ಪ್ರಿಯ ಚನ್ನಸಂಗನ ಶರಣರು ಒಬ್ಬರೊಬ್ಬರೊಂದೊಂದ ಹಂಚಿ ಕೊಂಡ ಕಾರಣ ಎನಗೇನು ಎನಗೇನು ಇಲ್ಲದೆ ಮಹಾ ಘನದಲ್ಲಿ ನಿಜ ನಿವಾಸಿಯಾಗಿದ್ದೆನು. ॥೭೪॥

ಮತ್ತಂ॥ ಎನ್ನ ಕುಲ ಸೂತಕವನಳಿದ ಬಸವಣ್ಣ. ಎನ್ನ ಛಲಸೂತ ಕವನಳಿದ ಬಸವಣ್ಣ. ಎನ್ನ ತನು ಸೂತಕವನಳಿದ ಬಸವಣ್ಣ. ಎನ್ನ ಮನ

ಸೂತಕವನಳಿದ ಬಸವಣ್ಣ. ಎನ್ನ ಪ್ರಾಣಸೂತಕವ ಕಳೆದ ಬಸವಣ್ಣ. ಎನ್ನ ಭಾವ ಸೂತಕವ ಕಳೆದ ಬಸವಣ್ಣ. ಎನ್ನ ಅರಿವು ಮರಹಿನ ಸಂದ ಬಿಡಿಸಿದ ಬಸವಣ್ಣ. ಎನ್ನ ತನ್ನಲ್ಲಿ ಇಂಬಿಟ್ಟುಕೊಂಡ ಬಸವಣ್ಣ. ತನ್ನ ಎನ್ನಲ್ಲಿ ಇಂಬಿಟ್ಟುಕೊಂಡ ಬಸವಣ್ಣ. ನಿಜ ನಿರ್ವಯಲ ಸಮಾಧಿಯ ನಿಜ ನಿವಾಸದ ಬಾಗಿಲ ತೋರಿದ ಬಸವಣ್ಣ. ಬಸವಣ್ಣ ಪ್ರಿಯ ಕೂಡಲ ಚನ್ನ ಸಂಗಯ್ಯನ ಹೃದಯ ಕಮಲದಲ್ಲಿ ಸಮವಾಗಿರಿಸಿದ ಎನ್ನ ತಂದೆ ಸಂಗನ ಬಸವಣ್ಣನು. ॥೭೫॥

ಮೋಳಿಗೆಯ ಮಾರಯ್ಯಗಳ ಪರವಶ॥ ಎನ್ನರಿವು ಮರಹು ಬಸವಣ್ಣಂಗರ್ಪಿತ, ಎನ್ನ ಆಚಾರ ವಿಚಾರ ಬಸವಣ್ಣಂಗರ್ಪಿತ, ಎನ್ನ ಭಾವ ನಿರ್ಭಾವ ಬಸವಣ್ಣಂಗರ್ಪಿತ, ಎನ್ನಂತರಂಗ ಬಹಿರಂಗ ಬಸವಣ್ಣಂಗರ್ಪಿತ, ನೀ ನಾನೆಂಬುದು ಬಸವಣ್ಣಂಗರ್ಪಿತ ಇಂತು ಎನ್ನನೆ ಬಸವಣ್ಣಂಗೆ ನಿವೇದಿಸಿ ಆವಾವ ಲಂಬವು ಇಲ್ಲದೆ ನಿರಾಲಂಬದಲ್ಲಿ ನಿಜನಿವಾಸಿಯಾದೆನು ಕಾಣಾ ನಿಃಕಳಂಕ ಮಲ್ಲಿಕಾರ್ಜುನ. ॥೭೬॥

ಮತ್ತಂ॥ 'ಬ' ಎಂಬಲ್ಲಿ ಬಳಿ ಸಂದೆನು. 'ಸ' ಎಂಬಲ್ಲಿ ಸಯವಾದೆನು 'ವ' ಎಂಬಲ್ಲಿ ನಿರವಯವಾದೆನು. ನಿಃಕಳಂಕ ಮಲ್ಲಿಕಾರ್ಜುನ ಬಸವಣ್ಣನ ನಿಜಪದದಲ್ಲಿ ಸಂದಿಲ್ಲದೆ ಬೆರಸಿ ನಮೋ ನಮೋ ಎಂಬ ಹಂಗಳಿದುಳಿದೆನು. ॥೭೭॥

ಡೋಹರ ಕಕ್ಕಯ್ಯಗಳ ಪರವಶ॥ ಎನ್ನ ಕಷ್ಟ ಕುಲ ಸೂತಕ ನಿಮ್ಮ ಹಸ್ತ ಮುಟ್ಟಿದಲ್ಲಿ ಬಯಲಾಯಿತ್ತು. ಶುಕ್ಲ ಶೋಣಿತದಿಂದಾದ ಸೂತಕ ಲಿಂಗ ಮುಟ್ಟಲೊಡನೆ ಬಯಲಾಯಿತ್ತು. ತಟ್ಟಿದ ಮುಟ್ಟಿದ ಸುಖಂಗಳ ಲಿಂಗಮುಖಕ್ಕೆ ಅರ್ಪಿಸಿದೆನಾಗಿ ಎನ್ನ ಪಂಚೇಂದ್ರಿಯಂಗಳು ಬಯಲಾಯಿತ್ತು. ಎನ್ನಂತರಂಗದಲ್ಲಿ ಜ್ಞಾನಜ್ಯೋತಿ ಎಡೆಗೊಂಡಿತ್ತಾಗಿ ಒಳಗು ಬಯಲಾಯಿತ್ತು. ಸಂಸಾರ ಸಂಗವಾದ ಅವಸ್ಥೆ ಮೀರಿದ ಕ್ರಿಯದಲ್ಲಿ ತರಹರವಾಯಿತ್ತಾಗಿ, ಬಹಿರಂಗ ಬಯಲಾಯಿತ್ತು. ಅಭಿನವ ಮಲ್ಲಿಕಾರ್ಜುನ ನಿಮ್ಮ ಮುಟ್ಟಿದ ಕಾರಣ ನಾನು ಬಯಲಾದೆನು. ॥೭೮॥

ಮತ್ತಂ॥ ನೆಯಲರಿಯೆ, ನಿರ್ಧರಿಸಲರಿಯೆ. ಮನವಿಲ್ಲ. ಭಾವಿಸಲರಿಯೆ ಬಳಸಲರಿಯೆ ಭಾವ ನಿರ್ಭಾವವಾಯಿತ್ತಾಗಿ, ಧ್ಯಾನ ಮೌನವನರಿಯೆ,

ಧ್ಯಾನಾತೀತ ತಾನೆಯಾಯಿತ್ತಾಗಿ, ಜ್ಞಾತೃ ಜ್ಞಾನ, ಜ್ಞೇಯಂಗಳೆಲ್ಲವ ಮೀರಿ ಅಭಿನವ ಮಲ್ಲಿಕಾರ್ಜುನನಲ್ಲಿ ಪರಮ ಸುಖಿಯಾದೆನು. ॥೭೯॥

ಇಂತು ಎಲ್ಲ ಗಣಂಗಳು ತಮ್ಮ ನಿಜ ಪದದ ನಿಲುಕಡೆಯ ಪೇಳಿ ತದನಂತರದಲ್ಲಿ ಚನ್ನ ಬಸವ ರಾಜ ದೇವರು ಬಿನ್ನೈಸುವ ಅವಸಾನವ ಸೂಚನೆಯ ಪದಂಗಳು.

**ರಾಗ ಶ್ರೀ ರಾಗ.**

ಏನ ಹೇಳುವೆನಕ್ಕ ಕನಸನೂ ಮಾನವರಿಗೆ ತಿಳಿವಡಸಾಧ್ಯ ತರವಲ್ಲಾ ॥ಪಲ್ಲ॥

ನಾನೊಂದು ಕನಸ ಕಂಡೆನು ಕೇಳೆಲೆ ಯಕ್ಕ ಮಾನದೊಳಗೆ ಒಂದಾನೆಯೂ ಆನೆ ನಿಂತುದು ಮಾವತಿಗ ಮಾನವ ಪೊಕ್ಕು ಕಾನನದೊಳು ತೊಳಲುದ ಕಂಡೆನಕ್ಕಾ. ॥೧॥

ದಾರಿವಿಡಿದು ಬರೆ ಬರೆ ಸರವರ ಕಂಡೆ. ಸರವರದೊಳಗೊಂದು ಕಮಲವ ಸರವರ ಕಮಲ ಕರ್ಣಿಕೆಯ ಮಧ್ಯದೊಳೊಂದು ಉರಿಯ ಬೀಜವ ಕಂಡೆನಿದಿರೊಳು ॥೨॥

ಉರಿಯ ಬೀಜವ ಸರಗೊಳಿಸಿ ಕೊರಳೊಳಿಟ್ಟು ಪರ ಪೂರರಸನ ಸಮುಖವಾಗಿ ಬರುತ ಬರುತ ಬರೆ ಬರೆ ಘನದುರಿ ಎದ್ದು ನೆರದ ಮನೆಯ ಹುಲ್ಲುರಿದುದಾ ॥೩॥

ನೆಲೆಗೆಟ್ಟು ಶೂನ್ಯದ ಸುಖವ ಬಯಸಿ ಬಂದು ಹಲವು ಬಣ್ಣದ ನೂಲ ಹುರಿ ಮಾಡಿ ತವೆ ಕಾವಿಲೊಳಗೊಂದಮೃತದ ಸೇದೆಯ ಬಾವಿ ತೊಲಗಲೀಯದು ಜಾಲಗಾರನನೂ ॥೪॥

ಬಟ್ಟ ಬಯಲ ತುಟ್ಟ ತುದಿಯ ಕೊನೆಯ ಮೇಲೆ ಉಟ್ಟದ ತೊರೆದು ನಿಂದುದ ಕಂಡೆ ಮುಟ್ಟೆ ಕೂಡಲ ಚನ್ನಸಂಗನ ಶರಣರು ಹುಟ್ಟ ಮುರಿದು ಹೋದುದ ಕಂಡೆನಮ್ಮಾ ॥೫॥

ಆ ಪ್ರಸ್ಥಾವದೊಳು ಪ್ರಭುದೇವರು ತಮ್ಮ ಪರಾಮರಿಕೆಯ ಹೇಳುವ ವಚನ ॥

ಮನದ ಕೊನೆಯ ಮೊನೆಯ ಮೇಲೆ ನೆನದ ನೆನಹು ಜನನ ಮರಣವ ನಿಲಿಸಿ ಜ್ಞಾನಜ್ಯೋತಿ ಉದಯ ಭಾನು ಕೋಟಿಯ ಮೀರಿ ಸ್ವಾನು

ಭಾವದ ಉದಯು ಜ್ಞಾನ ಶೂನ್ಯದಲಡಗಿದ ಘನವ ನೇನೆಂಬೆನು ಗುಹೇಶ್ವರಾ. ॥೮೫॥

ಮತ್ತಂ, ನಿರ್ವಿಕಲ್ಪವೆಂಬ ನಿಜದೊಳಗೈಯ್ಯ ನಿರಹಂಭಾವದಲ್ಲಿ ನಾನಿದ್ದೆನಯ್ಯ. ನೋಡಿಹೆನೆಂದರೆ ನೋಡಲಿಲ್ಲ. ಕೇಳಿಹೆನೆಂದರೆ ಕೇಳಲಿಲ್ಲ. ಘನ ನಿರಂಜನ ಬೆಳಗಿಂದಲಾದುವ ಏನೆಂಬೆನು ಗುಹೇಶ್ವರ ॥೮೬॥

ಮತ್ತಂ, ಘನವ ಕಂಡು ಮನ ವ್ರತ ವಹಿಸಿತ್ತು ಕಂಡು ಕಂಡು ಮಹ ಘನವಾಯಿತ್ತು. ತತ್ತಲೀಯ್ಯವಾಯಿತ್ತು. ತದುಗತವಾಯಿತ್ತು. ಶಬ್ದ ಮುಗ್ಧವಾಯಿತ್ತು ಗುಹೇಶ್ವರಾ. ॥೮೭॥

ಮತ್ತಂ, ಬಯಲ ಬೆರಗಿನ ಸುಖದ ಸವಿಯ ಬೆರೆವಲ್ಲದೆ ಕಾಣೆ. ಕಾಣೆನೆಂಬ ನುಡಿಗೆಡೆಯು ಕಾಣೆ. ಕುರುಹಳಿದು ಅರಿವ ನೆರೆ ಅರಿದು ಬೆರಿಸಿಪೆನೆಂಬ ಬಿರುನುಡಿಯ ನುಡಿಗೆ ನಾಚಿವೆನಯ್ಯ ಗುಹೇಶ್ವರಾ. ॥೮೮॥

ಉಪಮೆ ಉಪಮಿಸಲರಿಯದೆ, ಉಪಮಾತೀತವೆನುತಿದ್ದಿತ್ತು. ಅರಿವು ಅರಿವಿನಲ್ಲಿ ಮರೆಯುಲಿದ್ದುದನರಿಯದೆ ಅರಿವು ಪರಪರಾ ಎನ್ನುತ್ತಿದ್ದಿತು. ಧ್ಯಾನ ಧ್ಯಾನಿಸಲರಿಯದೆ ಧ್ಯಾನ ರೂಪಾತೀತನೆಂದು ತದ್ಧ್ಯಾನಗೊಂಡಿತ್ತು. ಜ್ಞಾತೃ ಜ್ಞಾನ. ಜ್ಞೆಯವೆಂಬುದಕೆ ಇನ್ನಾವ ಜ್ಞಾನವು ವೇದ ವಿಜ್ಞಾನವೆಂದುದಾಗಿ ತತ್ವಮಸಿ ವಾಕ್ಯಂಗಳೆಲ್ಲವು ಹುಸಿಯಾಗಿ ಹೋದವು. ಸಚ್ಚಿದಾನಂದವೆಂದುದಾಗಿ ದ್ವೈತಾದ್ವೈತ ವಾದಿಗಳೆಲ್ಲರು ಸಂಹಾರವಾಗಿ ಹೋದರು. ಬಂದೂ ಬಾರದು, ಹೊಂದಿಯೂ ಹೊಂದದು. ನಿಂದ ನಿರಾಳ ಗುಹೇಶ್ವರಾ. ॥೮೯॥

ಮತ್ತಂ, ಗುರುವಿನಿಂದಾದ ಕಾಯುವ ಬಿರಿಸಿ ಗುರುವನರಿಯದದೇನಯ್ಯ? ಲಿಂಗದಿಂದಾದ ಜೀವನ ಬೆರಿಸಿ ಲಿಂಗವನರಿಯದದೇನಯ್ಯ? ಜಂಗಮದಿಂದಾದ ಮನವ ಬೆರಿಸಿ ಜಂಗಮವನರಿಯದದೇನಯ್ಯ? ಈ ತ್ರಿವಿಧ ಭಕ್ತಿಯನರುಹಿಸಿಕೊಟ್ಟ ಸಂಗನಬಸವಣ್ಣನ ಬೆರಿಸಿ ನೀನು ನಾನು ಬದುಕಿದೆವು ಕಾಣಾ ಗುಹೇಶ್ವರಾ. ॥೯೦॥

ಮತ್ತಂ, ನಾನೆಂಬುದು ಪ್ರಮಾಣ. ನೀನೆಂಬುದು ಪ್ರಮಾಣ. ಸ್ವಯವೆಂಬುದು ಪ್ರಮಾಣ. ಪರವೆಂಬುದು ಪ್ರಮಾಣ. ಪ್ರಮಾಣವೆಂಬುದು ಪ್ರಮಾಣ. ಗುಹೇಶ್ವರನೆಂಬುದು ಅಪ್ರಮಾಣ. ॥೯೧॥

ಇಂತು ಪ್ರಭುದೇವರು ತಮ್ಮ ಪರಾಮರಿಕೆಯು ಹೇಳಿ ತಾವು ಲಿಂಗೈಕ್ಯವಾಗುವ ಅವಸ್ಥೆಯು ನಿರೂಪಿಸಿದ ವಚನ॥

ಇಂದುವಿನ ಬೆಳಗಿನ ಸಂಪತ್ತನಿಂಬುಗೊಂಡ ಚಕೋರನ ಧ್ಯಾನವೆಂತಪ್ಪುದು ಅಂತಾಗಿದ್ದೆ ನಾನು. ರಾತ್ರಿಯೊಳ್ಮುಗಿದ ಪದ್ಮಪತ್ರದ ಭ್ರಮರನ ಧ್ಯಾನವೆಂತಿಪ್ಪುದು ಅಂತಾಗಿದ್ದೆ ನಾನು. ಮಾತೆ ವಿಯೋಗದ ಶಿಸುವಿನ ಧ್ಯಾನವೆಂತಿಪ್ಪುದು ಅಂತಾಗಿದ್ದೆ ನಾನು. ಸ್ವಪ್ನದಲ್ಲಿ ದೃಷ್ಟ ಕೇಸರಿಯ ಧ್ಯಾನದ ಮದಹಸ್ತಿಯಂತಿಪ್ಪುದು ಅಂತಾಗಿದ್ದೆ ನಾನು. ನೋಟವನಗಲಿದ ನೇಹದ ಧ್ಯಾನವೆಂತಿಪ್ಪುದು ಅಂತಾಗಿದ್ದೆ ನಾನು. ಬ್ರಹ್ಮಪಾಶ ವಿಷ್ಣು ಮಾಯವನತಿಗಳೆದ ಛಲದಲ್ಲಿ ಏನೆಂದರಿಯದಿದ್ದೆ ನಾನು. ಗುಹೇಶ್ವರ ಲಿಂಗ ಸಂಗನಬಸವಣ್ಣನೊಳಗೆ ಲೀಯನಹ ಭರದಲ್ಲಿ ಏನೆಂದರಿಯದಿದ್ದೆ ನಾನು. ॥೯೨॥

ಇತಿ ಶ್ರೀಮತ್ಸಕಲಗಣ ಪುರಾತನರೊಳ್ ಪ್ರಭುದೇವರು ಮಹಾನುಭಾವ ಸದ್ಗೋಷ್ಠಿಯಂ ಮಾಡಿದ ಶೂನ್ಯ ಸಂಪಾದನೆಯೊಳ್ ಎಲ್ಲ ಪುರಾತರ ಅವಸಾನದ ಪರಾಮರಿಕೆಗೆ ವಿಂಶೋಪದೇಶ ಸಮಾಪ್ತ.



# ಎಲ್ಲ ಗಣಂಗಳ ನಿರ್ವಯಲ ಸಮಾಧಿ.

(ಏಕವಿಂಶತ್ಯುಪದೇಶ.)

ಕಂದ॥ ಗೋರಕ್ಷಗೆ ನಿಜಪದಮಂ। ಓರಂತಿರಲಿತ್ತು ಪ್ರಭುವು ನಿರ್ವಯಲಾಗಲು। ಭೂರಿ ಮಹ ಶರಣರುಗಳೀ। ಧಾರುಣಿಯೊಳಗಿರದೆ ಐಕ್ಯವಡೆದುದ ಪೇಳ್ವೆಂ॥

ಅದೆಂತೆಂದೊಡೆ, ಪ್ರಭುದೇವರು ಬಸವರಾಜದೇವರು ಚನ್ನಬಸವರಾಜದೇವರು ಮಡಿವಾಳಮಾಚಿ ತಂದೆಗಳು ಮೊದಲಾದ ಅಸಂಖ್ಯಾತ ಮಹಾ ಗಣಂಗಳೆಲ್ಲ ತಮ್ಮ ತಮ್ಮ ನಿಜಪದದ ನಿಜೈಕ್ಯಮಂ ಪೇಳಲು, ಪ್ರಭುದೇವರು ಕೇಳ್ದು ತಮ್ಮ ನಿಜಪದಮಂ ಪೇಳಿ ಮತ್ತೆಲ್ಲ ಅಸಂಖ್ಯಾತರಿಗೆ ನಿರ್ವಯಲ ಸ್ಥಿತಿಗತಿಯ ನಿರೂಪಿಸುವ ಪ್ರಸ್ಥಾವದ ವಚನ॥

ಅವಧಿಯಳಿಯಿತ್ತು. ವ್ಯವಧಾನ ಉಳಿಯಿತ್ತು. ನಿಜವೆ ನಿಜವನೊಡಗೂಡಿತ್ತು ಕೇಳಾ ಬಸವಣ್ಣ. ಕಲಿಯುಗದಲ್ಲಿ ಮುಂದೆ ಇರಬಾರದು ನಿಜಶರಣರಿಗೆ ನಡೆ ನೀನು. ಕಪ್ಪಡಿಯ ಸಂಗಯ್ಯನಲ್ಲಿ ಒಡಗೂಡು. ಉಳುವೆಯ ಮನೆಯಲ್ಲಿ ನಿಜವನೈದುವ ನಡೆ. ಚನ್ನಬಸವಣ್ಣ ಮಹವನೊಡಗೂಡು ಮಡಿವಾಳಯ್ಯ ಸೊಡ್ಡಳಬಾಚರಸರು ಮೊದಲಾದ ಪ್ರಮಥರೆಲ್ಲರು ನಿಜವನೈದುವುದು. ನಿರ್ವಯಲ ಸಮಾಧಿಯಲ್ಲಿ ಬಗೆದು ಹೋಗಿ ಲಿಂಗದೊಳಗೆ ಹೊಗುವರೆಲ್ಲರು ನಡೆಯಿರಿ. ಕಾಯವೆರಸಿ ಕೈಲಾಸಕ್ಕೆ ಕಾಯ ಸಹಿತೈವುದು ನಿಮಗೆಲ್ಲರಿಗು ಉಪದೇಶ ಮಂತ್ರ ತಪ್ಪದು ನಮಗೆ ಕದಳಿಯಲ್ಲಿ ಹೊಕ್ಕು ನಿಜದಲ್ಲಿ ಒಡಗೂಡುವ ಪರಿಣಾಮವಿದು. ನಮ್ಮ ಗುಹೇಶ್ವರ ಲಿಂಗದಾಣತಿ ನಿಮಗೆಲ್ಲರಿಗೂ. ॥೧॥

ಇಂತು ಪ್ರಭುದೇವರು ಬಸವರಾಜದೇವರು ಮೊದಲಾದ ಅಸಂಖ್ಯಾತರೆಲ್ಲಕ್ಕೆ ನಿಜಸಮಾಧಿಯ ಹರಿವಂ ನಿರೂಪಿಸಿ ಬೀಳ್ಕೊಂಡು ಕಲ್ಯಾಣಮಂ ಪೊರಮಟ್ಟು ಶ್ರೀಪರ್ವತಕ್ಕೆ ಬಿಜಯಂಗೈವುತ್ತಿರಲಲ್ಲಿ ಗೋರಕ್ಷನೆಂಬ ಸಿದ್ಧನಂ ಕಂಡು, ಸಂಭಾಷಣೆಯಂ ಮಾಡಿ, ಅವನ ವಜ್ರದೇಹಮಂ ಅಸಿತಾಳ ಪತ್ರದಿಂ ಹೊಯಿದು ನೋಡಿ, ಪರೀಕ್ಷೆಯಂ ಕೊಂಡು ನುಡಿವ ಪ್ರಸ್ಥಾವದ ವಚನ॥

ಹಿಂದನರಿಯದುದು ಮುಂದನೇನಬಲ್ಲುದೆ? ಉದಯ ಮುಖದಲ್ಲಿ ಹುಟ್ಟಿದ ಪ್ರಾಣಿಗಳು ಅಸ್ತಮಾನಕ್ಕೆ ಅಳಿದರಲ್ಲ. ಅಂದಂದಿನ ಘಟಜೀವಿಗಳು ಬಂದ ಬಟ್ಟೆಗೆ ಹೋದರು. ಗುಹೇಶ್ವರ ಲಿಂಗವು ಆರಿಗೆಯೂ ಇಲ್ಲವಯ್ಯ. ॥೨॥

ಮತ್ತಂ, ಅಮೃತ ಸೇವನೆಯ ಮಾಡಿ, ಆಪ್ಯಾಯನ ಘನವಾಯಿತ್ತ ಕಂಡೆ. ಪರುಷವೇದಿಯ ಸಾಧಿಸಹೋದರೆ ದಾರಿದ್ರ ಘನವಾಯಿತ್ತ ಕಂಡೆ. ಮರುಜೀವಣಿಯ ಹಣ್ಣ ಮೆದ್ದು ಮರಣವಾಯಿತ್ತ ಕಂಡೆ. ಇವನೆಲ್ಲವನು ಸಾಧಿಸಹೋದರೆ ಏನು ಇಲ್ಲದಂತಾಯಿತ್ತು. ನಾನು ನಿಜವ ಸಾಧಿಸಿ ಬದುಕಿದೆನು ಗುಹೇಶ್ವರ ॥೩॥

ಮತ್ತಂ, ಧರೆಯ ಮೇಲುಳ್ಳ ಅರುಹಿರಿಯರೆಲ್ಲ ಮರುಳುಗೊಂಡು ಆಡುತ್ತಿದ್ದಾರೆ ನೋಡಾ. ಮಂಜಿನ ಮಡಕೆಯೊಳಗೆ ನಿರಂಜನೆಯ ಭಾಂಡವ ತುಂಬಿ ಅಂಜದೆ ಪಾಕವ ಮಾಡಿಕೊಂಡುಂಡು ಭಾಂಡವ ಮಾರುತ್ತಿಪ್ಪರು ನೋಡಾ. ಸಂಜೀವನೆಯ ಬೇರ ಕಾಣದೆ ಮರಣಕ್ಕೊಳಗಾದರು ಗುಹೇಶ್ವರನನರಿಯದ ಭವಭಾರಕರೆಲ್ಲರು. ॥೪॥

ಮತ್ತಂ ನಾರು ಬೇರಿನ ಕುಟಿಲ ಕುಹಕದ ಕಪಟ ಯೋಗವಲ್ಲಿದು ನಿಲ್ಲಿರೊ? ಕಾಯ ಸಮಾಧಿ ಕರಣ ಸಮಾಧಿ ಜೀವಸಮಾಧಿ ಯೋಗವಲ್ಲಿದು ನಿಲ್ಲಿರೊ ನಿಜ ಸಹಜ ಸಮಾಧಿ ಗುಹೇಶ್ವರಾ. ॥೫॥

ಹೀಗೆಂದು ಪ್ರಭುದೇವರು ಆತನ ಕಾಯ ಸಿದ್ಧಿ ಮೊದಲಾದ ಸಿದ್ಧಿಗಳಂ ಆತನ ಭಿನ್ನ ಯೋಗಾಭ್ಯಾಸಮಂ ಜರಿಯಲವಂ ಬಿಟ್ಟು ಉಪದೇಶವಂ ಪಡೆದು ಬಿನ್ನೈಸುವ ಪ್ರಸ್ತಾವದ ವಚನ ॥

ರಸವಾದಂಗಳ ಕಲಿತಲ್ಲಿ ಲೋಹಸಿದ್ಧಿಯಲ್ಲದೆ ರಸಸಿದ್ಧಿಯಾದುದಿಲ್ಲ. ನಾನಾ ಕಲ್ಪ ಅದೃಶ್ಯ ಕರಣಂಗಳ ಕಲಿತಲ್ಲಿ ಕಾಯಸಿದ್ಧಿಯಲ್ಲದೆ ಆತ್ಮಸಿದ್ಧಿಯಾದುದುಂಟೆ? ನಾನಾ ವಾಗ್ವಾದಂಗಳಿಂದ ಹೋರಿ ಮಾತಿನ ಮಾಲೆಯಾಯಿತ್ತಲ್ಲದೆ ಆತ್ಮ ನಿಹಿತ ವಾದುದಿಲ್ಲ. ನೀ ನಾನೆಂದಲ್ಲಿ ನೀನು ನಾನಾದೆಯಲ್ಲದೆ ನಾನು ನೀನಾದುದಿಲ್ಲ. ಗೋರಕ್ಷ ಪಾಲಕ ಮಹಾಪ್ರಭು ಸಿದ್ಧ ಸೋಮನಾಥ ಲಿಂಗವಾದೆಯಲ್ಲದೆ ಲೀಯುವಾಗಿ ಆ ಲಿಂಗವೆಯಾದುದಿಲ್ಲ ॥೬॥

ಮತ್ತಂ, ಕುಂಡಲಿ ಎಂಬ ಆಧಾರದಲ್ಲಿ ಜಲತೇಜವೆಂಬ ವಾಯುವೆಂಬ ತ್ರಿವಿಧ ಕೂಡಿ ಕಮಂಡಲ ಹುಟ್ಟಿ ಅವಕ್ಕೆ ಬಾಯಿ ಮೂರು, ಹಿಡಿಯಾರು, ಜುಳಿವಂದರಲ್ಲಿ ಉದಕವ ಕೊಳುತ್ತಿರಲಾಗಿ ಆ ಅಸುವಿನ ತೃಷೆಯಡಗಿ ಬಯಕೆ ಸಲೆ ಬತ್ತಿದಲ್ಲಿ ಮಹಾಗಣನಾಥನ ಐವತ್ತೆರಡು ಸರ ಹರಿದವು ಮೂವತ್ತಾರು ಮಣಿ ಕೆಟ್ಟವು ಇಪ್ಪತ್ತೈದು ಮಣಿ ಪುಂಜವಾಯಿತ್ತು. ಆರು ನಾಯಕ ರತ್ನವೆಲ್ಲಿ ಅಡಗಿತ್ತೆಂದರಿಯೆ. ಮೂರು ರತ್ನವ ಕಂಡೆ. ಒಂದು ಉರಿವುದು. ಒಂದು ಉಲಿವುದು. ಒಂದು ಬೆಳಗು ನಂದಿಹುದು. ಇಂತೀ ತ್ರಿವಿಧಾಂಗವ ಕಂಡು ಈ ಅಂಗದ ಮಣಿಯು ಒಂದೊಂದ ಪವಣಿಸಲರಿಯದೆ, ಈ ದಿನಮಣಿಯ ವಿಕಳವ ತೋರಿಸಾ ಗೋರಕ್ಷ ಪಾಲಕ ಮಹಾಪ್ರಭು ಸಿದ್ಧ ಸೋಮನಾಥ ಲಿಂಗವೆ ॥೭॥

ಹೀಗೆಂದು ಗೋರಕ್ಷಕನು ಬಿನ್ನೈಸಲು, ಇದಕ್ಕೆ ಪ್ರಭುದೇವರು ನಿರ್ವಯಲ ಸಮಾಧಿಯ ಭೇದವ ನಿರೂಪಿಸುವ ಪ್ರಸ್ಥಾವದ ವಚನ. ॥

ಅರಿವರತು ಬೆರಗು ಹತ್ತಿತ್ತೆಂಬ ಜ್ಞಾನವಿದೆನೋ? ನಾಹಂ ವೆಂಬಲ್ಲಿ ತಾನಾರೊ? ಕೊಹಂ ವೆಂಬಲ್ಲಿ ಮುನ್ನಾರೋ? ಪರಬ್ರಹ್ಮಸೋಹಂ ವೆಂಬಲ್ಲಿ ಮುನ್ನ ತಾನೆ ತಾನಾಗಿರ್ದ ಚಿದೋಹಂ ವೆಂಬ ಹಮ್ಮಿನ ಭವಮಾಲೆ ಇದೇನೋ? ನಿಃಶಬ್ದ ಬ್ರಹ್ಮ ಮುಚ್ಯತೆ ಎಂಬ ಶಬ್ದವಿಡಿದು ಬಳಲುವ ಕಾರಣವಿದೇನೊ ಗುಹೇಶ್ವರಾ. ॥೮॥

ಹೀಗೆಂದು ಪ್ರಭುದೇವರು ನಿರೂಪಿಸಲು, ಇದಕ್ಕೆ ಗೋರಕ್ಷನು ಲಿಂಗಾಂಗ ಸಂಬಂಧದ ಕೃತನಿಶ್ಚಯವನ್ನೈದಿದ ಪ್ರಸ್ಥಾವದ ವಚನ. ॥

ನಾ ನಿನ್ನ ಕೇಳಿಹೆನೆಂದಡೆ ನಾನಂಗಿ ನೀ ನಿರಂಗಿ, ನಾ ನಿನಗೆ ಹೇಳಿಹೆನೆಂದಡೆ ನಾ ಸಂಗಿ ನೀ ನಿಸ್ಸಂಗಿ, ನಿನ್ನಂಗ ಎನ್ನಂಗದಲ್ಲಿ ಪ್ರತಿಷ್ಠಿಸಿ ನಿನ್ನ ಅರಿವು ಎನ್ನ ಆತ್ಮದಲ್ಲಿ ನಿಂದು ಅರಿವನ್ನಕ್ಕ ನನಗು ನಿನಗು ತತ್ತುಗೊತ್ತು ಗೋರಕ್ಷ ಪಾಲಕ ಮಹಾಪ್ರಭು ಸಿದ್ಧ ಸೋಮನಾಥ ಲಿಂಗವು ಸರಿಯಹುದು ಗುಹೇಶ್ವರಾ. ॥೯॥

ಮತ್ತಂ, ಅರಗಿನ ತೇಜಿಯ ಮೇಲೆ ಉರಿಯ ಹಿರಿಯರಸು ಮೂರ್ತಿಗೊಂಡು, ಮಂಜಿನ ಪರಿವಾರ ಸಂದಣಿಸಿ ಸಂತೈಸಿ ಅವರಂಗಕ್ಕೆ ಬಿಸಿಲಿಂಗದ ಜೋಡ ತೊಡಿಸಿ ಆ ಚತುರಂಗದ ಮೇಲೆ ಪಶುತಮನೆಂಬ ಖಂಡೆಯವ ಪಿಡಿದು ಚಂದ್ರಿಕಾ ಕಿರಣದ ಮೇಲೆ ಅಂಗವಿಸಿ ಏರಲಾಗಿ

ಘಾಜು ಬೆದರಿತ್ತು. ಊರರಸು ಎತ್ತಿದ ಖಂಡೆಯುವ ವರುಣನ ಕಿರಣದೊಳಗಡಗಿತ್ತು. ಮಂಜಿನ ಪರಿವಾರ ಆ ರಂಜನೆಯೊಳಗೆ ಬಯಲಾಯಿತ್ತು. ಉರಿಯರಸು ವಾಯುವಿನ ಸಿರಿಯೊಳಗಾದ. ಅರಗಿನ ಅಶ್ವ ಅರಸಿನ ತೊಡೆಯೊಳಗೆ ಹರಿಯಿತ್ತು. ಇಂತೀ ದೊರೆಗೆ ಆರಿದಿಲ್ಲವೆಂದು ಗೋರಕ್ಷ ಪಾಲಕ ಪ್ರಭು ಸಿದ್ಧ ಸೋಮನಾಥ ಲಿಂಗಕ್ಕೆ ಇದಿರಿಲ್ಲ ಎನುತಿರ್ದೆನು ||೧೦||

ಇಂತು ಪ್ರಭುದೇವರು ಗೋರಕ್ಷಂಗೆ ಲಿಂಗಾಂಗ ಸಂಬಂಧವ ಬೋಧಿಸಿ ಅವನಂ ಬೀಳ್ಕೊಂಡು ಕದಳಿಯ ಮುಂಬಾಗಿಲಲ್ಲಿ ನಿಂದ ಪ್ರಸ್ಥಾವದ ವಚನ. ||

ಕಾಯವೆಂಬ ಕದಳಿಯ ಹೊಕ್ಕು ಪ್ರಾಣವೆಂಬ ಗಂಹರದೊಳಗೆ ಸಕಲೇಂದ್ರಿಯವೆಂಬ ಕೋಣೆ ಕೋಣೆಗಳಲ್ಲಿ ತಿರುಗಾಡುತ್ತ ಬರಲಾಗಿ ಮೇರು ಮಂದಿರದ ತ್ರಿಕೋಣೆಯಲ್ಲಿ ಬೆಳಗಾಯಿತ್ತು. ಗುಹೇಶ್ವರ ಲಿಂಗವೆಂಬುದು ರೂಪಾಯಿತ್ತು. ||೧೧||

ಇಂತು ತಮ್ಮ ನಿಜವನರುಹಿದ ಪ್ರಭುದೇವರು ಆ ಕದಳಿಯ ಹೊಕ್ಕು ನಿರವಯದೊಳು ನಿಜ ನಿವಾಸಿಯಾಗಿರ್ದ ಪ್ರಸ್ಥಾವದ ವಚನ.

ಕಾಯವೆಂಬ ಮಹಾ ಕದಳಿಯ ಗೆಲಬಲ್ಲವರಾರನು ಕಾಣೆನು. ಸಂಸಾರವೆಂಬ ಸಪ್ತಸಮುದ್ರವ ಬಳಸಿ ಬಂದಿಪ್ಪ ಉಭಯವೆಂಬ ಮಹಾರಣ್ಯದೊಳು ಪಂಚೇಂದ್ರಿಯವೆಂಬ ವಿಷದ ಮಳೆ ಸುರಿವುತ್ತಿಪ್ಪದು. ಕೋಪವೆಂಬ ಪೆಬ್ಬುಲಿ ಮೊರೆವುತ್ತಿಪ್ಪದು. ಅಷ್ಟಮದಗಜಂಗಳು ಬೀದಿವರಿವುತ್ತಿಪ್ಪವು. ಕಾಮವೆಂಬ ಮೂಗಂಬಿನ ಸೊನೆ ಸುರಿವುತ್ತಿಪ್ಪದು. ಮತ್ಸರವೆಂಬ ಮಹ ಸರ್ಪಂಗಳು ಕಿಡಿಯನುಗುಳುತ್ತಿರ್ಪವು. ಆಸೆ ಎಂಬ ಪಾಪಿಯ ಕೂಸು ಹಿಸಿಹಿಸಿದು ತಿನುತ್ತಿರ್ಪುದು. ತಾಪತ್ರಯವೆಂಬ ಕೆಂಡದ ಮಳೆ ಅಡಿ ಇಡಬಾರದು. ಅಹಂಕಾರವೆಂಬ ಗಿರಿಗಳು ಅಡ್ಡಬಿದ್ದಿಪ್ಪವು. ಪಂಚಭೂತಂಗಳೆಂಬ ಭೂತಂಗಳ ಭಯ ದಿಟ್ಟಿಸಬಾರದು. ಮಾಯೆ ಎಂಬ ರಕ್ಕಸಿ ಹಸಿಯ ತಿನುತಿಪ್ಪಳು. ವಿಷಯವೆಂಬ ಕೂಪವ ಬಳಸಬಾರದು. ಮೋಹವೆಂಬ ಬಳ್ಳಿ ಕಾಲ ಕುತ್ತಬಾರದು. ಲೋಭವೆಂಬ ಮಸದಡ್ಡಾಯುಧವನೊರೆಯನುಚ್ಚಬಾರದು. ಇಂತಪ್ಪ ಕದಳಿಯ ಹೊಗಲರಿಯದೆ ದೇವ ದಾನವ ಮಾನವರೆಲ್ಲರು ಮತಿಗೆಟ್ಟು ಮರುಳಾಗಿ ಹೊರೆದೆಗೆದು ಓಡಿದರು. ಆಂಗಾಲ ಕಣ್ಣವರು ಮೈಯ್ಯೆಲ್ಲ ಕಣ್ಣವರು

ತಲೆ ಬಾಲಗೆಟ್ಟರು. ನಾನೀ ಕದಳಿಯ ಹೊಕ್ಕು ಹೋಯಿದಾಡಿ ಮುಳ್ಳು ಮಸೆಯುಟ್ಟದೆ ಕದಳಿ ಒರೆದು ಗೆಲಿದುತ್ತರಿಸಿ ಗುಹೇಶ್ವರನೆಂಬ ಲಿಂಗದ ನಿಜಸಮಾಧಿಯಲ್ಲಿ ನಿಂದು ಪರಪಶನಾಗಿ ನಿರಾಳಕೆ ನಿರಾಳವಾಗಿದ್ದೆನಯ್ಯಾ॥೧॥

ಇಂತು ಪ್ರಭುದೇವರು ನಿಜಪದವನೈದಲು ಬಸವರಾಜದೇವರು ಸ್ತುತಿಸಿದ ವಚನ.॥

ಲಿಂಗ ಗಂಭೀರ ಗಮನಗೆಟ್ಟುದಲ್ಲ. ಜಂಗಮ ಗಂಭೀರ ಸುಳುಹುಗೆಟ್ಟುದಲ್ಲ. ಪ್ರಸಾದ ಗಂಭೀರ ರೂಪುಗೆಟ್ಟುದಲ್ಲ. ಆಚಾರ ಗಂಭೀರ ಅವಯವಗೆಟ್ಟಿತಲ್ಲ. ಜ್ಞಾನಗಂಭೀರ ನಡೆಗೆಟ್ಟಿತಲ್ಲ. ಕೂಡಲಸಂಗಮದೇವರಲ್ಲಿ ಪ್ರಭುದೇವರು ನಿಜವನೈದಲು ಸಂಗನಬಸವಣ್ಣನ ಪ್ರಾಣ ಒಡನೆ ಬಳಿಸಂದಿತಲ್ಲಾ. ॥೧೩॥

ಚಿಕ್ಕದಣ್ಣಾಯಕರ ವಚನ.॥

ಎನ್ನ ಅನುಭಾವದಗಮ್ಯವೆ, ಎನ್ನರುಹಿನ ವಿಶ್ರಮವೆ, ಎನ್ನ ಭಾವದ ಜಯಕೆಯೆ, ಎನ್ನ ಜೀವದ ನಿಲವೆ, ಎನ್ನ ಪರಿಣಾಮದ ಮೇರುವೆ, ಎನ್ನ ಮನದ ಮಹಿಮನೆ, ನಿಮ್ಮ ಸುಳುಹು ಎತ್ತಲಡಗಿತ್ತು? ಎಲೆ ಲಿಂಗವೆ ನಿನ್ನ ನಾಮವೆತ್ತ ನಿರ್ನಾಮವಾಯಿತ್ತು? ಎಲೆ ಪರಮಗುರುವೆ ಕೂಡಲ ಚನ್ನಸಂಗಮನಲ್ಲಿ ಉರಿಯುಂಡ ಕರ್ಪುರದಂತಾದೆಯಲ್ಲ ಪ್ರಭುವೆ. ॥೧೪॥

ಮಡಿವಾಳ ಮಾಚಿ ತಂದೆಗಳ ವಚನ॥

ಅಷ್ಟ ತನುವಿನ ನಿಷ್ಠಾಪರವ ಬಿಟ್ಟು ಬಟ್ಟ ಬಯಲಲ್ಲಿ ನಿಂದ ನಿಜವ ನೋಡಾ. ಹತ್ತೆಂಬ ಪ್ರಾಣವ ಸುತ್ತಿ ಸುಳಿಯಲೀಯದೆ ಒತ್ತಿ ಸುಟ್ಟು ಸಯವಾದ ಘನ ಚೈತನ್ಯವ ನೋಡಾ. ನಿಷ್ಠೆ ನಿಬ್ಬೆರಗು ತೊಟ್ಟು ಬಿಟ್ಟು ಸಚ್ಚಿದಾನಂದವಾದ ಪರಿಯ ನೋಡಾ. ಕಲಿದೇವರ ದೇವ ಪ್ರಭುದೇವರ ನಿಲವಿಂಗೆ ನಮೋ ನಮೋ ಎನುತಿರ್ದೆನು ॥೧೫॥

ಸೊಡ್ಡಳ ಬಾಚರಸರ ವಚನ॥

ನಿಜತತ್ವದ ನಿರ್ವಯಲು ನಿರವಯವಾಯಿತ್ತು. ನೆನೆವರ ಪರುಷ ಘನವನೊಡಗಲಸಿತ್ತು. ಭಕ್ತರ ಭಾಗ್ಯ ಮುಕ್ತಿಯನೈದಿತ್ತು. ಬಸವಣ್ಣ ಚನ್ನಬಸವಣ್ಣನ ಮಹಾಮನೆಯಲ್ಲಿ ಮಹಾದಾನಿ ಸೊಡ್ಡಳನ ಶರಣ ಪ್ರಭುದೇವರು ನಿರವಯಲ ಬೆರಿಸಲೊಡನೆ ಸತ್ಯಲೋಕದ ಬಾಗಿಲ ಕದ ತೆರೆಯಿತ್ತು ॥೧೬॥

ಹೀಗೆಂದು ಸೊಡ್ಡಳ ಬಾಚರಸರು ತಾವು ಲಿಂಗೈಕ್ಯವಾಗಲು, ಬಸವರಾಜದೇವರು ನಿರೂಪಿಸಿದ ಪ್ರಸ್ಥಾವದ ವಚನ॥

ಎಮ್ಮವರಿಗೆ ಸಾವಿಲ್ಲ. ಎಮ್ಮವರು ಸಾವನರಿಯರು. ಸಾವೆಂಬುದು ಸಾವಲ್ಲ. ಲಿಂಗದಲ್ಲಿ ಉದಯವಾದ ನಿಜೈಕ್ಯರಿಗೆ ಆ ಲಿಂಗದಲ್ಲಿ ಅಲ್ಲದೆ ಬೇರೆ ಮತ್ತೊಂದೆಡೆ ಇಲ್ಲ. ಕೂಡಲ ಸಂಗಮದೇವರ ಶರಣ ಸೊಡ್ಡಳ ಬಾಚರಸನು ನಿಜಲಿಂಗದ ಒಡಲೊಳಗೆ ಬಗೆದು ಹೊಕ್ಕಡೆ ಉಪಮಿಸಬಲ್ಲವರ ಕಾಣೆನು ||೧೭॥

ಇಂತು ಸೊಡ್ಡಳಬಾಚರಸರ ಲಿಂಗೈಕ್ಯವ ಬಸವರಾಜದೇವರು ಕೊಂಡಾಡಿ ಮತ್ತಂ ಬಸವರಾಜದೇವರು ಹಳ್ಳಯ್ಯ ಮಧುವಯ್ಯಗಳು ಪರಮ ಹರುಷದೊಳು ಪ್ರವರ್ತಿಸಲು ಬಿಜ್ಜಳನು ಹರಳಯ್ಯ ಮಧುವಯ್ಯಗಳ ಚರಿತ್ರ ನೀತಿಯಲ್ಲೆಂದು ಬಗೆದು ಬಸವೇಶ್ವರನೊಳು ಮಥನಿಸಲು, ಬಹುವಿಧದ ದೃಷ್ಟವ ಕುಡಲು, ನಂಬುಗೆ ಮನಕ್ಕೆ ಸಾಲದೆ ಅವರ ಕರೆಸಿ ಕಣ್ಣ ತೆಗೆಯಿಸಲು, ಬಸವರಾಜದೇವರು ಹರಳಯ್ಯ ಮಧುವಯ್ಯಗಳ ಕಂಗಳ ಪಡೆಯಲವರು ಶಿವನೊಳೇಕಾರ್ಥವಾಗಲು, ಆ ಬಸವರಾಜದೇವರು ಶಿವಭಕ್ತ ದ್ರೋಹಿಯಹ ಬಿಜ್ಜಳನ ಸಂಹರಿಸಿ, ನನ್ನಿಯಿಂ ಮೆರೆ ಎಂದು ಜಗದೇವಂಗೆ ಬೆಸನಿತ್ತು ಲೋಕಪಾಲಕನ ನೊಸಲ ಬರಹ ತೊಡೆಯಲೊಡನೆ ಕೂಡಲಸಂಗಮದೇವರು ತಮ್ಮ ಕವಳಿಗೆಯ ತೊಡೆವರೆಂದು ಶರಣ ಜನಂಗಳೊಡನೆ ಬಸವರಾಜದೇವರು ನಿರೂಪಿಸುವ ಪ್ರಸ್ಥಾವದ ವಚನ॥

ಅರಸು ವಿಚಾರವು ಸಿರಿಯು ಶ್ರಿಂಗಾರವು ಸ್ಥಿರವಲ್ಲ ಕೇಳಿರಿ. ಮರ್ತ್ಯದೊಳಗೆ ಕೆಟ್ಟಿಹ ಕಲ್ಯಾಣ ಹಾಳಹುದು. ಕಲ್ಯಾಣ ಲೋಕವರಿಯಲು ಶಿವಚಾರದಭಿಮಾನದಲ್ಲಿ ಜಗದೇವ ಮೊಲ್ಲೆಯ ಬೊಮ್ಮಣ್ಣಗಳ ಕೈಯ್ಯಲ್ಲಿ ಮಡಿದಿಹನು. ಕೂಡಲ ಸಂಗಮದೇವರು ತಮ್ಮ ಕವಳಿಗೆಯ ತೊಡೆದಿಹರು ॥೧೮॥

ಮತ್ತಂ॥ ಕರ್ತನಟ್ಟಿದರೆ ಮರ್ತ್ಯದಲ್ಲಿ ಮಹಮನೆಯ ಕಟ್ಟಿದೆ. ಸತ್ಯಶರಣರಿಗೆ ತೊತ್ತು ಭೃತ್ಯನಾಗಿ ಸವೆದು ಬದುಕಿದೆನು ಕರ್ತನ ಬೆಸನು ಮತ್ತೆ. ಬರಲೆಂದಟ್ಟಿದರೆ ಕೂಡಲಸಂಗಮದೇವರ ನಿರೂಪಕ್ಕೆ ಮಹಾಪ್ರಸಾದವೆಂದೆನು. ॥೧೯॥

ಆ ಪ್ರಸ್ಥಾವದ ಪದಂಗಳು॥

೩೯೧

**ರಾಗ ಆಹರಿ.**

ಶರಣು ಶರಣಯ್ಯ ನೀವು ನಮ್ಮನೆಲ್ಲಿಗೆ ಕರೆದಿಹಿರಿ ಗುರುಲಿಂಗಜಂಗಮದ ಒಕ್ಕುಮಿಕ್ಕುದುಂಟೆ ನಮಗಲ್ಲಿ ॥ಪಲ್ಲ॥

ಪನ್ನಗಧರನೊಳಿಹ ಸ್ವಪ್ನವ ಚನ್ನಬಸವಣ್ಣ ಕಂಡನಲ್ಲ। ಇನ್ನೇನ ಮಾಡುವೆನಯ್ಯ ನಮ್ಮ ಶರಣರು ಕರೆದರು. ॥೧॥

ಆದಿಯಲಾಡಿದ ಮಾತನು ನೀವು ಆಗಳೆ ಮರೆದಿರಿ ಎಲೆ ಶಿವನೆ ಮೇದಿನಿಯೊಳು ಗುರುಲಿಂಗಜಂಗಮದ ಭಕ್ತಿಯ ಬೆಳಸೆಂದು ॥೨॥

ಉತ್ಸಹದಿಂದಲಿ ಅರ್ಚನೆಯ ಮಾಡಿ ಬಿಚ್ಚ ಬಿಸಾಟಂತಾಯಿತ್ರಯ್ಯ। ನಚ್ಚಿದೆವಯ್ಯ ನಿಮ್ಮ ಶರಣರ ಸೇವೆಯ ತಪ್ಪಿಸುವದು ಗುಣವೆ॥೩॥

ಕುಸುರಿಗೆಲಸವ ಮಿಸುನಿಯ ತೊಡಿಗೆಯ ಬಿಟ್ಟು ಬಿದ್ದು ಹೋದಂತೆ। ಪಶುಪತಿ ನಿಮ್ಮ ಶೇಷ ಪ್ರಸಾದ ಉಂಟೆ ನಮಗಲ್ಲಿ ॥೪॥

ಸುಚಿತ್ರದಲ್ಲಿ ಶಿವಲಿಂಗ ಪೂಜಿಸಿ ಜಿಚ್ಚು ಬೆರಿಸಿದಂತಾಯಿತ್ತಯ್ಯ। ನಚ್ಚಿದೆನಯ್ಯ ನಿಮ್ಮ ಶರಣರ ಸೇವೆಯ ತಪ್ಪಿಸುವರೆ ಗುರುವೆ ॥೫॥

ಚಿನ್ನಹ ಕೇಳಿ ಬಾಚಿರಾಜಯ್ಯ ಮೋಳಿಗೆಯ ಮಾರಯ್ಯ ಮಡಿವಾಳ ತಂದೆ ಚನ್ನಬಸವಣ್ಣನ ಕೈಯ್ಯಡೆಗೊಟ್ಟೆವು ನಿಮ್ಮ ಶಿಶುವೆಂದು ॥೬॥

ಮುಡಿಯಲಿ ವಾಳೆ ಕಿವಿಯಲಿ ಮೂಗುತಿ ಕೊರಳೊಳು ಕಂಕಣ ನಡುಪಟ್ಟೆರೆ ಕಾಲಿಲೆ ಬಳೆ ಹೆಡತಲೆಯಲಿ ಪದಕವು ಲೀಲೆಯಿಂದುಡ ಕೊಟ್ಟರೆಮ್ಮವರು ॥೭॥

ಬಿಡಲಾರೆನು ಮರ್ತ್ಯಲೋಕದ ರುಚಿಯನು ಬಿಡಲಾರೆನು ಗಣ ತಿಂಥಿಣಿಯ ಬಿಡಲಾರೆನು ಗುರುಲಿಂಗಜಂಗಮದ ಒಕ್ಕುಮಿಕ್ಕುದನು ॥೮॥

ಭಕ್ತರೆಲ್ಲರು ಮುತ್ತೈದೆರಾಗಿರಿ ನಿಮ್ಮ ಚಿತ್ತದ ಕಂದನ ಮರೆಯದಿರಿ ಮುಕ್ತಿಯನೀವುದು ಬಿಜ್ಜಳರಾಯಗೆ ಭಕ್ತರ ಹಸ್ತದಲ್ಲಿ ॥೯॥

ಹರಮುನಿದರೆ ಗುರು ಕಾವನಲ್ಲ ಗುರು ಮುನಿದರೆ ಹರಕಾವನಲ್ಲ ಹರಗಿಂದಲು ಗುರುವಿಂದಲು ಜಂಗಮವೆ ಅಧಿಕಾ ॥೧೦॥

ಶರಣ ಸಕಲ ಪುರಾತರ ಪಾದಕ್ಕೆ ಶರಣು ಪ್ರಭುವಿನ ಪಾದಕ್ಕೆ ಶರಣು ಕೂಡಲಸಂಗನ ಸಾವಕ್ಕೆ ಶರಣು ಶರಣು ತಂದೆ ॥೧೧॥

ಬಸವರಾಜದೇವರು ಅಸಂಖ್ಯಾತ ಮಹಾಗಣಂಗಳೊಡನೆ ತಮ್ಮ ಲಿಂಗೈಕ್ಯಮಂ ಬಿನ್ನಪಂಗೈದು ಕಳುಹಿಸಿಕೊಂಬ ಪ್ರಸ್ಥಾವದ ವಚನ॥

ಆನು ನಿಮ್ಮ ಬಂಟರ ಬಂಟ ನಾನೆಯ್ಯ. ಆನು ನಿಮ್ಮ ಲೆಂಕರ ಲೆಂಕ ನಾನೆಯ್ಯ. ಆನು ನಿಮ್ಮ ತೊತ್ತಿನ ಪಡುಗವ ತೆಗೆವ ಪಡಿದೊತ್ತಯ್ಯ. ಕೂಡಲಸಂಗನ ಶರಣರಿಗೆಲ್ಲ ಸಂಗನಬಸವನ ಬಿನ್ನಪವ ಕವಳಿಗೆ ಸಂದಿತ್ತು ನಿಮ್ಮ ನಿಜ ಪದದಲ್ಲಿ ಬೆರಸೆಂದು ಕೃಪೆಮಾಡಿರಯ್ಯ ॥೧॥

ಆನು ಮಾಡಿದ ತಪ್ಪನೆಣಿಸಿಹೆನೆಂದರೆ ಗಣನೆಇಲ್ಲ. ನಡೆದು ತಪ್ಪುವೆನು ನುಡಿದು ತಪ್ಪುವೆನು. ಮಾಡಿ ತಪ್ಪುವೆನು. ಕೂಡಿ ತಪ್ಪುವೆನು. ಅರಿದು ತಪ್ಪುವೆನು. ಮರೆದು ತಪ್ಪುವೆನು. ಎನ್ನ ತಪ್ಪನೊಪ್ಪವ ಮಾಡಿಕೊಂಬುದಲ್ಲದೆ ಚಿತ್ತಕ್ಕೆ ತರಲಾಗದು. ಕೂಡಲಸಂಗಮದೇವಯ್ಯನೆಂಬ ಗಂಡನೆನ್ನ ಬೆರಿಸಬೇಕೆಂದು ಕರೆಯಲಟ್ಟಿದನು ಶಿವಶರಣರೆಲ್ಲರಿಗೆ ಶರಣೆಂದು ಬೀಳುಕೊಂಬ ತವಕದಲ್ಲಿದ್ದೆ. ॥೨॥

ಆ ಪ್ರಸ್ಥಾವದ ಪದಂಗಳು ॥

ಶರಣು ಶರಣು ಕೂಡೆ ಶರಣು ಶರಣೆನು ತಿದ್ದೆನೈಯ್ಯ ಅಚಲವಪ್ಪ ಲಿಂಗವನೊಲಸಿದ ಶರಣರಿಗೆ ಶರಣು ॥ಪದ॥

ಹಸ್ತ ತಾಯಿ ದೃಷ್ಟಿ ತಂದೆ ಹುಟ್ಟಿದೆ. ನಾನು ಅಯೋನಿಯಲಿ ಕಟ್ಟಿದ ಕಂಕಣವ ಗುರು ಸಾಕ್ಷಿಯಾಗಿ ಶಿವನೆ ಗಂಡನೆಂದು ॥೧॥

ತಂದೆ ತಾಯಿ ಬಂಧು ಬಳಗ ಶಿವಭಕ್ತರೆನ್ನವರು ಮನೆಗೂಡಿ ಕಳುಹಿ ನೀವು ಕೊಟ್ಟ ಗಂಡನ ಮನೆಗೆ ॥೨॥

ಮದುವೆ ಎಂದು ನಮ್ಮವರು ಹುಟ್ಟಗೆಯ ನುಡಿಸಲು ಹುಟ್ಟಿದೆ ಹರಿದು ಅರಿವೆಯಾಗಿ ಸ್ವತಂತ್ರ ಶೀಲರು ಕೊಟ್ಟ ಅರುವೆಯ ಮರೆಯದಿರೆಂದು ॥೩॥

ಹಿಂದಣ ಭವಮಾಲೆ ಹಿಂಗಿತ್ತು. ಎನಗೆ ನಿಮ್ಮ ಕಾರುಣ್ಯ ಪ್ರಸಾದದಿಂದ ಮರಳಿ ಭವವಿಲ್ಲ ನೀವೆ ಬಲ್ಲಿರಿ ನಿಮ್ಮ ಕಂದನನೂ ॥೪॥

ಮುಚ್ಚಿದ ಬಾಯಿ ಮುಗಿದ ಕರವು ನುಡಿಯಲಮ್ಮೆನು ಪ್ರತಿಶಬ್ದವನು ನೊಸಲು ಶರಣರ ಪಾದದಿಂದಗಲದಿಪ್ಪದಾಗಿ ॥೫॥

ಹಲವು ಪರಿಯಿಂದ ಗಂಡನನೊಲಿಸಿ ಕೂಡಿದ ಕೂಟದ ಸ್ನೇಹ ವನು ಹೇಳಲಿಲ್ಲ ಕೇಳಲಿಲ್ಲ ಶಬುದಕಿಂಬಿಲ್ಲವಾಗಿ ॥೬॥

ಶಬುದ ನಿಃಶಬ್ದವಾಯಿತ್ತು. ತಂದೆ ಕೂಡಲ ಸಂಗಯ್ಯನಲ್ಲಿ ಬೆರಸಿ ಮನವು ಅಲ್ಲಮ ಪ್ರಭುವಿನ ಪಾದದಲ್ಲಿ ಸಯವಾಯಿತ್ತಾಗಿ ॥೭॥

ಇಂತು ಬಸವರಾಜದೇವರು ಅಸಂಖ್ಯಾತ ಮಹಾಗಣಂಗಳ ಕೈಯ್ಯಲು ಬೀಳ್ಕೊಂಡು ತಮ್ಮ ಗೃಹೋಪಕರಣಂಗಳಂ ಲಿಂಗಜಂಗಮಕ್ಕೆ ಸೂರೆಗೊಟ್ಟು ಏಳುನೂರೆಪ್ಪತ್ತು ಮಹಾಗಣಂಗಳಿಗೆ ನಿಜಪದಪ್ರಾಪ್ತಿಯ ನಿರೂಪಿಸಿ ಕಳುಹಿ ತಮ್ಮ ಸಮಯಾಚಾರದ ಮೂವತ್ತಾರು ಸಾವಿರ ಜಂಗಮಮಂ ಚಿಕ್ಕದಣ್ಣಾಯಕರ ಕೈಯಲ್ಲಿ ಕೊಟ್ಟು ಸಕಲ ಶರಣರಗೂಡಿ ಕಟಕಮಂ ಪೊರಮಟ್ಟು ಕಪ್ಪಡಿಯ ಸಂಗಮೇಶ್ವರಂಗೆ ಎಯ್ದಿ ಪೋಗಲು ಆಗಳೆ ಬಿಜ್ಜಳನೈಶ್ವರ್ಯ ಹಾನಿಯಾಗೆ ಕಟಕದ ಭಾಗ್ಯವಳಿಯಿತ್ತು. ಧಾರುಣಿ ನಡುಗಿತ್ತು. ಕಾಗೆಗಳಿರುಳರಚಿದವು. ಹಗಲು ನರಿಗಳೂರೊಳ ಪೊಕ್ಕವು. ನಕ್ಷತ್ರ ಬಿದ್ದವು. ಕಲ್ಲ ಮಳೆ ಸುರಿದವು. ಮಹಾಚಂಡವಾಯು ಬೀಸಿತ್ತು. ಕೆಂಧೂಳಿದ್ದು ಹಗಲು ಮುಸುಕಿ ಮಂಜಿನ ಕತ್ತಲೆಯಾಗಿ ಗಗನದೊಳು ಭೀಕರವಾಗಿ ಬಿಜ್ಜಳನು ಶಿರವಿಲ್ಲದ ಹೆಣನ ಕಂಡ. ಪ್ರತಿಸೂರ್ಯ ಮೂಡಿದನು. ಇದರ ಮೇಲೇನಹುದೊ ಎನುತ್ತ ಜನರುಗಳು ಹೆದರಿ ಸಂವಾದಿಸುತ್ತಿರೆ ಇತ್ತಲಾ ಜಗದೇವನು ಮೊಲ್ಲೆಯ ಬೊಮ್ಮಯ್ಯನ ಕೂಡಿಕೊಂಡು ಬಸವರಾಜದೇವರಲ್ಲಿಗೆ ಬಂದು ಬೆಸನಾಂತುದಕ್ಕೆ ಇದೇ ಕಾಲವೆಂದು ಅತಿ ಪರಾಕ್ರಮದಿಂದೆ ಭಸ್ಮಾಂಗ ವಿಭೂತಿ ಶರಣಾಂಕಿತ ವೀರಾವತಾರದ ವೀರಭದ್ರರು ಕೈದುವಂ ಪಿಡಿದು ದಳದಳನೆ ಬಂದು ಐವತ್ತಾರು ದೇಶಾಧಿಪತಿಗಳಿಂದೋಲೈಸಿಕೊಳುತ್ತ ಇಪ್ಪತ್ತೆರಡು ವಿನಿಯೋಗಂಗಳಿಂದ ಗರ್ದುಗೆಯ ಮೇಲಿಹ ಬಿಜ್ಜಳನ ಕಾಣುತ್ತ ಆಯುಧವನುಚ್ಚಿ ಸಭೆಯಲ್ಲಿ ಝುಲ್ಲೆನಲು, ಬಿಜ್ಜಳನ ಕಾಯದಲ್ಲಿ ಒಂದೆರಡು ಮೂರು ಪೂರಾಯ ಗಾಯದೊಳಿರಿದು ಕೆಡಹಿ ಶಿವಭಕ್ತ ದ್ರೋಹಿಯ ಕೊಂದೆವಲಾ ಎಂದು ಉಬ್ಬುತ್ತ ಕೊಬ್ಬುತ್ತ ಬೊಬ್ಬೆ ಇಡುತ್ತ ವೀರಭದ್ರರು ಶಿವಲೋಕಕ್ಕೈದಿದರು. ಇತ್ತ ಬಸವರಾಜದೇವರು ಇನಿತಂ ಕೇಳಿ ಸಂತೋಷಿಸಿ ಕೂಡಲಿಗೆ ಬಂದು ಆ ಸಮಯದೊಳು ನೀಲಲೋಚನೆಯ ಕರೆದುಕೊಂಡು ಬನ್ನಿ ಎಂದು ಹಡಪದಪ್ಪಣ್ಣಗಳ ಕಳುಹಲು ಆ ಅಪ್ಪಣ್ಣಗಳು ಕಲ್ಯಾಣಕ್ಕೆ ಬಂದು ನೀಲಲೋಚನೆಯಮ್ಮನ ಮುಂದೆ ನಿಂದು

ನಮಸ್ಕರಿಸಿ ಲಿಂಗೈಕ್ಯವಾಗುವದಕ್ಕೆ ಬಸವರಾಜದೇವರು ನಿಮ್ಮ ಕೂಡಲಿಗೆ ಬರಹೇಳಿದರೆಂದು ಆ ಅಪ್ಪಣ್ಣಗಳೊಡನೆ ನೀಲಲೋಚನೆಯಮ್ಮನು ನಿರೂಪಿಸಿದ ಪ್ರಸ್ಥಾವದ ವಚನ ॥

ಇಪ್ಪೆಯ ಹೂವ್ವನನುಗೊಳಿಸಲು ಇಪ್ಪೆ ಹಿಪ್ಪೆಯಾಯಿತ್ತು. ಸರ್ಪನ ಶಿರ ಕಂಠದಲ್ಲಿ ಮೂಗುತಿಯ ಸರಗೊಳಿಸಿದೆನಯ್ಯ. ನಾವಿಲ್ಲಿದ್ದರೇನು? ನಾವಲ್ಲಿದ್ದರೇನು? ನಮ್ಮ ನಿಮ್ಮ ಸಂಸರ್ಗದಲ್ಲಿ ನಿರುಪಮಾಕಾರ ಮೂರ್ತಿಗಳಾಗಿ ನಿರವಯುವನೈದಿ ನಿಜ ಸುಖಿಗಳಾದೆನು. ಬಸವನಲ್ಲಿ ಎಮಗೆ ತೆರಹಿಲ್ಲವಯ್ಯ ಅಪ್ಪಣ್ಣ. ಭಾವಶೂನ್ಯಳು ನಾನಯ್ಯ ಸಂಗಯ್ಯ. ॥೪೦॥

ಮತ್ತಂ, ನಾನಾರ ಸಾರುವೆನೆಂದು ಚಿಂತಿಸಲೇತಕಯ್ಯ? ನಾನಾರ ಕೊಂಡುಪೆನೆಂದುಭ್ರಮೆ ಬಡಲೇಕಯ್ಯ? ನಾನಾರ ಇರವನರಿಯೆನೆಂದು ಪ್ರಳಾಪಿಸಲೇಕಯ್ಯ? ಪರಿಣಾಮ ಮೂರ್ತಿ ಬಸವನ ರೂಪು ಕರಸ್ಥಲದಲ್ಲಿ ಬೆಳಗಿದ ಬಳಿಕ ಸಂಗಯ್ಯನ ಹಂಗು ನಮಗೇತಕೆ ಅಪ್ಪಣ್ಣಾ? ॥೪೧॥

ಆ ಪ್ರಸ್ಥಾವದ ಪದಂಗಳು.

ರಾಗ ರಾಮುಕ್ರಿ.

ನೋಡು ನೋಡು ನೋಡು ಲಿಂಗವೆ ನೋಡು ಬಸವಯ್ಯನಾಟವಾ. ॥ಪಲ್ಲ॥

ಅಲ್ಲಿಗೆ ಎನ್ನನು ಬರಹೇಳಿದರಂತೆ, ಇಲ್ಲಿ ತಾವಿಲ್ಲವೆ ಸಂಗಯ್ಯನು ಅಲ್ಲಿ ಇಲ್ಲಿ ಎಂಬ ಉಭಯ ಸಂದೇಹವು ಬಲ್ಲ ಮಹಾತ್ಮರಿಗಿದು ಗುಣವೆ ॥೧॥

ಪೊಡವಿಯ ಭಕ್ತಗಣಂಗಳು ಸಹವಾಗಿ ಮಡಗಿದ ಶ್ರೀಗುರುಕರದಲ್ಲಿ ದೃಢಚಿತ್ತ ಕರಿಗೊಂಡು ಕೂಡಿಹೆನೆಂದರೆನ್ನೊಡೆಯ ಸಂಗಮನಾಥನೀತನಲ್ಲವೆ. ॥೨॥

ಸಂಗನಬಸವಣ್ಣನೆಂದನಿರೂಪಕ್ಕೆ ಹಿಂಗದೆ ಕರವೆತ್ತಿ ಮುಗಿವುತಲಿ ಸಂಗಮನಾಥನೆ ಈತನೆಂದನುತಲೆನ್ನಂಸೈಯ್ಯ ಲಿಂಗದೊಳಡಗುವೆ ॥೩॥

ಹೀಗೆಂದು ನೀಲಲೋಚನೆಯಮ್ಮನು ಹಡಪದಪ್ಪಣ್ಣಗಳ ಮರಳಿ ಕಳುಹಲು, ಅವರು ಬಂದು ಬಸವರಾಜದೇವರೊಡನೆ ದೇವಾ ಅವರು ತಮ್ಮ ಇಷ್ಟಲಿಂಗದೊಳಗೈಕ್ಯವಾಗಿಹೆವೆಂದರೆಂದು ಬಿನ್ನೈಸಲು, ಅದಕ್ಕೆ ಬಸವರಾಜದೇವರು ಒಡಂಬಟ್ಟು ಸಂಗಮೇಶ್ವರನಲ್ಲಿ ಉಪಾವಸ್ಥೆಯಂ ಮಾಡುವ ವಚನ. ॥

ನಾನಾ ಭವದುಃಖದಲ್ಲಿ ಹುಟ್ಟಿದ ಪ್ರಾಣಿಯನಿಲ್ಲಿಂಗೆ ತಂದೆ. ಇನ್ನು ಹುಟ್ಟಲಾರೆನು ಹೊಂದಲಾರೆನು. ಜನನಮರಣವೆಂಬೆರಡಕ್ಕೆ ಹೊರಗಾದೆನಯ್ಯ. ನೀವು ಹೇಳಿದ ಮಣಿಹವ ಮಾಡಿದೆ. ಇನ್ನು ನಿಮ್ಮೊಳಗೆ ಕೂಡಿಕೊಳ್ಳಾ ಕೂಡಲಸಂಗಮದೇವಾ. ॥೪೫॥

ಮತ್ತಂ, ಉರಿಯೊಳಗಣ ಕರ್ಪುರಕ್ಕೆ ಕರಿಯುಂಟೆ ಅಯ್ಯ? ಬಯಲ ಮರೀಚಿಯ ಜಲಕ್ಕೆ ಕೆಸರುಂಟೆ ಅಯ್ಯ? ವಾಯುವನಪ್ಪಿದ ಪರಿಮಳಕ್ಕೆ ನಿರ್ಮಾಲ್ಯ ಉಂಟೆ ಅಯ್ಯ? ನೀವು ನೆರೆ ಒಲಿದ ಬಳಿಕ ಎನಗೆ ಭವ ಉಂಟೆ? ಕೂಡಲಸಂಗಮದೇವ ನಿಮ್ಮ ಚರಣಕಮಲದೊಳಗೆ ಎನ್ನ ನಿಂಬಿಟ್ಟುಕೊಳ್ಳಯ್ಯ. ॥೪೬॥

ಮತ್ತಂ॥ ಬಸವರಾಜದೇವರು ನಿಮ್ಮ ಶರೀರದೊಳು ಆವ ಸ್ಥಾನವನು ಒಲ್ಲೆನು. ನಿಮ್ಮ ಹೃದಯ ಕಮಲದೊಳಿಂಬಿಟ್ಟುಕೊಳ್ಳಿ ಎಂದು ಅತ್ಯಂತ ಅವಸ್ಥೆಯಿಂ ಬಿನ್ನೈಸುವ ಪ್ರಸ್ತಾವದ ವಚನ ॥

ಶರಣ ಸನ್ನಿಹಿತನು ಐಕ್ಯವಾಹಲ್ಲಿ ಹರಿಬ್ರಹ್ಮಾದಿಗಳು ಮೊದಲಾದ ತ್ರಿತ್ರೀಸ ಕೋಟಿ ದೇವರ್ಕ್ಕಳು ಉಘೆ ಚಾಂಗು ಭಲಾ ಎಂದು ಸ್ತುತಿಸುತ್ತಿರಲು ಐಕ್ಯ ಬಸವಣ್ಣಂಗೆ ಠಾವಾವುದಯ್ಯ ಎಂದಡೆ ಅಂಗದ ಕಳೆಯಲ್ಲಿ ಬಲನೆ ಬ್ರಹ್ಮನ ಸ್ಥಾನ. ಎಡನೆ ನಾರಾಯಣನ ಸ್ಥಾನ ಒಲ್ಲೆನಯ್ಯ ಆ ಸ್ಥಾನಂಗಳನು. ಕೊರಳು ಗರಳದ ಸ್ಥಾನ, ಬಾಯಿ ಅಪ್ಪುವಿನ ಸ್ಥಾನ, ನಾಸಿಕ ವಾಯುವಿನ ಸ್ಥಾನ, ಕಂಗಳು ಅಗ್ನಿಯ ಸ್ಥಾನ, ಜಡೆ ಗಂಗಾದೇವಿಯ ಸ್ಥಾನ, ನೊಸಲು ಚಂದ್ರಮನ ಸ್ಥಾನ, ಹಿಂದು ಸೂರ್ಯನ ಸ್ಥಾನ, ಚರಣಂಗಳು ಅಷ್ಟದಿಕ್ಪಾಲಕರ ಸ್ಥಾನ, ಗುಹ್ಯ ಕಾಮನ ಸ್ಥಾನ, ಹಸ್ತಂಗಳು ತ್ರಿಶೂಲ ಕಪಾಲ ಖಟ್ವಾಂಗ ಡಮರುಗ ಸ್ಥಾನ, ಇಂತೀ ಎಲ್ಲ ಸ್ಥಾನಂಗಳನೊಲ್ಲೆನಯ್ಯ. ಹೃದಯ ಕಮಲದ ಅಂತರಾಳದ ಏಕ ಪೀಠದ ಸಿಂಹಾಸನದ ತೆರಹು ಗೊಡು ಕೂಡಲಸಂಗಮದೇವಾ ॥೪೭॥

ಹೀಗೆಂದು ಬಸವರಾಜದೇವರು ಅತ್ಯಂತ ಅವಸ್ಥೆಯಿಂ ಬಿನ್ನೈಸುತ್ತಿರಲು, ಮನ್ಮನದ ಮಧ್ಯದೊಳು ಪೊಕ್ಕು ಚಿದಾತ್ಮಲಿಂಗವು ಹೊಳೆದು ತೋರಿತ್ತಾಕ್ಷಣದಿ ಮುಗಿಲೊಳ್ಮಿಂಚು ಪೊರಪೊಣ್ಮುವಂತೆ ದಿನಮಣಿಯ ಕೋಟಿ ಪ್ರಭಾ ಪುಂಜದೊಬ್ಬುಳಿಯಾದ ಮೂಳ್ಕಿಯೋಳ್ಚಂದ್ರನ ಕೋಟಿ ತೇಜವನೊಳಕೊಳುತ್ತ ಮೂರ್ತಿಯ ಧರಿಸಿ ಆ ಸಂಗಮೇಶ್ವರನು ಜಂಗಮ

ಸ್ವರೂಪಿನಿಂದ ಬಂದು ಆ ಬಸವರಾಜದೇವರ ಬಿಗಿಬಿಗಿಯಪ್ಪಿಕೊಂಡು ಹೃದಯಕಮಲದೊಳಗಡಗಿಸಿಕೊಂಡು ಆ ಲಿಂಗದೊಳಾಮೂರ್ತಿಯಡಗಿದ ಪ್ರಸ್ಥಾವದ ವಚನ ॥

ಧರೆಯಾಕಾಶದ ನಡುವೆ ಒಂದು ಮಾಮರ ಹುಟ್ಟಿತ್ತು. ಆ ಮಾಮರಕ್ಕೆ ಕೊಂಬೆರಡು, ಎಲೆ ಮೂರು, ಮೂವತ್ತಾರು ಪುಷ್ಪ ಕಾಯಿ ಒಂದೆ ಹಣ್ಣು ರಸ ತುಂಬಿದಲ್ಲಿ ಏನೇನ ಕಾಣೆನು. ಎಲೆ ಉದುರಿದಡೆ ಹಣ್ಣು ತೊಟ್ಟಬಿಟ್ಟು ಬಿದ್ದಿತ್ತು. ಆ ಹಣ್ಣ ಪ್ರಭುದೇವರು ಆರೋಗಣೆಯ ಮಾಡಿ ನಿಜದಲ್ಲಿ ನಿರ್ವಯಲಾದರು. ಪ್ರಭುವಿನ ಕಾರುಣ್ಯ ಪ್ರಸಾದವ ನಾನು ಕೊಂಡೆನಾಗಿ ಕೂಡಲಸಂಗಮದೇವರು ಇತ್ತ ಬಾರೆಂದು ತಮ್ಮ ಹೃದಯಕಮಲದಲ್ಲಿ ಇಂಬಿಟ್ಟುಕೊಂಡರು. ॥೪೮॥

ಇಂತು ಬಸವರಾಜದೇವರು ತಮ್ಮೊಳಗೆ ಇಂಬಿಟ್ಟು ಗುರುಮೂರ್ತಿಯಾಕ್ಷಣದಲೆ ಸಾಕಾರವನುಳಿದು ನಿರ್ವಯಲಾಗಲು ಉಘೆ ಉಘೇ ಎನುತ್ತೆಲ್ಲೆಡೆಯೊಳು ಶಿವಭಕ್ತರ ಕೀರ್ತನೆಗಳ್ಮೊರೆಯೆ ಆ ಬಸವರಾಜದೇವರು ಗಾಳಿಯೊಳು ಸುಳಿಗಾಳಿ ಬೆರೆದಂತೆ ನಭದೊಳೆಸೆದ ತಟಿಲ್ಲತೆ ನಭದೊಳು ಹೊಡೆದಡಗಿದಂತೆ ಉದಕದಿಂದಾದ ವಾರಿಶಿಲೆ ಉದಕದೊಳಡಗಿದಂತೆ ಕುಸುಮ ಪರಿಮಳದಂತೆ ಪಾಲೋಳ್ಪಾಲಬೆರಸಿದಂತೆ ಚಂದ್ರನೋಳ್ಕಳೆ ಉದಯಿಸಿ ಮರಳಿ ಚಂದ್ರನೋಳ್ಬೆರಸಿದಂತೆ ಬಸವರಾಜದೇವರು ಸಂಗಮೇಶ್ವರನೆಂಬ ಗುರುಮೂರ್ತಿಯ ಹೃತ್ಕಮಲದಲ್ಲಿ ವಿಶ್ರಾಂತಿಯನೈದಿ ತದ್ಗುರುವೆ ತಾನಾಗಿ ಬೆರಸಲು ಇತ್ತ ನೀಲಲೋಚನೆಯಮ್ಮನವರು ಪ್ರಳಾಪಿಸಿದ ವಚನ ॥

ಆದಿ ಅನಾದಿಯ ತತ್ವವ ಭೇದಿಸಿಕೊಟ್ಟ ಗುರುವೆ, ಅಪ್ರಮಾಣದ ಬೆಳಗ ಭೇದಿಸಿ ಕೊಟ್ಟ ಗುರುವೆ, ಅಕಾರ ಉಕಾರ ಮಕಾರ ಕಳೆಯನರುಹಿಕೊಟ್ಟ ಗುರುವೆ ಇಷ್ಟ ಪ್ರಾಣ ಭಾವವಿದೆಂದು ತೋರಿದ ಗುರುವೆ, ನಿಜದರುಹನರುಹಿಸಿ ಕೊಟ್ಟ ಗುರುವೆ, ನಿರ್ಮಳ ಪ್ರಭೆಯ ತೋರಿದ ಗುರುವೆ, ನಿಜವನನುಭವಕ್ಕೆ ತಂದ ಗುರುವೆ, ನಿಮ್ಮ ಘನವ ಕಾಂಬ ಕಣ್ಣು ಕ್ರಮುಗೆಟ್ಟಿತ್ತು ಸಂಗಯ್ಯ; ಬಸವಯ್ಯನ ಪ್ರಭೆಯಲ್ಲಿ ಅಡಗಿತ್ತು. ॥೪೯॥

ಮತ್ತಂ॥ ಕಾಮಿತ ಸುಖವ ಕಂಗೊಳಿಸಿದ ಗುರುವೆ, ಕಲ್ಪಿತವ ನಷ್ಟವ ಮಾಡಿದ ಗುರುವೆ, ಎತ್ತಲಡಗಿದೆಯಯ್ಯ ಸುಖದುಃಖವನೊಂದು ರೂಪವ ಮಾಡಿದೆ ಗುರುವೆ ಎತ್ತಲಡಗಿದೆಯಯ್ಯ ಸಂಗಯ್ಯನ ಗುರುಬಸವಾ ॥೫೦॥

ಮತ್ತಂ॥ ಮಧ್ಯದ ಕಲ್ಪ ನಾಸ್ತಿಯಾಯಿತ್ತೇ ಬಸವ? ಪ್ರಾಣ ಪ್ರಸಾದವಲ್ಲಿ ಅಡಗಿತ್ತೆ ಬಸವ? ಭಕ್ತಿ ಬಯಲಾಯಿತ್ತೇ ಬಸವ? ಭಾವ ನಿರ್ಭಾವವಾಯಿತ್ತೆ ಬಸವ? ಕಲ್ಪಿತ ಗುಣ ನಷ್ಟವಾಯಿತ್ತೆ ಬಸವ? ಮನೋ ಮುಕ್ತಿಯಾಯಿತ್ತೆ ಸಂಗಯ್ಯನ ಗುರುಬಸವಾ ॥೫೧॥

ಮತ್ತಂ॥ ಏನೇನು ಎನಲಿಲ್ಲ. ಎನ್ನ ಭಕ್ತಿಯಳಿದ ಭಾವಕ್ಕೆ ಇನ್ನೇನು ಎನಲಿಲ್ಲ. ಎನ್ನ ಪ್ರಾಣದ ಹಂಗು ಹರಿದ ಬಳಿಕ ಇನ್ನೇನು ಏನು ಎನಲಿಲ್ಲ. ಎನ್ನೈಕ್ಯದ ಸಮರಸ ಕೈಗೂಡಿದ ಬಳಿಕ ಇನ್ನೇನು ಏನು ಎನಲಿಲ್ಲ. ಎನ್ನಭಿಮಾನದ ಕರ್ತೃ ನಿರಾಳದಲ್ಲಿ ಸಂದ ಬಳಿಕ ಸುಯಿಧಾನ ಸುಯಿಧಾನವಾಯಿತ್ತಯ್ಯ ಸಂಗಯ್ಯ ॥೫೨॥

ಮತ್ತಂ, ಎನಗಿನ್ನೇನು ಎನ್ನೈಯ್ಯನೈಕ್ಯವ ನೈದಿದ ಬಳಿಕ? ಎನಗೆ ಕಾಮವಿಲ್ಲ. ಎನಗೆ ಪ್ರಾಣವಿಲ್ಲ. ಎನಗೆ ಹೃದಯದ ಹಂಗು ಹರಿದು ಪರಿಣಾಮ ಪ್ರಸಾದಿಯಾದೆನಯ್ಯ ಸಂಗಯ್ಯ ॥೫೩॥

ಹೀಗೆಂದು ನೀಲಲೋಚನೆಯಮ್ಮನು ಪ್ರಳಾಪಿಸುತ್ತಿಸಲು ಅದಕ್ಕೆ ಚೆನ್ನಬಸವರಾಜದೇವರ ವಚನ ॥

ಶ್ರೀಗುರು ತನ್ನ ಸಾಕಾರವ ಬಿಟ್ಟು ನಿರಾಕಾರವಾದರೆ ಸಂದೇಹಿಸಲಿಲ್ಲ. ಸಾಕಾರವಿಡಿದು ಉಪದೇಶವ ಕೊಟ್ಟು ಕಾಯ ಸಮರ್ಪಿಸಿಕೊಂಡು ಶುದ್ಧವ ಮಾಡಿದನು. ಪ್ರಾಣದಲಡಗಿ ಸಿದ್ಧವ ಮಾಡಿದನು. ಆತ್ಮಪದದಲ್ಲಿ ಬೆರಸಿ ಪ್ರಸಿದ್ಧವ ಮಾಡಿದನು. ಇಂತು ಅವಿರಳ ಗುರುತತ್ವ ಸಂಗನ ಬಸವಣ್ಣ ನಿನ್ನೊಳಗೆ ಪರಿಪೂರ್ಣ ಕಾಣಾ ಕೂಡಲ ಚನ್ನಸಂಗಮದೇವಾ ॥೫೪॥

ಮತ್ತಂ, ಜಂಗಮಮುಖದಲ್ಲಿ ಲಿಂಗ ಸರ್ವಾಂಗವಾಯಿತ್ತಾಗಿ ಆರೋಗಿಸಿ ಕೊಡುವುದು ನೋಡಾ. ಜಂಗಮದಾಪ್ಯಾಯನವೆ ಲಿಂಗದಾಪ್ಯಾಯನ ನೋಡಾ. ಜಂಗಮ ತೃಪ್ತಿಯೆ ನಿತ್ಯತೃಪ್ತಿ ನೋಡಾ. ಜಂಗಮವಾರೋಗಿಸಿಕೊಂಡು ಡಕ್ರನೆ ತೇಗಿದರೆ ಅಂಗ್ಯಯ್ಯಲೆರಗುವುದು ನೋಡಾ. ಜಂಗಮದ ಮುಖದಲು ತೃಪ್ತನಾದೆನೆಂದು ಬಾರೋ ಬಸವ ಎಂದು ಕೈವಿಡಿದು ತೆಗೆದಪ್ಪಿ ಮುದ್ದಾಡಿಸಿ ತರ್ಕೈಸಿಕೊಂಡು ನಿನ್ನ ಹೊರಗಿರಿಸಲಾರೆನೆಂದು ತನ್ನ ಹೃದಯ ಕಮಲದಲ್ಲಿ ಇಂಬಿಟ್ಟುಕೊಂಡ ಕೂಡಲ ಚನ್ನಸಂಗಯ್ಯಂಗೆ ಬಸವ ಪ್ರಾಣಲಿಂಗವಾದಾ ॥೫೫॥

ಇದಕ್ಕೆ ನೀಲಮ್ಮನ ವಚನ ॥

ಅಡವಿಯಲ್ಲಿ ಕಣ್ಣುಗೆಟ್ಟ ಪಶುವಿನಂತೆ ನಾನು ಪ್ರಳಾಪಿಸುತ್ತಿದ್ದೆನೈಯ್ಯ! ನಾನು ಕಡುದುಃಖದಿಂದ ಮರುಗಲು ಶರಣ ಚನ್ನಬಸವಣ್ಣನ ನರಿದು ಶಿವ ಶಿವ ಎಂಬ ಮಂತ್ರವನರುಹಿ ಅಳಲುವ ಬಳಲಿಕೆಯ ಕಳೆದ ನಯ್ಯ ಸಂಗಯ್ಯನಲ್ಲಿ ಚನ್ನಬಸವಣ್ಣಂಗೆ ನಮೋ ನಮೋ ಎನುತ್ತಿರ್ದೆನು. ॥೫೬॥

ಮತ್ತಂ, ನೀಲಲೋಚನೆಯಮ್ಮನ ಐಕ್ಯ ॥

ಎಲೆ ಅಯ್ಯ ಕರಸ್ಥಲ ಬಯಲಾಯಿತ್ತು. ಎನಗೆ ಕರಸ್ಥಲ ಮನಸ್ಥಲ ವಾಯಿತ್ತು ಸಂಗಯ್ಯ. ಬಸವ ಹೋದನತ್ತ ನಾನಡಗಿದೆನಯ್ಯ ನಿನ್ನತ್ತ॥೫೭॥

ಮತ್ತಂ, ನಿರ್ಮೂಲವಾಯಿತ್ತು. ಆಹಾ ನಿರಾಲಂಬವಾಯಿತ್ತು. ಆಹಾ ನಿರಾಕುಳವಾಯಿತ್ತು. ಪುಣ್ಯದ ಫಲ ತೋರಿ ಆಹಾ ಬಯಲನೆ ಕೂಡಿತ್ತು. ಬಯಲು ನಿರ್ವಯಲಾಯಿತ್ತು. ಆ ನಿರ್ವಯಲನುಡುಗಿ ನಿಜ ಸುಖಿಯಾದೆನಯ್ಯ ನಾನು ಸಂಗಯ್ಯನಲ್ಲಿ ನಿಃಶೂನ್ಯವಾಯಿತ್ತಯ್ಯ ॥೫೮॥

ಇಂತು ನೀಲಲೋಚನೆಯಮ್ಮನು ಸಮುದ್ರದಲ್ಲಿ ಬುದ್ಬುದಂಗಳಡಗಿದಂತೆ ಆಕಾಶದೊಳಡಗಿದ ಮಿಂಚಿನಂತೆ ಶರೀರದೊಳಡಗಿದ ಚೈತನ್ಯದಂತೆ ನಯನದಲ್ಲಡಗಿದ ಪ್ರತಿಬಿಂಬದಂತೆ ತಮ್ಮ ಇಷ್ಟಲಿಂಗದಲ್ಲಿ ಏಕಾರ್ಥವಾಗಿ ನಿರ್ವಯಲನೈದಲು ಅತ್ತ ಸೊನ್ನಲಾಪುರದಲ್ಲಿ ಸಿದ್ಧರಾಮಯ್ಯದೇವರು ತಮ್ಮ ಮಹಾಜ್ಞಾನದಿಂದರಿದು ಸ್ತುತಿಸಿದ ವಚನ ॥

ತಾಯೆ ಪರಮ ಸುಖಾಚಾರ ಮೂರ್ತಿಯನಡಗಿಸಿ ನೀನೆಯಾದೆಯವ್ವಾ ತಾಯೆ. ಮಹಾಜ್ಞಾನ ಕಲ್ಪಿತದಲ್ಲಿ ನೀನೆಯಡಗಿದೆಯವ್ವ ತಾಯೆ. ನೀಲಮ್ಮನೆಂಬ ಸುಖವಾಸಿ ಮೂರ್ತಿ ಕಪಿಲಸಿದ್ಧ ಮಲ್ಲಿನಾಥಯ್ಯ ನಿಮ್ಮ ತಾಯಿ ನೀಲಮ್ಮ ನೀನಾದಳು ॥೫೯॥

ಆ ಪ್ರಸ್ತಾವದೊಳು ಅಕ್ಕನಾಗಾಯಿಗಳು ಪ್ರಳಾಪಿಸಿದ ವಚನ ॥

ಅಯ್ಯ ನಾನಧವೆಯಯ್ಯ ಕೈಯ್ಯಕೋಲ ಕೊಂಬರೆ ಆಯ್ಯ? ಎಳೆಗರುವಿನ ಎಳೆಗಂತಿಯನೆಳದೊಯ್ಯರೆ ಭಕ್ತರು? ಅಯ್ಯ ಆಯ್ಯ ಎನಲೊಯ್ಯರೆ ಬಸವಣ್ಣ ಪ್ರಿಯ ಚನ್ನಸಂಗಯ್ಯ ॥೬೦॥

ಭಕ್ತಿಯ ತವನಿಧಿಯೆ, ಮುಕ್ತಿಯ ಮೂರುತಿಯೆ, ಲಿಂಗ ಜಂಗಮದ ಚೈತನ್ಯವೆ, ನಿಮ್ಮನಗಲಿ ಎಂತು ಸೈರಿಸುವೆನು? ಎಲೆ ಅಯ್ಯ

ಪರಮ ಗುರುವೆ, ಆಹಾ ಎನ್ನ ಅಂತರಂಗದ ಜ್ಯೋತಿಯೇ ನಿಮ್ಮ ಒಕ್ಕ ಶೇಷ ಪ್ರಸಾದವ ಸಿಕ್ಕಿ ಎನ್ನ ಪಾವನವ ಮಾಡಿ ಉಳುಹಿದೆಯಯ್ಯ ಲಿಂಗವೆ. ಎನಗಿನ್ನಾರು ಹೇಳೈಯ್ಯ ನೀವಲ್ಲದೆ ನೀವಲ್ಲದೆ? ಬಸವಣ್ಣ ಪ್ರಿಯ ಚನ್ನಸಂಗಯ್ಯ ನೀವಗಲಿದರೆ ಎನ್ನ ಪ್ರಾಣ ನಿಮ್ಮೊಳಗೆ ಆಗಲು ಬಲ್ಲುದೆ? ॥೬೧॥

ಮತ್ತಂ, ಬಸವಣ್ಣ ನೀವು ಮರ್ತ್ಯಕ್ಕೆ ಬಂದು ಸಿಂದರೆ ಭಕ್ತಿಯ ಬೆಳವಿಗೆ ದೆಸೆದೆಸೆಗೆಲ್ಲ ಪಸರಿಸಿತ್ತೈಯ್ಯ. ಸ್ವರ್ಗ ಮೃತ್ಯ ಪಾತಾಳ ದೊಳಗೆಲ್ಲ ನಿಮ್ಮ ಭಕ್ತಿಯ ಬೆಳುವೆಗೆಯ ಘನವನಾರು ಬಲ್ಲರು? ಅಣ್ಣ ಶಶಿಧರನಟ್ಟಿದ ಮಣಿಹವು ಪೂರೈಸಿತ್ತೆಂದು ನೀವು ಲಿಂಗೈಕ್ಯವಾದರೆ ನಿಮ್ಮೊ ಡನೆ ಭಕ್ತಿ ಹೋಯಿತ್ತಯ್ಯ. ನಿಮ್ಮೊಡನೆ ಸದಾಚಾರ ಹೋಯಿತ್ತಯ್ಯ. ನಿಮ್ಮೊಡನೆ ಅಸಂಖ್ಯಾತರು ಹೋದರು. ಅಣ್ಣ ಮರ್ತ್ಯಲೋಕದ ಮಹಾ ಮನೆಯು ಶೂನ್ಯವಾಯಿತ್ತು. ಅಯ್ಯ ಬಸವಣ್ಣ ಎನ್ನನೊಯ್ಯದೆ ಹೋದೆ ಯಲ್ಲ. ಪಂಚ ಪರುಷ ಮೂರುತಿ ಬಸವಣ್ಣ, ಬಸವಣ್ಣ ಪ್ರಿಯ ಚನ್ನ ಸಂಗಯ್ಯಂಗೆ ಪ್ರಾಣಲಿಂಗವಾಗಿ ಹೋದೆಯಲ್ಲ ಸಂಗನಬಸವಣ್ಣಾ ॥೬೨॥

ಹೀಗೆಂದು ಬಿನ್ನಸಂಗೈವುತ್ತಿರೆ ಆ ಬಸವರಾಜದೇವರ ಬೆಂಬಳಿಯಲಿ ಅಕ್ಕನಾಗಾಯಗಳು ಲಿಂಗೈಕ್ಯವಾದ ಪ್ರಸ್ಥಾವದ ವಚನ ॥

ಆಚಾರವೆಂಬುದು ಅಗೋಚರ ನೋಡಯ್ಯ ಅರಿಗೆಯು ಸಾಧ್ಯವಲ್ಲ. ಮರ್ತ್ಯ ಲೋಕದಲ್ಲಿ ಸದಾಚಾರ ಬೆಳವಿಗೆಯ ಮಾಡಲೆಂದು ಬಸವಣ್ಣ ಬಂದು ಭಕ್ತಿಸ್ಥಲವ ಹರಹಿದನು. ಗುರುಲಿಂಗಜಂಗಮ ದಾಸೋಹ ಪ್ರಸಾದ ಪಾದೋದಕದ ಹಾದಿಯ ನೆಲ್ಲರಿಗೆಯು ತೋರಿದ. ಶಿವಾಚಾರದ ಬೆಳವಿ ಗೆಯುನಹುದಲ್ಲವೆಂದು ಬಿಜ್ಜಳ ತರ್ಕೈಸಲು, ಅನಂತಮುಖದಿಂದ ಒಡಂಬ ಡಿಸಿ ಆಹುದೆನಿಸಿದ ಬಂದ ಮಣಿಹ ಪೂರೈಸಿತ್ತೆಂದು ಲಿಂಗದೊಳಗೆ ಬಗೆದು ಹೊಕ್ಕಡೆ ಹಿಂದೆ ಲೋಕವರಿದು ಬದುಕಬೇಕೆಂದು ಸೆರಗು ಕೊಟ್ಟನು. ನಾನು ಹಿಂದುಳಿದಹಳೆಂದು ಮುಂದಣ ಗತಿಯ ತೋರಿ ಬಸವಣ್ಣ ಪ್ರಿಯ ಚನ್ನ ಸಂಗಯ್ಯನಲ್ಲಿ ಪ್ರಸನ್ನದೊಳಗೆ ಇಂಬಿಟ್ಟುಕೊಂಡನು ಎನ್ನ ಹೆತ್ತ ತಂದೆ ಸಂಗನಬಸವಣ್ಣನು ॥೬೩॥

ಆ ಪ್ರಸ್ಥಾವದೊಳು ಚನ್ನ ಬಸವರಾಜದೇವರು ಬಿನ್ನೈಸಿದ ಪ್ರಸ್ಥಾ ವದ ವಚನ॥

ಲಿಂಗ ಜಂಗಮ ಜಂಗಮ ಲಿಂಗವೆಂಬುದ ತೋರಿ ನಿಜೈಕ್ಯನಾದೆಯಲ್ಲ. ನಿಜ ಗುರುಬಸವಣ್ಣ ಪ್ರಸಾದ ಕಾಯ, ಕಾಯ ಪ್ರಸಾದವೆಂಬುದ ಎನ್ನ ಸರ್ವಾಂಗದಲ್ಲಿ ಪ್ರತಿಷ್ಠಿಸಿ ಎನ್ನನಾಗು ಮಾಡಿ ಮುಂದುವರಿದೆಯಯ್ಯ ಬಸವಣ್ಣ. ಲಿಂಗ ಪ್ರಾಣ ಪ್ರಾಣ ಲಿಂಗವೆಂಬುದ ಎನ್ನಂತರಂಗದಲ್ಲಿ ಸ್ಥಾಪ್ಯವ ಮಾಡಿ ಎನ್ನ ನಿನ್ನಂತೆ ಮಾಡಿ ನಿಜಲಿಂಗದೊಳಗೆ ನಿಜವಾದೆಯಲ್ಲ ಬಸವಣ್ಣ. ಎನ್ನ ಮನವ ಮಹತ್ವದಲ್ಲಿ ಲಯವ ಮಾಡಿ ನಿರ್ವಯಲಾಗಿ ಹೋದೆಯಲ್ಲ ನಿಜಲಿಂಗೈಕ್ಯ ಬಸವಣ್ಣ. ನಿನ್ನ ಒಕ್ಕುಮಿಕ್ಕ ಶೇಷವನಿಕ್ಕಿ ಆಗು ಮಾಡಿ ನಿನ್ನಂತರಂಗದಲ್ಲಿ ಅವ್ವೆ ನಾಗಾಯಿಯ ಇಂಬುಗೊಂಡಡೆ ಎನ್ನ ಮನ ನಿಮ್ಮ ಪಾದದಲ್ಲಿ ಕರಗಿ ಕೊರಗಿತ್ತಯ್ಯ ಸಂಗನಬಸವಣ್ಣ. ಕೂಡಲ ಚನ್ನಸಂಗೈಯ್ಯಗೆ ಸುಜ್ಞಾನವಾಹನವಾಗಬೇಕೆಂದು ನಿರವಯಲಾದೆಯಲ್ಲ ಸಂಗನಬಸವಣ್ಣಾ ॥೭೪॥

ಆ ಪ್ರಸ್ಥಾವದೊಳು ಬಿನ್ನ ಪಂಗೈದ ಪದಂಗಳು.

**॥ ರಾಗ ಶೋಕವರಾಳಿ ॥**

ಶರಣು ಶರಣು ಎನ್ನ ಗುರುವೆ ಶರಣಯ್ಯ ಶರಣು ಉಪಮಾತೀತ ಜ್ಞಾನ ಗುರುವೆ ನಿಜಲಿಂಗಜಂಗಮವೆ ಘನವೆಂದು ಪ್ರಸಾದವನು ಹಿಂಗದೆ ನಿಜಪದವ ತೋರಿದ ಗುರುವೆ॥ ಪಲ್ಲದ॥

ಸಾಕಾರ ರೂಪನೆ ತಾಳಿ ಜಿಜ್ಞಾಳಗೆ ಬೇಕಾದ ದೃಷ್ಟವನೆ ತೋರಿದ ಗುರುವೆ ವಿಸ್ತರಿಸಿ ಜಗಕೆ ನೀನಾಗಿ ಎನ್ನುವನು ತಪ್ಪಿಸಿ ಹೋದೆ ಎಲೆ ಬಸವ ಪರಮಗುರುವೆ ॥೧॥

ಭಕ್ತ ಮಹೇಶ್ವರ ಪ್ರಸಾದಿ ಪ್ರಾಣಲಿಂಗಿ ಶರಣೈಕ್ಯ ಸ್ಥಲದಲ್ಲಿ ನಡೆದ ಗುರುವೆ ಸೋಹಿ ದಾಸೋಹಿ ನೀನಾಗಿ ಭಕ್ತರಿಗೆ ಇಹಪರದ ಸುಖವನ್ನು ತೋರಿದ ಗುರುವೆ ॥೨॥

ನಾದ ಬಿಂದು ಕಳಾತೀತ ಮಹಾಘನವ ಆದಿಲಿಂಗ ಅನಾದಿ ಶರಣ ಗುರುವೆ. ಮಿಂಚು ಮಿಂಚನೆ ಕೂಡಿದಂತೆ ಇದರ ಸಂಚವ ನೆನ್ನಬಹುದೆ ಗುರುವೆ ॥೩॥

ಅರಿವು ಕುರುಹನೆ ಅರಸಿ ಬರಲು ಆ ಕುರುಹು ಅರಿವನೊಳಕೊಂಡುದನು ಅರಿದ ಗುರುವೆ, ಜ್ಞಾತೃ, ಜ್ಞಾನ, ಜ್ಞೇಯವೆಂಬ ತ್ರಿವಿಧದ ಮಾಟವನು ಹಿಂಗಿದ ಜ್ಞಾನ ಗುರುವೆ ॥೪॥

ಭಾವ ಭಾವನೆ ಭಾವಿಸಲು, ಅನುಭಾವ ನಿರ್ಭಾವವೇಕಾರ್ಥವೆಂದ ಶಿವಗುರುವೆ ಕೂಡಲ ಚನ್ನಸಂಗಯ್ಯ ನಿಮ್ಮುವನು ಬಸವಲಿಂಗ ಬಸವ ವಲಿಂಗ ಎನುತಿರ್ದೆನು ॥೫॥

ಮತ್ತಂ॥ ಕಂಡಂತೆ ಕಂಡಂತೆ ಆಯಿತ್ತು ಭಕ್ತಿ. ಕಂಡಂತೆ ಆಯಿತ್ತಯ್ಯ. ಉಪಚಾರಕ್ಕೆ ನಿಂದುದು ಉಪಚಾರಕ್ಕೆ ನಿಂದಿತ್ತಲ್ಲ. ಭೃತ್ಯಾಚಾರ ಸಮಯ ಭಕ್ತಿ ಸಂಗನಬಸವಣ್ಣನೊಡನೆ ಹೋಯಿತ್ತು. ಕೂಡಲ ಚನ್ನಸಂಗಯ್ಯ ಬಸವಣ್ಣನೊಯ್ಯಲಾಗಿ ॥೭೦॥

ಮತ್ತಂ॥ ಸ್ಥಲಹೋಯಿತ್ತೆನಗೆ ನಿಃಸ್ಥಲ ಹೋಯಿತ್ತೆನಗೆ. ಗೋರಿಕಲ್ಲ ಮಾಡಹೋಯಿತ್ತೆನಗೆ. ಹುವ್ವಿನ ವಿಮಾನ ಹೋಯಿತ್ತೆನಗೆ. ಬಸವ ಹೋದನೆನಗೆ. ಬಸವನ ಮನೆಯ ಜಂಗಮ ಹೋದರೆನಗೆ. ಇನ್ನು ಬಸವ ಬಸವ ಎಂದಡೆ ಕೂಡಲ ಚನ್ನಸಂಗಯ್ಯ ನಿಮ್ಮಾಣೆ ॥೭೧॥

ಮಡಿವಾಳಯ್ಯಗಳ ವಚನ॥

ಉಟ್ಟ ಸೀರೆಯು ಹರಿದು ಹೋದಾತ ನೀನಲ್ಲ. ಬಸವಣ್ಣ ಮೆಟ್ಟಿದ ಕೆರಹ ಕಳೆದು ಹೋದೆಯಲ್ಲ ಬಸವಣ್ಣ! ಕಟ್ಟಿದ ಮುಡಿಯ ಬಿಟ್ಟು ಹೋದೆಯಲ್ಲ ಬಸವಣ್ಣ! ಸೀಮೆ ಸಂಬಂಧ ತಪ್ಪಿ ಹೋದೆಯಲ್ಲ ಬಸವಣ್ಣ. ಲಿಂಗಕ್ಕೆ ಮಾಡಿದ ಮಾಟವ ಸೋಂಕದೆ ಹೋದೆಯಲ್ಲ ಬಸವಣ್ಣ! ಜಂಗಮಕ್ಕೆ ಮಾಡಿದ ಮಾಟವ ಕಯ್ಯಲ್ಲಿ ಹಿಡಿದುಕೊಂಡು ಹೋದೆಯಲ್ಲ ಬಸವಣ್ಣ. ಬೆಳಗನುಟ್ಟು ಬಯಲಾಗಿ ಹೋದೆಯಲ್ಲ ಬಸವಣ್ಣ. ಆ ಬಸವಣ್ಣನ ಹಿಂದುಗೊಂಡು ಹೋಹ ಪಥವನೆ ತೋರಾ ಕಲಿದೇವರದೇವಾ ॥೭೨॥

ಮತ್ತಂ, ಬ್ರಹ್ಮನ ಹೆಂಡತಿಯ ಹಿಡಿತಂದು ಅಡಿಗೆಯ ಮಾಡಿಸಿದಾತ ಬಸವಣ್ಣ. ಹರಿಯ ಸಾಸಿರದೇಳನೂರು ಕುಮಾರತಿಯರ ಹಿಡಿತಂದಾತ ಬಸವಣ್ಣ. ಲಿಂಗಕ್ಕೆ ಮಾಡುವ ತನ್ನ ಸೋಂಕದೆ ಹೋದಾತ ಬಸವಣ್ಣ. ಜಂಗಮಕ್ಕೆ ಮಾಡಿದುದ ಕೈಯ್ಯಲ್ಲಿ ಹಿಡಿದುಕೊಂಡು ಹೋದಾತ ಬಸವಣ್ಣ. ಬೆಳಗನುಟ್ಟು ಬಯಲಾಗಿ ಹೋದಾತ ಬಸವಣ್ಣ. ಬಸವಣ್ಣನ ಹಿಂದನೆ ತೋರು ಕಂಡಾ ಕಲಿದೇವರದೇವಾ ॥೭೩॥

ಮತ್ತಂ॥ ಆಕಾರ ನಿರಾಕಾರವಾಯಿತ್ತಲ್ಲ ಬಸವಣ್ಣ. ಪ್ರಾಣನಿಃ ಪ್ರಾಣವಾಯಿತ್ತಲ್ಲ ಬಸವಣ್ಣ. ಲಿಂಗಜಂಗಮದ ಮಾಟ ಕೂಟಸಮಾಪ್ತಿಯಾ

ಯಿತ್ತಲ್ಲ ಬಸವಣ್ಣ. ನಿಃಶಬ್ದ ವೇದ್ಯವಾದೆಯಲ್ಲ ಬಸವಣ್ಣ. ಕಲಿದೇವರ ದೇವನು ಹೃದಯ ಕಮಲವ ಹೊಕ್ಕು ದೇವಂಗೆ ದೇವನಾಗಿ ಹೋದೆ ಯಲ್ಲ ಸಂಗನಬಸವಣ್ಣಾ ॥೭॥

ಲಿಂಗನಿಧಿಯೆ ಬಸವ, ಜಂಗಮದ ವಾರುಧಿಯೆ ಬಸವ, ಪ್ರಸಾದದ ತವನಿಧಿಯೆ ಬಸವ, ಅನುಭಾವದ ಮೇರುವೆ ಬಸವ, ಮಹಾ ಘನವನೊಡಗೂಡಿದಾತನು ಬಸವಣ್ಣನೊ ಕಲಿದೇವನೊ. ॥೭೫॥

ಮತ್ತಂ॥ ಬಿಂದುವ ಹರಿದೆಯಲ್ಲ ಬಸವಣ್ಣ. ನಾದವ ಸಿಂಹಾಸನವ ಮಾಡಿಕೊಂಡೆಯಲ್ಲ ಬಸವಣ್ಣ, ಅಷ್ಟಗುಣವ ನಷ್ಟವ ಮಾಡಿದೆಯಲ್ಲ ನಿಜಲಿಂಗ ಬಸವಣ್ಣ. ಶುಕ್ರ ಶೋಣಿತದಿಂದಾದ ಕಾಯವೆತ್ತ ಹೋಯಿತ್ತಯ್ಯ ನಿಜಗುರುಬಸವಣ್ಣ. ಭಕ್ತಿ ರೂಪುಗೆಟ್ಟ ಪ್ರಸಾದಿಯಲ್ಲ ಮತ್ತೊಂದು ರೂಪಾದೆಯಲ್ಲ. ನಿಜರೂಪಿ ಬಸವಣ್ಣ ಶೂನ್ಯ ಪ್ರಸಾದಿಯಲ್ಲ ಆವ ಪ್ರಸಾದಿಯಲ್ಲ. ಆವ ಪ್ರಸಾದವನು ಸೋಂಕದ ಪ್ರಸಾದಿ ಯೋನಿಜನಲ್ಲ. ಅಯೋನಿಜನು ನಮ್ಮ ಬಸವಣ್ಣನು. ನಿರಾಕಾರವಾಗಿ ಹೋದನು ನಮ್ಮ ಬಸವರಾಜನು. ಬೆಳಗನುಟ್ಟ ಬಯಲಾಗಿ ಹೋದನು ನಮ್ಮ ಬಸವಲಿಂಗನು. ಬಸವಣ್ಣ ಬಸವಣ್ಣ ಬಸವಣ್ಣ ಎನಲಮ್ಮೆನು. ಎನ್ನ ವಾಙ್ಮನಕ್ಕಗೋಚರನಾಗಿ ಬಸವಣ್ಣಂಗೆ ಶರಣೆಂಬೆ ಪಥವ ತೋರಯ್ಯ ಕಲಿದೇವರದೇವಾ ॥೭೬॥

ಮತ್ತಂ॥ ನೆನೆವನಯ್ಯ ಲೋಹ ಪರುಷದ ಸಂಗದಂತಾಯಿತ್ತಾಗಿ. ಬಸವಣ್ಣ ಬಸವಣ್ಣ ಎಂಬ ಶಬ್ದದೊಳಗೆ ಎನ್ನ ಗಮನ ನಿರ್ಗಮನವಾಯಿತ್ತು. ಬಸವಣ್ಣ ಎಂದೆನ್ನೆನಯ್ಯ. ಕಲಿದೇವರ ದೇವಾ ಕಿಡಿಗೊಂಡ ರಗಿನ ಸಂಗದಂತಾಯಿತ್ತಾಗಿ ॥೭೭॥

ಇಂತು ಚನ್ನಬಸವರಾಜದೇವರು ಮಡಿವಾಳ ಮಾಚಿತಂದೆಗಳು ಮೊದಲಾದ ಅಸಂಖ್ಯಾತ ಮಹಾಗಣಂಗಳೆಲ್ಲರು ಉಳುಮೆಯ ಮಹಾಮನೆಯಲ್ಲಿ ನಿರವಯಲನೈದುವ ಪ್ರಸ್ಥಾವದೊಳು ಮಡಿವಾಳ ಮಾಚಿ ತಂದೆಗಳ ವಚನ॥

ನಿರ್ವಹವಾಯಿತ್ತಯ್ಯ ಬಸವಣ್ಣಂಗೆ ಕಪ್ಪಡಿಯ ಸಂಗಯ್ಯನಲ್ಲಿ. ಅಕ್ಕನಾಗಾಯಿ ಮಿಂಡಮಲ್ಲಿನಾಥ ಹಡಪದಪ್ಪಣ್ಣ ಮೊಗವಾಡದ ಕೇಶಿರಾಜ ಕೋಲಶಾಂತಯ್ಯ ಮೊದಲಾದ ಶಿವಗಣಂಗಳೆಲ್ಲರು ಬಸವಣ್ಣನ ಬಯಲ ಬೆರಸಿದರು. ಆ ಬಯಲ ಪ್ರಸಾದದಿಂದ ನಿರುಪಮ ಪ್ರಭುದೇವರು ಕದ

ಳಿಯಲ್ಲಿ ಬಯಲಾದವರು. ಆ ಬಯಲ ಪ್ರಸಾದದಿಂದ ಮೋಳಿಗೆಯ ಮಾರಯ್ಯ ಕಕ್ಕೈಯ್ಯ ಪಡಿಹಾರಿ ಉತ್ತಣ್ಣ ಕನ್ನದಮಾರಣ್ಣ, ಕಲಕೇತ ಬೊಮ್ಮಣ್ಣ ನುಲಿಯ ಚಂದಯ್ಯ, ಹೆಂಡದ ಮಾರಯ್ಯ, ಶಂಕರದಾಸಿಮಯ್ಯ ಏಕಾಂತ ರಾಮಯ್ಯ, ಮೇದಾರ ಕೇತಯ್ಯ ಮೊದಲಾದ ಏಳನೂರೆಪ್ಪತ್ತು ಅಮ ರಗಣಂಗಳ ದಂಡು ಕೈಲಾಸಕ್ಕೆ ನಡೆಯಿತ್ತು. ಬಂದ ಮಣಿಹ ಸಂದಿತ್ತು. ಸಂದ ಪುರಾತನರು ಎನ್ನ ಮನದ ಮೈಲಿಗೆಯ ಕಳೆದ ಕಾರಣ ಕಲಿದೇವಯ್ಯ ಇವರೆಲ್ಲರು ಒಕ್ಕು ಮಿಕ್ಕ ಪ್ರಸಾದ ಎನಗಾಯಿತ್ತು ॥೭೮॥

ಇಂತು ಮಡಿವಾಳ ಮಾಚಿತಂದೆಗಳು ನಿರವಯಲಾದ ತದನಂತರ ಚನ್ನ ಬಸವರಾಜದೇವರ ಐಕ್ಯ.

ಹನ್ನೆರಡು ಗಾವುದ ವಿಸ್ತೀರ್ಣ ಪಟ್ಟಣಕ್ಕೆ ಕಲ್ಯಾಣವೇ ಪ್ರಣತಿ ಯಯ್ಯ. ಆ ಪ್ರಣತಿಯಲ್ಲಿ ಮಹತ್ತೆಂಬ ಎಣ್ಣೆಯನೆರದು ಜ್ಞಾನಜ್ಯೋತಿಯ ಹೊತ್ತಿಸಿ ಒಪ್ಪುತ್ತಿದ್ದಿತ್ತಯ್ಯ. ಅಲ್ಲಿ ಕಾಳಯ್ಯ, ಚೌಡಯ್ಯ, ಕೋಲ ಶಾಂತಯ್ಯ, ಮೊಗವಾಡದ ಕೇಶಿರಾಜಯ್ಯ ಖಂಡೆಯದ ಬೊಮ್ಮಣ್ಣ ಮಿಂಡ ಮಲ್ಲಿನಾಥ, ಹಡಪದಪ್ಪಣ್ಣ, ಮಡಿವಾಳಯ್ಯ, ಅವ್ವೆ ನಾಗಾಯಿಗಳು ಸಹಿತ ಇವರೆಲ್ಲರು ಸಂಗನಬಸವಣ್ಣನ ಬಯಲ ಕೂಡಿ ಹೋದರು. ಇದು ಕಾರಣ ಕೂಡಲ ಚನ್ನ ಸಂಗಮದೇವರಲ್ಲಿ ಇವರೆಲ್ಲರ ಪ್ರಸಾದದ ಬಯಲು ಎನಗಾಯಿತ್ತು ॥೭೯॥

ಇತಿ ಶ್ರೀಮತ್ಸಕಲ ಗಣ ಪುರಾತನರೊಳ್ ಪ್ರಭುದೇವರ ಮಹಾನು ಭಾವ ಸದ್ಗೋಷ್ಠಿಯಂ ಮಾಡಿದ ಶೂನ್ಯ ಸಂಪಾದನೆಯೊಳ್ ಎಲ್ಲ ಗಣಂ ಗಳ ನಿರ್ವಯಲ ಸಮಾಧಿ ಏಕ ವಿಂಶೋತ್ಯೋಪದೇಶ ಸಮಾಪ್ತ.



ಗದ್ಯ॥ ಇದು ಪರಮಗುರು ಪರಮ ವೀರಶೈವ ಸಿದ್ಧಾಂತ ತತ್ವಜ್ಞಾನ, ಇದು ವೀರಶೈವಾಚಾರ ಪ್ರತಿಷ್ಠಾಪನಾಚಾರ್ಯ, ಇದು ದಿವ್ಯ ವೇದಾಂತ ಶಿರೋಮಣಿ, ಇದು ಸಮಸ್ತ ಶಾಸ್ತ್ರ ಮುಖ್ಯ ಮುಖ ದರ್ಪಣ, ಇದು ಮಹಾಜ್ಞಾನ ಪ್ರವರ್ತನ ಪರಮಾನುಭವ ಸಂಬೋಧೆ, ಇದು ಸರ್ವಾ ಚಾರ ಸಂಪನ್ನ ರಸಮಯಾರೂಢ ಸಂಗ್ರಹ, ಇದು ಪರಮ ರಾಜ ಯೋಗ, ಸಾಧ್ಯ ಸಂಪಾದನ, ಇದು ಸಚ್ಚಿದಾನಂದ ನಿತ್ಯಪರಿಪೂರ್ಣ

ರಸಾಮೃತ ಪ್ರಸನ್ನ ಪ್ರಸಾದ, ಇದು ಅಜ್ಞಾನ ತಿಮಿರಾಂಜನ ತಂತ್ರವಪ್ಪ ಪ್ರಭುದೇವರ ಶೂನ್ಯಸಂಪಾದನೆಯು ಮಹಾಪ್ರಸಂಗಮಂ ಬಸವರಾಜದೇವರ. ಚನ್ನ ಬಸವರಾಜ ದೇವರು ಪ್ರಭುದೇವರು ಮುಖ್ಯವಾದ ಅಸಂಖ್ಯಾತ ಮಹಾಗಣಂಗಳ ವಚನಂಗಳಿಂದ ಕಥಾ ಸಾಂಗತ್ಯವಾಗಿ ಶಿವಗಣಂಗಳ ಪ್ರಸಾದಿ ಮಹಾದೇವಯ್ಯಗಳು ತಚ್ಛಿವ ಗಣಂಗಳ ಶಿವಾನುಭಾವವನು ಭಾವಶ್ರೋತ್ರ ದ್ವಾರ ಮುಖಕ್ಕೆ ನಿರ್ಮಳ ದರ್ಪಣವನೆ ಸಮರ್ಪಿಸಿದನು. ಈ ಮಹಾ ಪ್ರಸಂಗದ ಸಮುಹೃದಯವನರಿತಡೆ ನಿತ್ಯ ನಿರವಯವಪ್ಪುದು. ಭವಭಾರಕ್ಕಂಜಿ ಕೇಳಲು ಸರ್ವೋನ್ಮುಕ್ತನು. ತತ್ಸಂಗದಿಂದ ಕೇಳಿ ಮನದಲ್ಲಿ ಧರಿಸಲು ನಿರ್ಮಳಾತ್ಮಕನಪ್ಪನು. ಆ ಧರಣಿಯಿಂದ ಶ್ರೋತ್ರಮುಖಕ್ಕೆ ಕೇಳಿಸಿದಾತನು ರುದ್ರಾಧಿಪತಿಯಪ್ಪನು. ಮನೋರತಿಯಿಂ ಬರೆದೊಡೆ, ಪಠಿಸಿದೊಡೆ, ಅರ್ಥವ ಹೇಳಿದೊಡೆ ಕೇಳಿದೊಡೆ ಸಾಲೋಕ್ಯ, ಸಾಮೀಪ್ಯ, ಸಾರೂಪ್ಯ, ಸಾಯುಜ್ಯವೆಂಬ ಚತುರ್ವಿಧ ಪದಂಗಳಂ ಪಡೆವನು. ಇದನು ಶಿವಶರಣರು ಕೇಳುವುದು, ಲಾಲಿಸುವುದು ಪಾಲಿಸುವುದು ಬರೆದೋದುವುದು. ಇಲ್ಲಿ ಈ ವಚನ ಕ್ರಮ ತಪ್ಪಿದಡೆ ನಿಮ್ಮ ಪರಿಪೂರ್ಣಜ್ಞಾನದಿಂದ ತಿದ್ದಿಕೊಂಬುದೆಂದು ಎನಲಾಗಿ ಆ ವಾಕ್ಯವಿಡಿದು ಗುಮ್ಮಳಾಪುರದ ಸಿದ್ಧಲಿಂಗದೇವರು ಅಲ್ಲಿ ಸಿದ್ಧರಾಮಯ್ಯ ದೇವರಿಗೆ ದೀಕ್ಷಾಕ್ರಮವಿಲ್ಲದಿರಲು, ಬಸವಾದಿ ಪ್ರಮಥರ ವಚನ ಪ್ರಸಿದ್ಧವಾಗಿ ಸೇರಿಸಿದರು. ಆ ಪರಿಯಲ್ಲಿ ಅನಿರ್ವಾಚ್ಯ ಪರಂಜ್ಯೋತಿ ಸ್ವರೂಪ ಷಟ್ಸ್ಥಲ ಸಂಪನ್ನ ಷಡುಲಿಂಗಾಂಗ ಭರಿತ ಶರಣಜನ ಬಾಂಧವ ಶರಣಜನ ಹೃತ್ಕಮಲ ಕರ್ಣಿಕಾವಾಸ ಅನಾದಿ ಪರಶಿವನೆನಿಸುವ ತೋಂಟದ ಸಿದ್ಧಲಿಂಗೇಶ್ವರನು ಆ ತೋಂಟದ ಸಿದ್ಧಲಿಂಗೇಶ್ವರನ ಕೃಪಾ ಕಟಾಕ್ಷ ಪಾತ್ರರಾದ ಬೋಳ ಬಸವೇಶ್ವರನು ಆ ಬೋಳ ಬಸವೇಶ್ವರನ ಮಹಾಜ್ಞಾನಾನುಭಾವ ಪ್ರಸನ್ನತೆಯಿಂದ ಗೂಳೂರ ಸಿದ್ಧವೀರಣ್ಣೊಡೆಯರೆಂಬ ದಿವ್ಯ ಜ್ಞಾನಾನುಭಾವಿಗಳು ಈ ಶೂನ್ಯಸಂಪಾದನೆಯ ರಚಿಸಿ ವಸುಧೆಯ ಷಟ್‌ಸ್ಥಲ ಲಿಂಗಾಂಗ ಸಂಬಂಧಿಗಳಾದ ವೀರಮಹೇಶ್ವರರುಗಳ ಕೃಪಾ ಕಟಾಕ್ಷ ಪ್ರಸನ್ನ ಪಾತ್ರರಪ್ಪ ಸ್ವಲೀಲಾನಂದ ಭಕ್ತವತ್ಸಲರಪ್ಪ ಷಟ್‌ಸ್ಥಲ ಸಾಮ್ರಾಜ್ಯ ಸಾರ್ವಭೌಮ ಜಗತ್ಪಾವನ ಸದ್ಧರ್ಮ ಮೂರ್ತಿಯಪ್ಪ ಅಂಗ ಮನೇಂದ್ರಿಯಾದಿ ದುಸ್ಸಂಗ ವಿರಹಿತರಪ್ಪ ಸಮಸ್ತ ಜಗದ್ವಿಲಾಸ ವೈಭವ ವಿರಹಿತರಪ್ಪ ಶ್ರೀಮದ್ಬೋಧಾ ಗುರು ನಮಃಶಿವಾಯ ದಿವ್ಯ

ಕಮಲಕ್ಕೆ ಈ ಸಂಪಾದನೆಯ ದಿವ್ಯ ಜ್ಞಾನ ವಚನಾಮೃತವ ಬರೆದು ಸಮರ್ಪಿಸಿದೆನು. ಗುರುವೆ ಎನ್ನ ತಪ್ಪನೊಳಕೊಂಡು ಎನ್ನಂಗಮನಂಗಳಲ್ಲಿ ಮೂರ್ತಿಗೊಂಡು ನಿಮ್ಮ ಚಿದಂಘ್ರಿಯೊಳೆನ್ನ ನಿಂಬಿಡಯ್ಯ ಶಾಶ್ವತ ಗುರುವೆ ಶರಣಾರ್ಥಿ॥

ಮತ್ತಂ, ಬಂದೆನನೇಕ ಭವಂಗಳೊಳ್ ನೊಂದೆನು ನಿಮ್ಮಂಘ್ರಿದ್ವಯವಕಾಣದೆ. ಮಿಗೆಯತಿ ಬೆಂಡೆನು. ಕಾಮಾದಿಗಳಲ್ಲಿ ಸಂದೆನು ಸಕಲೇಂದ್ರಿಯಂಗಳಾತುರದಿಂ ಮಿಗೆ ನೊಂದವಗುಣವ ನೋಡದೆ ಕಂದನೆ ಬಾರೆಂದು ಕಂಬನಿಯಂ ತೊಡೆದು ನಿಮ್ಮಂಘ್ರಿಯೊಳೆನ್ನನಿಂಬಿಡಯ್ಯ ಸದಮಲಗುರುವೆ ಶರಣಾರ್ಥಿ ॥

ನಮಃಶಿವಾಯ ಗುರುವೆ ಬಸವಲಿಂಗನ ಬಿನ್ನಪವ ಲಾಲಿಸಿ ಕೃಪೆಯಿಂ ಸಲಹಿ ಸಲಹಿ ಶರಣಾರ್ಥಿ ಸಮಸ್ತ ಶರಣರಿಗೆ ಶರಣಾರ್ಥಿ. ॥

ವೃತ್ತ॥ ಪರಮ ಸುಧಾಶಿಖಾಗ್ರಣಿ ಪವಿತ್ರ ಚರಿತ್ರ, ಶಿವಾಕೃತಿ ರ್ವಪು। ಸ್ಥಿರತರ ಮಾನಸೇಂದ್ರಿಯ ವಿವರ್ಜಿತ ತೋಂಟದ ಸಿದ್ಧಲಿಂಗಸ।ದ್ಗುರುವರನಾತನಾದರದೊಳಿಪ್ಪ ಬೋಳಬಸವೇಶ್ವರಾರ್ಯ ಸ।ತ್ಕರುಣವನಾಂತು ಗುಳೂರ ಸಿದ್ಧವೀರ ಯತೀಶನೊಲ್ದು ಪೇಳಿದಂ ॥೧॥

ಧರೆಯೋಳ್ ಪ್ರೌಢನೆನಿಪ್ಪನೋರ್ವ ನವಮೌಕ್ತಿಕಂಗಳಂ ಚಾರುಬಂ। ಧುರವಪ್ಪಂತೆ ಸಮಾನದಿಂದವರ ತತ್ತಸ್ಥಾನಮಂ ಕಂಡು ಬೆ।ಚ್ಚರದಿಂದಲ್ಲಿಯ ಮಧ್ಯರತ್ನವನು ಹರ್ಷಾನಂದದಿಂ ಕೋದವೋಲ್।ಶರಣರ್ಮೆಚ್ಚಲು ಸಿದ್ಧವೀರ ಯತಿ ಪೇಳ್ದಂ ಶೂನ್ಯ ಸಂಬೋಧೆಯಂ ॥೨।

ಶ್ರೀಮದ್ದೇಶಿಕನಲ್ಲಮ ಪ್ರಭುವರಂ ಸ್ವೇಚ್ಛಾವಿಲಾಸಂಗಳಿಂ।ದಾಮೋದಂಶರಣರ್ಗೆಯಪ್ಪ ತೆರದಿಂದಾಶೂನ್ಯ ಪೀಠಾಗ್ರದೊಳ್। ಪ್ರೇಮಂ ಬೆತ್ತಡರ್ದ್ದೇರಿ ಮಂಡಿಸಿ ಶಿವ ಜ್ಞಾನಾರ್ಥಮಂ ಕೇಳಿ ಪೇ।ಳ್ವಾಮಹಾತ್ಮೆಯ ಸಿದ್ಧವೀರ ಯತಿ ಪೇಳ್ದಂ ಸರ್ವರಾನಂದಿಸಲ್ ॥೩॥

ಕಂದ॥ ಗುರು ತೋಂಟದ ಸಿದ್ದೇಶನ।ಚರಣಾಂಬೋಜಾತ ಮಂತ್ರ ಸುಕೃತಚಿತ್ತೋ।ತ್ಕರಸಿದ್ಧವೀರಯೋಗೀ। ಶ್ವರಚರಣರ ಕಿವಿಗೆ ವಚನ ಬೋಧೆಯನಿತ್ತಂ ॥

ಪ್ರಭುದೇವರ ಶೂನ್ಯ ಸಂಪಾದನೆ ಸಮಾಪ್ತ

